ಸತ್ಯ. ಯಾವ ಪದಾರ್ಥ ನಿಷಿದ್ಧವಾಗುವುದೋ ಆ ಪದಾರ್ಥ ಅಸತ್ಯ. ಶುಕ್ತಿ ರಜತವೂ ಶಶವಿಷಾಣವೂ ಸರ್ವ ದೇಶಕಾಲ ಸಂಬಂಧಿತ್ವೇನ ನಿಷಿದ್ಧವಾಗುತ್ತವೆ. ಘಟದಲ್ಲಿ ಸ್ವದೇಶ ಸ್ವಕಾಲಗಳ ಸಂಬಂಧವಿರುವುದರಿಂದ ಸರ್ವ ದೇಶಕಾಲ ಸಂಬಂಧಿತ್ವೇನ ನಿಷೇಧ ಶಕ್ಯವಾಗುವುದಿಲ್ಲ. ಸರ್ವ ದೇಶಕಾಲ ಸಂಬಂಧಿಯಾದ ನಿಷೇಧಕ್ಕೆ ಪ್ರತಿಯೋಗಿತ್ವವು ಘಟಾದಿ ಪ್ರಪಂಚದಲ್ಲಿ ಇಲ್ಲ. ಅಪ್ರತಿಯೋಗಿತ್ವರೂಪ ಸತ್ಯತ್ವವೆ ಇದೆ'—ಎಂದು ಮೇಲೆ ಹೇಳಿದ ಕಾರಿಕೆಯ ವಿವರಣೆ. ಕಾರಿಕೆಯಲ್ಲಿ ಹೇಳಿದ ಸತ್ಯತ್ವಲಕ್ಷಣಕ್ಕೆ ಅವ್ಯಾಪ್ಯವೃತ್ತಿ ಕಪಿಸಂಯೋಗಾದಿಗಳಲ್ಲಿ ಅವ್ಯಾಪ್ತಿ ಬರುತ್ತದೆ ಎನ್ನಬಾರದು.

ಯದ್ಯಪಿ ಈ ವೃಕ್ಷದಲ್ಲಿರುವ ಕಪಿ ಸಂಯೋಗವು ಬೇರೆ ಎಲ್ಲಿಯೂ ಇಲ್ಲ. ಈ ವೃಕ್ಷದಲ್ಲಿ ಅದು ಇದ್ದರೂ ಅವ್ಯಾಪ್ಯವೃತ್ತಿಯಾದ್ದರಿಂದ ಅದರ ಅಭಾವವೂ ಕೂಡ ವೃಕ್ಷದಲ್ಲಿ, ಅದರ ಮೂಲಭಾಗದಲ್ಲಿ, ಇದೆ. ಸರ್ವದೇಶಕಾಲ ಸಂಬಂಧಿ ನಿಷೇಧಕ್ಕೆ ಪ್ರತಿಯೋಗಿತ್ವವೇ ಕಪಿ ಸಂಯೋಗದಲ್ಲಿ ಬಂದಿತು. ಅಪ್ರತಿಯೋಗಿತ್ವರೂಪ ಸತ್ಯತ್ವ ಬರಲಿಲ್ಲ, ಅವ್ಯಾಪ್ತಿ. ಹೀಗಿದ್ದರೂ ಅವ್ಯಾಪ್ತಿ ಇಲ್ಲ. ಏಕೆಂದರೆ, ಸಂಯೋಗವಿರುವ ವೃಕ್ಷಾಗ್ರಭಾಗದಲ್ಲಿಯೇ ಅದರ ಅಭಾವವೂ ಇರಲೇಬೇಕು. ಅದರಿಂದಲೇ ಅದು 'ಅವ್ಯಾಪ್ಯವೃತ್ತಿ' ಎನಿಸಿದೆ ಎಂದು ತಾರ್ಕಿಕರು ಹೇಳಿದರೂ ಅದು ನಮಗೂ ಸಮ್ಮತವಲ್ಲ, ಅದ್ವೈತಿಗೂ ಸಮ್ಮತವಲ್ಲ. ಮೂಲಭಾಗದಲ್ಲಿ ಅಭಾವವಿದ್ದರೂ ಅಲ್ಲಿ ಪ್ರತಿಯೋಗಿ ಇಲ್ಲ. ಅಗ್ರಭಾಗದಲ್ಲಿ ಪ್ರತಿಯೋಗಿ ಇದ್ದರೂ ಅಲ್ಲಿ ಅಭಾವವಿಲ್ಲ. ಅದರಿಂದ ಸಂಯೋಗವು ಅವ್ಯಾಪ್ಯವೃತ್ತಿಯಲ್ಲ. ಘಟದಂತೆ ಸಂಯೋಗಕ್ಕೂ ಸ್ವದೇಶ ಸ್ವಕಾಲ ಸಂಬಂಧಗಳಿವೆ, ಸರ್ವದೇಶಕಾಲ ಸಂಬಂಧಿಯಾದ ನಿಷೇಧಕ್ಕೆ ಪ್ರತಿಯೋಗಿತ್ವ ಅದರಲ್ಲಿ ಇಲ್ಲ. ಅಪ್ರತಿಯೋಗಿತ್ವರೂಪ ಸತ್ಯತ್ವಲಕ್ಷಣಕ್ಕೆ ಸಂಯೋಗದಲ್ಲಿ ಅವ್ಯಾಪ್ತಿ ಇಲ್ಲ.

'ಸಂಯೋಗವಿರುವಲ್ಲಿಯೇ ಅದರ ಅಭಾವವೂ ಇರುತ್ತದೆ. ಸಂಯೋಗಾಭಾವವು ಅವ್ಯಾಪ್ಯವೃತ್ತಿ ಎನ್ನುವ ತಾರ್ಕಿಕರ ಮತದಲ್ಲಿ ಅವ್ಯಾಪ್ತಿ ಬರುತ್ತದೆ' ಎಂದರೆ, 'ಯದವಚ್ಛೇದೇನ ಸಂಯೋಗವಿರುವುದೋ ತದವಚ್ಛೇದೇನ ಸಂಯೋಗಾಭಾವವಿದೆ' ಎಂದು ಅವರು ಹೇಳುವುದಿಲ್ಲವಾದ್ದರಿಂದ ಸರ್ವಾವಚ್ಛೇದೇನ ಸರ್ವದೇಶಸಂಬಂಧಿಯಾದ ನಿಷೇಧಕ್ಕೆ ಸಂಯೋಗವು ಅವರ ಮತಾನುಸಾರವೂ ಪ್ರತಿಯೋಗಿಯಾಗುವುದಿಲ್ಲ. ಕಾರಿಕೆಯಲ್ಲಿ 'ಸರ್ವದೇಶೀಯ ನಿಷೇಧ' ಎನ್ನುವಲ್ಲಿ 'ಸರ್ವಾವಚ್ಛೇದೇನ ಸರ್ವದೇಶೀಯ ನಿಷೇಧ'ವೂ ವಿವಕ್ಷಿತವಾಗಿದೆ.

**ಗಗನಾದೇರಪ್ಯತ್ಯಂತಾಭಾವಃ ಕೇವಲಾನ್ವಯೀ ನೇತ್ಯುಕ್ತತ್ವಾನ್ನ ಗಗನಾದಾವವ್ಯಾಪ್ತಿಃ ।**

ಗಗನಾದಿ ನಿತ್ಯದ್ರವ್ಯಗಳು ಅವೃತ್ತಿಮತ್ ಪದಾರ್ಥಗಳು. ಅವುಗಳ ಅತ್ಯಂತಾಭಾವವು ಕೇವಲಾನ್ವಯಿ ಎಂದು ತಾರ್ಕಿಕರು ಹೇಳುವುದರಿಂದ ಸಾರ್ವದೇಶಿಕ ಸಾರ್ವಕಾಲಿಕ ನಿಷೇಧಕ್ಕೆ ಗಗನಾದಿಗಳು ಪ್ರತಿಯೋಗಿಯಾಗುವುದರಿಂದ ಸತ್ಯತ್ವಲಕ್ಷಣಕ್ಕೆ ಅವುಗಳಲ್ಲಿ ಅವ್ಯಾಪ್ತಿ ಎಂದರೆ, ನಾವು ತಾರ್ಕಿಕರ ಈ ಮತವನ್ನು ಒಪ್ಪುವುದಿಲ್ಲ. ಅವ್ಯಾಕೃತಾಕಾಶವೇ ದೇಶ. ದೇಶದಲ್ಲಿ ದೇಶ, ಕಾಲದಲ್ಲಿ

ಕಾಲ, ದೇಶಕಾಲಗಳಲ್ಲಿ ದೇಶಕಾಲಗಳು ಎಂದು ಅನುಭವವಿರುವುದರಿಂದ ದೇಶಕಾಲಗಳು ಪರಸ್ಪರವಾಗಿಯೂ ತಮ್ಮಲ್ಲಿಯೂ ತಾವು ಇವೆ, ಹೊರತು ಅವು ಅವೃತ್ತಿಮತ್ತಾಗಿಲ್ಲ. ಪ್ರಮೇಯತ್ವದಲ್ಲಿ ಪ್ರಮೇಯತ್ವ, ಅಭಿಧೇಯತ್ವದಲ್ಲಿ ಅಭಿಧೇಯತ್ವಗಳಿವೆ ಎಂದು ಅನುಭವಾನು ಸಾರವಾಗಿ ತಾರ್ಕಿಕರೂ ಒಪ್ಪುತ್ತಾರೆ. ಗಗನಾದಿಗಳಲ್ಲಿ ಎಲ್ಲಿಯೂ ಸರ್ವದೇಶಕಾಲಸಂಬಂಧಿ ನಿಷೇಧಕ್ಕೆ ಪ್ರತಿಯೋಗಿತ್ವವಿಲ್ಲ. ಅವ್ಯಾಪ್ತಿ ಇಲ್ಲ.

**ತುಚ್ಛಮಧ್ಯಸ್ತಂ ಚ ಉಕ್ತಪ್ರತಿಷೇಧಪ್ರತಿಯೋಗೀತ್ಯುಕ್ತತ್ವಾನ್ನಾತಿವ್ಯಾಪ್ತಿರಪಿ ।**

'ತುಚ್ಛ' ಅಂದರೆ, ಅತ್ಯಂತಾಸತ್ತಾದ ಶಶವಿಷಾಣಾದಿ ಮತ್ತು 'ಅಧ್ಯಸ್ತ' ಆರೋಪಿತವಾದ ಶುಕ್ತಿರಜತಾದಿಯು ಯಾವ ದೇಶಕಾಲದಲ್ಲಿಯೂ ಸಂಬಂಧಿಸಿರುವುದಿಲ್ಲ. ಅದರ ಅಭಾವವೆ ಸರ್ವದೇಶಕಾಲ ಸಂಬಂಧಿಯಾಗಿದೆ. ತತ್‌ಪ್ರತಿಯೋಗಿತ್ವವೇ ತುಚ್ಛಅಧ್ಯಸ್ತಗಳಲ್ಲಿರುವುದರಿಂದ ಪ್ರತಿಯೋಗಿತ್ವಾಭಾವರೂಪ ಸತ್ಯತ್ವಲಕ್ಷಣಕ್ಕೆ ಅವುಗಳಲ್ಲಿ ಅತಿವ್ಯಾಪ್ತಿ ಇಲ್ಲ.

ಯದ್ಯಪಿ ನಮ್ಮ ಸಿದ್ಧಾಂತದಲ್ಲಿ ಅಧ್ಯಸ್ತವಾದ ಶುಕ್ತಿರಜತಾದಿಯೂ ಶಶವಿಷಾಣದಂತೆಯೇ ತುಚ್ಛವೆ, ಅತ್ಯಂತಾಸತ್ತೇ. ಆದರೂ ಅದ್ವೈತಮತದಲ್ಲಿ ಅತ್ಯಂತಾಸತ್ತು ಎಲ್ಲಿಯೂ ಆರೋಪಿತವಾಗದಿರುವುದರಿಂದ ತುಚ್ಛವು ಬೇರೆ ಅಧ್ಯಸ್ತವು ಬೇರೆ. ಈ ಅಭಿಪ್ರಾಯದಿಂದ 'ತುಚ್ಛ ಅಧ್ಯಸ್ತ'ಗಳು ನಿಷೇಧಕ್ಕೆ ಪ್ರತಿಯೋಗಿಗಳಾಗಿವೆ, ಎಂದು ಕಾರಿಕೆಯಲ್ಲಿ ಹೇಳಿದ್ದಾರೆ.

ಇಲ್ಲಿ ನಮ್ಮ ಸತ್ವಲಕ್ಷಣದ ಪರಿಷ್ಕಾರ ಹೀಗೆ—

'ಸರ್ವಕಾಲೇ ಸರ್ವದೇಶೇ ಸರ್ವಾವಚ್ಛೇದೇನ ಸಂಸೃಷ್ಟ ಸರ್ವಸಂಸರ್ಗಪ್ರತಿಯೋಗಿಕ ಅಭಾವಂ ಪ್ರತಿ ಪ್ರತಿಯೋಗಿತ್ವಂ ಅಸತ್ವಂ, ತದಭಾವಃ ಸತ್ವಂ' ಎಂದು.

ಈ ಸತ್ವ ಲಕ್ಷಣದಲ್ಲಿ ಪ್ರತ್ಯಕ್ಷಾಯೋಗ್ಯವಾದ ಸರ್ವಕಾಲ ಸರ್ವದೇಶ ಸರ್ವಾವಚ್ಛೇದ ಸರ್ವಸಂಸರ್ಗ ಸರ್ವನಿಷೇಧಗಳು ಸೇರಿರುವುದರಿಂದ ಸತ್ವವು ಪ್ರತ್ಯಕ್ಷಗೋಚರವಾಗಲಾರದು. ಆದರಿಂದ ಸತ್ವವು ಪ್ರತ್ಯಕ್ಷ ಸಿದ್ಧವಾಗಿದೆ ಎಂದು ನಾವು ಹೇಳುವುದು ಅಯುಕ್ತವೆ ಎಂದು ಸಿದ್ಧಿಕಾರನು ಹೇಳುತ್ತಾನೆ.

ಆದರೆ ಆಕಾಶತ್ವವು ಪ್ರತ್ಯಕ್ಷಯೋಗ್ಯವಲ್ಲದಿದ್ದರೂ ಘಟದಲ್ಲಿ ಆಕಾಶತ್ವಾಭಾವವು ಪ್ರತ್ಯಕ್ಷಸಿದ್ಧವೆ ಇದೆ. ಏಕೆಂದರೆ ಘಟದಲ್ಲಿ ಆಕಾಶತ್ವವಿದ್ದರೆ ಕಾಣಬೇಕಾದೀತು, ಕಾಣುವುದಿಲ್ಲ. ಆದರಿಂದ ಇಲ್ಲ ಎಂದು ಯೋಗ್ಯಾನುಪಲಬ್ಧಿ ಇದೆ.

ಯದ್ಯಪಿ ಆಕಾಶತ್ವವು ಏಕವ್ಯಕ್ತಿಕವಾದ್ದರಿಂದ ಜಾತಿಯಲ್ಲ. ಆದರಿಂದ ಅದು ಘಟದಲ್ಲಿದ್ದರೂ ಕಾಣಿಸಿಕೊಳ್ಳಬೇಕಿಲ್ಲ. ಆದರೂ ಘಟದಲ್ಲಿ ಅದು ಇದ್ದರೆ ಅದು ಅನೇಕ ವ್ಯಕ್ತಿಕವಾಗುವುದರಿಂದ ಜಾತಿಯಾಗುತ್ತದೆ. ಆದರಿಂದ ಕಾಣಿಸಿಕೊಳ್ಳಲೇಬೇಕು.

ಹೀಗೆ ಸರ್ವದೇಶಕಾಲಾದಿ ಘಟಿತ ನಿಷೇಧಪ್ರಯೋಗಿತ್ವವೂ ಕೂಡ ಪ್ರತ್ಯಕ್ಷಾಯೋಗ್ಯ ಪದಾರ್ಥ ಘಟಿತವಾಗಿರುವುದರಿಂದ ಪ್ರತ್ಯಕ್ಷಾಯೋಗ್ಯವಾಗಿದ್ದರೂ ಅದು ಘಟದಲ್ಲಿದ್ದರೆ, ಪ್ರತಿಯೋಗಿತ್ವವು ಪ್ರತಿಯೋಗಿಸ್ವರೂಪವಾಗಿರುವುದರಿಂದ, ಘಟಸ್ವರೂಪವಾಗಿರುವ ಪ್ರತಿಯೋಗಿತ್ವವು ಘಟದಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳಲೇಬೇಕು. ಇಲ್ಲಿ ಘಟವನ್ನು ಕಂಡಾಗ ಅದು ಇಲ್ಲಿಯೆ ಇದೆ 'ಅನ್ಯತ್ರ ಎಲ್ಲಿಯೂ ಇಲ್ಲ' ಎಂದು ಅನ್ಯಸರ್ವದೇಶಕಾಲಾದಿಘಟಿತವಾದ ನಿಷೇಧ ಪ್ರತಿಯೋಗಿತ್ವವು ಪ್ರತ್ಯಕ್ಷ ಕಾಣುವುದು. ಅನುಭವಸಿದ್ಧವಾಗಿದೆ. ಅದರಿಂದ ಪ್ರತಿಯೋಗಿ ಪ್ರತ್ಯಕ್ಷಯೋಗ್ಯವಲ್ಲದಿದ್ದರೂ ಯೋಗ್ಯಾನುಪಲಬ್ಧಿ ಬಲದಿಂದ ಅಭಾವವು ಪ್ರತ್ಯಕ್ಷವಾಗಿ ಕಾಣಲು ಅಡ್ಡಿ ಇಲ್ಲ.

ಅಥವಾ ಸರ್ವದೇಶಕಾಲಸಂಬಂಧಿ ನಿಷೇಧ ಅಪ್ರತಿಯೋಗಿತ್ವವೆಂದರೆ ಪ್ರತಿಯೋಗಿತ್ವಾಭಾವ ಎಂದು ವಿವಕ್ಷಿತವಲ್ಲ. ಪ್ರತಿಯೋಗಿ ಭಿನ್ನತ್ವವೇ ವಿವಕ್ಷಿತ. 'ಸ್ತಂಭವು ಪಿಶಾಚಿಯಲ್ಲ' ಎಂಬ ಅನ್ಯೋನ್ಯಾಭಾವ ಪ್ರತ್ಯಕ್ಷಕ್ಕೆ ಪಿಶಾಚಿಯು ಪ್ರತ್ಯಕ್ಷಾಯೋಗ್ಯವಾಗಿರುವುದು ಬಾಧಕವಲ್ಲ. ಪ್ರತಿಯೋಗಿಯು ಪ್ರತ್ಯಕ್ಷಾಯೋಗ್ಯವಾದರೂ ಅಧಿಕರಣವು ಯೋಗ್ಯವಾದರೆ ಅನ್ಯೋನ್ಯಾಭಾವ ಪ್ರತ್ಯಕ್ಷ ಬರುತ್ತದೆ. ಸ್ತಂಭವು ಅಧಿಕರಣ, ಪ್ರತ್ಯಕ್ಷಕ್ಕೆ ಯೋಗ್ಯವಾಗಿರುವುದರಿಂದ ಅನ್ಯೋನ್ಯಾಭಾವವು ಪ್ರತ್ಯಕ್ಷವಾಗುವುದು ಕಂಡಿದೆ. ಪ್ರಕೃತ ಸತ್ವಲಕ್ಷಣದಲ್ಲಿ ಅಪ್ರತಿಯೋಗಿತ್ವವು ಪ್ರತಿಯೋಗಿ ಭಿನ್ನತ್ವ ರೂಪವೆಂದು ವಿವಕ್ಷೆ ಮಾಡಿದರೆ ಅಧಿಕರಣವಾದ ಘಟಾದಿಪ್ರಪಂಚವು ಪ್ರತ್ಯಕ್ಷಯೋಗ್ಯವಾದ್ದರಿಂದ ಸರ್ವದೇಶಾದಿ ಘಟಿತವಾದ ನಿಷೇಧಪ್ರತಿಯೋಗಿಯ ಅನ್ಯೋನ್ಯಾಭಾವವು ಪ್ರತ್ಯಕ್ಷವಾಗಲು ಅಡ್ಡಿ ಇಲ್ಲ.

**ಅಶ್ವೇ ಗೋತ್ವಂ ಕದಾಚಿದಪಿ ನಾಸ್ತೀತ್ಯಾದೌ ತತ್ಸಂಸರ್ಗ ಏವ ನಿಷಿಧ್ಯತ ಇತಿ ಮತೇ ದೇಶಪದಮನಪೇಕ್ಷಿತಮ್ ।**

ಘಟಪ್ರಾಗಭಾವ ದಶಾದಲ್ಲಿ ಘಟವು ಸರ್ವದೇಶ ಸಂಬಂಧಿಯಾದ ನಿಷೇಧಕ್ಕೆ ಪ್ರತಿಯೋಗಿಯಾಗುತ್ತದೆ. ಅದರಿಂದ ಘಟದಲ್ಲಿ ಸತ್ವಲಕ್ಷಣಕ್ಕೆ ಅವ್ಯಾಪ್ತಿ. ಅದಕ್ಕೆ ಸರ್ವಕಾಲ ಸಂಬಂಧಿ ಎಂದು ವಿಶೇಷಣವನ್ನು ಕೊಡಬೇಕು. ಆಗ ಘಟವು ಪ್ರಾಗಭಾವಕಾಲದಲ್ಲಿ ಸರ್ವದೇಶ ಸಂಬಂಧಿ ನಿಷೇಧಕ್ಕೆ ಪ್ರತಿಯೋಗಿಯಾದರೂ ಘಟಕಾಲದಲ್ಲಿ ಪ್ರತಿಯೋಗಿಯಾಗುವುದಿಲ್ಲ.

ಸರ್ವಕಾಲಸಂಬಂಧಿ ನಿಷೇಧಾಪ್ರತಿಯೋಗಿತ್ವವನ್ನೇ ಸತ್ವ ಎಂದು ವಿವಕ್ಷೆ ಮಾಡಿದರೆ ಗೋತ್ವಾದಿಗಳಲ್ಲಿ ಅವ್ಯಾಪ್ತಿ. ಗೋತ್ವಾದಿಗಳು ಅಶ್ವಾದಿಗಳಲ್ಲಿ ಸರ್ವಕಾಲದಲ್ಲಿಯೂ ನಿಷೇಧ ಪ್ರತಿಯೋಗಿಯೇ ಆಗುತ್ತವೆ. 'ಅಶ್ವೇ ಗೋತ್ವಂ ಕದಾಪಿ ನಾಸ್ತಿ' 'ಅಶ್ವದಲ್ಲಿ ಗೋತ್ವವೆಂದೂ ಇಲ್ಲ' ಎಂದು ಪ್ರತೀತಿ ಇದೆ. ಅದರಿಂದ ಸರ್ವದೇಶ ಸಂಬಂಧಿ ನಿಷೇಧಾಪ್ರತಿಯೋಗಿತ್ವ ವಿವಕ್ಷೆ ಮಾಡಬೇಕು.

'ಅಶ್ವೇ ಗೋತ್ವಂ ನಾಸ್ತಿ' ಎಂಬಲ್ಲಿ ಅತ್ಯಂತಾಭಾವಕ್ಕೆ ಗೋತ್ವವು ಪ್ರತಿಯೋಗಿ ಎಂದು ಕೆಲವರು ಒಪ್ಪುವುದಿಲ್ಲ. ಶಶವಿಷಾಣ ಶುಕ್ತಿರಜತಾದಿ ಅತ್ಯಂತಾಸತ್ತಾದ ಅಪ್ರಾಮಾಣಿಕವೇ ಅತ್ಯಂತಾಭಾವಕ್ಕೆ ಪ್ರತಿಯೋಗಿ. ಪ್ರಾಮಾಣಿಕಪದಾರ್ಥವು ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗುವುದಿಲ್ಲ ಎನ್ನುತ್ತಾರೆ. ಅವರ ಪಕ್ಷದಲ್ಲಿ ಅಶ್ವದಲ್ಲಿ ಗೋತ್ವಸಂಸರ್ಗವನ್ನು ಆರೋಪಿಸಿ ನಿಷೇಧಮಾಡುವುದರಿಂದ ಗೋತ್ವ ಸಂಸರ್ಗವೆ ಪ್ರತಿಯೋಗಿ. ಗೋತ್ವವು ಪ್ರತಿಯೋಗಿಯಲ್ಲವಾದ್ದರಿಂದ ಅಪ್ರತಿಯೋಗಿತ್ವರೂಪ ಸತ್ವಲಕ್ಷಣಕ್ಕೆ ಗೋತ್ವಾದಿಗಳಲ್ಲಿ ಅವ್ಯಾಪ್ತಿ ಪ್ರಸಕ್ತಿ ಇಲ್ಲ. ಹೀಗಾಗಿ ಈ ಪಕ್ಷದಲ್ಲಿ ಸಾರ್ವದೇಶಿಕತ್ವವನ್ನು ನಿಷೇಧದಲ್ಲಿ ವಿಶೇಷಣವಾಗಿ ಕೊಡುವುದು ಬೇಡ. ಸರ್ವಾವಚ್ಛೇದೇನ ಎಂಬ ವಿಶೇಷಣವೂ ಬೇಡ. ಸಾರ್ವಕಾಲಿಕ ನಿಷೇಧಾಪ್ರತಿಯೋಗಿತ್ವವೇ ಸತ್ವಲಕ್ಷಣ.

**ಕೇಚಿತ್ತು—ಪರಾಭಿಪ್ರೇತಮಿಥ್ಯಾತ್ವಾಭಾವೋ ವಾ ಅಸದ್ವಿಲಕ್ಷಣತ್ವೇ ಸತ್ಯನಾರೋಪಿತತ್ವಂ ವಾ ಅಸ್ತಿತ್ವಪ್ರಕಾರಕಪ್ರಮಾಂ ಪ್ರತಿ ಕದಾಚಿತ್ ಸಾಕ್ಷಾದ್ವಿಷಯತ್ವಂ ವಾ ಕಾಲಸಂಬಂಧಿತ್ವಂ ವಾ ಸತ್ತ್ವಮ್ । ಅಸ್ತಿತ್ವಂ ಚ ವರ್ತಮಾನತ್ವಮ್ । ಅತೀತಾದಿರಪಿ ಕದಾಚಿದ್ ವರ್ತತ ಏವ । ಆರೋಪಿತಂ ತು ಕಾಲತ್ರಯಾಸಂಬಂಧಿತ್ವೇನ ಬಾಧಬೋಧಿತಮಿತಿ ನ ದೋಷ— ಇತ್ಯಾಹುಃ ॥**

ಕೆಲವರು ಸತ್ವವನ್ನು ಹೀಗೆ ನಾಲ್ಕು ಬಗೆಯಿಂದ ನಿರ್ವಚನ ಮಾಡುತ್ತಾರೆ—

(1) ಅದ್ವೈತಿಗೆ ಯಾವ ಮಿಥ್ಯಾತ್ವವು ಸಮ್ಮತವೋ ಅದರ ಅಭಾವವೇ ನಮಗೆ ಸತ್ವ.

(2) ಅಸದ್ ವಿಲಕ್ಷಣವಾಗಿದ್ದು ಅನಾರೋಪಿತವಾಗಿರುವುದೇ ಸತ್ವ.

(3) ಅಸ್ತಿತ್ವಪ್ರಕಾರಕ ಪ್ರಮಾದಲ್ಲಿ ಎಂದಾದರೂ ಸಾಕ್ಷಾತ್ ವಿಷಯವಾಗಿರುವುದು ಸತ್ವ.

(4) ಕಾಲಸಂಬಂಧಿತ್ವವು ಸತ್ವ.

ಮೊದಲನೆ ನಿರ್ವಚನದಲ್ಲಿ ಅಸ್ವಾರಸ್ಯ ಇದು— ಅದ್ವೈತಿಗೆ ಸಮ್ಮತವಾದ ಮಿಥ್ಯಾತ್ವದಲ್ಲಿ 'ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ಮಿಥ್ಯಾತ್ವಂ' ಎಂದು 'ಪ್ರತಿಪನ್ನೋ-ಪಾಧಿ'ಯು ಸೇರಿದ್ದರಿಂದ ಅದರ ಅಭಾವವು ಅಸತ್ತಿನಲ್ಲಿ ಬರುತ್ತದೆ. ಅಸತ್ತು ತ್ರೈಕಾಲಿಕನಿಷೇಧಪ್ರತಿಯೋಗಿಯಾದರೂ ಅದಕ್ಕೆ 'ಉಪಾಧಿ' ಅಂದರೆ ಆರೋಪಾಧಿಷ್ಠಾನವಿಲ್ಲ. ಉಪಾಧಿಯಲ್ಲಿ ಮಾಡುವ ನಿಷೇಧಕ್ಕೆ ಅಸತ್ತು ಪ್ರತಿಯೋಗಿಯಾಗುವುದಿಲ್ಲ. ಕೇವಲ ಶುಕ್ತಿರಜತಾದಿ ಪ್ರಾತಿಭಾಸಿಕವೂ ವ್ಯಾವಹಾರಿಕ ಪ್ರಪಂಚವೂ ಉಪಾಧಿಯಲ್ಲಿ ಮಾಡುವ ನಿಷೇಧಕ್ಕೆ ಪ್ರತಿಯೋಗಿಯಾಗುತ್ತದೆ. 'ಪ್ರತಿಪನ್ನೋಪಾಧಿ' ಪದವನ್ನು ಬಿಟ್ಟು ನಿರ್ವಚನ ಮಾಡಿದರೆ ಅದು ನಾವು ಹಿಂದೆ ಹೇಳಿದ ಸರ್ವಕಾಲಸಂಬಂಧಿ ನಿಷೇಧ ಪ್ರತಿಯೋಗಿತ್ವವೇ ಆಗುತ್ತದೆ, ಬೇರೆಯಾಗುವುದಿಲ್ಲ.

ಎರಡನೆ ನಿರ್ವಚನದಲ್ಲಿ ಅಸತ್ತಿನಲ್ಲಿ ಅತಿವ್ಯಾಪ್ತಿ ಪರಿಹಾರಕ್ಕಾಗಿ ಅಸದ್‌ವೈಲಕ್ಷಣ್ಯ ನಿವೇಶ ಮತ್ತು ಶುಕ್ತಿರಜತದಲ್ಲಿ ಅತಿವ್ಯಾಪ್ತಿ ಪರಿಹಾರಕ್ಕಾಗಿ ಅನಾರೋಪಿತತ್ವ ನಿವೇಶ ಎರಡೂ ಆವಶ್ಯಕ. ಆದರೆ ಅಸದ್‌ವೈಲಕ್ಷಣ್ಯದಲ್ಲಿ ಘಟಕವಾಗಿರುವ ಅಸತ್ವವು ಸತ್ವಾಭಾವ ರೂಪವಾದ್ದರಿಂದ ಅಸತ್ವವನ್ನು ತಿಳಿದರೆ ಸತ್ವಜ್ಞಾನ. ಸತ್ವವನ್ನು ತಿಳಿದರೆ ಅಸತ್ವಜ್ಞಾನವೆಂದು ಅನ್ಯೋನ್ಯಾಶ್ರಯವು ಹಿಂದೆ ಮೂಲದಲ್ಲಿಯೇ ಉಕ್ತವಾಗಿರುವುದರಿಂದ ಈ ನಿರ್ವಚನವೂ ಅಸ್ವರಸ.

ಮೂರನೆ ನಿರ್ವಚನದಲ್ಲಿ 'ಅಸ್ತಿತ್ವಪ್ರಕಾರಕ ಪ್ರಮಾದಲ್ಲಿ ಎಂದಾದರೂ ಸಾಕ್ಷಾತ್ತಾಗಿ ಗೋಚರವಾಗುವುದೇ ಸತ್ವ' ಎಂಬಲ್ಲಿ 'ಅಸ್ತಿತ್ವ'ವೆಂದರೆ ಸತ್ವವಲ್ಲ, ವರ್ತಮಾನತ್ವ, ಆದರಿಂದ ಅತೀತಾದಿಗಳಲ್ಲಿ ಅವ್ಯಾಪ್ತಿ ಇಲ್ಲ. ಏಕೆಂದರೆ ಅತೀತಾದಿಗಳೂ ಕೂಡ ಎಂದಾದರೂ ಅಂದರೆ ಅವು ವರ್ತಮಾನವಾಗಿರುವಾಗ ವರ್ತಮಾನತ್ವಪ್ರಕಾರಕ ಪ್ರಮಾದಲ್ಲಿ ಸಾಕ್ಷಾತ್ತಾಗಿ ಕಾಣಬಹುದೆಂದು ಸಮಾಧಾನ ಹೇಳಬಹುದು. ಆದರೂ ಸತ್ವವು ಪ್ರಮಾದಲ್ಲಿ ಸಾಕ್ಷಾತ್ತಾಗಿ ಕಾಣುತ್ತ ಪ್ರಮಾಣಪ್ರವೃತ್ತಿಗೆ ನಿಯಾಮಕವಾಗಬೇಕಾದರೆ ಬೇರೆಯೆ ಸತ್ವವನ್ನು ನಿರ್ವಚನ ಮಾಡಬೇಕಾಗುತ್ತದೆ ಎಂದು ಅಸ್ವಾರಸ್ಯವಿದೆ.

ನಾಲ್ಕನೆ ನಿರ್ವಚನವು ಕೂಡ ಅದ್ವೈತಿಗೆ ಸಿದ್ಧಸಾಧನವಾಗುತ್ತದೆ. ಮಿಥ್ಯಾಪದಾರ್ಥಕ್ಕೆ ಕಾಲಸಂಬಂಧಿತ್ವವನ್ನು ಅವನೂ ಅಂಗೀಕರಿಸಿದ್ದಾನೆ. ಪ್ರತಿಭಾಸ ಕಾಲದಲ್ಲಿ ಪ್ರಾತಿಭಾಸಿಕಕ್ಕೆ ಕಾಲಸಂಬಂಧಿತ್ವವಿದೆ ಎಂದು ಹೇಳುತ್ತಾನೆ. ಯದ್ಯಪಿ ಬಾಧಕಾಲದಲ್ಲಿ 'ನಾಸ್ತಿ ನಾಸೀತ್ ನ ಭವಿಷ್ಯತಿ' ಎಂದು ಕಾಲತ್ರಯಾಸಂಬಂಧಿತ್ವವು ಬಾಧಬುದ್ಧಿಯಲ್ಲಿ ಗೃಹೀತವಾಗುತ್ತದೆ ಎಂದು ಅವನು ಅಂಗೀಕರಿಸಿರುವುದು ನಿಜವೆ. ಆದರೂ ಪಾರಮಾರ್ಥಿಕತ್ವೇನ ಕಾಲತ್ರಯಾಸಂಬಂಧಿತ್ವವನ್ನೇ ಬಾಧಬುದ್ಧಿಯು ಗ್ರಹಿಸುತ್ತದೆ. ಸ್ವರೂಪೇಣ ಅಲ್ಲ. ಪ್ರಾತಿಭಾಸಿಕತ್ವೇನ ಪ್ರತಿಭಾಸಕಾಲದಲ್ಲಿ ಕಾಲಸಂಬಂಧಿತ್ವವನ್ನು ಒಪ್ಪಿದರೆ ವಿರೋಧವಿಲ್ಲ.

'ಆಹುಃ' ಎಂಬ ಮಾತಿನಿಂದ ಈ ಅಸ್ವಾರಸ್ಯಗಳು ಸೂಚಿತವಾಗುತ್ತವೆ.



## ಪ್ರತ್ಯಕ್ಷಸ್ಯ ಜಾತ್ಯಾ ಉಪಕ್ರಮಾದಿನ್ಯಾಯೈಶ್ಚ ಪ್ರಾಬಲ್ಯಂ

**ननु इदं रूप्यम् इत्यत्र इदम् इतिवत् 'सन् घट' इत्यत्रापि सन् इत्यधिष्ठानब्रह्मानुवेध एव इति चेन्न ।**

**चाक्षुषादिज्ञाने रूपादिहीनब्रह्मास्फुरणादित्युक्तत्वात् । 'नीलो घटः', 'मिथ्या रूप्यम्, 'असन्नृशृंगम्' इत्यादावपि 'नील' इत्यादिरधिष्ठानानुवेध इत्यापाताच्च । नैल्यादिकं घटेऽस्ति, सत्त्वं तु न इति चेन्न । अस्यारोपितत्वसिध्यधीनत्वेनान्योन्याश्रयात् । अन्यथा 'सत्यं ज्ञानम्' इत्यत्रापि 'सत्यम्' इत्यधिष्ठानानुवेध इति स्यात् । नह्यद्यापि 'ब्रह्मैव सद्रूपमन्यन्मिथ्या' इति सिद्धम् ।**

---

**इदमिति ।।** इदमंशानुवेधवदित्यर्थः । तथाच सत्त्वग्राहिप्रत्यक्षं न दृश्यत्वाद्यनुमानबाधकमिति भावः । **उक्तत्वादिति ।।** परिच्छिन्नत्वादिहेतुभङ्ग इति शेषः । एतच्चोपलक्षणम् । न संदृशे तिष्ठतीत्यादिश्रुत्या चाक्षुषत्वप्रयोजक रूपाभावोक्ति पूर्वकं तस्य चक्षुर्ग्राह्यत्व निषेधादित्यपि द्रष्टव्यम् । **नील इति ।।** यद्यप्युभयसिद्धसत्त्वाश्रय ब्रह्मवदुभयसिद्धनैल्याद्याश्रयः कश्चिद्धटाद्यन्यो नास्ति यदनुवेधः प्रकृते वाच्यः । कल्पनीयत्वे घटादावेव नैल्यादिकमस्तु । कृतमन्यकल्पनया । तथापि घटनिष्ठतया प्रतीतस्य सत्त्वस्य घटे बाधके सत्येवान्यानुवेधो वाच्यः । अन्यथातिप्रसङ्गादित्यत्र तात्पर्यम् ।



**ನನು ಇದಂ ರೂಪ್ಯಮ್ ಇತ್ಯತ್ರ ಇದಮ್ ಇತಿವತ್ 'ಸನ್ ಘಟ' ಇತ್ಯತ್ರಾಪಿ ಸನ್ ಇತ್ಯಧಿಷ್ಠಾನಬ್ರಹ್ಮಾನುವೇಧ ಏವ ಇತಿ ಚೇನ್ನ । ಚಾಕ್ಷುಷಾದಿಜ್ಞಾನೇ ರೂಪಾದಿಹೀನಬ್ರಹ್ಮಾಸ್ಫುರಣಾದಿತ್ಯುಕ್ತತ್ವಾತ್ ।**

ಅದ್ವೈತಿಯ ಆಕ್ಷೇಪ ಹೀಗಿದೆ— 'ಸನ್ ಘಟಃ' ಎಂದರೆ 'ಘಟವು ಸತ್ಯ' ಎಂದರ್ಥವಲ್ಲ, ಸತ್ಯವಾದ ಬ್ರಹ್ಮದಲ್ಲಿ ಘಟವು ಆರೋಪಿತವಾಗಿದ್ದು ಸತ್ಯವೆಂದು ಕಾಣುತ್ತದೆ ಎಂದರ್ಥ.

ಅಧಿಷ್ಠಾನವು ಬ್ರಹ್ಮ ಸತ್ಯ. ಅಧಿಷ್ಠಾನದ ಸತ್ಯತ್ವವು ಆರೋಪಿತವಾದ ಘಟದಲ್ಲಿ ಕಾಣುತ್ತದೆ. ಏಕೆಂದರೆ ಇದೊಂದು ಭ್ರಮ. ಭ್ರಮದಲ್ಲಿ 'ಇದು ಬೆಳ್ಳಿ' ಎಂದು ಇದಂತ್ವೇನ ಕಾಣುವ ಶುಕ್ತಿಯಲ್ಲಿ ರಜತವು ಆರೋಪಿತವಾಗಿರುವುದರಿಂದ ಶುಕ್ತಿಯಲ್ಲಿ ವಾಸ್ತವವಾಗಿರುವ ಇದಂತ್ವವು ಆರೋಪಿತವಾದ ರಜತದಲ್ಲಿ ಆರೋಪಿತವಾಗಿ ಕಾಣುತ್ತದೆ.

ಆದರೆ ಇದು ಸರಿಯಲ್ಲ. 'ಸನ್ ಘಟಃ' ಎನ್ನುವುದು ಚಾಕ್ಷುಷಜ್ಞಾನ. ಇದು ಭ್ರಮವಲ್ಲ. ಭ್ರಮ ಎನ್ನುವುದಾದರೆ, ಸತ್ಯವಾದ ಬ್ರಹ್ಮದಲ್ಲಿ ಘಟವು ಆರೋಪಿತವಾಗಿದೆ ಎನ್ನುವುದಾದರೆ ಅಧಿಷ್ಠಾನವಾದ ಬ್ರಹ್ಮವು ಈ ಭ್ರಮದಲ್ಲಿ ಕಾಣುತ್ತದೆ ಎನ್ನಬೇಕಾಗುತ್ತದೆ. ಆದರೆ ಚಾಕ್ಷುಷಜ್ಞಾನದಲ್ಲಿ ರೂಪಾದಿ ಹೀನವಾದ ಬ್ರಹ್ಮವು ಕಾಣಿಸಲಾರದು ಎಂದು ಹಿಂದೆ ಪರಿಚ್ಛಿನ್ನತ್ವಹೇತು ಭಂಗ ಪ್ರಕರಣದಲ್ಲಿ ಹೇಳಿದ್ದೇವೆ.

'ಘಟಃ ಅಸ್ತಿ' ಎಂದು ಚಾಕ್ಷುಷಜ್ಞಾನದಲ್ಲಿ ರೂಪಾದಿಹೀನವಾದ ಕಾಲವು ಕಾಣುವುದರಿಂದ ರೂಪಾದಿಹೀನವಾದ ಬ್ರಹ್ಮ ಏಕೆ ಕಾಣಿಸಿಕೊಳ್ಳಬಾರದು? ಎಂದರೆ, ಕಾಲವು ಸಾಕ್ಷಿ ವೇದ್ಯ. ಅದರಿಂದ ಅದು ರೂಪಾದಿ ಹೀನವಾದರೂ ಸಾಕ್ಷಿಯಿಂದ ಉಪನೀತವಾಗಿ ಚಾಕ್ಷುಷಭ್ರಮದಲ್ಲಿ ಕಾಣಿಸಿಕೊಳ್ಳಬಹುದು. ಬ್ರಹ್ಮವು ಹಾಗೆ ಉಪನೀತವಾಗಿ ಕಾಣಿಸಿಕೊಳ್ಳಲಾರದು. ಅದರಿಂದ 'ನ ಸಂದೃಶೇ ತಿಷ್ಠತಿ ರೂಪಮಸ್ಯ' ಎಂದು ಶ್ರುತಿಯು 'ಚಾಕ್ಷುಷತ್ವ ಪ್ರಯೋಜಕವಾದ ರೂಪವು ಬ್ರಹ್ಮನಲ್ಲಿಲ್ಲದ್ದರಿಂದ ಚಕ್ಷುರ್ಗ್ರಾಹ್ಯವಾಗುವುದಿಲ್ಲ' ಎಂದು ಸ್ಪಷ್ಟವಾಗಿ ಹೇಳಿದೆ.

**'ನೀಲೋ ಘಟ', 'ಮಿಥ್ಯಾ ರೂಪ್ಯಂ', 'ಅಸತ್ ನೃಶೃಂಗಮ್' ಇತ್ಯಾದಾವಪಿ 'ನೀಲಃ' ಇತ್ಯಾದಿರಧಿಷ್ಠಾನಾನುವೇಧ ಇತ್ಯಾಪಾತಾಚ್ಚ।**

**ನೈಲ್ಯಾದಿಕಂ ಘಟೇಽಸ್ತಿ ಸತ್ತ್ವಂ ತು ನ ಇತಿ ಚೇನ್ನ। ಅಸ್ಯಾರೋಪಿತತ್ವಸಿಧ್ಯಧೀನತ್ವೇನಾನ್ಯೋನ್ಯಾಶ್ರಯಾತ್। ಅನ್ಯಥಾ 'ಸತ್ಯಂ ಜ್ಞಾನಮ್' ಇತ್ಯತ್ರಾಪಿ 'ಸತ್ಯಮ್' ಇತ್ಯಧಿಷ್ಠಾನಾನುವೇಧ ಇತಿ ಸ್ಯಾತ್। ನಹ್ಯದ್ಯಾಪಿ 'ಬ್ರಹ್ಮೈವ ಸದ್ರೂಪಮನ್ಯನ್ಮಿಥ್ಯಾ' ಇತಿ ಸಿದ್ಧಮ್।**

'ಸನ್‌ಘಟಃ' ಎಂದು ಸತ್ಯವಾದ ಬ್ರಹ್ಮದ 'ಅನುವೇಧ'ವೆಂದು ಅದ್ವೈತಿಯು ಹೇಳುವುದು ಸರಿಯಲ್ಲ. 'ಅನುವೇಧ'ವೆಂದರೆ ಅನನುಗತವಾದ ಆರೋಪ್ಯಗಳಲ್ಲಿ ಅಧಿಷ್ಠಾನವು ಅನುಗತವಾಗಿ ಕಾಣುವುದು. 'ಸನ್ ಘಟಃ ಸನ್ ಪಟಃ' ಇತ್ಯಾದಿ ಪ್ರತ್ಯಕ್ಷಜ್ಞಾನಗಳಲ್ಲಿ ಆರೋಪ್ಯವಾದ ಘಟಪಟಾದಿಗಳು ಅನನುಗತವಾಗಿ ಬೇರೆಬೇರೆಯಾಗಿ ಕಾಣುತ್ತವೆ. 'ಸನ್' ಎಂದು ಸತ್ಯವಾದ ಅಧಿಷ್ಠಾನವು ಅನುಗತವಾಗಿ ಒಂದೇ ಆಗಿ ಕಾಣುತ್ತದೆ. ಅದರಿಂದ ಅನನುಗತವಾದ ಘಟಾದಿಗಳು ಆರೋಪಿತ. ಅನುಗತವಾದ ಬ್ರಹ್ಮವು ಅಧಿಷ್ಠಾನ, ಸತ್ಯ ಎಂದು ಅದ್ವೈತಿಯು ಹೇಳುತ್ತಾನೆ. ಆದರೆ 'ಘಟೋ ನೀಲಃ, ಪಟೋ ನೀಲಃ' ಎಂದು ಘಟಪಟಾದಿಗಳು ಅನನುಗತವಾಗಿಯೂ ನೀಲವು ಅನುಗತವಾಗಿಯೂ ಕಾಣುವುದರಿಂದ ಒಂದು ನೀಲವು ಅಧಿಷ್ಠಾನ. ಅದರಲ್ಲಿ ಅನೇಕ ಘಟಪಟಾದಿಗಳು ಆರೋಪಿತ ಎನ್ನುವ ಪ್ರಸಂಗವಿದೆ.

'ರಜತವು ಮಿಥ್ಯಾ, ಸರ್ಪವು ಮಿಥ್ಯಾ' ಎಂದು ರಜತ ಸರ್ಪಾದಿಗಳು ಅನನುಗತವಾಗಿಯೂ ಮಿಥ್ಯಾಪದಾರ್ಥವು ಅನುಗತವಾಗಿಯೂ ಕಾಣುವುದರಿಂದ ಒಂದು ಮಿಥ್ಯಾಪದಾರ್ಥದಲ್ಲಿ ಅನೇಕ ರಜತ ಸರ್ಪಾದಿಗಳು ಆರೋಪಿತ ಎನ್ನುವ ಪ್ರಸಂಗವಿದೆ.

'ಶಶವಿಷಾಣವು ಅಸತ್' 'ನರವಿಷಾಣವು ಅಸತ್' ಎಂದು ಶಶವಿಷಾಣಾದಿಗಳು ಅನನುಗತವಾಗಿಯೂ ಅಸತ್ ಪದಾರ್ಥವು ಅನುಗತವಾಗಿಯೂ ಕಂಡುಬರುವುದರಿಂದ ಒಂದು ಅಸತ್ತಿನಲ್ಲಿ ಅನೇಕ ಶಶವಿಷಾಣಾದಿಗಳು ಆರೋಪಿತವೆನ್ನುವ ಪ್ರಸಂಗವಿದೆ.

ಯದ್ಯಪಿ ಇಲ್ಲಿ ಪ್ರಶ್ನೆ ಬರುತ್ತದೆ— 'ಸತ್ಯವೆಂದು ಉಭಯವಾದಿ ಸಿದ್ಧವಾದ ಬ್ರಹ್ಮ ಒಂದಿದೆ. ಅದು ಘಟಾದಿಗಳಿಗಿಂತ ಬೇರೆ ಎನ್ನುವುದೂ ಸಿದ್ಧವಾಗಿದೆ. ಪ್ರಕೃತ ಘಟಾದಿ ವ್ಯತಿರಿಕ್ತವಾಗಿ ನೀಲವೆಂಬ ಪದಾರ್ಥವು ಉಭಯವಾದಿ ಸಿದ್ಧವಾಗಿಲ್ಲ. ಕಲ್ಪನೆ ಮಾಡಬೇಕಾಗುತ್ತದೆ. ಬೇರೆ ಕಲ್ಪನೆ ಮಾಡುವುದಕ್ಕಿಂತ ಘಟಾದಿಗಳಲ್ಲಿಯೇ ನೀಲತ್ವವಿದೆ ಎಂದೇಕೆ ಹೇಳಬಾರದು?' ಎಂದು. ಆದರೂ ನೀಲದಲ್ಲಿ ಘಟಾದ್ಯಾರೋಪವನ್ನು ಆಪಾದಿಸುವ ಅಭಿಪ್ರಾಯ ಬೇರೇ ಇದೆ. 'ಘಟಃ ಸನ್' ಎಂಬಲ್ಲಿ ಘಟದಲ್ಲಿ ಸತ್ಯತ್ವ ಕಾಣುತ್ತದೆ. ಅದಕ್ಕೆ ಬಾಧಕವೇನೂ ಕಾಣದಿರುವಾಗ ನಿಷ್ಕಾರಣವಾಗಿ ಅದನ್ನು ಬಿಟ್ಟು ಘಟದಲ್ಲಿ ಸತ್ತ್ವಾರೋಪವೆಂದು ಸ್ವೀಕರಿಸುವುದು ಯುಕ್ತವಲ್ಲ. ಹಾಗೆ ಸ್ವೀಕರಿಸುವುದಾದರೆ ನೀಲದಲ್ಲಿ ಘಟಾದ್ಯಾರೋಪವನ್ನು ಏಕೆ ಸ್ವೀಕರಿಸಬಾರದು? ಎಂಬ ಅಭಿಪ್ರಾಯ.

'ನೀಲತ್ವಾದಿಗಳು ಘಟಾದಿಗಳಲ್ಲಿ ಇವೆ. ಆದರಿಂದ ಕಾಣುತ್ತವೆ. ಘಟಾದಿಗಳಲ್ಲಿ ಸತ್ಯತ್ವವಿಲ್ಲ. ಹೇಗೆ ಕಾಣುತ್ತದೆ? ಆರೋಪದಿಂದ ಕಾಣುತ್ತದೆ ಎಂದೇ ಹೇಳಬೇಕು'—ಎಂದು ಅದ್ವೈತಿ ಹೇಳಬಹುದು. ಆದರೆ, ಘಟದಲ್ಲಿ ಸತ್ಯತ್ವವಿಲ್ಲ ಏಕೆ? ಅದು ಆರೋಪಿತವೆಂದು ಇನ್ನೂ ಸಿದ್ಧವಾಗಿಲ್ಲ. ಆರೋಪಿತವೆಂದು ಸಿದ್ಧವಾದರೆ ವಸ್ತುತಃ ಇಲ್ಲ ಎಂದಾಗುವುದು. ವಸ್ತುತಃ ಇಲ್ಲ ಎಂದು ಸಿದ್ಧವಾದರೆ ಆರೋಪಿತವೆಂದಾಗುವುದು. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಬರಲಿ ಎನ್ನುವುದಾದರೆ 'ಸತ್ಯಂ ಜ್ಞಾನಂ' ಎಂಬಲ್ಲಿಯೂ 'ಜ್ಞಾನವು ಸತ್ಯ' ಎಂದು ಅಧಿಷ್ಠಾನದ ಸತ್ಯತ್ವವು ಜ್ಞಾನರೂಪ ಬ್ರಹ್ಮನಲ್ಲಿ ಆರೋಪಿತನಾಗಿ ಕಾಣುತ್ತದೆ ಎನ್ನಬೇಕಾದೀತು. ಅದಕ್ಕೆ 'ಬ್ರಹ್ಮ ಒಂದೇ ಸತ್ಯಸ್ವರೂಪ. ಅದರಿಂದ ಬ್ರಹ್ಮನಲ್ಲಿ ಮಾತ್ರ ಸತ್ಯತ್ವಾರೋಪವನ್ನು ಹೇಳುವಂತಿಲ್ಲ. ಘಟಾದಿಗಳು ಮಿಥ್ಯಾ, ಸತ್ಯಸ್ವರೂಪವಲ್ಲ, ಅದರಿಂದ ಅವುಗಳಲ್ಲಿ ಸತ್ಯತ್ವಾರೋಪ ಯುಕ್ತವೆ' ಎನ್ನಬೇಕು. ಆದರೆ ಅದು ಇನ್ನೂ ಸಿದ್ಧವಾಗಿಲ್ಲ. ಬ್ರಹ್ಮ ಒಂದೇ ಸತ್ಯ. ಜಗತ್ತು ಮಿಥ್ಯಾ ಎಂಬ ವಿಭಾಗ ಸಿದ್ಧವಾಗಿಲ್ಲ. ಸಿದ್ಧವಾಗಿದ್ದರೆ ಮಾತ್ರ 'ಸತ್ಯಂ ಜ್ಞಾನಂ' ಎಂಬುದು ಅಧಿಷ್ಠಾನಾನುವೇಧವಲ್ಲ. 'ಸನ್‌ಘಟ' ಎಂಬುದು ಮಾತ್ರ ಅಧಿಷ್ಠಾನಾನುವೇಧ ಎಂದು ಸಿದ್ಧವಾಗುತ್ತಿತ್ತು.

❖❖❖

ननु तथापि कथं प्रत्यक्षमात्यन्तिकाबाध्यत्वग्राहि ? तात्कालिकाबाधस्तु रूप्यादेरिवेष्ट इतिचेत्किं प्रत्यक्षमप्रमाणमेव उत प्रमाणमपि वर्तमानमात्रग्राहित्वात् त्रिकालाबाधग्रहाक्षमम् ।

आद्येऽपि स्वतःप्राप्तस्य तत्त्वावेदनरूपप्रामाण्यस्य त्यागः किमनुमानविरोधादागमविरोधाद्वा भाविबाधकशंकामात्रेण वा । नाद्यौ । तयोः प्रामाण्ये तद्विरोधेनाक्षस्याप्रामाण्यम्, सति च तस्मिन् मानाविरोधेन तयोः प्रामाण्यम्' इत्यन्योन्याश्रयात् । अक्षस्य तु प्रबलस्य प्रामाण्यमनुमानागमाविरोधापेक्षं नेति नान्योन्याश्रयः । नहि सिंहः शशशाबकाभावमपेक्ष्य वनं गाहते । प्रत्यक्षस्यानुमित्यादितः प्राबल्यं च तदगृहीतरेखोपरेखादिविशेषग्राहित्वादनुमित्याद्यनिवर्तितदिङ्मोहादिनिवर्तकत्वाच्च जात्यैव । दृष्टं हि वह्निशैत्यानुमाने धर्म्यादिश्चक्षुरादिनापि सिध्द्याऽनुपजीव्यत्वेऽपि औष्ण्यप्रत्यक्षस्य जात्यैव प्राबल्यम् ।

---

**वर्तमानमात्रेति ।।** प्रत्यक्षस्य सन्निकृष्टार्थमात्रग्राहित्वादिति भावः । **तस्मिन्निति ।।** अक्षाप्रामाण्य इत्यर्थः । **तयोरिति ।।** अनुमानागमयोरित्यर्थः ।

नन्वेवमक्षस्यापि प्रामाण्यं न स्यात् । अनुमानागमविरोधादित्यत आह **अक्षस्य त्विति ।।** ननु तदगृहीतविषयकत्वेन यदि प्रत्यक्षस्य प्राबल्यं तदा प्रत्यक्षागृहीतघटादिनिष्ठातीन्द्रियधर्मविषयकत्वेनानुमानमपि प्रबलं किं न स्यादित्यत आह **अनुमित्यादीति ।। वह्निशैत्येति ।।** वह्न्यनौष्ण्येत्यर्थः । नन्वौष्ण्यगोचरप्रत्यक्षस्यापि न जात्याऽनुमानाद्यपेक्षया प्राबल्यम् । अपितु धर्मिग्राहकत्वेनोपजीव्यत्वादेवेत्यत आह **धर्म्यादेरिति ।। जात्यैवेति ।।** यद्यपि प्रत्यक्षस्य न प्रत्यक्षत्वेन प्राबल्यम् । किन्त्वनन्यथासिद्धप्रत्यक्षत्वेन । तथाप्यनन्यथासिद्धानुमानिकश्वैत्यज्ञाने विद्यमानेऽपि पीतप्रत्यक्षोदयात् जात्यैव

**क्लृप्तदोषाजन्यस्य तस्य प्राबल्यम् । तच्चानुमानागमाभ्यामपहरणायोग्यविषयकत्वमिति भावः ।**



**ನನು ತಥಾಪಿ ಕಥಂ ಪ್ರತ್ಯಕ್ಷಮಾತ್ಯಂತಿಕಾಬಾಧ್ಯತ್ವಗ್ರಾಹಿ ? ತಾತ್ಕಾಲಿಕಾಬಾಧಸ್ತು ರೂಪ್ಯಾದೇರಿವೇಷ್ಟ ಇತಿಚೇತ್, ಕಿಂ ಪ್ರತ್ಯಕ್ಷಮಪ್ರಮಾಣಮೇವ ಉತ ಪ್ರಮಾಣಮಪಿ ವರ್ತಮಾನಮಾತ್ರಗ್ರಾಹಿತ್ವಾತ್ ತ್ರಿಕಾಲಾಬಾಧಗ್ರಹಾಕ್ಷಮಮ್ ? ಆದ್ಯೇऽಪಿ ಸ್ವತಃಪ್ರಾಪ್ತಸ್ಯ ತತ್ತ್ವಾವೇದನರೂಪಪ್ರಾಮಾಣ್ಯಸ್ಯ ತ್ಯಾಗಃ ಕಿಂ ಅನುಮಾನವಿರೋಧಾತ್? ಆಗಮ-ವಿರೋಧಾದ್ವಾ? ಭಾವಿಬಾಧಕಶಂಕಾಮಾತ್ರೇಣ ವಾ ?**

ಕಾಲತ್ರಯ ಬಾಧ್ಯತ್ವರೂಪ ಮಿಥ್ಯಾತ್ವಕ್ಕೆ ವಿರೋಧವಾಗಿ ಕಾಲತ್ರಯಾಬಾಧ್ಯತ್ವರೂಪ ಸತ್ಯತ್ವವನ್ನು ಪ್ರತ್ಯಕ್ಷವು ಗ್ರಹಣ ಮಾಡುತ್ತದೆ ಎನ್ನುತ್ತಿದ್ದೀರಿ. ಅದು ಹೇಗೆ ಸಾಧ್ಯ? ತಾತ್ಕಾಲಿಕ ಅಬಾಧವನ್ನೇ ಪ್ರತ್ಯಕ್ಷವು ಗ್ರಹಿಸುವುದಾದರೆ ಅದು ನಮಗೆ ಇಷ್ಟವೆ. ಶುಕ್ತಿರಜತಾದಿಗಳಲ್ಲಿ ತಾತ್ಕಾಲಿಕವಾಗಿ ಅಬಾಧವನ್ನು ಪ್ರತ್ಯಕ್ಷವು ಗ್ರಹಿಸುತ್ತದೆ. ಅದರಂತೆ ಪ್ರಪಂಚದಲ್ಲಿಯೂ ತಾತ್ಕಾಲಿಕ ಅಬಾಧವನ್ನು ನಾವೂ ಒಪ್ಪಿದ್ದೇವೆ' ಎಂದು ಅದ್ವೈತಿ ಹೇಳುತ್ತಾನೆ.

ಇದಕ್ಕೆ ನಾವು ಕೇಳುತ್ತೇವೆ— ಪ್ರತ್ಯಕ್ಷವು ಸತ್ವವಿಷಯದಲ್ಲಿ ಪ್ರಮಾಣವೆ ಅಲ್ಲ ಎನ್ನುವಿರಾ? ಅಥವಾ ಪ್ರಮಾಣವಾದರೂ ಅದು ಇಂದ್ರಿಯಸನ್ನಿಕರ್ಷಉಳ್ಳ ಪದಾರ್ಥಮಾತ್ರ ಗ್ರಾಹಿಯಾಗಿದ್ದು ವರ್ತಮಾನ ಮಾತ್ರ ಗ್ರಾಹಿಯಾದ್ದರಿಂದ ತ್ರಾಕಾಲಾಬಾಧರೂಪ ಸತ್ಯತ್ವವನ್ನು ಗ್ರಹಿಸಲು ಅಸಮರ್ಥವಾಗಿದೆ ಎನ್ನುವಿರ?

ಪ್ರಮಾಣವೇ ಅಲ್ಲ ಎನ್ನುವ ಮೊದಲಿನ ಪಕ್ಷದಲ್ಲಿ ಕೇಳುತ್ತೇವೆ, ಪ್ರಾಮಾಣ್ಯಕ್ಕೆ ಸ್ವತಸ್ತ್ವವಿರುವಾಗ ಸ್ವತಃ ಪ್ರಾಪ್ತವಾದ ತತ್ವಾವೇದಕತ್ವರೂಪ ಪ್ರಾಮಾಣ್ಯವನ್ನು ಪ್ರತ್ಯಕ್ಷಕ್ಕೆ ನೀವು ಒಪ್ಪದಿರಲು ಕಾರಣವೇನು? ಮಿಥ್ಯಾತ್ವಾನುಮಾನದ ವಿರೋಧವಿದೆ ಎಂದೆ? ಆಗಮವಿರೋಧವಿದೆ ಎಂದೆ? ಅಥವಾ ಮುಂದೆ ಬ್ರಹ್ಮಾಪರೋಕ್ಷ ಬಂದಾಗ ಪ್ರಪಂಚಸತ್ಯತ್ವಕ್ಕೆ ಬಾಧ ಬಂದೀತೆಂದೆ?

**ನಾದ್ಯೌ । ತಯೋಃ ಪ್ರಾಮಾಣ್ಯೇ ತದ್ವಿರೋಧೇನಾಕ್ಷಸ್ಯಾಪ್ರಾಮಾಣ್ಯಮ್, ಸತಿ ಚ ತಸ್ಮಿನ್ ಮಾನಾವಿರೋಧೇನ 'ತಯೋಃ ಪ್ರಾಮಾಣ್ಯಮ್' ಇತ್ಯನ್ಯೋನ್ಯಾಶ್ರಯಾತ್ । ಅಕ್ಷಸ್ಯ ತು ಪ್ರಬಲಸ್ಯ ಪ್ರಾಮಾಣ್ಯಮನುಮಾನಾಗಮಾವಿರೋಧಾಪೇಕ್ಷಂ ನೇತಿ ನಾನ್ಯೋನ್ಯಾಶ್ರಯಃ । ನಹಿ ಸಿಂಹಃ ಶಶಶಾಬಕಾಭಾವಮಪೇಕ್ಷ್ಯ ವನಂ ಗಾಹತೇ ।**

ಪ್ರತ್ಯಕ್ಷಕ್ಕೆ ಸ್ವತಃ ಪ್ರಾಪ್ತವಾಗಿರುವ ಪ್ರಾಮಾಣ್ಯವನ್ನು ಸ್ವೀಕರಿಸದಿರಲು ಮಿಥ್ಯಾತ್ವಾನುಮಾನ ವಿರೋಧವಿದೆ, ಅದೇ ಕಾರಣವೆನ್ನುವ ಮೊದಲನೆ ಪಕ್ಷವೂ, ಆಗಮ ವಿರೋಧವಿದೆ, ಅದೇ ಕಾರಣ

ಎನ್ನುವ ಎರಡನೆ ಪಕ್ಷವೂ ಯುಕ್ತವಲ್ಲ. ಏಕೆಂದರೆ ಮಿಥ್ಯಾತ್ವಾನುಮಾನ ಮಿಥ್ಯಾತ್ವಶ್ರುತಿಗಳು ಪ್ರಮಾಣವಾದರೆ ಅವುಗಳ ವಿರೋಧದಿಂದ ಸತ್ವಪ್ರತ್ಯಕ್ಷವು ಅಪ್ರಮಾಣ, ಸತ್ವಪ್ರತ್ಯಕ್ಷವು ಅಪ್ರಮಾಣವಾದರೆ ಅನುಮಾನಾಗಮಗಳಿಗೆ ಪ್ರಮಾಣಾಂತರ ವಿರೋಧವಿಲ್ಲದಿರುವುದರಿಂದ ಅವು ಪ್ರಮಾಣ ಎಂದು ಅನ್ಯೋನ್ಯಾಶ್ರಯದೋಷ ಬರುತ್ತದೆ. ವಸ್ತುತಃ ಪ್ರಬಲಪ್ರಮಾಣವಾಗಿರುವ ಪ್ರತ್ಯಕ್ಷವು ಪ್ರಮಾಣವೆನಿಸಬೇಕಾದರೆ ಅದಕ್ಕೆ ಅನುಮಾನಾಗಮಗಳ ವಿರೋಧವಿಲ್ಲದಿರಬೇಕಾಗಿಲ್ಲ. ಸಿಂಹವು ಕಾಡಿನೊಳಗೆ ಪ್ರವೇಶ ಮಾಡಬೇಕೆಂದರೆ ಕಾಡಿನಲ್ಲಿ ಮೊಲದ ಮರಿ ಇಲ್ಲದಿರಬೇಕಾಗಿಲ್ಲ.

**ಪ್ರತ್ಯಕ್ಷಸ್ಯಾನುಮಿತ್ಯಾದಿತಃ ಪ್ರಾಬಲ್ಯಂ ಚ ತದಗೃಹೀತ ರೇಖೋಪರೇಖಾದಿ ವಿಶೇಷ ಗ್ರಾಹಿತ್ವಾತ್, ಅನುಮಿತ್ಯಾದ್ಯನಿವರ್ತಿತ ದಿಙ್ಮೋಹಾದಿ ನಿವರ್ತಕತ್ವಾಚ್ಚ ಜಾತ್ಯೈವ ।**

**ದೃಷ್ಟಂ ಹಿ ವಹ್ನಿಶೈತ್ಯಾನುಮಾನೇ ಧರ್ಮ್ಯಾದೇಶ್ಚಕ್ಷುರಾದಿನಾಪಿ ಸಿದ್ಧ್ಯಾ ಅನುಪಜೀವ್ಯತ್ವೇಽಪಿ ಔಷ್ಣ್ಯಪ್ರತ್ಯಕ್ಷಸ್ಯ ಜಾತ್ಯೈವ ಪ್ರಾಬಲ್ಯಮ್ ।**

ಪ್ರತ್ಯಕ್ಷವು ಅನುಮಾನಾಗಮಗಳಿಂದ ಪ್ರಬಲ ಏಕೆಂದರೆ ಅನುಮಾನಾಗಮಗಳಿಂದ ತಿಳಿಯಲಾಗದ ವಸ್ತುವಿನ ರೇಖೆ ಉಪರೇಖೆಗಳನ್ನು ಪ್ರತ್ಯಕ್ಷವು ತಿಳಿಸಬಲ್ಲುದು. ಪ್ರತ್ಯಕ್ಷದಿಂದ ತಿಳಿಯಲಾಗದ ವಸ್ತುವಿನ ಗುರುತ್ವಾದಿ ಅತೀಂದ್ರಿಯ ಪದಾರ್ಥಗಳನ್ನು ಅನುಮಾನಾಗಮಗಳು ತಿಳಿಸುವುದರಿಂದ ಅವೂ ಪ್ರಬಲ ಏಕಲ್ಲ? ಎಂದರೆ, ಪಶ್ಚಿಮವನ್ನು ಪೂರ್ವವೆಂದು ಭ್ರಮಿಸಿದವನಿಗೆ 'ಪೂರ್ವವಲ್ಲ' ಎನ್ನುವ ಆಪ್ತನ ಮಾತಾಗಲಿ, ಈ ದಿಕ್ಕಿನಲ್ಲಿ ಸೂರ್ಯೋದಯವಿಲ್ಲ ಎಂಬ ಅನುಮಾನವಾಗಲಿ ಭ್ರಮನಿರಸನ ಮಾಡುವುದಿಲ್ಲ. ಪ್ರತ್ಯಕ್ಷದಿಂದ ಇದು ಪೂರ್ವ ಎಂಬ ಜ್ಞಾನ ಬಂದಾಗಲೆ ಭ್ರಮನಿರಸನವಾಗುತ್ತದೆ. ಅದರಿಂದ ಭ್ರಮನಿರಸನ ಕಾರ್ಯದಲ್ಲಿ ಪ್ರತ್ಯಕ್ಷಕ್ಕೇ ಅಧಿಕ ಸಾಮರ್ಥ್ಯವಿರುವುದರಿಂದ ಅದು 'ಜಾತ್ಯಾ' ಅಂದರೆ ಸ್ವಭಾವತಃ ಪ್ರಬಲ.

ಧರ್ಮಿ ಗ್ರಾಹಕಪ್ರಮಾಣವು ಉಪಜೀವ್ಯವಾಗಿ ಪ್ರಬಲವಾಗುವುದು ಕಂಡಿದೆ. ಅದಕ್ಕಿಂತ ವ್ಯತಿರಿಕ್ತವಾಗಿ ಜಾತ್ಯಾಪ್ರಾಬಲ್ಯವೆಂಬುದೊಂದು ಬೇರೆ ಪ್ರಾಬಲ್ಯವಿರುವುದು ಹೇಗೆ? ಎಂಬ ಪ್ರಶ್ನೆಗೆ ಹೀಗೆ ಸಮಾಧಾನ. ವಹ್ನಿಯು ಅನುಷ್ಣವಾಗಿದೆ ಎಂಬ ಅನುಮಾನಕ್ಕೆ ಸ್ಪಾರ್ಶನ ಪ್ರತ್ಯಕ್ಷವು ವಹ್ನಿಯು ಉಷ್ಣವಾಗಿದೆ ಎಂದು ತಿಳಿಸುತ್ತ ಪ್ರಬಲಬಾಧಕವಾಗುವುದು ಕಂಡಿದೆ. ಇದು ಯದ್ಯಪಿ ಚಾಕ್ಷುಷ ಪ್ರತ್ಯಕ್ಷದಿಂದಲೇ ವಹ್ನಿರೂಪ ಧರ್ಮಿಯನ್ನು ತಿಳಿಯಬಹುದು. ಸ್ಪಾರ್ಶನಪ್ರತ್ಯಕ್ಷ ಅವಶ್ಯಬೇಕಿಲ್ಲ. ಅದು ಅನುಮಾನಕ್ಕೆ ಉಪಜೀವ್ಯವೇನಲ್ಲ. ಆದರೂ ಅದು ಪ್ರಬಲ. ಏಕೆಂದರೆ ಉಷ್ಣತ್ವಸ್ಪಾರ್ಶನ ಪ್ರತ್ಯಕ್ಷವು ಜಾತ್ಯಾಸ್ವಭಾವದಿಂದಲೇ ಪ್ರಬಲ ಎನ್ನಬೇಕು.



**'प्राबल्यमागमस्यैव जात्या तेषु त्रिषु स्मृतम्'**

**इति तु वैदिकार्थविषयम् । अत एवोक्तम्—**

**"क्वच प्रत्यक्षतः प्राप्तमनुमागमबाधितम्"इति ।**

**उपक्रमाधिकरणन्यायेनोपसंहारात् उपक्रमस्यैवानुपसंजात-विरोधित्वाच्च । उक्तं हि ।**

**"असंजातविरोधित्वादर्थवादो यथाश्रुतः ।**
**व्याख्येयस्तद्विरुद्धस्य विध्युद्देशस्य लक्षणा" इति ।**

---

ननु प्रत्यक्षस्यानुमानागमापेक्षया प्राबल्ये सिद्धान्तविरोध इत्यत आह **वैदिकार्थविषयमिति ।।** असम्भवत्प्रत्यक्षप्रवृत्तिकार्यविषयमित्यर्थः । यद्यपि वेदैकसमधिगम्येऽर्थे प्रत्यक्षाप्रवृत्तेः न तयोः प्राबल्यदौर्बल्यचिन्ता युक्ता । तथापि भगवदवतारेषु छेदभेदादिग्राहिप्रत्यक्षप्रवृत्तेः समानविषयत्वमस्तीति ध्येयम् ।। उक्तार्थे संवादमाह **अत एवेति ।।** प्रत्यक्षस्य प्राबल्ये वैदिकदृष्टान्तमाह **उपक्रमेति ।।** एतच्च शेषलक्षणे तृतीये तृतीयपादे विचारितम् । "श्रुतेर्जाताधिकारः स्यात्" ।

अत्र ज्योतिष्टोमे प्रजापतिरकामयत प्रजाः सृजेयेति । स तपोऽतप्यत । तस्मात्तेपानात् त्रयो देवा असृज्यन्त अग्निर्वायुरादित्यः, ते तपोऽतप्यन्त, तेभ्यस्तेपानेभ्यस्त्रयो वेदा असृज्यन्ताग्नेः ऋग्वेदः, वायोर्यजुर्वेदः आदित्यात्सामवेदः इत्येवमुपक्रम्य तदुपसंहारे श्रूयते, तस्मादुच्चैः ऋचा क्रियते, उपांशु यजुषा, उच्चैः साम्नेति । तत्र संदेहः । किमुच्चैष्ट्वादयः ऋगादिमन्त्राणां धर्माः उत वेदानामिति । उपक्रमे वेदशब्दश्रवणादुपसंहारे ऋगादिशब्दश्रवणाच्च संशयो जायते । वेदशब्दो हि मन्त्रब्राह्मणसमुदायात्मकस्य ग्रन्थविशेषस्य वाचकः । वेदानधीत्य वेदौ वा वेदं वापि यथाक्रममित्यादिव्यवहारात् । ऋग्यजुःसामशब्दास्तु भेदलक्षणे तेषामृग्यत्रार्थवशेन पादव्यवस्था, गीतिषु सामाख्या, शेषे यजुःशब्दः, इति सूत्रैः सपादबन्धापादबन्धगीतिविशेषवाचकत्वेन निर्णीताः । अतो वेदशब्दस्य ऋगादिशब्दानां चास्त्येव संशयप्रयोजकभिन्नार्थत्वम् । तत्रोपसंहारगतेषु विध्युद्देशेषु ऋगादिशब्दश्रवणात् उपक्रमगतार्थवादे ऋग्वेदशब्दसत्त्वेऽपि अर्थवादस्य विधिशेषतया

गुणप्रधानविरोधे प्रधानस्य विध्युद्देशस्यैवानुसरणीयत्वात् ऋगादिधर्माः उच्चैष्ट्वादयः । एवञ्च यजुर्वेदादिगतेष्वपि ऋगादिषु उच्चैष्ट्वादयः कर्तव्या इति पूर्वपक्षे लब्धात्मनः प्रधानस्य गुणाद्बलीयस्त्वम् । नचेह विध्युद्देशानां ऋगादिविषयतया लब्धात्मता । उपक्रमे वेदसंकीर्तनेन वेदानां किञ्चिद्विधास्यत इति प्रथममेव विधास्यमानस्य वेदधर्मत्वावगत्या तदेकवाक्यतया पश्चादापततः उपसंहारस्य तद्विरुद्धार्थबोधकत्वासंभवात् । तस्मात्प्रथममुपक्रमेण कस्मिंश्चिदर्थे बोधिते तदेक-वाक्यतयाऽऽपतन्नुपसंहारः तदाकांक्षानुसारेण बलाल्लक्षणां प्रतिपद्यत इति ऋगादिशब्दानां ऋग्वेदादिलक्षकत्वेन वेदधर्माः उच्चैष्ट्वादयः, इति सिद्धान्त इति ।



**'ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್'**

**ಇತಿ ತು ವೈದಿಕಾರ್ಥವಿಷಯಮ್ । ಅತ ಏವೋಕ್ತಮ್—**

**''ಕ್ವಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮಬಾಧಿತಮ್''ಇತಿ ।**

'ಪ್ರತ್ಯಕ್ಷವು ಜಾತ್ಯಾ ಪ್ರಬಲ' ಎನ್ನುವುದು 'ಮೂರು ಪ್ರಮಾಣಗಳಲ್ಲಿ ಆಗಮಕ್ಕೇ ಜಾತ್ಯಾ ಪ್ರಾಬಲ್ಯ' ಎನ್ನುವ ಬ್ರಹ್ಮತರ್ಕವಚನವನ್ನು ಅಂಗೀಕರಿಸುವ ನಿಮ್ಮ ಸಿದ್ಧಾಂತಕ್ಕೆ 'ವಿರುದ್ಧವಾಗುವುದು' ಎಂದರೆ, ಅದು ಸರಿಯಲ್ಲ. ಪ್ರತ್ಯಕ್ಷಕ್ಕೆ ಯೋಗ್ಯವಲ್ಲದ ಪರಬ್ರಹ್ಮಾದಿ ವೈದಿಕಪ್ರಮೇಯ ವಿಷಯದಲ್ಲಿ ಆಗಮಕ್ಕೇ ಜಾತ್ಯಾಪ್ರಾಬಲ್ಯ ಎಂದು ಬ್ರಹ್ಮತರ್ಕದ ಅಭಿಪ್ರಾಯ.

ಯದ್ಯಪಿ ವೇದೈಕವೇದ್ಯವಾದ ಪ್ರಮೇಯದ ವಿಷಯದಲ್ಲಿ ಪ್ರತ್ಯಕ್ಷಪ್ರವೃತ್ತಿಯೇ ಇಲ್ಲದಿರುವಾಗ ಪ್ರತ್ಯಕ್ಷ-ಆಗಮಗಳ ಬಲಾಬಲ ವಿಚಾರವೇ ಅಯುಕ್ತವಾಗುವುದು. ಆದರೂ ಭಗವದವತಾರರೂಪಗಳ ಭೇದಭೇದಾದಿ ವೈದಿಕ ವಿಷಯದಲ್ಲಿ ಪ್ರತ್ಯಕ್ಷವೂ ಪ್ರವೃತ್ತಿ ಮಾಡುವುದರಿಂದ ಆ ವಿಷಯದಲ್ಲಿ ಬಲಾಬಲವಿಚಾರಕ್ಕೆ ಪ್ರಸಕ್ತಿ ಇದೆ. ಆದರಿಂದ ಪ್ರಕೃತ ಘಟಾದಿ ಪ್ರಪಂಚವಿಷಯದಲ್ಲಿ ಪ್ರತ್ಯಕ್ಷ ಆಗಮಗಳೆರಡಕ್ಕೂ ಪ್ರವೃತ್ತಿ ಇರುವುದರಿಂದ ಬಲಾಬಲ ವಿಚಾರ ಮಾಡುವುದು ಯುಕ್ತವೆ. ಆಗ ವೇದೈಕವೇದ್ಯವಾದ ವಿಷಯದಲ್ಲಿ ಆಗಮವು ಜಾತ್ಯಾಪ್ರಬಲ, ಘಟಾದಿ ಪ್ರಪಂಚ ವಿಷಯದಲ್ಲಿ ಪ್ರತ್ಯಕ್ಷವೇ ಜಾತ್ಯಾಪ್ರಬಲ ಎಂದು ಬ್ರಹ್ಮತರ್ಕವಚನದ ಅಭಿಪ್ರಾಯವನ್ನು ಗ್ರಹಿಸಬೇಕು. ಅದರಿಂದ ವಿರೋಧವಿಲ್ಲ.

ಲೌಕಿಕ ವಿಷಯ ನಿರ್ಣಯಕ್ಕೆ ಪ್ರತ್ಯಕ್ಷ ಪ್ರಮಾಣವೇ ಜಾತ್ಯಾಪ್ರಬಲ ಎಂಬ ಅಭಿಪ್ರಾಯ ದಿಂದಲೇ, 'ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದುದನ್ನು ಅನುಮಾನ ಆಗಮಗಳು ಬಾಧಿಸುವುದು ಎಲ್ಲಿ ಕಂಡಿದೆ?' ಎಂದು ಸಂಧ್ಯಾಧಿಕರಣ ಅನುವ್ಯಾಖ್ಯಾನದಲ್ಲಿ ಭಗವತ್ಪಾದರು ಹೇಳಿದ್ದಾರೆ.

**ಉಪಕ್ರಮಾಧಿಕರಣ ನ್ಯಾಯೇನೋಪಸಂಹಾರಾತ್ ಉಪಕ್ರಮಸ್ಯೈವಾನುಪಸಂಜಾತ ವಿರೋಧಿತ್ವಾಚ್ಚ। ಉಕ್ತಂ ಹಿ—**

**''ಅಸಂಜಾತವಿರೋಧಿತ್ವಾದರ್ಥವಾದೋ ಯಥಾಶ್ರುತಃ।**
**ವ್ಯಾಖ್ಯೇಯಸ್ತದ್ವಿರುದ್ಧಸ್ಯ ವಿಧ್ಯುದ್ದೇಶಸ್ಯ ಲಕ್ಷಣಾ'' ಇತಿ।**

ಉಪಕ್ರಮಾಧಿಕರಣ ನ್ಯಾಯವೆಂದರೆ ಉಪಸಂಹಾರಕ್ಕಿಂತ ಉಪಕ್ರಮಕ್ಕೇ ಅನುಪಸಂಜಾತ ವಿರೋಧಿತ್ವೇನ ಪ್ರಾಬಲ್ಯವಿರುವುದು ಎಂದು. ಈ ನ್ಯಾಯದಿಂದ ಉಪಕ್ರಮದಲ್ಲಿ ಬರುವ ಪ್ರತ್ಯಕ್ಷ ಪ್ರಮಾಣಕ್ಕೇ ಉಪಸಂಹಾರದಲ್ಲಿ ಬರುವ ಅನುಮಾನಾಗಮಗಳಿಗಿಂತ ಹೆಚ್ಚು ಜಾತ್ಯಾಪ್ರಾಬಲ್ಯವನ್ನು ಒಪ್ಪಬೇಕು. ಪೂರ್ವಮೀಮಾಂಸಾ ಉಪಕ್ರಮಾಧಿಕರಣದಲ್ಲಿ ವಾರ್ತಿಕವು ಹೀಗೆ ಹೇಳಿದೆ— 'ಉಪಕ್ರಮದಲ್ಲಿ ಬರುವ ಅರ್ಥವಾದಕ್ಕೆ ವಿರೋಧಿಯು ಉಪಸ್ಥಿತವಿಲ್ಲದಿರುವುದರಿಂದ ಅದನ್ನು ಯಥಾ ಶ್ರುತವಾಗಿಯೇ ಅರ್ಥೈಸಬೇಕು. ಅದಕ್ಕೆ ವಿರುದ್ಧವಾಗಿರುವ ವಿಧಿವಾಕ್ಯಕ್ಕೇ ಅರ್ಥವಾದಾನುಸಾರವಾಗಿ ಲಕ್ಷಣಾ ಮಾಡಬೇಕು' ಎಂದು.

'ಶ್ರುತೇರ್ಜಾತಾಧಿಕಾರಃ ಸ್ಯಾತ್'(ಜೈ.ಸೂ.3.3.1) 'ಉಚ್ಚೈಸ್ತ್ವಾದಿಗಳು, ಮಂತ್ರವಾಚಿ ಋಗಾದಿ ಪದಗಳು ಶ್ರುತವಾಗಿರುವುದರಿಂದ ಮಂತ್ರಧರ್ಮಗಳು' ಎಂದು ಪೂರ್ವಪಕ್ಷ ಸೂತ್ರ. ಸೃಷ್ಟಿಯ ಆದಿಯಲ್ಲಿ ಅಗ್ನಿಯಿಂದ ಋಗ್ವೇದ, ವಾಯುವಿನಿಂದ ಯಜುರ್ವೇದ, ಆದಿತ್ಯನಿಂದ ಸಾಮವೇದವೆಂದು ಮೂರು ವೇದಗಳು ವ್ಯಕ್ತವಾದುವು ಎಂದು ಉಪಕ್ರಮದಲ್ಲಿ ಹೇಳಿ ಉಪಸಂಹಾರದಲ್ಲಿ ಋಕ್ಕನ್ನು 'ಉಚ್ಚೈಃ' ಗಟ್ಟಿಯಾಗಿ, ಯಜುಸ್ಸನ್ನು 'ಉಪಾಂಶು' ಮೆತ್ತಗೆ, ಸಾಮವನ್ನು ಗಟ್ಟಿಯಾಗಿ ಹೇಳಬೇಕು ಎಂದಿದೆ. ಇಲ್ಲಿ ಋಕ್ ಎಂದರೆ ಋಙ್ಮಂತ್ರವೇ ಅಥವಾ ಋಗ್ವೇದವೆ? ಯಜುಸ್ಸೆಂದರೆ ಯಜುರ್ಮಂತ್ರವೇ ಯಜುರ್ವೇದವೆ ? ಸಾಮವೆಂದರೆ ಸಾಮಮಂತ್ರವೆ ಸಾಮವೇದವೆ ? ಎಂದು ಸಂಶಯ.

ಋಕ್ ಯಜುಸ್ ಸಾಮಗಳು ಮಂತ್ರಗಳೇ. ಹೀಗಾಗಿ ಋಙ್ಮಂತ್ರಗಳು ಯಜುರ್ವೇದ ದಲ್ಲಿಯೂ ಬರುವುದರಿಂದ ಯಜುರ್ವೇದದ ಋಕ್‌ಗಳನ್ನು ಗಟ್ಟಿಯಾಗಿಯೇ ಹೇಳಬೇಕು. ಯಜುರ್ವೇದದಂತೆ ಮೆತ್ತಗೆ ಅಲ್ಲ ಎಂದು ಪೂರ್ವಪಕ್ಷ. ಏಕೆಂದರೆ ಋಚಾ, ಯಜುಷಾ ಸಾಮ್ನಾ ಎಂದು ಮಂತ್ರವಾಚಕವಾದ ಪದಗಳೇ ಉಪಸಂಹಾರದಲ್ಲಿ ಶ್ರುತವಾಗಿವೆ. ಉಪಕ್ರಮದಲ್ಲಿ ಯದ್ಯಪಿ ಋಗ್ವೇದ ಯಜುರ್ವೇದ ಸಾಮವೇದಗಳೆಂದು ವೇದವಾಚಕ ಪದಗಳೇ ಇವೆ. ಆದರೆ ಅವು ಅರ್ಥವಾದಗಳು. ಅರ್ಥವಾದವು ವಿಧಿಗೆ ಅಂಗ, ವಿಧಿಗಿಂತ ಗುಣವಾಗಿದೆ. ಗುಣಪ್ರಧಾನ ಗಳಿಗೆ ವಿರೋಧ ಬಂದಾಗ ಪ್ರಧಾನವಾದ ವಿಧಿವಾಕ್ಯಾನುಸಾರ ಗುಣವಾದ ಅರ್ಥವಾದಕ್ಕೆ ಅರ್ಥಗ್ರಹಿಸಬೇಕು. ಹೀಗಾಗಿ ಉಚ್ಚೈಸ್ತ್ವಾದಿಗಳು ಮಂತ್ರಧರ್ಮಗಳೇ ಹೊರತು ವೇದಧರ್ಮಗಳಲ್ಲ ಎಂದು.

**ಸಿದ್ಧಾಂತ ಹೀಗೆ**—ಪ್ರಧಾನವು ಅಸ್ತಿತ್ವಕ್ಕೆ ಬಂದಾಗಲೇ ಗುಣಕ್ಕಿಂತ ಪ್ರಬಲವೆನಿಸುತ್ತದೆ. ಪ್ರಕೃತ ಪ್ರಧಾನವಾದ ವಿಧಿವಾಕ್ಯ ಉಪಸಂಹಾರದಲ್ಲಿ ಬರುತ್ತದೆ. ಉಪಕ್ರಮದಲ್ಲಿ ಅಂಗವಾದ ಅರ್ಥವಾದ ಬರುತ್ತದೆ. ಅದು ಬರುವಾಗ ಉಪಸಂಹಾರದ ವಿಧಿವಾಕ್ಯ ಇನ್ನೂ ಅಸ್ತಿತ್ವಕ್ಕೇ ಬಂದಿರುವುದಿಲ್ಲ. ಆದರಿಂದ ವಿಧಿವಾಕ್ಯ ಉಪಕ್ರಮದ ಅರ್ಥವಾದಕ್ಕೆ ಅನ್ವಯವಾಗದ ವಿರುದ್ಧವಾಗುವ ಅರ್ಥವನ್ನು ಹೇಳಲಾರದು. ಅವಿರುದ್ಧವಾದ ಅರ್ಥವನ್ನು ಹೇಳಬೇಕಾಗುತ್ತದೆ. ಅದಕ್ಕೆ ಲಕ್ಷಣಾವನ್ನು ಆಶ್ರಯಿಸಬೇಕಾಗುತ್ತದೆ. ಹೀಗಾಗಿ ಉಪಸಂಹಾರದಲ್ಲಿರುವ ವಿಧಿವಾಕ್ಯಗಳು ಉಪಕ್ರಮದ ಅರ್ಥವಾದಗಳಿಗೆ ಅನುಸಾರವಾಗಿ ಲಕ್ಷಣಯಾ ಋಗಾದಿಪದಗಳಿಂದ ಋಗ್ವೇದಾದಿಗಳನ್ನೇ ಹೇಳುತ್ತವೆ. ಆದರಿಂದ ಉಚ್ಚೈಸ್ತ್ವಾದಿಗಳು ಋಗಾದಿ ವೇದಧರ್ಮಗಳೇ ಹೊರತು ಋಗಾದಿ ಮಂತ್ರಧರ್ಮಗಳಲ್ಲ ಎಂದು.



लिङ्गाच्छ्रुतेरिव शीघ्रगामित्वाच्च । उक्तञ्च—

''प्रत्यक्षे चानुमाने च यथा लोके बलाबलम् ।
शीघ्रमन्थरगामित्वात्तथेह श्रुतिलिङ्गयोः'' इति ।

यदाहवनीये जुहोतीत्यस्मात्पदेजुहोति इत्यस्येव विशेष-विषयत्वाच्च । प्रत्यक्षं हि विशिष्य घटसत्त्वग्राहि । श्रुतिस्तु सामान्येन द्वितीयनिषेधिका ।

किञ्च यथा ''यत्किञ्चित्प्राचीनमग्नीषोमीयात्तेनोपांशु चरन्ती'' त्यत्रत्यस्य यत्किञ्चिच्छब्दस्य प्रकृतविशेषवाचित्वेन सामान्या-विषयत्वेऽपि दीक्षणीया व्यतिरिक्ते सावकाशत्वात् ''यावत्या वाचा कामयीत तावत्या दीक्षणीयायामनुब्रूयाद्' इत्यनेन निरवकाशेन संकोचः तथा वृत्त्यन्तरेण वा अनेकार्थत्वेन वा विषयान्तरपरत्वेन वा सावकाशायाः श्रुतेर्निरवकाशेनाक्षेण संकोचः किं न स्यात् ।

किञ्च पञ्चदशरात्रे प्रथमेऽहनि अग्निष्टुन्नामके नामातिदेशेन एकाहाग्निष्टुद्धर्मभूता सुब्रह्मण्याऽऽग्नेयी प्राप्ता । तस्या अल्पविषयायाश्चतुर्दशाहस्सु चोदकेन प्राप्तया ऐंद्र्या बहुविषयया

**बाधः । बहुबाधस्यान्याय्यत्वात् । तथा द्वैतग्राहिप्रत्यक्ष तदुपजीव्यनुमान कर्मकांण्डसृष्ट्यादिवाक्य सगुणोपासनावाक्यादिरूप बहुप्रमाणाबाधायाद्वैतवाक्यस्य प्रतीतार्थबाधः किं न स्यात् । तदुक्तम्—**

**''बहुप्रमाणविरोधे चैकस्याप्रामाण्यं दृष्टं शुक्तिरजतादौ''इति ।।**

---

विरोधिसत्त्वासत्त्वाभ्यां बलाबलमुक्त्वा शीघ्रप्रवर्तकत्वतदभावाभ्यां बलाबलं श्रौतदृष्टान्तावष्टम्भेनाह **लिङ्गाच्छ्रुतेरिवेति ।।** एतदपि तत्रैव शेषलक्षणे तृतीये तृतीयपादे चिन्तितम् ।

श्रुतिलिङ्गवाक्यप्रकरणस्थानसमाख्यानां समवाये पारदौर्बल्यमर्थविप्रकर्षात् ।

तत्र श्रुतिलिङ्गविरोधे इदमुदाहरणम् । अग्निचयने श्रूयते । ऐन्द्रा गार्हपत्यमुपतिष्ठत इति । तत्र किमैन्द्र्या कदाचनस्तरीरसि नेन्द्र सश्चसि दाशुषे इत्यृचेन्द्रस्योपस्थानं कर्तव्यं किं वा गार्हपत्याग्नेरिति संशये अशक्यार्थे वस्तुनः केनापि विनियोक्तुमशक्यत्वात् ऐन्द्र्येति तृतीयाश्रुत्यापि ऐन्द्री शक्य एव विनियोक्तव्या । तस्याश्च शक्तिरिन्द्रप्रकाशन एवेति तस्यैवोपस्थानं कर्तव्यम् । गार्हपत्यशब्दश्च यज्ञसाधनत्वसाधर्म्यादिना इन्द्रे वर्तयितव्य इति पूर्वपक्षे, यत्र वस्तुनः सर्वथाऽसामर्थ्यं तत्रैव विनियोगो न संभवति । अस्ति त्विन्द्रशब्दस्य गार्हपत्ये गौणं तत् । अवश्यं च तन्मन्त्रे इन्द्रशब्दस्य वा (ब्राह्मणे) गार्हपत्यशब्दस्य वा क्वचिदमुख्यार्थत्वं कल्पनीयम् । तच्च प्राप्तार्थे मन्त्रे एव युक्तं । विधौ लक्षणायाः अन्याय्यत्वात् । नच विध्यनुसारेण लक्षणया गार्हपत्योपस्थाने विनियोगेऽपि इन्द्रप्रकाशनशक्तिरूपया मुख्यवृत्त्या लिङ्गात्मिकया इन्द्रोपस्थानेऽपि विनियोगोऽस्त्विति वाच्यम् । प्रत्यक्षश्रुत्या शीघ्रं विनियुक्ते मन्त्रे तावतैव मन्त्राम्नानस्य चरितार्थत्वेन लैंगिकविनियोगकल्पनानिमित्ताभावात् । तस्माद्गार्हपत्यस्यैवोपस्थानं कर्तव्यमिति सिद्धान्त इति ।

विशेषविषयत्वेनापि प्रत्यक्षप्राबल्यमित्यत्र श्रौतदृष्टान्तमाह **यदाहवनीय इति** ।। एतच्च दशमे अध्याये अष्टमपादे चिन्तितम् ।

अविशेषेण यच्छास्त्रमन्याय्यत्वाद्विकल्पस्य तत् संदिग्धमाराद्विशेषशिष्टं स्यात् ।

यदाहवनीये जुहोतीति होमसामान्येऽधिकरणत्वेन विहितस्याहवनीयस्य गार्हपत्ये पत्नीसंयाजान् जुहोतीत्यादिना होमविशेषेष्वधिकरणत्वेन विहितैर्गार्हपत्यादिभिः विकल्पो बाधो वेति संदेहे सामान्यविशेषशास्त्रयोर्द्वयोरपि प्रत्यक्षत्वेन क्लृप्ततया श्रौतलैङ्गिकविनियोगवत् क्लृप्तकल्प्यभावाभावेन बलाबलानवधारणाद्विकल्प इति पूर्वपक्षे । क्लृप्तत्वेऽपि सामान्यविशेषशास्त्रयोः विशेषशास्त्रतः पत्नीसंयाजादिहोमविशेषे गार्हपत्यादेः श्रुत्यैव प्राप्तिः । सामान्यशास्त्रतस्तु आहवनीयादेः होमसामान्ये विधानात् श्रुतहोमसामान्यमुखेन तद्विशेषलक्षणया तत्राहवनीयस्य प्राप्तिरित्येवं सन्निकर्षविप्रकर्षसद्भावात् विशेषविहितैः गार्हपत्यादिभिः सामान्यविहितस्य बाध एवेति सिद्धान्त इति ।

प्रत्यक्षस्यागमापेक्षया निरवकाशत्वेनापि प्राबल्यमित्येतच्छ्रौतदृष्टान्तावष्टम्भेन दर्शयितुमाह **किञ्च यथेति** ।। तदेतन्नवमाध्याये प्रथमपादे चिन्तितम् ।

देशसंबद्धमुपांशुत्वं तेषां स्यात् श्रुतिनिर्देशात् तस्य च तत्र भावात् इति ।

ज्योतिष्टोमे श्रूयते "त्सरा वा एषा यज्ञस्य । तस्माद्यत्किञ्चित्प्राचीनमग्नीषोमीयात्तेनोपांशु चरन्ति" इति । तत्र संशयः, किमिदमुपांशुत्वं यज्ञस्य योऽग्नीषोमीयात् प्राग्भागस्तद्धर्मः उताग्नीषोमीयपशोर्ये प्राग्भाविनः पदार्थाः तद्धर्म इति । तत्र प्राचीनशब्दस्य दिक्शब्दतया यज्ञप्राग्भागे मुख्यवृत्तेः तत्रत्येषु पदार्थेषु लक्षणावृत्तेः मुख्यवृत्त्या प्रथमोपस्थितस्य प्राग्भागस्यातिक्रमे कारणाभावात् तद्धर्म एवोपांशुत्वमिति पूर्वपक्षे प्राग्भागधर्मत्वे तस्यैकत्वात् यत्प्राचीनमग्नीषोमीयादित्येतावदेव वक्तव्यं स्यादिति यत्किञ्चिदित्यनेक व्यक्तिवचन शब्दानुपपत्तेः तदनुरोधेनाग्नीषोमीय प्राग्भागवर्तिनां पदार्थानां धर्म उपांशत्वम् । एवञ्च यद्यपि यत्किञ्चिदित्यनेकव्यक्तिवाचिना शब्देन प्राग्भागवर्तिनः सर्वेऽपि पदार्थाः दीक्षणीयादयः तत्तत्प्रातिस्विकरूपेणोपस्थापयितुं युक्ताः । तथापि

''यावत्या वाचा कामयीत तावत्या दीक्षणीयायामनुब्रूयात्'' इत्यादिधर्मान्तरविधीनां निरवकाशत्वात् सावकाशं यत्किञ्चिदित्येतत् दीक्षणीयादि व्यतिरिक्तपरं कल्पनीयमिति सिद्धान्त इति ।

अत्रोपांशुत्वस्य प्राग्भागधर्मत्वमिति पूर्वपक्षे, ज्योतिष्टोमविकृतिषु प्राग्भागारम्भकेऽप्राकृतपदार्थेऽपि उपांशुत्वं स्यात् । प्राग्भागवर्तिज्योतिष्टोमिकतत्तत् पदार्थधर्मत्वमिति सिद्धान्ते, विकृतिषु तावत्स्वेवोपांशुत्वं स्यान्नाप्राकृतपदार्थ इति फलभेदो द्रष्टव्य इति । **तथा वृत्त्यन्तरेणेति** ।। लक्षणादिरूपवृत्त्यन्तरेणेत्यर्थः । **निरवकाशेनेति** ।। अक्षस्य शब्दवद्वृत्त्यसंभवेन वृत्त्यन्तरेण लब्धावकाशत्वा-संभवेनानुभव सिद्ध विषयत्व त्यागे प्रत्यक्षस्य निर्विषयत्वमेव स्यादित्यर्थः ।

''बहूनामनुग्रहो न्याय्यः'' इति न्यायेनापि प्रत्यक्षस्य प्राबल्यमित्याह **किञ्चेति** ।। द्वादशाध्याये द्वितीयपादे एतच्चिन्तितम् ।

''विप्रतिषिद्धधर्माणां समवाये भूयसां स्यात् सधर्मत्वम्'' इति ।

पञ्चदशरात्रे सत्रे प्रथममहः एकाहाग्निष्टुन्नामकम् । तत्र नामातिदेशेन एकाहाग्निष्टुद्धर्मभूता आग्नेयी सुब्रह्मण्या प्राप्नोति । इतरेषु त्वहःसु यथाप्रकृत्यैन्द्री । तत्रोपसद्दिवसेषु का वानयोराहूतव्येति विशये मुख्यश्रुत्यनुग्रहार्थमाग्नेयीति पूर्वपक्षे प्रयोगवचनस्य भूयोवैगुण्यासहिष्णुत्वात् द्वितीयादिबहुश्रुत्यनुग्रहार्थं ऐन्द्री सुब्रह्मण्याऽऽहूतव्या'' इति सिद्धान्त इति । **अद्वैतवाक्यस्येति** ।। यद्यप्यद्वैतवाक्यान्यपि बहूनि द्वैतवाक्यवत् । विषयैक्यन्तु द्वैतवाक्येऽपि समम् । तथापि द्वैतप्रमाणानां प्रत्यक्षत्वानुमानत्वादिनानेकत्वं यथा न तथाऽद्वैतवाक्यस्येति द्रष्टव्यम् ।। **बहुप्रमाणविरोधेति** ।। प्रमाणविभाजको-पाधिभिर्बहुत्वमत्र विवक्षितमिति द्रष्टव्यम् ।



ಲಿಂಗಾತ್ ಶ್ರುತೇರಿವ ಶೀಘ್ರಗಾಮಿತ್ವಾಚ್ಚ । ಉಕ್ತಂಚ —
''ಪ್ರತ್ಯಕ್ಷೇ ಚಾನುಮಾನೇ ಚ ಯಥಾ ಲೋಕೇ ಬಲಾಬಲಮ್ ।
ಶೀಘ್ರಮಂಥರಗಾಮಿತ್ವಾತ್ತಥೇಹ ಶ್ರುತಿಲಿಂಗಯೋಃ'' ಇತಿ ।

ವಿರೋಧಿ ಇದೆ ಇಲ್ಲ ಎಂಬುದರಿಂದ ಬಲಾಬಲನಿರ್ಣಯವಾಗುವುದನ್ನು ಹೇಳಿ ಈಗ ಶೀಘ್ರ ಪ್ರವರ್ತಕತ್ವ ತದಭಾವಗಳಿಂದ ಬಲಾಬಲ ನಿರ್ಣಯಕ್ರಮವನ್ನು ಶ್ರುತ್ಯುಕ್ತ ದೃಷ್ಟಾಂತವಿಟ್ಟುಕೊಂಡು ಹೇಳುತ್ತಾರೆ— 'ಪ್ರತ್ಯಕ್ಷ–ಅನುಮಾನಗಳಲ್ಲಿ ಲೋಕದಲ್ಲಿ ಪ್ರತ್ಯಕ್ಷವು ಪ್ರಬಲ, ಅನುಮಾನವು ದುರ್ಬಲ ಹೇಗೋ ಹಾಗೇ ಶ್ರುತಿ ಮತ್ತು ಲಿಂಗಗಳಲ್ಲಿಯೂ ಕೂಡ ಶಾಸ್ತ್ರದಲ್ಲಿ ಶ್ರುತಿಯು ಶೀಘ್ರಗಾಮಿಯಾದ್ದರಿಂದ ಪ್ರಬಲ, ಲಿಂಗವು ವಿಲಂಬದಿಂದ ಪ್ರವೃತ್ತಿ ಮಾಡುವುದರಿಂದ ದುರ್ಬಲ' ಎಂದು ವಾರ್ತಿಕದಲ್ಲಿ ಹೇಳಿದೆ.

ಶ್ರುತಿಲಿಂಗಗಳಲ್ಲಿ ಶೀಘ್ರಪ್ರವೃತ್ತಿ ವಿಲಂಬಪ್ರವೃತ್ತಿಗಳು ಪ್ರಾಬಲ್ಯ ದೌರ್ಬಲ್ಯಗಳಿಗೆ ಕಾರಣವಾಗುವುದು ವೇದದಲ್ಲಿ ಕಂಡಿದೆ ಎನ್ನುತ್ತಾರೆ ಮೀಮಾಂಸಕರು.

'ಶ್ರುತಿ–ಲಿಂಗ–ವಾಕ್ಯ–ಪ್ರಕರಣ–ಸ್ಥಾನ–ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥವಿಪ್ರಕರ್ಷಾತ್' (ಜೈ.ಸೂ.3.3.14)

'ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಮತ್ತು ಸಮಾಖ್ಯಾ ಎಂಬ ಆರು ವಿನಿಯೋಗ ಪ್ರಮಾಣಗಳು ಪರಸ್ಪರ ವಿರುದ್ಧ ಪ್ರವೃತ್ತಿ ಮಾಡುತ್ತಿದ್ದರೆ ಅವು ಒಂದೆಡೆ ಸೇರಿದಾಗ ಪೂರ್ವಪ್ರಮಾಣಕ್ಕಿಂತ ಪರಪ್ರಮಾಣವು, 'ಅರ್ಥವಿಪ್ರಕರ್ಷ' ಹೆಚ್ಚು ವಿಲಂಬಪ್ರವೃತ್ತಿ ಉಳ್ಳದ್ದಾದ್ದರಿಂದ ದುರ್ಬಲವೆನಿಸುವುದು' ಎಂದು ಸೂತ್ರಾರ್ಥ.

ಶ್ರುತಿ ಮತ್ತು ಲಿಂಗಗಳಿಗೆ ವಿರೋಧ ಬಂದಾಗ ಲಿಂಗಕ್ಕೆ ಶ್ರುತಿಗಿಂತ ವಿಲಂಬ ಪ್ರವೃತ್ತಿ ಇರುವುದರಿಂದ ಲಿಂಗವು ದುರ್ಬಲವೆನ್ನಲು ಉದಾಹರಣೆ— ಅಗ್ನಿಚಯನ ಪ್ರಕರಣದಲ್ಲಿ 'ಐಂದ್ರ್ಯಾ ಗಾರ್ಹಪತ್ಯಂ ಉಪತಿಷ್ಠತೇ' ಅಂದರೆ, 'ಕದಾಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ' 'ಹೇ ಇಂದ್ರನೆ ನೀನು ಎಂದೂ ನಮಗೆ ಹಾನಿ ಉಂಟುಮಾಡುವವನಲ್ಲ. ಹವಿಸ್ಸನ್ನು ಅರ್ಪಿಸುವ ಯಜಮಾನನನ್ನು ಅನುಗ್ರಹಿಸುವಿ' ಎಂದು ಇಂದ್ರಮಂತ್ರದಿಂದ ಗಾರ್ಹಪತ್ಯಾಗ್ನಿಯನ್ನು ಸ್ತುತಿಸಬೇಕೆಂದು ವಿಧಿ ಇದೆ. ಇಂದ್ರನನ್ನು ಹೊಗಳುತ್ತಿರುವುದರಿಂದ ಈ ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ಹೇಳಬೇಕೆ ಅಥವಾ ಶ್ರುತಿಯು ಈ ಮಂತ್ರದಿಂದ ಗಾರ್ಹಪತ್ಯನನ್ನು ಸ್ತುತಿಸಬೇಕೆಂದು ಹೇಳುವುದರಿಂದ ಗಾರ್ಹಪತ್ಯೋಪಸ್ಥಾನದಲ್ಲಿ ಹೇಳಬೇಕೆ ಎಂದು ಸಂದೇಹ.

ಶ್ರುತಿಯು 'ಐಂದ್ರ್ಯಾ' ಎಂದು ತೃತೀಯಾವಿಭಕ್ತಿಯಿಂದ ಈ ಮಂತ್ರವನ್ನು ಗಾರ್ಹಪತ್ಯೋಪಸ್ಥಾನಾಂಗವಾಗಿ ವಿಧಾನಮಾಡುತ್ತಿರುವಂತೆ ಕಂಡರೂ ಇಂದ್ರನನ್ನು ಸ್ತುತಿಸುವ ಈ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ ಅಶಕ್ಯ. ಶಕ್ಯವಾದ ಕಾರ್ಯದಲ್ಲಿ ವಿಧಿಯು ಪ್ರವೃತ್ತಿ ಮಾಡಬೇಕು. ಮಂತ್ರಕ್ಕೆ ಶಕ್ತಿ ಇರುವುದು, ಇಂದ್ರೋಪಸ್ಥಾನದಲ್ಲಿ. ಇದು ಮಂತ್ರದ ಲಿಂಗ. ಆದರಿಂದ ಶ್ರುತಿಯು 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿಯಿಂದ ಮಂತ್ರಕ್ಕೆ ಗಾರ್ಹಪ್ರತ್ಯೋಪಸ್ಥಾನಾಂಗತ್ವವನ್ನು ವಿಧಿಸುತ್ತಿದ್ದರೂ, 'ಗಾರ್ಹಪತ್ಯ' ಶಬ್ದಕ್ಕೆ ಸದೃಶಲಕ್ಷಣಯಾ

ಇಂದ್ರನೆಂದೇ ಅರ್ಥಮಾಡಬೇಕು. ಗಾರ್ಹಪತ್ಯನು ಅಗ್ನಿ, ಇಂದ್ರನು ದೇವತೆ. ಇಬ್ಬರೂ ಯಾಗಕ್ಕೆ ಆವಶ್ಯಕರಾದ್ದರಿಂದ ಸದೃಶರು, ಎಂದು ಪೂರ್ವಪಕ್ಷ.

**ಸಿದ್ಧಾಂತ ಹೀಗೆ—** ಸರ್ವಥಾ ಅಶಕ್ಯವಾದ ಕಾರ್ಯದಲ್ಲಿ ಮಾತ್ರ ವೇದವು ವಿಧಿಯಲ್ಲಿ ಪ್ರವೃತ್ತಿ ಮಾಡಲಾರದು. ಪ್ರಕೃತ ಇಂದ್ರಮಂತ್ರವು ಗಾರ್ಹಪತ್ಯನನ್ನು ಸ್ತುತಿಸುವುದು ಸರ್ವಥಾ ಅಶಕ್ಯವೇನಲ್ಲ. ಅದು ಗೌಣವೃತ್ತಿಯಿಂದ ಗಾರ್ಹಪತ್ಯನನ್ನು ಹೇಳಬಲ್ಲುದು. 'ಇಂದ್ರ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ'ವನ್ನು ಕೂಡಿಸಲು ಮಂತ್ರದ 'ಇಂದ್ರ' ಶಬ್ದಕ್ಕಾಗಲಿ ವಿಧಿ ವಾಕ್ಯದ 'ಗಾರ್ಹಪತ್ಯ' ಶಬ್ದಕ್ಕಾಗಲಿ ಯಾವುದಾದರೊಂದಕ್ಕೆ ಗೌಣಾರ್ಥ ಕಲ್ಪಿಸುವುದು ಆವಶ್ಯಕವೆಂದಮೇಲೆ ಮಂತ್ರದ ಇಂದ್ರಶಬ್ದಕ್ಕೇ ಗೌಣಾರ್ಥವನ್ನು ಹೇಳುವುದು ಉಚಿತ. ಏಕೆಂದರೆ ವಿಧಿವಾಕ್ಯದಂತೆ ಮಂತ್ರವು ಅಪೂರ್ವವಾದುದನ್ನೇನೂ ಹೇಳಲಾರದು. ಸಿದ್ಧವಿಷಯವನ್ನೇ ಅದು ಹೇಳುತ್ತದೆ. ವಿಧಿ ವಾಕ್ಯ ಅಪೂರ್ವಕರ್ಮವನ್ನು ಹೇಳುತ್ತದೆ. ಆದರಿಂದ ವಿಧಿಯಲ್ಲಿ ಲಕ್ಷಣಾ ಇಲ್ಲ, ಗೌಣಾರ್ಥಕಲ್ಪನೆ ಉಚಿತವಲ್ಲ. ಹೀಗಾಗಿ ವಿಧಿಗನುಸಾರವಾಗಿ ಮಂತ್ರಕ್ಕೇ ಗಾರ್ಹಪತ್ಯ ಬೋಧಕತ್ವವನ್ನು ಒಪ್ಪಬೇಕು.

ಯದ್ಯಪಿ ವಿಧಿವಾಕ್ಯದಲ್ಲಿ 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿ ರೂಪವಾದ ವಿನಿಯೋಕ್ತ್ರೀ ಶ್ರುತಿಯು ಮಂತ್ರವನ್ನು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡುತ್ತಿರುವಾಗಲೇ ಮಂತ್ರದಲ್ಲಿರುವ ಇಂದ್ರಶಬ್ದವು ಮುಖ್ಯವೃತ್ತಿಯಿಂದ ಇಂದ್ರನನ್ನು ಹೇಳುತ್ತಿರುವುದರಿಂದ ಇಂದ್ರಬೋಧನಶಕ್ತಿರೂಪವಾದ ಲಿಂಗವು ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡಬಲ್ಲುದು. ಆದರೂ ಗಾರ್ಹಪತ್ಯೋಪಸ್ಥಾನಾಂಗತ್ವವನ್ನು ಹೇಳುವ ಶ್ರುತಿ ಪ್ರತ್ಯಕ್ಷವಿದೆ. ಅದು ಶೀಘ್ರವಾಗಿ ಮಂತ್ರವನ್ನು ವಿನಿಯೋಗ ಮಾಡಿಬಿಡುತ್ತದೆ. ಲಿಂಗವು ಶ್ರುತಿಯನ್ನು ಕಲ್ಪಿಸಿ ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವುದರೊಳಗೆ ಶ್ರುತಿಯು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡಿರುವುದರಿಂದ ಮಂತ್ರವು ಅಷ್ಟರಿಂದಲೆ ಸಾರ್ಥಕವೆನಿಸಿರುತ್ತದೆ. ಅದರಿಂದ ಅದನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವ ಆವಶ್ಯಕತೆ ಉಳಿಯುವುದಿಲ್ಲ. ಹೀಗಾಗಿ ಇಲ್ಲಿ ಲಿಂಗವು ಶ್ರುತಿಯನ್ನು ಕಲ್ಪಿಸುವುದೇ ಇಲ್ಲ, ಎಂದು.

**'ಯದಾಹವನೀಯೇ ಜುಹೋತಿ' ಇತ್ಯಸ್ಮಾತ್ 'ಪದೇ ಜುಹೋತಿ'ಇತ್ಯಸ್ಯೈವ ವಿಶೇಷವಿಷಯತ್ವಾಚ್ಚ। ಪ್ರತ್ಯಕ್ಷಂ ಹಿ ವಿಶಿಷ್ಯ ಘಟಸತ್ತ್ವಗ್ರಾಹಿ। ಶ್ರುತಿಸ್ತು ಸಾಮಾನ್ಯೇನ ದ್ವಿತೀಯನಿಷೇಧಿಕಾ।**

**ಕಿಂಚ ಯಥಾ ''ಯತ್ಕಿಂಚಿತ್ ಪ್ರಾಚೀನಮಗ್ನೀಷೋಮೀಯಾತ್ ತೇನೋಪಾಂಶು ಚರಂತಿ'' ಇತ್ಯತ್ರತ್ಯಸ್ಯ ಯತ್ಕಿಂಚಿಚ್ಛಬ್ದಸ್ಯ ಪ್ರಕೃತವಿಶೇಷವಾಚಿತ್ವೇನ ಸಾಮಾನ್ಯಾ ವಿಷಯತ್ವೇಽಪಿ ದೀಕ್ಷಣೀಯಾವ್ಯತಿರಿಕ್ತೇ ಸಾವಕಾಶತ್ವಾತ್ 'ಯಾವತ್ಯಾ ವಾಚಾ ಕಾಮಯೀತ ತಾವತ್ಯಾ ದೀಕ್ಷಣೀಯಾಯಾಮನುಬ್ರೂಯಾದ್' ಇತ್ಯನೇನ ನಿರವಕಾಶೇನ ಸಂಕೋಚಃ ತಥಾ ವೃತ್ತ್ಯಂತರೇಣ ವಾ ಅನೇಕಾರ್ಥತ್ವೇನ ವಾ ವಿಷಯಾಂತರಪರತ್ವೇನ ವಾ ಸಾವಕಾಶಾಯಾಃ ಶ್ರುತೇರ್ನಿರವಕಾಶೇನಾಕ್ಷೇಣ ಸಂಕೋಚಃ ಕಿಂ ನ ಸ್ಯಾತ್ ?**

**ಕಿಂಚ ಪಂಚದಶರಾತ್ರೇ ಪ್ರಥಮೇऽಹನಿ ಅಗ್ನಿಷ್ಟುನ್ನಾಮಕೇ ನಾಮಾತಿದೇಶೇನ ಏಕಾಹಾಗ್ನಿಷ್ಟುದ್ಧರ್ಮಭೂತಾ ಸುಬ್ರಹ್ಮಣ್ಯಾ ಆಗ್ನೇಯೀ ಪ್ರಾಪ್ತಾ। ತಸ್ಯಾ ಅಲ್ಪ-ವಿಷಯಾಯಾಃ ಚತುರ್ದಶಾಹಸ್ಸು ಚೋದಕೇನ ಪ್ರಾಪ್ತಯಾ ಐಂದ್ರ್ಯಾ ಬಹುವಿಷಯಯಾ ಬಾಧಃ। ಬಹುಬಾಧಸ್ಯಾನ್ಯಾಯ್ಯತ್ವಾತ್। ತಥಾ ದ್ವೈತಗ್ರಾಹಿಪ್ರತ್ಯಕ್ಷತದುಪಜೀವ್ಯನುಮಾನ ಕರ್ಮ ಕಾಂಡ ಸೃಷ್ಟ್ಯಾದಿವಾಕ್ಯ ಸಗುಣೋಪಾಸನಾವಾಕ್ಯಾದಿರೂಪ ಬಹುಪ್ರಮಾಣಾ-ಬಾಧಾಯ ಅದ್ವೈತವಾಕ್ಯಸ್ಯ ಪ್ರತೀತಾರ್ಥಬಾಧಃ ಕಿಂ ನ ಸ್ಯಾತ್ ? ತದುಕ್ತಮ್**

**''ಬಹುಪ್ರಮಾಣವಿರೋಧೇ ಚೈಕಸ್ಯಾಪ್ರಾಮಾಣ್ಯಂ ದೃಷ್ಟಂ ಶುಕ್ತಿರಜತಾದೌ''ಇತಿ ॥**

'ಯದಾಹವನೀಯೇ ಜುಹೋತಿ' ಎಂಬ ಆಹವನೀಯ ಹೋಮ ವಿಧಾಯಕ ವಾಕ್ಯಕ್ಕಿಂತ 'ಪದೇ ಜುಹೋತಿ' ಎಂಬ ಪದಹೋಮವಿಧಾಯಕ ವಾಕ್ಯವೇ ವಿಶೇಷ ವಿಷಯಕನಾದ್ದರಿಂದ ಪ್ರಬಲವಾಗಿರುವುದು ಕಂಡಿದೆ. ಹಾಗೇ ಅನುಮಾನಾಗಮಗಳಿಗಿಂತ ಪ್ರತ್ಯಕ್ಷವೇ ವಿಶೇಷ ವಿಷಯಕವಾದ್ದರಿಂದ ಪ್ರಬಲ. ಪೂರ್ವಮೀಮಾಂಸಾದಲ್ಲಿ ಹೇಳಿದಂತೆ 'ಪದೇ ಜುಹೋತಿ' ಎಂದು ಪದಹೋಮ ವಿಧಾಯಕ ವಾಕ್ಯವು ಯಾಗ ವಿಶೇಷ ವಿಷಯಕ. ಆಹವನೀಯೇ ಜುಹೋತಿ ಎಂದು ಆಹವನೀಯ ವಿಧಿಯು ಯಾಗಸಾಮಾನ್ಯ ವಿಷಯಕ. ಪ್ರಬಲವಾದ ವಿಶೇಷ ವಿಷಯಕ ಪದಹೋಮವಾಕ್ಯಾನುಸಾರವಾಗಿ ದುರ್ಬಲವಾಗಿರುವ ಯಾಗ ಸಾಮಾನ್ಯವಿಷಯಕ ಆಹವನೀಯ ವಿಧಿ ವಾಕ್ಯವನ್ನು ಪದಹೋಮಯಾಗ ವಿಷಯಕವಾಗಿ ಸಂಕೋಚಮಾಡಬೇಕು. ಪ್ರಕೃತ ಪ್ರತ್ಯಕ್ಷವು ಘಟಸತ್ವರೂಪ ವಿಶೇಷವಿಷಯಕ. ಶ್ರುತಿಯು ಸಾಮಾನ್ಯವಾಗಿ ದ್ವಿತೀಯ ನಿಷೇಧಕವಾಗಿದೆ. ಆದರಿಂದ ಅದಕ್ಕೆ ವಿಶೇಷ ವಿಷಯಕವಾದ ಪ್ರಬಲ ಪ್ರತ್ಯಕ್ಷಾನುಸಾರವಾಗಿ ಅರ್ಥಾಂತರ ಮಾಡಬೇಕು. ಪೂರ್ವಮೀಮಾಂಸಾದಲ್ಲಿ ಈ ವಿಚಾರವು ಹೀಗೆ ಬಂದಿದೆ—

'ಅವಿಶೇಷೇಣ ಯಚ್ಛಾಸ್ತ್ರಂ, ಅನ್ಯಾಯ್ಯತ್ವಾತ್ ವಿಕಲ್ಪಸ್ಯ ತತ್ ಸಂದಿಗ್ಧಂ, ಆರಾದ್ ವಿಶೇಷಶಿಷ್ಟಂ ಸ್ಯಾತ್'(ಜೈ.ಸೂ.10.8.16)

'ಅವಿಶೇಷೇಣ ಶಾಸ್ತ್ರ' ಅಂದರೆ ಆಹವನೀಯವಿಧಾಯಕ ಸಾಮಾನ್ಯಶಾಸ್ತ್ರವು ವಿಲಂಬ ಪ್ರವೃತ್ತಿ ಮಾಡುತ್ತ ಸಂದಿಗ್ಧವಾಗಿದೆ. ಪದಹೋಮಾದಿ ವಿಧಾಯಕ ವಿಶೇಷಶಾಸ್ತ್ರ ಅದಕ್ಕಿಂತ 'ಆರಾತ್' ದೂರದಲ್ಲಿರುತ್ತದೆ. ಅಂದರೆ, ವಿಶೇಷಶಾಸ್ತ್ರದ ವಿಷಯದಲ್ಲಿ ಸಾಮಾನ್ಯಶಾಸ್ತ್ರವು ಪ್ರವೃತ್ತಿ ಮಾಡುವುದೇ ಇಲ್ಲ. ಹೀಗಾಗಿ ಎರಡೂ ಶಾಸ್ತ್ರಗಳನ್ನು ಸಮಬಲವೆಂದು ತಪ್ಪಾಗಿ ತಿಳಿದು ವಿಕಲ್ಪವನ್ನು ಅಂಗೀಕರಿಸುವುದು ನ್ಯಾಯವಲ್ಲ' ಎಂದು ಸೂತ್ರಾರ್ಥ.

ಪದಹೋಮ—ಸೋಮಕ್ರಯಣಕ್ಕಾಗಿ ಒಯ್ಯುವ ಹಸುವಿನ ಹೆಜ್ಜೆಯಲ್ಲಿ ಹೋಮ ಮಾಡಬೇಕು— 'ಪದೇ ಜುಹೋತಿ' ಎಂದು ವಿಧಿ ಇದೆ. ಇದು ಪದಹೋಮ.

ಸೋಮಲತೆ ತುಂಬಿದ ಗಾಡಿ ಚಲಿಸುವಾಗ ಅದರ ದಾರಿಯಲ್ಲಿಯೂ ಹೋಮ ವಿಹಿತವಾಗಿದೆ— 'ವರ್ತ್ಮನಿ ಜುಹೋತಿ' ಇದು ವರ್ತ್ಮಹೋಮ.

ಪಶುಯಾಗದಲ್ಲಿ ಗಾರ್ಹಪತ್ಯಾಗ್ನಿಯಲ್ಲಿ ಪತ್ನೀಸಂಯಾಜಹೋಮವೂ ವಿಹಿತವಾಗಿದೆ— 'ಗಾರ್ಹಪತ್ಯೇ ಪತ್ನೀಸಂಯಾಜಾನ್ ಜುಹೋತಿ'

ಯಾವುದೇ ಪ್ರಕರಣವಿಶೇಷಕ್ಕೆ ಸಂಬಂಧಿಸದೆ ಸಾಮಾನ್ಯವಾಗಿ 'ಆಹವನೀಯದಲ್ಲಿ ಹೋಮ ಮಾಡಬೇಕು' ಎಂದೂ ವಿಧಿ ಇದೆ— 'ಆಹವನೀಯೇ ಜುಹೋತಿ'.

ಈಗ ಹೋಮ ಸಾಮಾನ್ಯದಲ್ಲಿ ವಿಹಿತವಾದ ಆಹವನೀಯಕ್ಕೆ ಹೋಮವಿಶೇಷಗಳಲ್ಲಿ ವಿಹಿತವಾದ ಪದ, ವರ್ತ್ಮ ಮತ್ತು ಗಾರ್ಹಪತ್ಯಗಳಿಂದ ವಿಕಲ್ಪವೋ ಬಾಧವೋ? ಎಂದು ಸಂದೇಹ.

ಪ್ರತ್ಯಕ್ಷಸಿದ್ಧವಾದ ಶ್ರುತಿಯಿಂದ ವಿನಿಯೋಗವು ಶೀಘ್ರವಾದ್ದರಿಂದ ಪ್ರಬಲ, ಶ್ರುತಿಕಲ್ಪನ ದ್ವಾರಾ ಲಿಂಗದಿಂದ ವಿನಿಯೋಗವು ವಿಲಂಬವಾದ್ದರಿಂದ ದುರ್ಬಲ, ಎಂದು ಶ್ರೌತವಿನಿಯೋಗ ಲೈಂಗಿಕವಿನಿಯೋಗಗಳಲ್ಲಿ ಬಲಾಬಲನಿರ್ಣಯ ಸುಲಭ. ಆದರೆ ಸಾಮಾನ್ಯಶಾಸ್ತ್ರ ವಿಶೇಷ ಶಾಸ್ತ್ರಗಳೆರಡೂ ಪ್ರತ್ಯಕ್ಷವಿರುವುದ ರಿಂದ ಬಲಾಬಲನಿರ್ಣಯ ಶಕ್ಯವಿಲ್ಲ. ಆದರಿಂದ ವಿಕಲ್ಪವೇ ಸರಿ ಎಂದು ಪೂರ್ವಪಕ್ಷ.

**ಸಿದ್ಧಾಂತ ಹೀಗೆ—** ಪದ ವರ್ತ್ಮ ಗಾರ್ಹಪತ್ಯಗಳು ಹೋಮವಿಶೇಷಗಳಲ್ಲಿ ಶ್ರುತಿಯಿಂದ ನೇರವಾಗಿಯೇ ತಿಳಿದು ಬರುತ್ತವೆ, ಲಕ್ಷಣಾ ಬೇಕಿಲ್ಲ. ಆದರೆ ಆಹವನೀಯವು ಹೋಮವಿಶೇಷದಲ್ಲಿ ಪ್ರಾಪ್ತವಾಗಬೇಕಾದರೆ ಆಹವನೀಯವಿಧಾಯಕ ಹೋಮಸಾಮಾನ್ಯಶಾಸ್ತ್ರಕ್ಕೇ ಹೋಮವಿಶೇಷದಲ್ಲಿ, ಅಂದರೆ, ಪದ ವರ್ತ್ಮ ಗಾರ್ಹಪತ್ಯಾದಿ ಹೋಮಗಳಲ್ಲಿ ಸಾಮಾನ್ಯವಿಶೇಷಭಾವಸಂಬಂಧ ನಿಮಿತ್ತಕ ಲಕ್ಷಣಾ ಮಾಡಬೇಕಾಗುತ್ತದೆ. ಹೀಗೆ ಲಕ್ಷಣಾ ಇಲ್ಲದೇ ಶೀಘ್ರವಾಗಿ ವಿಹಿತವಾಗುವ ಪ್ರಬಲವಾದ ಪದ ವರ್ತ್ಮ ಗಾರ್ಹಪತ್ಯಗಳಿಂದ ವಿಲಂಬ ಪ್ರವೃತ್ತಿಯ ಆಹವನೀಯಕ್ಕೆ ಬಾಧವನ್ನೇ ಹೇಳಬೇಕು ಮತ್ತು ಸಾಮಾನ್ಯವಿಧಿಯು ಅನ್ಯತ್ರ ಸಾವಕಾಶವಾದ್ದರಿಂದ ನಿರವಕಾಶವಾದ ವಿಶೇಷವಿಧಿಯಿಂದ ಬಾಧಿತವಾಗುತ್ತದೆ ಎನ್ನಬೇಕು. ಅಂದರೆ ಪ್ರತೀತಾರ್ಥತ್ಯಾಗ ಮಾಡಿ ಲಾಕ್ಷಣಿಕಾರ್ಥವನ್ನೇ ಹೇಳಬೇಕು ಹೊರತು ವಿಕಲ್ಪವನ್ನಲ್ಲ ಎಂದು.

'ಯತ್‌ಕಿಂಚಿತ್ ಪ್ರಾಚೀನಂ ಅಗ್ನೀಷೋಮೀಯಾತ್ ತೇನೋಪಾಂಶು ಚರಂತಿ' ಎಂಬಲ್ಲಿ 'ಯತ್ ಕಿಂಚಿತ್' ಎಂಬ ಶಬ್ದವು ಪ್ರಕೃತ ವಿಶೇಷವಾಚಿಯಾದ್ದರಿಂದ ಯದ್ಯಪಿ ಸಾಮಾನ್ಯ ವಿಷಯಕವಲ್ಲ. ಆದರೂ ದೀಕ್ಷಣೀಯೇಷ್ಟಿ ವ್ಯತಿರಿಕ್ತ ವಿಷಯದಲ್ಲಿ ಸಾವಕಾಶವಾದ್ದರಿಂದ, ನಿರವಕಾಶವಾಗಿರುವ 'ಯಾವತ್ಯಾ ವಾಚಾ ಕಾಮಯೀತ ತಾವತ್ಯಾ ದೀಕ್ಷಣೀಯಾಯಾಂ ಅನುಬ್ರೂಯಾತ್' ಎಂಬ ವಾಕ್ಯಬಲದಿಂದ ಸಂಕೋಚ ಮಾಡಿದ್ದು ಕಂಡಿದೆ.

ಹಾಗೇ ಶ್ರುತಿಗೆ ಲಕ್ಷಣಾರೂಪ ವೃತ್ತ್ಯಂತರದಿಂದ ಬೇರೆ ಅರ್ಥ ಮಾಡಲೂ ಅವಕಾಶವಿದೆ. ಅಥವಾ ಶಬ್ದಕ್ಕೆ ಅನೇಕಾರ್ಥಗಳಿರುವುದುಂಟು. ಆಗ ಅದಕ್ಕನುಸಾರವಾಗಿ ಬೇರೆ ಅರ್ಥ ಮಾಡಲು ಅವಕಾಶವಿದೆ. ಅಥವಾ ಪ್ರತ್ಯಕ್ಷ ವಿಷಯಕ್ಕಿಂತ ಬೇರೆ ವಿಷಯಪರತ್ವವಿಟ್ಟುಕೊಂಡು ಪ್ರತ್ಯಕ್ಷವಿರೋಧ

ಬಾರದಂತೆ ಅರ್ಥೈಸಲು ಅವಕಾಶವಿದೆ. ಪ್ರತ್ಯಕ್ಷ ಪ್ರಮಾಣಕ್ಕೆ ಹೀಗೆ ಬೇರೆ ವಿಷಯಕಲ್ಪನೆ ಮಾಡಲು ಅವಕಾಶವಿಲ್ಲ, ನಿರವಕಾಶವಾಗಿದೆ. ಅದರಿಂದ ನಿರವಕಾಶವಾದ ಪ್ರತ್ಯಕ್ಷಾನುಸಾರ ಸಾವಕಾಶವಾದ ಶ್ರುತಿಗೆ ಅರ್ಥಸಂಕೋಚವನ್ನೇಕೆ ಮಾಡಬಾರದು? ಪೂರ್ವಮೀಮಾಂಸಾದಲ್ಲಿ ಹೀಗೆ ಶ್ರುತಿಗೆ ಸಂಕೋಚಮಾಡುವ ವಿಚಾರ ಬಂದಿದೆ—

'ಯಾವತ್ಯಾ ವಾಚಾ ಕಾಮಯೀತ ತಾವತ್ಯಾ ದೀಕ್ಷಣೀಯಾಯಾಮನುಬ್ರೂಯತ್' ದೀಕ್ಷಣೀಯೇಷ್ಟಿಯಲ್ಲಿ ಯಥೇಚ್ಛವಾಗಿ ಗಟ್ಟಿಯಾಗಿಯೇ ಮಂತ್ರೋಚ್ಚಾರಣ ಮಾಡಬೇಕು' ಎಂದು ವಿಶೇಷವಾಗಿ ಹೇಳಿದೆ.

'ಯತ್‌ಕಿಂಚಿತ್ ಪ್ರಾಚೀನಂ ಅಗ್ನಿಷೋಮೀಯಾತ್ ತೇನೋಪಾಂಶು ಚರಂತಿ' ಎಂಬಲ್ಲಿ 'ಯತ್‌ಕಿಂಚಿತ್' ಶಬ್ದವಿದೆ. 'ಯತ್‌ಕಿಂಚಿತ್' ಶಬ್ದವು ಪ್ರಕೃತವಾದ ಯಾವದ್ವಿಶೇಷವಾಚಿ. 'ಅಗ್ನೀಷೋಮೀಯಕ್ಕಿಂತ ಹಿಂದಿನ ಎಲ್ಲ ಕರ್ಮಗಳಲ್ಲಿಯೂ ಮಂತ್ರವನ್ನು ಮೆತ್ತಗೆ ಹೇಳಬೇಕೆ'ಂದು ಎಲ್ಲ ಕರ್ಮಗಳಲ್ಲಿ ಉಪಾಂಶುಸ್ವರವನ್ನು ಈ ವಿಧಿವಾಕ್ಯ ವಿಧಾನ ಮಾಡುತ್ತಿದೆ. ಸಾಮಾನ್ಯವಾಗಿ ವಿಹಿತವಾದ ಈ ಉಪಾಂಶುಸ್ವರವನ್ನು ವಿಶೇಷವಾಗಿ ದೀಕ್ಷಣೀಯೇಷ್ಟಿಯಲ್ಲಿ ವಿಹಿತವಾದ ಉಚ್ಚಸ್ವರವು ಬಾಧಿಸುತ್ತದೆ. ಏಕೆಂದರೆ 'ಯತ್‌ಕಿಂಚಿತ್' ಎಂದು ಎಲ್ಲ ಕರ್ಮಗಳಲ್ಲಿ ವಿಹಿತವಾದ ಉಪಾಂಶುಸ್ವರವು ದೀಕ್ಷಣೀಯ ವ್ಯತಿರಿಕ್ತ ಎಲ್ಲ ಕರ್ಮಗಳಲ್ಲಿ ಸಾವಕಾಶವಾಗಿದೆ. 'ಯಾವತ್ಯಾ ವಾಚಾ ಕಾಮಯೀತ ತಾವತ್ಯಾ ದೀಕ್ಷಣೀಯಾಯಾಂ' ಎಂದು ದೀಕ್ಷಣೀಯದಲ್ಲಿ ವಿಹಿತವಾದ ಉಚ್ಚಸ್ವರವು ನಿರವಕಾಶ. ನಿರವಕಾಶವು ಸಾವಕಾಶವನ್ನು ಬಾಧಿಸುತ್ತದೆ.

'ದೇಶಸಂಬದ್ಧಮುಪಾಂಶುತ್ವಂ ತೇಷಾಂ ಸ್ಯಾತ್ ಶ್ರುತಿನಿರ್ದೇಶಾತ್ ತಸ್ಯ ಚ ತತ್ರ ಭಾವಾತ್' (ಜೈ.ಸೂ.9.1.20)

'ಅಗ್ನೀಷೋಮೀಯಕ್ಕಿಂತ ಹಿಂದಿನ ಕರ್ಮಗಳಿಗೆ ವಿಹಿತವಾದ ಉಪಾಂಶು ಸ್ವರವು ದೀಕ್ಷಣೀಯಾದಿಗಳಿಗೆ ಅವಶ್ಯ ಸಂಬಂಧಿಸಿರುತ್ತದೆ. ಶ್ರುತಿಯಲ್ಲಿ 'ಅಗ್ನೀಷೋಮೀಯಾತ್' ಎಂದು ನಿರ್ದೇಶವಿರುವುದರಿಂದ, ಅವುಗಳಲ್ಲಿ ಉಪಾಂಶುಸ್ವರಪ್ರಯುಕ್ತ ಅಪೂರ್ವವಿರುವುದರಿಂದ, ಎಂದು ಸೂತ್ರಾರ್ಥ.

ಜ್ಯೋತಿಷ್ಟೋಮಪ್ರಕರಣದಲ್ಲಿ—

'ತ್ಸರಾ ವಾ ಏಷಾ ಯಜ್ಞಸ್ಯ ತಸ್ಮಾತ್ ಯತ್‌ಕಿಂಚಿತ್ ಪ್ರಾಚೀನಂ ಅಗ್ನೀಷೋಮೀಯಾತ್ ತೇನೋಪಾಂಶು ಚರಂತಿ'

ಜ್ಯೋತಿಷ್ಟೋಮಾಂಗವಾದ ಅಗ್ನೀಷೋಮೀಯ ಪಶುಯಾಗಕ್ಕಿಂತ ಹಿಂದಿನ ದೀಕ್ಷಣೀಯೇಷ್ಟಿ ಪ್ರಾಯಣೀಯೇಷ್ಟಿ ಆತಿಥ್ಯೇಷ್ಟಿ ಮುಂತಾದ ಕರ್ಮಗಳಲ್ಲಿ ಮಂತ್ರಗಳನ್ನು ಉಪಾಂಶುಸ್ವರದಿಂದ ಅಂದರೆ ಮೆತ್ತಗೇ ಹೇಳಿದರೆ ಜ್ಯೋತಿಷ್ಟೋಮಯಾಗದಿಂದ ಬರಬೇಕಾಗಿರುವ ಫಲ ಸುಲಭವಾಗಿ

ಬರುತ್ತದೆ' ಎಂದು ಈ ಮಂತ್ರ ಹೇಳುತ್ತಿದೆ. 'ತ್ಸರಾ' ಎಂದರೆ, ರಹಸ್ಯ ಸಂಚಾರ. ಬಕಪಕ್ಷಿಯನ್ನು ಸೆರೆ ಹಿಡಿಯಲು ಬೇಡನು ಹಾವಿನಂತೆ ತೆವಳುತ್ತ ಸದ್ದುಮಾಡದೆ ಹೆಜ್ಜೆ ಇಡುತ್ತ ಬಳಿ ಸಾರುತ್ತಾನೆ. ಆಗ ಹಕ್ಕಿಯನ್ನು ಹಿಡಿದುಕೊಳ್ಳುವುದು ಸುಲಭ. ಇದು ಬೇಡನ 'ತ್ಸರಾ' ಹಾಗೇ 'ಯಜ್ಞಸ್ಯ ಏಷಾ ತ್ಸರಾ' 'ಉಪಾಂಶು ಸ್ವರವು ಜ್ಯೋತಿಷ್ಟೋಮವೆಂಬ ಸೋಮಯಾಗದಲ್ಲಿ ರಹಸ್ಯ ಸಂಚಾರ', ಸುಲಭವಾಗಿ ಅದರಿಂದ ಫಲವನ್ನು ಹೊಂದುವ ಉಪಾಯ ಎಂದು.

ಇಲ್ಲಿ ಶ್ರುತಿಯು ಹೇಳುತ್ತಿರುವ ಉಪಾಂಶುಸ್ವರವು ಜ್ಯೋತಿಷ್ಟೋಮವೆಂಬ ಪ್ರಧಾನ ಸೋಮಯಾಗದ ಪೂರ್ವಭಾಗವಾಗಿ ಮಾಡುವ ಗ್ರಹಹೋಮಾದಿ ಕರ್ಮಗಳಿಗೆ ಸಂಬಂಧಿಸಿದ್ದೆ? ಅಥವಾ ಅಂಗಯಾಗವಾದ ಅಗ್ನೀಷೋಮೀಯ ಪಶುಯಾಗದ ಪೂರ್ವಭಾವಿಯಾಗಿರುವ ದೀಕ್ಷಣೀಯ ಪ್ರಾಯಣೀಯಾದಿಕರ್ಮಗಳಿಗೆ ಸಂಬಂಧಿಸಿದ್ದೆ? ಎಂದು ಸಂದೇಹ.

'ತ್ಸರಾ ವಾ ಏಷಾ ಯಜ್ಞಸ್ಯ' ಎಂಬಲ್ಲಿರುವ 'ಯಜ್ಞಸ್ಯ' ಎಂಬ ಪದವನ್ನು 'ತ್ಸರಾ' ಎಂಬಲ್ಲಿ ಅನ್ವಯಿಸದೆ ಮುಂದೆ ಬರುವ 'ಪ್ರಾಚೀನಂ' ಎಂಬ ಶಬ್ದಕ್ಕೆ ಅನ್ವಯ ಮಾಡಿದರೆ 'ಜ್ಯೋತಿಷ್ಟೋಮ ಯಜ್ಞದ ಪ್ರಾಚೀನ ಭಾಗವು ಉಪಾಂಶು ಸ್ವರಯುಕ್ತವಾಗಬೇಕು' ಎಂದು ಅರ್ಥ ಸಿಗುತ್ತದೆ. ಆಗ ಜ್ಯೋತಿಷ್ಟೋಮದ ವಿಕೃತಿ ಯಾಗಗಳಲ್ಲಿಯೂ ಅವುಗಳ ಪೂರ್ವಭಾಗದಲ್ಲಿ ಉಪಾಂಶುಸ್ವರಾನು ಷ್ಠಾನ ಅತಿದೇಶದಿಂದ ಲಭ್ಯವಾಗುತ್ತದೆ. 'ಯಜ್ಞಸ್ಯ ತ್ಸರಾ' ಎಂದು ಅನ್ವಯಿಸಿದರೆ ಅದು ಕೇವಲ ಉಪಾಂಶುಸ್ವರವನ್ನು ಹೊಗಳುವ ಅರ್ಥವಾದವಾಗುತ್ತದೆ. ವ್ಯರ್ಥವಾಗುತ್ತದೆ. ಎಂದು ಪೂರ್ವಪಕ್ಷ.

'ಯಜ್ಞಸ್ಯ ಪ್ರಾಚೀನಂ' ಅಂದರೆ ಜ್ಯೋತಿಷ್ಟೋಮಯಜ್ಞದ ಪೂರ್ವಭಾಗವೆಂದು ಷಷ್ಠೀವಿಭಕ್ತಿ ಹೇಳುತ್ತದೆ. ಯಜ್ಞದ ಪೂರ್ವಭಾಗವೆಂದರೆ ಅದು ಒಂದೇ ಇರುತ್ತದೆ. ಆಗ 'ಯತ್‌ಕಿಂಚಿತ್ ಪ್ರಾಚೀನಂ' ಅಂದರೆ 'ಎಲ್ಲ ಪೂರ್ವಭಾಗಗಳೆ'ಂದು ಹೇಳುವುದು ಕೂಡುವುದಿಲ್ಲ, ಯತ್‌ಕಿಂಚಿತ್ ಶಬ್ದಕ್ಕೆ ಅನ್ವಯ ಕೂಡುವುದಿಲ್ಲ, ಅದರಿಂದ 'ಅಗ್ನೀಷೋಮೀಯಾತ್ ಪ್ರಾಚೀನಂ' ಎಂದು ಅನ್ವಯಿಸಬೇಕು. ಆಗ ಅಗ್ನೀಷೋಮೀಯ ಪಶುಯಾಗಕ್ಕಿಂತ ಹಿಂದಿನ ದೀಕ್ಷಣೀಯಾದಿ ಕರ್ಮಗಳು ಅನೇಕ ಇವೆ. ಅವುಗಳಲ್ಲಿ ಎಲ್ಲವುಗಳಲ್ಲಿಯೂ ಉಪಾಂಶು ಸ್ವರ ವಿಹಿತವಾಗುವುದು. 'ಯತ್‌ಕಿಂಚಿತ್ ಪ್ರಾಚೀನಂ ಅಗ್ನೀಷೋಮೀಯಾತ್ ತೇನೋಪಾಂಶು ಚರಂತಿ' ಎಂದು ಅನ್ವಯ ಕೂಡುತ್ತದೆ. ಈಗ 'ಯಜ್ಞಸ್ಯ' ಎಂಬುದನ್ನು 'ತ್ಸರಾ' ಎಂಬಲ್ಲಿಯೇ ಅನ್ವಯಿಸಬೇಕು.

ಯದ್ಯಪಿ ದೀಕ್ಷಣೀಯೇಷ್ಟಿಯಲ್ಲಿ ಯಥೇಚ್ಛ ಉಚ್ಚಸ್ವರ, ಪ್ರಾಯಣೀಯದಲ್ಲಿ ಮಂದ್ರಸ್ವರ. ಆತಿಥ್ಯೇಷ್ಟಿಯಲ್ಲಿ ಮಂದ್ರತರ ಸ್ವರ. ಉಪಸದ್ಹೋಮಗಳಲ್ಲಿ ಉಪಾಂಶುಸ್ವರ ಅಗ್ನೀಷೋಮೀಯ ಹೋಮದಲ್ಲಿ ಉಚ್ಚಸ್ವರ ಎಂದು ಭೇದವಿದೆ. 'ಯತ್‌ಕಿಂಚಿತ್' ಎಲ್ಲ ಅಂಗಯಾಗಗಳಲ್ಲಿಯೂ ಉಪಾಂಶುಸ್ವರ ವಿಧಾನ ಕೂಡುವುದಿಲ್ಲ. ಆದರೂ ಯತ್‌ಕಿಂಚಿತ್ ಶಬ್ದವನ್ನು ದೀಕ್ಷಣೀಯಾದಿ ವ್ಯತಿರಿಕ್ತ ಎಲ್ಲ ಯಾಗ ವಿಷಯದಲ್ಲಿ ಸಂಕೋಚ ಮಾಡಲು ಬರುತ್ತದೆ. ಅದು ಸಾವಕಾಶ. ದೀಕ್ಷಣೀಯಾದಿಗಳಲ್ಲಿ ಯಥೇಚ್ಛಸ್ವರವು ನಿರವಕಾಶ. ನಿರವಕಾಶದಿಂದ ಸಾವಕಾಶವು ಸಂಕೋಚಕ್ಕೆ ಯೋಗ್ಯವಾಗುತ್ತದೆ ಎಂದು ಸಿದ್ಧಾಂತ.

ವಿಷಯಗಳನ್ನು ಬಾಧಿಸಲೇಬೇಕಾಗಿ ಬಂದಾಗ ಅಲ್ಪವಿಷಯಗಳನ್ನು ಬಾಧಿಸುವುದೇ ಯುಕ್ತ. ಬಹುವಿಷಯಗಳನ್ನು ಬಾಧಿಸುವುದು ನ್ಯಾಯವಲ್ಲ ಎನ್ನುವುದೂ ಒಂದು ಮೀಮಾಂಸಾನ್ಯಾಯ.

ವಿಪ್ರತಿಷಿದ್ಧ ಧರ್ಮಾಣಾಂ ಸಮವಾಯೇ ಭೂಯಸಾಂ ಸ್ಯಾತ್ ಸಧರ್ಮತ್ವಂ (ಜೈ.ಸೂ.12.2.22)

ಪಂಚದಶರಾತ್ರ ಸತ್ರದಲ್ಲಿ ಮೊದಲನೆ ಅಹಸ್ಸಿಗೆ ಏಕಾಹಾಗ್ನಿಷ್ಟುತ್ ಎಂದು ಹೆಸರು. ಅದರಿಂದ ಏಕಾಹಾಗ್ನಿಷ್ಟುತ್ ಎಂಬ ಯಾಗದ ನಾಮವೇ ಈ ಅಹಸ್ಸಿಗೆ ಇರುವುದರಿಂದ ಆ ಯಾಗದಲ್ಲಿ ವಿಹಿತವಾದ ಆಗ್ನೇಯ ಸುಬ್ರಹ್ಮಣ್ಯಾ ಮಂತ್ರವೇ ಈ ಅಹಸ್ಸಿನಲ್ಲಿ ಪ್ರಾಪ್ತವಾಗುತ್ತದೆ. ಮುಂದಿನ ಅಹಸ್ಸುಗಳಲ್ಲಿ ಪ್ರಕೃತಿಯಾಗದಂತೇ ವಿಕೃತಿಯನ್ನೂ ಮಾಡಬೇಕೆಂಬ ನಿಯಮದಂತೆ ಐಂದ್ರೀ ಸುಬ್ರಹ್ಮಣ್ಯಾಮಂತ್ರ ಪ್ರಾಪ್ತವಾಗುತ್ತದೆ. ಉಪಸದ್ದಿವಸದಲ್ಲಿ ಆಗ್ನೇಯೀ ಮಂತ್ರವನ್ನು ಹೇಳಬೇಕೆ ಅಥವಾ ಐಂದ್ರೀಮಂತ್ರವನ್ನು ಹೇಳಬೇಕೆ ಎಂಬ ಸಂದೇಹ ಬಂದಾಗ ಪೂರ್ವಪಕ್ಷಿ ಹೇಳುತ್ತಾನೆ— 'ಮೊದಲಿಗೆ ಪ್ರಾಪ್ತವಾದುದು ಆಗ್ನೇಯೀಮಂತ್ರ. ಅದನ್ನೇ ಎಲ್ಲ ಹದಿನೈದು ಅಹಸ್ಸಿನಲ್ಲಿಯೂ ಹೇಳುವುದು ನ್ಯಾಯ' ಎಂದು. ಸಿದ್ಧಾಂತಿ ಹೇಳುತ್ತಾನೆ— 'ಆಗ್ನೇಯ ಮಂತ್ರವನ್ನು ಹೇಳಿದರೆ ಮೊದಲ ಅಹಸ್ಸಿನ ಮಂತ್ರದ ಅನುಷ್ಠಾನವನ್ನೇ ಮಾಡಿದಂತಾಯಿತು. ಉಳಿದ ಹದಿನಾಲ್ಕು ಅಹಸ್ಸಿನ ಮಂತ್ರಾನುಷ್ಠಾನಕ್ಕೆ ಲೋಪ ಬಂದೀತು. ಇದು ನ್ಯಾಯವಲ್ಲ. ಬಹು ಅಹಸ್ಸುಗಳಲ್ಲಿ ಹೇಳಬೇಕಾದ ಐಂದ್ರೀಮಂತ್ರಕ್ಕೆ ಲೋಪಮಾಡುವುದಕ್ಕಿಂತ ಒಂದು ಅಹಸ್ಸಿನ ಮಂತ್ರಕ್ಕೆ ಲೋಪಮಾಡುವುದೇ ಯುಕ್ತ' ಎಂದು.

ಪ್ರಕೃತ ದ್ವೈತ ಅದ್ವೈತ ವಾಕ್ಯಗಳಲ್ಲಿ ವಿರೋಧಪರಿಹಾರಕ್ಕೆ ಅದ್ವೈತವಾಕ್ಯಗಳಿಗೆ ಅನ್ಯಾರ್ಥ ಮಾಡುವುದೇ ನ್ಯಾಯ. ಏಕೆಂದರೆ ಅದ್ವೈತ ವಾಕ್ಯ ಕಡಿಮೆ. ದ್ವೈತವಾಕ್ಯಗಳು ಕರ್ಮಕಾಂಡ, ಸೃಷ್ಟ್ಯಾದಿ ವಾಕ್ಯಗಳು. ಸಗುಣೋಪಾಸನಾವಾಕ್ಯಗಳೆಂದು ಬಹಳ ಇವೆ. ಅವುಗಳಿಗೆ ಅನ್ಯಾರ್ಥ ಮಾಡುವುದು ಅನ್ಯಾಯ.

ಮತ್ತು ಅದ್ವೈತ ವಿಷಯದಲ್ಲಿಯೂ ದ್ವೈತವಿಷಯದಂತೆ ಬಹಳ ವಾಕ್ಯಗಳಿವೆ ಎಂದು ಅದ್ವೈತಿ ತೋರಿಸುವ ಸಂಭವವಿದ್ದರೂ, ದ್ವೈತವಿಷಯದಲ್ಲಿ ಪ್ರತ್ಯಕ್ಷ, ಅದಕ್ಕನುಸಾರಿ ಅನುಮಾನ ಆಗಮಗಳೆಂದು ಬಹು ಪ್ರಮಾಣಗಳು ಲಭ್ಯ. ಅದ್ವೈತದಲ್ಲಿ ಕೇವಲ ಆಗಮವನ್ನೇ ಪ್ರಮಾಣವಾಗಿ ಹೇಳಬೇಕಾಗುತ್ತವೆ. ಅದರಿಂದ ಬಹುಪ್ರಮಾಣಗಳಿಂದ ಸಿದ್ಧವಾಗುವ ಪ್ರಪಂಚಸತ್ಯತ್ವವನ್ನು ಅಪಲಾಪ ಮಾಡುವುದು ಯುಕ್ತವಲ್ಲ. ಇದನ್ನು 'ಬಹುಪ್ರಮಾಣಗಳ ವಿರೋಧ ಬಂದರೆ ಒಂದು ಪ್ರಮಾಣವನ್ನು ತ್ಯಾಗ ಮಾಡುವುದು ಶುಕ್ತಿರಜತಾದಿ ವಿಷಯದಲ್ಲಿ ದೃಷ್ಟವಾಗಿದೆ' ಎಂದು ಭಗವತ್ಪಾದರು ವಿಷ್ಣುತತ್ವವಿನಿರ್ಣಯದಲ್ಲಿ ಹೇಳಿದ್ದಾರೆ. ದೂರದಿಂದ ಶುಕ್ತಿಯು ರಜತವಾಗಿ ಕಾಣುತ್ತವೆ. ಆದರೆ ಸಮೀಪಕ್ಕೆ ಬಂದಾಗ ರಜತವಲ್ಲ ಎಂದು ಕಾಣುತ್ತದೆ. ಪರೀಕ್ಷೆ ಮಾಡಿದಾಗಲೂ ರಜತವಲ್ಲ ಎಂದು ತಿಳಿಯುತ್ತದೆ, ಆಪ್ತರ ಮಾತಿನಿಂದಲೂ ರಜತವಲ್ಲವೆಂದೇ ತಿಳಿಯುತ್ತದೆ. ಹೀಗೆ

ಬಹುಪ್ರಮಾಣಗಳಿಂದ ರಜತವಲ್ಲ ಎಂದು ತಿಳಿಯುವುದರಿಂದ ಅವುಗಳ ವಿರೋಧವಿರುವಾಗ ಮೊದಲಿಗೆ ದೂರದೋಷ ಪ್ರಯುಕ್ತವಾಗಿ ಬೆಳ್ಳಿಯೆಂದು ಕಂಡಿದ್ದನ್ನೇ ಅಪ್ರಮಾಣವೆಂದು ಪರಿತ್ಯಾಗ ಮಾಡುತ್ತೇವೆ. ಹಾಗೇ ವಿಶ್ವಮಿಥ್ಯಾತ್ವಕ್ಕೆ ಪ್ರತ್ಯಕ್ಷ ಅನುಮಾನಾಗಮಗಳೆಂದು ಬಹುಪ್ರಮಾಣ ವಿರೋಧವಿರುವಾಗ ಅವುಗಳನ್ನೇ ತ್ಯಾಗಮಾಡುವುದು ಅನ್ಯಾಯವಾಗುವುದು.



किञ्चोपजीव्यत्वात्प्राबल्यमक्षस्य; श्रुतेः स्मृतित इव । तच्चाक्षेण अनुमितिकारणस्य पक्षसाध्यहेतुव्याप्त्यादेः शाब्दधीहेतोः शब्दस्वरूपस्य तद्धर्मस्य योग्यतादेः, उपक्रमोपसंहारैकरूप्यादेः, अनुमितिशाब्दधी-स्वरूप तत्प्रामाण्यादेश्च ग्राह्यत्वात् । यदा हि 'घटो व्यापकः सत्त्वाद्' इत्यत्राक्षं धर्मिमात्रग्राहित्वेन, 'शुचि नरशिरःकपालं प्राण्यंगत्वाद्' इत्यत्र शब्दः साध्यमात्रग्राहित्वेन, 'मनो विभु ज्ञानासमवाय्याधारत्वाद्' इत्यत्रानुमानं हेतुमात्रग्राहित्वेनानुमान-स्योपजीव्यम्, तदेह प्रत्यक्षं लिङ्गशब्दापेक्षितसर्वग्राहीति कथं नोपजीव्यम् ? चक्षुरादेः शब्दतज्जन्यज्ञानप्रामाण्याद्यग्राहित्वेऽपि तद्ग्राहिश्रोत्रसाक्ष्यादिसजातीयत्वात् रूपादिधर्म्यंशे साक्षा-दुपजीव्यत्वाच्च प्राबल्यम् ।

---

**तच्चेति** ।। प्राबल्यमित्यर्थः । **ग्राह्यत्वादिति** अक्षेणेत्यनेन सम्बध्यते । कैमुतिकन्यायेनापि अक्षस्योपजीव्यत्वं साधयति **यदा हीति** ।। "शुचि नरशिरःकपाल"मित्यत्र नरशिरःकपालं शुचीति प्रतिज्ञावाक्यक्रमो द्रष्टव्यः । ननु तथापि, आगमाद्यपेक्षया कथं चाक्षुषादिप्रत्यक्षस्य प्राबल्यं, तदनुपजीव्यत्वादित्यत आह **चक्षुरादेरिति** । श्रोत्रादीत्यादिपदात् साक्षिपरिग्रहः । न केवलं चक्षुरादेरुपजीव्यजातीयत्वमात्रेण प्राबल्यं किन्तु मिथ्यात्वानुमितिप्रयोजक-व्याप्तिग्रहस्थानभूतशुक्तिरूप्यादिधर्म्यंशसाक्षात्कारजनकतया साक्षादप्युपजीव्यत्वेन प्राबल्यमित्याह **रूप्यादिधर्म्यंश इति** ।। रूप्यादिरूपं यद्धर्मि तदंश इत्यर्थः । नच शुक्तिरूप्यादेः साक्षिभास्यत्वमेव, न चक्षुर्भास्यत्वमिति वाच्यम् । चक्षुरन्वयव्यतिरेकानुविधानेन "चक्षुषेदं रजतं पश्यामि" इत्यनुव्यवसायबलेन च तत्प्रतीतेः चाक्षुषत्वस्वीकारस्योचितत्वात् । अन्यथा घटादेरपि साक्षिभास्यत्व-

स्वीकारप्रसङ्गात् । अत एव चक्षुरन्वयव्यतिरेकानुविधानं रूप्याद्यध्यास-कारणेदमाकारकधर्मिज्ञानोपक्षीणमिति निरस्तम् । तथापि मिथ्यात्वानुमिते-श्चक्षुरिन्द्रियरूपप्रत्यक्षोपजीवकत्वानपायात् । साक्षात्परम्परया वा येन विना यस्योत्थानमेव न भवति तं प्रति तस्योपजीव्यत्वादिति भावः ।



**ಕಿಂಚೋಪಜೀವ್ಯತ್ವಾತ್ ಪ್ರಾಬಲ್ಯಮಕ್ಷಸ್ಯ, ಶ್ರುತೇಃ ಸ್ಮೃತಿತಃ ಇವ। ತಚ್ಚಾಕ್ಷೇಣ ಅನುಮಿತಿಕಾರಣಸ್ಯ ಪಕ್ಷಸಾಧ್ಯಹೇತುವ್ಯಾಪ್ತ್ಯಾದೇಃ, ಶಾಬ್ದಧೀಹೇತೋಃ ಶಬ್ದಸ್ವರೂಪಸ್ಯ ತದ್ಧರ್ಮಸ್ಯ ಯೋಗ್ಯತಾದೇಃ, ಉಪಕ್ರಮೋಪಸಂಹಾರೈಕರೂಪ್ಯಾದೇಃ, ಅನುಮಿತಿ ಶಾಬ್ದಧೀಸ್ವರೂಪತತ್ಪ್ರಾಮಾಣ್ಯಾದೇಶ್ಚ ಗ್ರಾಹ್ಯತ್ವಾತ್ ।**

ಪ್ರತ್ಯಕ್ಷವು ಅನುಮಾನಾಗಮಗಳಿಗೆ ಉಪಜೀವ್ಯವಾದ್ದರಿಂದಲೂ ಪ್ರಬಲ, ಶ್ರುತಿಯು ಸ್ಮೃತಿಗೆ ಉಪಜೀವ್ಯವಾದುದರಿಂದ ಸ್ಮೃತಿಗಿಂತ ಪ್ರಬಲ ಹೇಗೋ ಹಾಗೆ. ಅನುಮಾನಗಳಿಗೆ ಪ್ರತ್ಯಕ್ಷವು ಉಪಜೀವ್ಯ ಹೇಗೆಂದರೆ ಅನುಮಿತಿಗೆ ಕಾರಣವಾಗಿರುವ ಪಕ್ಷ ಸಾಧ್ಯ ಹೇತು ವ್ಯಾಪ್ತಿ ಮುಂತಾದುವನ್ನು ಪ್ರತ್ಯಕ್ಷವೇ ತಿಳಿಸಬೇಕು. ಶಾಬ್ದ ಬೋಧಕ್ಕೆ ಹೇತುವಾಗಿರುವ ಶಬ್ದಸ್ವರೂಪವನ್ನೂ ಅದರ ಯೋಗ್ಯತಾದಿ ಧರ್ಮಗಳನ್ನೂ ಉಪಕ್ರಮೋಪಸಂಹಾರ ಐಕ್ಯಕರೂಪ್ಯಾದಿ ಲಿಂಗಗಳನ್ನೂ ಪ್ರತ್ಯಕ್ಷವೆ ತಿಳಿಸಬೇಕು. ಆದರಿಂದ ಅನುಮಾನ ಶಬ್ದಗಳು ಪ್ರತ್ಯಕ್ಷಪ್ರಮಾಣದ ಸಹಾಯವಿಲ್ಲದೆ ಪ್ರವೃತ್ತಿಯನ್ನೇ ಮಾಡಲಾರವು.

**ಯದಾ ಹಿ 'ಘಟೋ ವ್ಯಾಪಕಃ ಸತ್ತ್ವಾದ್' ಇತ್ಯತ್ರಾಕ್ಷಂ ಧರ್ಮಿಮಾತ್ರಗ್ರಾಹಿತ್ವೇನ, 'ಶುಚಿ ನರಶಿರಃಕಪಾಲಂ ಪ್ರಾಣ್ಯಂಗತ್ವಾದ್' ಇತ್ಯತ್ರ ಶಬ್ದಃ ಸಾಧ್ಯಮಾತ್ರಗ್ರಾಹಿತ್ವೇನ,**

ಘಟವು ವ್ಯಾಪಕವಾಗಿದೆ, ಸತ್ತಾದ್ದರಿಂದ, ಆಕಾಶದಂತೆ ಎಂಬ ದುಷ್ಟಾನುಮಾನಕ್ಕೆ ಅಪೇಕ್ಷಿತವಾಗಿರುವ ಧರ್ಮಿಮಾತ್ರವನ್ನು ತಿಳಿಸಿಕೊಟ್ಟರೂ ಕೂಡ ಚಾಕ್ಷುಷಪ್ರತ್ಯಕ್ಷವು ಉಪಜೀವ್ಯ ವಾಗಿ ಪ್ರಬಲವೆನಿಸಿಸುತ್ತದೆ, ಆದರಿಂದ, ಪ್ರಬಲವಾದ ಚಾಕ್ಷುಷಪ್ರತ್ಯಕ್ಷವು 'ಘಟವು ವ್ಯಾಪಕವಲ್ಲ' ಎಂದು ಗ್ರಹಿಸುವುದರಿಂದ 'ಘಟವು ವ್ಯಾಪಕವಾಗಿದೆ' ಎನ್ನುವ ಅನುಮಾನವು ಬಾಧಿತವೆನಿಸುತ್ತದೆ.

'ನರಶಿರಃ ಕಪಾಲವು ಶುಚಿಯಾಗಿದೆ. ಪ್ರಾಣ್ಯಂಗವಾದ್ದರಿಂದ, ಶಂಖದಂತೆ' ಎಂಬ ಅನುಮಾನದಲ್ಲಿ, ಸಾಧ್ಯವಾದ ಶುಚಿತ್ವವನ್ನು,

ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥

ಮೂಲೋಕದೊಳಗಿರುವ ಎಲ್ಲ ತೀರ್ಥದೇವತೆಗಳೂ ವಾಸುದೇವನ ಇಚ್ಛಾನುಸಾರ

ಶಂಖದಲ್ಲಿ ನೆಲೆಸಿದ್ದಾರೆ. ಆದರಿಂದ ಶಂಖವು ಶುಚಿ, ಪೂಜ್ಯ ಎನ್ನುವ ಆಗಮವು ತಿಳಿಸುತ್ತದೆ. ಈ ಆಗಮಕ್ಕೆ ಆಗಮತ್ವೇನ ಸಜಾತೀಯವಾದ ಮಾತ್ರಕ್ಕೇ,

ನಾರಂ ಸ್ಪೃಷ್ಟ್ವಾऽಸ್ಥಿ ಸಸ್ನಾವಂ ಸವಾಸಾ ಜಲಮಾವಿಶೇತ್ ।

ಸ್ನಾಯುಯುಕ್ತವಾದ ನರನ ಮೂಳೆಯನ್ನು ಮುಟ್ಟಿದರೆ ಸಚೇಲ ಸ್ನಾನಮಾಡಿ ಶುದ್ಧಿ ಮಾಡಿಕೊಳ್ಳಬೇಕು. ಅದು ಅಶುಚಿ' ಎಂದು ಹೇಳುವ ಆಗಮವು ಪ್ರಬಲ ವಿರೋಧಿ ಯಾಗುವುದರಿಂದ 'ನರಶಿರಃ ಕಪಾಲವು ಶುಚಿಯಾಗಿದೆ. ಪ್ರಾಣ್ಯಂಗವಾದ್ದರಿಂದ ಶಂಖದಂತೆ' ಎಂಬ ಅನುಮಾನವನ್ನು ಬಾಧಿಸುತ್ತದೆ. ನರಶಿರಃಕಪಾಲದಲ್ಲಿ ಅಶುಚಿತ್ವರೂಪ ಸಾಧ್ಯಾಭಾವವನ್ನು ಗ್ರಹಿಸುವ ಈ ಬಾಧಕ ಆಗಮವು ಯದ್ಯಪಿ ಸಾಧ್ಯಗ್ರಾಹಕತ್ವೇನ ಉಪಜೀವ್ಯವಲ್ಲ. ಆದರೂ ಸಾಧ್ಯಗ್ರಾಹಕ ಆಗಮಕ್ಕೆ ಸಜಾತೀಯವಾದ ಮಾತ್ರಕ್ಕೇ ಅದು ಪ್ರಬಲವಾಗಿ ಅನುಮಾನವನ್ನು ಬಾಧಿ ಸುತ್ತದೆ.

**'ಮನೋ ವಿಭು ಜ್ಞಾನಾಸಮವಾಯ್ಯಾಧಾರತ್ವಾದ್' ಇತ್ಯತ್ರಾನುಮಾನಂ ಹೇತುಮಾತ್ರಗ್ರಾಹಿತ್ವೇನ ಅನುಮಾನಸ್ಯೋಪಜೀವ್ಯಮ್,**

'ಮನಸು ವಿಭುವಾಗಿದೆ, ಜ್ಞಾನಾಸಮವಾಯಿಕಾರಣವಾದ ಆತ್ಮ ಮನಃ ಸಂಯೋಗಕ್ಕೆ ಆಧಾರವಾಗಿರುವುದರಿಂದ 'ಆತ್ಮನಂತೆ' ಎಂಬ ಅನುಮಾನದಲ್ಲಿ ಜ್ಞಾನಾಸಮವಾಯಿ ಕಾರಣ ಮನಃಸಂಯೋಗಾಧಾರತ್ವವು ಹೇತು. ಈ ಹೇತುವನ್ನು ಗ್ರಹಿಸುವುದರಿಂದ ಉಪಜೀವ್ಯವಾಗಿರುವ ಅನುಮಾನವು—

'ಸುಖಾದಿಪ್ರತೀತಿಃ ಕ್ರಮಿಕಸಂಯೋಗವತ್‌ಕರಣಸಾಧ್ಯಾ ಕ್ರಿಯಾತ್ವಾತ್ ಛಿದಿಕ್ರಿಯಾವತ್'

'ಸುಖಾದಿ ಪ್ರತೀತಿಯು ಕ್ರಮಿಕ ಸಂಯೋಗ ಉಳ್ಳ ಕರಣದಿಂದ ಜನ್ಯವಾಗಿದೆ, ಕ್ರಿಯೆಯಾಗಿರುವುದರಿಂದ ಛೇದನ ಕ್ರಿಯೆಯಂತೆ',

ಛೇದನ ಕ್ರಿಯೆಯು ವೃಕ್ಷದಲ್ಲಿ ಕ್ರಮಿಕ ಸಂಯೋಗಉಳ್ಳ ಕೊಡಲಿಯಿಂದ ಜನ್ಯವಾಗಿದೆ, ಹಾಗೇ ಸುಖಪ್ರತೀತಿಯೂ ಆತ್ಮನಲ್ಲಿ ಕ್ರಮಿಕವಾದ ಸಂಯೋಗಉಳ್ಳ ಮನಸ್ಸೆಂಬ ಕರಣದಿಂದ ಉಂಟಾಗುತ್ತದೆ'

—ಎಂದು. ಈ ಅನುಮಾನವು 'ಮನಸ್ಸು ಕ್ರಮಿಕಸಂಯೋಗಾಧಾರವಾದ್ದರಿಂದ ಅಣು' ಎಂದು ಅಣುತ್ವವನ್ನು ವಿಭುತ್ವಾಭಾವವನ್ನು ಗ್ರಹಿಸುತ್ತದೆ. ಮನಸ್ಸು ವಿಭುವಾದರೆ ಒಮ್ಮೆಲೆ ಎಲ್ಲ ಸಂಯೋಗಗಳಿಗೂ ಅದು ಆಧಾರವಾದೀತು. ಹಾಗಾಗುವುದಿಲ್ಲವಾದ್ದರಿಂದ ಮನಸು ವಿಭುವಲ್ಲ, ಅಣುವಾಗಿದೆ ಎಂದು ಸಾಧ್ಯಾಭಾವವನ್ನು ಗ್ರಹಿಸಿ ಮನೋವಿಭುತ್ವಾನುಮಾನಕ್ಕೆ ಬಾಧಕವಾಗುತ್ತದೆ. ಏಕೆಂದರೆ ಅದು ಮನೋವಿಭುತ್ವಾನುಮಾನಕ್ಕೆ ಹೇತುವಾಗಿರುವ ಜ್ಞಾನಾಸಮವಾಯ್ಯಾಧಾರತ್ವವನ್ನು

ಗ್ರಹಿಸುತ್ತ ಉಪಜೀವ್ಯವಾಗಿ ಪ್ರಬಲವಾಗಿದೆ. ವಿಭುತ್ವಕ್ಕೆ ಹೇತುವಾಗಿ ಮಾಡಿರುವ ಜ್ಞಾನಾಸಮವಾಯಿಕಾರಣವು ಕ್ರಮಿಕಸಂಯೋಗವೆ. ಏಕೆಂದರೆ ಜ್ಞಾನೋತ್ಪತ್ತಿಯು ಕ್ರಮಿಕವಾಗಿರುವುದು ಅನುಭವ ಸಿದ್ಧವಾಗಿದೆ. ಒಮ್ಮೆಗೆ ಒಂದೇ ಜ್ಞಾನವು ಉತ್ಪನ್ನವಾಗುತ್ತದೆ. ಎಲ್ಲ ಜ್ಞಾನಗಳೂ ಒಮ್ಮೆ ಉಂಟಾಗುವುದು ಕಂಡಿಲ್ಲ.

ಆದರಿಂದ ಮನೋಽಣುತ್ವಾನುಮಾನವು ಮನೋವಿಭುತ್ವಾಮಾನಕ್ಕೆ ಹೇತುಮಾಡಿರುವ ಜ್ಞಾನಾಸಮವಾಯಿ ಕ್ರಮಿಕ ಸಂಯೋಗಾಧಾರತ್ವ ರೂಪಹೇತುವನ್ನು ಮಾತ್ರ ಗ್ರಹಿಸಿದರೂ ಉಪಜೀವ್ಯವಾಗಿ ಪ್ರಬಲವೆನಿಸಿ ವಿಭುತ್ವಾಮಾನಕ್ಕೆ ಬಾಧಕವಾಗುತ್ತದೆ. ಯದ್ಯಪಿ ಮನೋಣುತ್ವಾನುಮಾನವು ಪಕ್ಷವಾದ ಮನಸ್ಸನ್ನೂ ಗ್ರಹಿಸುವುದರಿಂದ ಹೇತು ಮಾತ್ರ ಗ್ರಾಹಕತ್ವೇನ ಉಪಜೀವ್ಯವಾಗುತ್ತದೆ ಎನ್ನುವಂತಿಲ್ಲ. ಆದರೆ ಅದು ಮನಸ್ತ್ವೇನ ಮನಸ್ಸನ್ನು ಗ್ರಹಿಸುತ್ತಿಲ್ಲ. 'ಜ್ಞಾನೋತ್ಪತ್ತಿಯು ಕ್ರಮಿಕ ವಿಷಯ ಸಂಯೋಗಾಧಾರವಾದ ಕರಣದಿಂದ ಜನ್ಯವಾಗಿದೆ' ಎಂದು ಸಾಧ್ಯಾಂತರ್ಭೂತ ಕ್ರಮಿಕಸಂಯೋಗಾಧಾರಕರಣತ್ವೇನ ಮನಸ್ಸನ್ನು ಗ್ರಹಿಸುತ್ತದೆ. ಪಕ್ಷತಾವಚ್ಛೇದಕ ಮನಸ್ತ್ವೇನ ಮನಸ್ಸೆಂಬ ಪಕ್ಷವನ್ನು ಗ್ರಹಿಸುತ್ತಿಲ್ಲ.

**ತದೇಹ ಪ್ರತ್ಯಕ್ಷಂ ಲಿಂಗಶಬ್ದಾಪೇಕ್ಷಿತಸರ್ವಗ್ರಾಹೀತಿ ಕಥಂ ನೋಪಜೀವ್ಯಮ್ ?**

'ಯದಾಹಿ ಘಟೋ ವ್ಯಾಪಕಃ ಸತ್ವಾತ್' ಎಂಬಲ್ಲಿ ಹೇಳಿದ 'ಯದಾಹಿ' ಶಬ್ದಕ್ಕೆ 'ತದೇಹ ಪ್ರತ್ಯಕ್ಷಂ' ಎಂಬ 'ತದೇಹ' ಶಬ್ದದೊಂದಿಗೆ ಅನ್ವಯ. 'ಯಾವಾಗ ಧರ್ಮಿಮಾತ್ರ ಸಾಧ್ಯಮಾತ್ರ ಹೇತುಮಾತ್ರ ಗ್ರಾಹಕ ಪ್ರಮಾಣಗಳೂ ಕೂಡ ಉಪಜೀವ್ಯವಾಗಿ ಬಾಧಕವಾಗುವುವೋ ಆಗ ಸರ್ವಗ್ರಾಹಿ ಪ್ರತ್ಯಕ್ಷವು ಉಪಜೀವ್ಯವಾಗಿ ಮಿಥ್ಯಾತ್ವಾನುಮಾನಕ್ಕೆ ಹೇಗೆ ಬಾಧಕವಾಗದೆ ಹೋದೀತು' ಎನ್ನುತ್ತಿದ್ದಾರೆ.

'ವಿಮತಂ ಮಿಥ್ಯಾ ದೃಶ್ಯತ್ವಾತ್' ಇತ್ಯಾದಿ ಅನುಮಾನಗಳಲ್ಲಿ ಅಪೇಕ್ಷಿತವಾಗಿರುವ ಪಕ್ಷಸಾಧ್ಯವ್ಯಾಪ್ಯಾದಿಗಳನ್ನು, ಮಿಥ್ಯಾತ್ವಶ್ರುತಿಗೆ ಬೇಕಾಗಿರುವ ಶಬ್ದಸ್ವರೂಪ ಅದರ ಧರ್ಮವಾದ ಯೋಗ್ಯತಾದಿ ಉಪಕ್ರಮಾದಿ ತಾತ್ಪರ್ಯಲಿಂಗ ಮುಂತಾದುವನ್ನು ಅನುಮಿತಿ ಶಾಬ್ದಬೋಧ ಸ್ವರೂಪ ಅದರ ಪ್ರಾಮಾಣ್ಯ ಮುಂತಾದುವನ್ನು ಎಲ್ಲವನ್ನೂ ಪ್ರತ್ಯಕ್ಷವೇ ಗ್ರಹಿಸಿ ತಿಳಿಸಿಕೊಡಬೇಕಾಗಿರುವುದರಿಂದ ಪ್ರತ್ಯಕ್ಷವು ಉಪಜೀವ್ಯವಾಗಿ ಪ್ರಬಲವಾಗಿ ಹೇಗೆ ಬಾಧಕವಾಗದೆ ಇದ್ದೀತು?

**ಚಕ್ಷುರಾದೇಃ ಶಬ್ದತಜ್ಜನ್ಯಜ್ಞಾನಪ್ರಾಮಾಣ್ಯಾದ್ಯಗ್ರಾಹಿತ್ವೇಽಪಿ ತದ್‌ಗ್ರಾಹಿ ಶ್ರೋತ್ರ-ಸಾಕ್ಷ್ಯಾದಿ ಸಜಾತೀಯತ್ವಾತ್, ರೂಪ್ಯಾದಿಧರ್ಮ್ಯಂಶೇ ಸಾಕ್ಷಾದುಪಜೀವ್ಯತ್ವಾಚ್ಚ ಪ್ರಾಬಲ್ಯಮ್ ।**

ಯದ್ಯಪಿ 'ನೇಹ ನಾನಾಸ್ತಿ' ಎಂಬ ಶಬ್ದಸ್ವರೂಪವನ್ನೂ ಅದರ ಯೋಗ್ಯತಾದಿಗಳನ್ನೂ

ಉಪಕ್ರಮಾದಿ ಲಿಂಗಗಳನ್ನೂ ಅನುಮಿತಿಶಾಬ್ದಬೋಧಸ್ವರೂಪ ತತ್ಪ್ರಾಮಾಣ್ಯಾದಿಗಳನ್ನೂ 'ಸನ್‌ಘಟಃ' ಎಂಬ ಚಾಕ್ಷುಷ ಪ್ರತ್ಯಕ್ಷವು ಗ್ರಹಿಸಲಾರದು. ಆದರೂ ಶಬ್ದ ಸ್ವರೂಪಾದಿ ಗ್ರಾಹಕವಾದ ಶ್ರಾವಣ ಪ್ರತ್ಯಕ್ಷವೂ ಶಾಬ್ದಬೋಧಾದಿ ಸ್ವರೂಪ ತತ್ಪ್ರಾಮಾಣ್ಯಾದಿಗ್ರಾಹಕವಾದ ಸಾಕ್ಷಿಪ್ರತ್ಯಕ್ಷವೂ ಪ್ರತ್ಯಕ್ಷವೇ ಆಗಿರುವುದರಿಂದ ತಜ್ಜಾತೀಯತ್ವೇನ ಚಾಕ್ಷುಷ ಪ್ರತ್ಯಕ್ಷವೂ ಉಪಜೀವ್ಯವೇ ಆಗುವುದರಿಂದ ಬಾಧಕವಾಗಲೇಬೇಕು.

ವಸ್ತುತಸ್ತು ಚಾಕ್ಷುಷಪ್ರತ್ಯಕ್ಷವು ಉಪಜೀವ್ಯ ಸಾಜಾತ್ಯ ಮಾತ್ರದಿಂದಲೇ ಪ್ರಬಲ ಎನ್ನುವಂತಿಲ್ಲ. ಮಿಥ್ಯಾತ್ವಾನುಮಿತಿಗೆ ಬೇಕಾಗಿರುವ ವ್ಯಾಪ್ತಿಗ್ರಹಣಕ್ಕೆ ಸ್ಥಳವಾಗಿರುವ ಶುಕ್ತಿರೂಪ್ಯಾದಿ ಧರ್ಮ್ಯಂಶವನ್ನು ಚಾಕ್ಷುಷಪ್ರತ್ಯಕ್ಷವೇ ಗ್ರಹಿಸುತ್ತ ಸಾಕ್ಷಾತ್ ಉಪಜೀವ್ಯವಾಗಿಯೇ ಪ್ರಬಲವೆನಿಸುತ್ತದೆ.

'ಶುಕ್ತಿರೂಪ್ಯಾದಿಗಳು ಚಕ್ಷುರ್ಗ್ರಾಹ್ಯವಲ್ಲ, ಸಾಕ್ಷಿಭಾಸ್ಯ' ಎಂದು ಅದ್ವೈತಿ ಹೇಳುತ್ತಾನೆ. ಆದರೆ ಚಕ್ಷುರನ್ವಯ ವ್ಯತಿರೇಕವು ಕಂಡಿದೆ. ಮತ್ತು ಶುಕ್ತಿರೂಪ್ಯವನ್ನು 'ಕಣ್ಣಾರೆ ಕಂಡೆನೆಂ'ದು ಅನುವ್ಯವಸಾಯವೂ ಹೇಳುತ್ತಿದೆ. ಆದರಿಂದ ಶುಕ್ತಿರೂಪ್ಯವು ಸಾಕ್ಷಿಭಾಸ್ಯವಲ್ಲ. ಚಕ್ಷುರ್ಯೋಗ್ಯವೆಂದೇ ಹೇಳಬೇಕು. ಹಾಗಿದ್ದರೂ ಸಾಕ್ಷಿಭಾಸ್ಯವೆಂದೇ ಒಪ್ಪುವುದಾದರೆ ಘಟಾದಿ ಪ್ರಪಂಚವೂ ಸಾಕ್ಷಿಭಾಸ್ಯವೆಂದು ಸ್ವೀಕರಿಸಬೇಕಾದೀತು.

ಅದ್ವೈತಿ ಹೇಳುತ್ತಾನೆ— 'ಚಕ್ಷುರನ್ವಯ ವ್ಯತಿರೇಕವು ರೂಪ್ಯಾಧ್ಯಾಸಕ್ಕೆ ಕಾರಣವಾದ ಇದಮಂಶ ಜ್ಞಾನವನ್ನುಂಟು ಮಾಡಿಯೆ ಚರಿತಾರ್ಥವಾಗುತ್ತದೆ. 'ರೂಪ್ಯಜ್ಞಾನಕ್ಕೆ ಕಾರಣವಾಗುವುದಿಲ್ಲ' ಎಂದು. ರೂಪ್ಯವನ್ನು ಕಣ್ಣಾರೆ ಕಂಡೆನೆಂದೇ ಅನುವ್ಯವಸಾಯವಿರುವಾಗ, ಅದಕ್ಕೆ ವ್ಯತಿರಿಕ್ತವಾಗಿ ಸಾಕ್ಷಿಭಾಸ್ಯತ್ವವನ್ನು ಹೇಳಬಾರದು. ಮತ್ತು ಇದಮಂಶ ಪ್ರತ್ಯಕ್ಷಕ್ಕಾದರೂ ಚಕ್ಷುರನ್ವಯ ವ್ಯತಿರೇಕ ಬೇಕೆಂದರೆ ಚಾಕ್ಷುಷ ಪ್ರತ್ಯಕ್ಷವು ಪರಂಪರಯಾ ಉಪಜೀವ್ಯವೇ ಎಂದಂತಾಯಿತು. ಯಾವುದಿಲ್ಲದೆ ಯಾವುದು ಉಂಟಾಗದೋ ಅದು ಅದಕ್ಕೆ ಸಾಕ್ಷಾತ್ತಾಗಿಯಾಗಲಿ ಪರಂಪರೆಯಾಗಿ ಆಗಲಿ ಉಪಜೀವ್ಯವೆ ತಾನೆ?

**दृष्टं च नरशिरः कपालाशुचित्वागमस्य तच्छुचित्वानुमानात् उपजीव्यशुचित्वग्राहिशब्दसाजात्यमात्रेण प्राबल्यम् । यद्यपीन्द्रियमनुमेयं, तथापि तस्याज्ञातकरणत्वान्नानुमोपजीव्या । अक्षाप्रामाण्ये हि तत्सिद्धस्य व्याप्त्यादेर्योग्यतादेश्च बाधेनानुमेयस्य शब्दार्थस्य च बाधः स्यात् । अनुमेयस्य व्याप्त्यादिनानुमितिप्रामाण्यादिना, शब्दार्थस्य च योग्यतादिना शाब्दधीप्रामाण्यादिना च तुल्ययोगक्षेमत्वात् ।**

**अन्यथा प्रातिभासिकव्याप्त्यादिमता बाष्पाध्यस्तधूमेन तात्त्विको व्यावहारिको वाह्निः, व्यावहारिकव्याप्त्यादिमता च धूमेन तात्त्विकोऽग्निः, व्यावहारिकेणाबाधेन विरुद्धधर्माधिकरणत्वेन च विश्वस्य जीवेशभेदस्य च तात्त्विकत्वं सिध्येत् । प्रातिभासिकयोग्यता-दिमताऽनाप्तवाक्येन च तात्त्विको व्यावहारिको वार्थः, व्यावहारिकयोग्यतादिमता च लौकिकवाक्येनाग्निहोत्रादिवाक्येन च तात्त्विकोऽर्थः सिध्येत् ।**

---

उपजीव्यजातीयत्वेनानुमानादागमस्य प्राबल्यं यदुक्तं तत्स्थलं दर्शयति **दृष्टश्चेति ।।** **उपजीव्येति ।।** शुचित्वानुमानोपजीव्येत्यर्थः । तदुपजीव्यत्वञ्च शुचित्वरूपसाध्यसिद्ध्युपयोगित्वेनेति द्रष्टव्यम् । यद्यपि चक्षुरादिप्रत्यक्षस्वरूप-सिद्धावनुमानमुपजीव्यम् । तस्यातीन्द्रियत्वात् । तथापि चक्षुरादेरज्ञातकरणतया, तेन ज्ञाने जनयितव्ये नानुमानस्योपजीव्यत्वमित्याह **यद्यपीत्यादिनोपजीव्येत्यन्तेन ।**

ननु श्रुतौ स्मृत्यपेक्षितप्रामाण्याश्रयत्वमुपजीव्यत्वम् । नचैवं प्रकृते । निषेध्यसमर्पकत्वेन विरुद्धत्वादित्यत आह **अक्षाप्रामाण्ये हीति ।।** तथाच श्रुत्यपेक्षितप्रामाण्याश्रयत्वेनाक्षस्य श्रुतिनिषेध्यसमर्पकत्वमेव नास्तीत्यर्थः । ननु यादृच्छिकसंवादस्थल इव व्याप्त्यादेरसत्त्वेऽपि नानुमेयादेरसिद्धिरित्यत आह **अनुमेयस्येति ।।** यादृच्छिकसंवादिस्थले धूमवत्त्वमात्रस्यारोपो न तु व्याप्त्यादेः । तदनन्तरं "यो यो धूमवान् सोऽग्निमान्" इति जायमानायाः स्मृतेः प्रागनुभूत-व्याप्त्यादिविषयकत्वादिति भावः ।। **तुल्ययोगक्षेमत्वादिति ।।** एतच्चानुमेयस्य शब्दार्थस्य चेत्युभयत्र सम्बध्यते ।। **अन्यथेति ।।** परामर्श विषयीभूत व्याप्त्यादिसत्ता विजातीयानुमेयसत्ताङ्गीकार इत्यर्थः ।। **व्यावहारिकेणेति ।।** एतच्च विरुद्धधर्माधिकरणत्वेनेत्यनेनापि सम्बध्यते । अत्र तृतीयान्तपदद्वयस्य षष्ठ्यन्तपदद्वयेन क्रमेण सम्बन्धः ।

**ದೃಷ್ಟಂ ಚ ನರಶಿರಃಕಪಾಲಾಶುಚಿತ್ವಾಗಮಸ್ಯ ತಚ್ಛುಚಿತ್ವಾನುಮಾನಾತ್ ಉಪಜೀವ್ಯ ಶುಚಿತ್ವ ಗ್ರಾಹಿ ಶಬ್ದ ಸಾಜಾತ್ಯಮಾತ್ರೇಣ ಪ್ರಾಬಲ್ಯಮ್ ।**

ಉಪಜೀವ್ಯ ಶ್ರಾವಣಜ್ಞಾನ ಸಾಜಾತ್ಯ ಮಾತ್ರದಿಂದ ಚಾಕ್ಷುಷ ಜ್ಞಾನವೂ ಕೂಡ ಉಪಜೀವ್ಯವೆನಿಸುವುದೆಂದು ಏಕೆ ಒಪ್ಪಬೇಕು ಎಂದರೆ, ನರಶಿರಃ ಕಪಾಲವು ಅಶುಚಿ, ಮುಟ್ಟಿದರೆ ಸಚೇಲ ಸ್ನಾನ ಮಾಡಬೇಕಾಗುತ್ತದೆ ಎನ್ನುವ ಆಗಮವು 'ನರಶಿರಃಕಪಾಲವು ಶುಚಿ, ಪ್ರಾಣ್ಯಂಗವಾಗಿರುವುದರಿಂದ ಶಂಖದಂತೆ' ಎನ್ನುವ ಅನುಮಾನಕ್ಕೆ ಹೇಗೆ ಉಪಜೀವ್ಯ? ನರಶಿರಃಕಪಾಲವು ಶುಚಿ ಎಂಬ ಅನುಮಾನಕ್ಕೆ ಬೇಕಾಗಿರುವ ಶುಚಿತ್ವರೂಪ ಸಾಧ್ಯಸಿದ್ಧಿಯು 'ತ್ರೈಲೋಕ್ಯೇ ಯಾನಿ ತೀರ್ಥಾನಿ' ಎಂಬ ಆಗಮದಿಂದಾಗಬೇಕು, ಆ ಆಗಮಕ್ಕೆ ಸಜಾತೀಯವಾದುದು 'ನರಶಿರಃಕಪಾಲವು ಅಶುಚಿ' ಎನ್ನುವ ಆಗಮ. ಅದರಿಂದ ಅದು ಶುಚಿತ್ವಾನುಮಾನಕ್ಕೆ ಉಪಜೀವ್ಯವಾಯಿತು ಎನ್ನಬೇಕು. ಅದರಿಂದಲೇ ಅಶುಚಿತ್ವಾಗಮವು ಶುಚಿತ್ವಾನುಮಾನಕ್ಕೆ ಬಾಧಕವಾಗುವುದು ಕಂಡಿದೆ. ಹೀಗೆಯೆ ನೇಹನಾನಾಸ್ತಿ ವಾಕ್ಯದ ಸ್ವರೂಪಾದಿ ಗ್ರಾಹಕವಾದ ಶ್ರಾವಣಜ್ಞಾನಕ್ಕೆ ಸಜಾತೀಯವಾಗಿರುವ ಮಾತ್ರದಿಂದಲೇ 'ಸನ್ ಘಟಃ' ಎನ್ನುವ ಚಾಕ್ಷುಷ ಜ್ಞಾನವು ಉಪಜೀವ್ಯವೆನಿಸಿ ಪ್ರಬಲವಾಗುವುದೂ ಬಾಧಕವೆನಿಸುವುದೂ ಯುಕ್ತವೆ.

**ಯದ್ಯಪೀಂದ್ರಿಯಮನುಮೇಯಂ । ತಥಾಪಿ ತಸ್ಯಾಜ್ಞಾತಕರಣತ್ವಾನ್ನಾನುಮೋಪ-ಜೀವ್ಯಾ ।**

ಯದ್ಯಪಿ ಅನುಮಾನಕ್ಕೆ ವ್ಯಾಪ್ತ್ಯಾದಿಗ್ರಾಹಕವಾದ ಪ್ರತ್ಯಕ್ಷವು ಉಪಜೀವ್ಯವಾಗುವಂತೆ ಪ್ರತ್ಯಕ್ಷಕ್ಕೂ ಇಂದ್ರಿಯ ಗ್ರಾಹಕವಾದ ಅನುಮಾನವು ಉಪಜೀವ್ಯವಾಗಿದೆ. ಚಕ್ಷುರಾದಿ ಇಂದ್ರಿಯಗಳ ಸಿದ್ಧಿ ಅನುಮಾನದಿಂದಲೇ ಆಗಬೇಕು, 'ರೂಪಾದಿ ಜ್ಞಾನವು ಸಕರಣಕ, ಕರಣ ಜನ್ಯವೇ ಆಗಿದೆ, ಕ್ರಿಯೆಯಾದ್ದರಿಂದ ಛೇದನ ಕ್ರಿಯೆಯಂತೆ' ಎಂಬ ಅನುಮಾನದಿಂದ ಚಕ್ಷುರಾದಿ ಇಂದ್ರಿಯ ಸಿದ್ಧವಾದರೆ 'ಘಟಃ ಸನ್' ಇತ್ಯಾದಿ ಚಾಕ್ಷುಷಾದಿ ಜ್ಞಾನ ಸಿದ್ಧವಾಗುತ್ತದೆ. ಘಟಸತ್ವಗ್ರಾಹಿಪ್ರತ್ಯಕ್ಷಕ್ಕೆ ಅಪೇಕ್ಷಿತವಾದ ಚಕ್ಷುರಿಂದ್ರಿಯ ಸ್ವರೂಪವು ಅನುಮಾನದಿಂದ ಸಿದ್ಧವಾಗಬೇಕಾಗಿರುವುದರಿಂದ ಪ್ರತ್ಯಕ್ಷಕ್ಕೆ ಅನುಮಾನವು ಉಪಜೀವ್ಯವಾಯಿತು. ಅನುಮಾನವು ಪ್ರತ್ಯಕ್ಷಕ್ಕೆ ಸಮಬಲವಾಯಿತು. ಹೀಗೆ ಅದ್ವೈತಿ ಹೇಳಬಹುದು.

ಆದರೆ ಇದು ಸರಿಯಲ್ಲ. ಅನುಮಾನಕ್ಕೆ ಬೇಕಾಗಿರುವ ವ್ಯಾಪ್ತ್ಯಾದಿಗಳನ್ನು ಪ್ರತ್ಯಕ್ಷದಿಂದ ತಿಳಿಯಬೇಕಾದರೆ ಅದಕ್ಕೆ ಇಂದ್ರಿಯವು ಬೇಕು ನಿಜ, ಆದರೆ ಅದರ ಜ್ಞಾನ ಬೇಕಾಗಿಲ್ಲ. ಇಂದ್ರಿಯವು ವ್ಯಾಪ್ತ್ಯಾದಿ ಜ್ಞಾನಕ್ಕೆ ಸ್ವರೂಪೇಣ ಕಾರಣ ಹೊರತು ಜ್ಞಾತಕಾರಣವಲ್ಲ. ಅದರಿಂದ ಜ್ಞಾನಕ್ಕಾಗಿ ಅನುಮಾನವನ್ನು ಪ್ರತ್ಯಕ್ಷವು ಅಪೇಕ್ಷಿಸುವುದಿಲ್ಲ. ಮಿಥ್ಯಾತ್ವಾನುಮಾನಕ್ಕೆ ಅದರಿಂದ ಅನುಮಿತಿ ಉಂಟಾಗಲು ವ್ಯಾಪ್ತಿ ಮುಂತಾದ ಎಲ್ಲ ಅಂಗಗಳ ಜ್ಞಾನವಿರಬೇಕು. ಅವು ಜ್ಞಾತಕಾರಣಗಳು. ಜ್ಞಾನವು ಪ್ರತ್ಯಕ್ಷದಿಂದಲೇ ಬರಬೇಕು ಎಂದು ಪ್ರತ್ಯಕ್ಷವು ಉಪಜೀವ್ಯತ್ವೇನ ಪ್ರಬಲವೆಂದೇ ಹೇಳಬೇಕು.

**ಅಕ್ಷಾಪ್ರಾಮಾಣ್ಯೇ ಹಿ ತತ್ಸಿದ್ಧಸ್ಯ ವ್ಯಾಪ್ತ್ಯಾದೇರ್ಯೋಗ್ಯತಾದೇಶ್ಚ ಬಾಧೇನಾನು- ಮೇಯಸ್ಯ ಶಬ್ದಾರ್ಥಸ್ಯ ಚ ಬಾಧಃ ಸ್ಯಾತ್। ಅನುಮೇಯಸ್ಯ ವ್ಯಾಪ್ತ್ಯಾದಿನಾನುಮಿತಿ ಪ್ರಾಮಾಣ್ಯಾದಿನಾ, ಶಬ್ದಾರ್ಥಸ್ಯ ಚ ಯೋಗ್ಯತಾದಿನಾ ಶಾಬ್ದಧೀಪ್ರಾಮಾಣ್ಯಾದಿನಾ ಚ ತುಲ್ಯಯೋಗಕ್ಷೇಮತ್ವಾತ್।**

ಸ್ಮೃತಿಗೆ ಅಪೇಕ್ಷಿತವಾದ ಪ್ರಾಮಾಣ್ಯಕ್ಕೆ ಶ್ರುತಿಯು ಆಶ್ರಯವಾಗಿದೆ. ಶ್ರುತಿಯು ಪ್ರಮಾಣವಾದರೆ ಅದೇ ಅರ್ಥದ ಸ್ಮೃತಿಯು ಪ್ರಮಾಣವೆನಿಸುತ್ತದೆ. ಹೀಗೆ ಸ್ಮೃತಿಗೆ ಶ್ರುತಿಯು ಉಪಜೀವ್ಯವೆನ್ನುವುದು ಯುಕ್ತ. ಆದರೆ ಶ್ರುತಿಗೆ ಪ್ರತ್ಯಕ್ಷವು ಉಪಜೀವ್ಯವೆನ್ನುವುದು ಸರಿಯಲ್ಲ. ಶ್ರುತಿಗೆ ಅಪೇಕ್ಷಿತವಾದ ಪ್ರಾಮಾಣ್ಯಕ್ಕೆ ಪ್ರತ್ಯಕ್ಷವು ಆಶ್ರಯವಲ್ಲ. ಶ್ರುತಿಗೆ ನಿಷೇಧ್ಯ ಸಮರ್ಪಕವು ಪ್ರತ್ಯಕ್ಷ. ಪ್ರತ್ಯಕ್ಷದಿಂದ ಪ್ರಸಕ್ತವಾದುದನ್ನು ಶ್ರುತಿಯು ನಿಷೇಧಿಸುತ್ತಿದೆ. ಪ್ರತ್ಯಕ್ಷವು ಶ್ರುತಿಗೆ ವಿರುದ್ಧವಾಗಿದೆ. ಹೇಗೆ ಉಪಜೀವ್ಯವಾಗುತ್ತದೆ? ಎಂದು ಅದ್ವೈತಿಯು ಕೇಳಬಹುದು.

ಆದರೆ ಪ್ರತ್ಯಕ್ಷವು ಅನುಮಾನಾಗಮ ವಿರೋಧದಿಂದ ಅಪ್ರಮಾಣವೆಂದಾದರೆ ಪ್ರತ್ಯಕ್ಷಸಿದ್ಧವಾದ ವ್ಯಾಪ್ತ್ಯಾದಿ ಯೋಗ್ಯತಾದಿಗಳು ಬಾಧಿತವೆಂದಾಗುವುದರಿಂದ ಅನುಮಾನಾಗಮಗಳೂ ಬಾಧಿತಾರ್ಥಕವೆಂದಾದೀತು. ಏಕೆಂದರೆ ವ್ಯಾಪ್ತ್ಯಾದಿ ಬಾಧಿತವಾಗಿದ್ದರೆ ಅನುಮೇಯವೂ ಬಾಧಿತವಾಗಿರುತ್ತದೆ. ವ್ಯಾಪ್ತ್ಯಾದಿ ಅಬಾಧಿತವಾಗಿದ್ದರೆ ಅನುಮೇಯವು ಅಬಾಧಿತವಾಗಿರುತ್ತದೆ. ಯೋಗ್ಯತಾದಿ ಬಾಧಿತವಾಗಿದ್ದರೆ ಆಗಮಾರ್ಥವೂ ಬಾಧಿತವೆ. ಯೋಗ್ಯತ್ವಾದಿ ಅಬಾಧಿತವಾಗಿದ್ದರೆ ಆಗಮಾರ್ಥವೂ ಅಬಾಧಿತವೆ. ಹೀಗೆ ವ್ಯಾಪ್ತ್ಯಾದಿ ಯೋಗ್ಯತಾದಿ ಅನುಮಿತಿ ಪ್ರಾಮಾಣ್ಯಾದಿ ಶಾಬ್ದಬೋಧಪ್ರಾಮಾಣ್ಯಾದಿಗಳೂ ಅನುಮೇಯಆಗಮಾರ್ಥಗಳೂ ತುಲ್ಯಯೋಗಕ್ಷೇಮವಾಗಿರುವುದು ಕಂಡಿದೆ. ಹೀಗಾಗಿ ಶ್ರುತಿಗೆ ಅಪೇಕ್ಷಿತವಾದ ಪ್ರಾಮಾಣ್ಯಕ್ಕೆ ಪ್ರತ್ಯಕ್ಷವು ಆಶ್ರಯವಾಗಿರುವುದರಿಂದ, ಯೋಗ್ಯತ್ವಾದಿ ಪ್ರತ್ಯಕ್ಷವು ಪ್ರಮಾಣವಾದರೇ ಶ್ರುತಿಯು ಪ್ರಮಾಣವಾಗುವುದರಿಂದ ಪ್ರತ್ಯಕ್ಷವು ಶ್ರುತಿಗೆ ನಿಷೇಧ್ಯಸಮರ್ಪಕವೇ ಅಲ್ಲ, ಪ್ರತ್ಯಕ್ಷಸಿದ್ಧವಾದುದನ್ನು ಶ್ರುತಿಯು ನಿಷೇಧಿಸುವುದೇ ಇಲ್ಲ. ಆದರಿಂದ ಪ್ರತ್ಯಕ್ಷವು ಶ್ರುತಿಗೆ ವಿರುದ್ಧವಾಗಿದೆ ಎನ್ನಬಾರದು. ಉಪಜೀವ್ಯವಾಗಿದೆ ಎಂದೇ ಹೇಳಬೇಕು.

'ವ್ಯಾಪ್ತ್ಯಾದಿ ಬಾಧಿತವಾದರೂ ಯಾದೃಚ್ಛಿಕಸಂವಾದಿ ಸ್ಥಳದಲ್ಲಿ ಅನುಮೇಯವು ಅಬಾಧಿತವಾಗಿರುವುದು ಕಂಡಿದೆ. ಆದರಿಂದ ವ್ಯಾಪ್ತ್ಯಾದಿಗೂ ಅನುಮೇಯಕ್ಕೂ ತುಲ್ಯಯೋಗಕ್ಷೇಮತ್ವ ಎನ್ನಲಾಗದು' ಎಂದು ಅದ್ವೈತಿ ಹೇಳಬಹುದು. ಆದರೆ ಯಾದೃಚ್ಛಿಕಸಂವಾದಿ ಸ್ಥಳದಲ್ಲಿಯೂ ಧೂಮವತ್ತ್ವವು ಮಾತ್ರ ಆರೋಪಿತ ಹೊರತು ವ್ಯಾಪ್ತ್ಯಾದಿಯು ಅಬಾಧಿತವೇ ಇರುತ್ತದೆ. ಏಕೆಂದರೆ ಧೂಮವತ್ತ್ವಾರೋಪಾನಂತರ 'ಧೂಮವಿರುವಲ್ಲೆಲ್ಲ ಅಗ್ನಿ ಇರುತ್ತದೆ' ಎನ್ನುವ ಸ್ಮರಣೆಯು ಪೂರ್ವಾನುಭೂತವಾದ ವ್ಯಾಪ್ತ್ಯಾದಿ ವಿಷಯಕವಾಗಿಯೇ ಬರುತ್ತದೆ ತಾನೆ?

**ಅನ್ಯಥಾ ಪ್ರಾತಿಭಾಸಿಕವ್ಯಾಪ್ತ್ಯಾದಿಮತಾ ಬಾಷ್ಪಾಧ್ಯಸ್ತ ಧೂಮೇನ ತಾತ್ತ್ವಿಕೋ ವ್ಯಾವಹಾರಿಕೋ ವಾಗ್ನಿಃ, ವ್ಯಾವಹಾರಿಕ ವ್ಯಾಪ್ತ್ಯಾದಿಮತಾ ಚ ಧೂಮೇನ ತಾತ್ತ್ವಿಕೋಽಗ್ನಿಃ, ವ್ಯಾವಹಾರಿಕೇಣಾಬಾಧೇನ ವಿರುದ್ಧಧರ್ಮಾಧಿಕರಣತ್ವೇನ ಚ ವಿಶ್ವಸ್ಯ ಜೀವೇಶಭೇದಸ್ಯ ಚ ತಾತ್ತ್ವಿಕತ್ವಂ ಸಿಧ್ಯೇತ್ ।**

ವ್ಯಾಪ್ತ್ಯಾದಿ ಮತ್ತು ಅನುಮಿತಿಪ್ರಾಮಾಣ್ಯಾದಿಗಳಿಗೂ ಅನುಮೇಯಕ್ಕೂ ತುಲ್ಯಯೋಗಕ್ಷೇಮತ್ವವನ್ನು ಒಪ್ಪದಿದ್ದರೆ ಬಾಷ್ಪಾರೋಪಿತ ಧೂಮಕ್ಕೆ ವಹ್ನಿವ್ಯಾಪ್ತ್ಯಾದಿಗಳು ಪ್ರಾತಿಭಾಸಿಕವಾದರೂ ಅಂಥ ಧೂಮದಿಂದ ತಾತ್ತ್ವಿಕವಾದ ಅಥವಾ ವ್ಯಾವಹಾರಿಕವಾದ ಅಗ್ನಿ ಸಿದ್ಧವಾದೀತು. ಕೆಲವೊಮ್ಮೆ ಯಾದೃಚ್ಛಿಕವಾಗಿ ವ್ಯಾವಹಾರಿಕ ವಹ್ನಿಯೇ ಇಂಥ ಸ್ಥಳದಲ್ಲಿ ಉಪಲಬ್ಧವಾಗಬಹುದು. ಆದರೆ ಅಲ್ಲಿ ವ್ಯಾವಹಾರಿಕ ವಹ್ನಿಯು ಸ್ವತಃ ಸಿದ್ಧವೇ ಹೊರತು ಆರೋಪಿತ ಧೂಮದಿಂದ ಸಿದ್ಧವೆಂದು ಯಾರೂ ಒಪ್ಪುವುದಿಲ್ಲ. ಇದೇರೀತಿ ಧೂಮಕ್ಕೆ ವಹ್ನಿವ್ಯಾಪ್ತಿಯು ವ್ಯಾವಹಾರಿಕವಾದರೂ ಅಂಥ ಧೂಮದಿಂದ ತಾತ್ತ್ವಿಕ ಅಗ್ನಿ ಸಿದ್ಧವಾದೀತು. ವ್ಯಾವಹಾರಿಕ ಅಬಾಧದಿಂದ ತಾತ್ತ್ವಿಕ ವಿಶ್ವವು ಸಿದ್ಧಿಸೀತು. ವ್ಯಾವಹಾರಿಕ ವಿರುದ್ಧಧರ್ಮಾಧಿಕರಣತ್ವದಿಂದ ತಾತ್ತ್ವಿಕ ಜೀವೇಶಭೇದವೂ ಸಿದ್ಧಿಸೀತು.

**ಪ್ರಾತಿಭಾಸಿಕಯೋಗ್ಯತಾದಿಮತಾ ಅನಾಪ್ತವಾಕ್ಯೇನ ಚ ತಾತ್ತ್ವಿಕೋ ವ್ಯಾವಹಾರಿಕೋ ವಾರ್ಥಃ, ವ್ಯಾವಹಾರಿಕಯೋಗ್ಯತಾದಿಮತಾ ಚ ಲೌಕಿಕವಾಕ್ಯೇನಾಗ್ನಿಹೋತ್ರಾದಿವಾಕ್ಯೇನ ಚ ತಾತ್ತ್ವಿಕೋಽರ್ಥಃ ಸಿದ್ಧ್ಯೇತ್ ।**

ಪ್ರಾತಿಭಾಸಿಕ ಯೋಗ್ಯತಾದಿಗಳುಳ್ಳ ಅನಾಪ್ತವಾಕ್ಯದಿಂದ ತಾತ್ತ್ವಿಕ ಅಥವಾ ವ್ಯಾವಹಾರಿಕ ಪ್ರಮೇಯ ಸಿದ್ಧಿಸೀತು. ವ್ಯಾವಹಾರಿಕಯೋಗ್ಯತಾದಿಉಳ್ಳ ಲೌಕಿಕವಾಕ್ಯ ಅಗ್ನಿಹೋತ್ರಾದಿ ವೈದಿಕ ವಾಕ್ಯಗಳಿಂದ ತಾತ್ತ್ವಿಕಪ್ರಮೇಯ ಸದ್ಧಿಸೀತು.



**प्रतिबिम्बस्य मिथ्यात्वेऽपि बिम्बरहितावृत्तित्वरूपा व्याप्तिरस्त्येव । नच धूमस्य तात्विकाग्निना न व्याप्तिः, दृश्यत्वस्य तु तात्विकमिथ्यात्वेन व्याप्तिरित्यस्ति । नचाद्यापि मिथ्यात्वप्रमाणं तत्त्वावेदकमन्यदतत्त्वावेदकमिति व्यवस्था सिद्धा । येन क्लृप्तनियमत्यागः । अकस्मात्त्यागे च दृश्यत्वस्य मिथ्यात्व-नियमोऽपि त्याज्यः ।**

ननु प्रतिबिम्बस्य मिथ्यात्वेन तन्निष्ठा बिम्बनिरूपिता व्याप्तिरपि तादृश्येव । नच तयानुमेयस्य बिम्बस्य तुल्यमसत्वमस्ति । तथाच व्याप्त्यादिनानुमेयस्य तुल्ययोगक्षेमत्वनियमस्तत्रैव भग्न इत्यत आह **प्रतिबिम्बस्येति ॥ बिम्बरहितावृत्तित्वरूपेति ॥** बिम्बाविनाभावरूपेत्यर्थः । तथाच प्रतिबिम्बस्य मिथ्यात्वेऽपि बिम्बाभाववन्निष्ठाभावप्रतियोगित्वरूपाविनाभावः सत्य एवेति नोक्तनियमभङ्ग इति भावः । इदञ्च पररीत्या । सिद्धान्ते तु प्रतिबिम्बस्यापि सत्यत्वमेवेति बोध्यम् । ननु यस्य यादृशेन व्याप्तिः तादृशस्य तत् गमकमित्येव नियमः । तथाच धूमस्य न तात्त्विकाग्निना व्याप्तिरस्तीति स न तद्गमकः । दृश्यत्वस्य तु स्वयंमिथ्याभूतस्यापि तात्त्विकमिथ्यात्वेन व्याप्तिसत्वात् तद्गमकत्वमित्यत आह **नच धूमस्येति ॥** दृश्यत्वस्यापि तात्त्विकमिथ्यात्वेन व्याप्तिसत्वे मानाभावात् तस्य धूमेनाविशेष इति भावः । ननु दृश्यत्वादेस्तत्वावेदकत्वमेव धूमादितो विशेष इत्यत आह **न चाद्यापीति ॥ अकस्मादिति ॥** बाधकं विनेत्यर्थः ।



**ಪ್ರತಿಬಿಂಬಸ್ಯ ಮಿಥ್ಯಾತ್ವೇऽಪಿ ಬಿಂಬರಹಿತಾವೃತ್ತಿತ್ವರೂಪಾ ವ್ಯಾಪ್ತಿರಸ್ತ್ಯೇವ।**

ಪ್ರತಿಬಿಂಬವು ಮಿಥ್ಯಾ ಆದ್ದರಿಂದ ಅದರಲ್ಲಿ ಬಿಂಬವ್ಯಾಪ್ತಿಯು ಮಿಥ್ಯೆಯೆ. ಆದರೆ ಮಿಥ್ಯಾಭೂತವಾದ ಆ ವ್ಯಾಪ್ತಿಯಿಂದ ಅನುಮಿತವಾಗುವ ಬಿಂಬವು ಅದರಂತೆ ಅಸತ್ತಾಗಿರುವುದಿಲ್ಲ. ಅದರಿಂದ ವ್ಯಾಪ್ಯಾದಿಗೆ ಅನುಮೇಯದಿಂದ ತುಲ್ಯ ಯೋಗಕ್ಷೇಮತ್ವವಿಲ್ಲ. 'ಅದು ಅಲ್ಲಿ ಭಗ್ನ'ವಾಗಿದೆ, ಎಂದರೆ ಅದು ಸರಿಯಲ್ಲ.

ಪ್ರತಿಬಿಂಬವು ಅಸತ್ತಾದರೂ ಅದರಲ್ಲಿರುವ ಬಿಂಬವ್ಯಾಪ್ತಿಯು ಸತ್ಯವೆ. ಬಿಂಬವಿಲ್ಲದಿದ್ದಲ್ಲಿ ಪ್ರತಿಬಿಂಬವಿರುವುದಿಲ್ಲ ಎಂಬ ಬಿಂಬಾವಿನಾಭಾವವೇ ಪ್ರತಿಬಿಂಬದಲ್ಲಿ ಸತ್ಯವಾಗಿದೆ. ಅದರಿಂದ ಉಕ್ತವಾದ ತುಲ್ಯಯೋಗಕ್ಷೇಮತ್ವ ನಿಯಮಕ್ಕೆ ಇಲ್ಲಿ ಭಂಗವಿಲ್ಲ.

ಇದು ಅದ್ವೈತಿ ರೀತಿಯಿಂದ ಹೇಳಿದ ಸಮಾಧಾನ. ಸಿದ್ಧಾಂತದಲ್ಲಿ ಪ್ರತಿಬಿಂಬವೂ ಸತ್ಯವೆ.

**ನಚ ಧೂಮಸ್ಯ ತಾತ್ವಿಕಾಗ್ನಿನಾ ನ ವ್ಯಾಪ್ತಿಃ ದೃಶ್ಯತ್ವಸ್ಯ ತು ತಾತ್ವಿಕಮಿಥ್ಯಾತ್ವೇನ ವ್ಯಾಪ್ತಿರಿತ್ಯಸ್ತಿ। ನಚಾದ್ಯಾಪಿ ಮಿಥ್ಯಾತ್ವಪ್ರಮಾಣಂ ತತ್ತ್ವಾವೇದಕಂ ಅನ್ಯದತತ್ತ್ವಾವೇದಕಮಿತಿ ವ್ಯವಸ್ಥಾ ಸಿದ್ಧಾ। ಯೇನ ಕ್ಲಪ್ತನಿಯಮತ್ಯಾಗಃ। ಅಕಸ್ಮಾತ್ ತ್ಯಾಗೇ ಚ ದೃಶ್ಯತ್ವಸ್ಯ ಮಿಥ್ಯಾತ್ವನಿಯಮೋऽಪಿ ತ್ಯಾಜ್ಯಃ।**

ಅದ್ವೈತಿ ಹೇಳಬಹುದು— 'ಹೇತುವಿಗೆ ಎಂಥ ಸಾಧ್ಯದಿಂದ ವ್ಯಾಪ್ತಿಯೋ ಅಂಥ ಸಾಧ್ಯವನ್ನೇ ಹೇತುವು ಸಾಧನಮಾಡಿಕೊಡುತ್ತದೆ. ಧೂಮಕ್ಕೆ ತಾತ್ವಿಕ ಅಗ್ನಿಯಿಂದ ವ್ಯಾಪ್ತಿ ಇಲ್ಲ, ಆದರಿಂದ ಅದು ತಾತ್ವಿಕ ಅಗ್ನಿಯನ್ನು ಸಾಧಿಸಿ ಕೊಡುವುದಿಲ್ಲ. ದೃಶ್ಯತ್ವ ಹೇತುವು ಸ್ವತಃ ಮಿಥ್ಯಾ ಆದರೂ ಅದಕ್ಕೆ ತಾತ್ವಿಕ ಮಿಥ್ಯಾತ್ವದಿಂದ ವ್ಯಾಪ್ತಿ ಇರುವುದರಿಂದ ತಾತ್ವಿಕ ಮಿಥ್ಯಾತ್ವವನ್ನೇ ಸಾಧಿಸುತ್ತದೆ' ಎಂದು. ಇದು ಸರಿಯಲ್ಲ.

ಧೂಮಕ್ಕೆ ತಾತ್ವಿಕ ಅಗ್ನಿಯಿಂದ ವ್ಯಾಪ್ತಿಯಿಲ್ಲ, ದೃಶ್ಯತ್ವಕ್ಕೆ ಮಾತ್ರ ತಾತ್ವಿಕಮಿಥ್ಯಾತ್ವದಿಂದ ವ್ಯಾಪ್ತಿ ಇದೆ ಎಂದು ವೈಲಕ್ಷಣ್ಯವಿಲ್ಲ. ದೃಶ್ಯತ್ವಕ್ಕೆ ತಾತ್ವಿಕ ಮಿಥ್ಯಾತ್ವದಿಂದ ವ್ಯಾಪ್ತಿ ಇದೆ ಎನ್ನಲು ಪ್ರಮಾಣವಿಲ್ಲ. 'ದೃಶ್ಯತ್ವಾದಿ ಮಿಥ್ಯಾತ್ವಹೇತುಗಳು ತತ್ವಾವೇದಕವಾದ್ದರಿಂದಲೇ ಅವುಗಳಿಗೆ ತಾತ್ವಿಕ ಮಿಥ್ಯಾತ್ವದಿಂದ ವ್ಯಾಪ್ತಿ' ಎಂದರೆ ಅದೂ ಸರಿಯಲ್ಲ. ಮಿಥ್ಯಾತ್ವಪ್ರಮಾಣವು ತತ್ವಾವೇದಕ, ಬೇರೆ ಎಲ್ಲ ಪ್ರಮಾಣವು ಅತತ್ವಾವೇದಕ ಎನ್ನುವ ವ್ಯವಸ್ಥೆ ಇನ್ನೂ ಸಿದ್ಧವಾಗಿಲ್ಲ. ಸಿದ್ಧವಾಗಿದ್ದರೆ ಅದರ ಬಲದಿಂದ, ಅನುಮೇಯಕ್ಕೆ ವ್ಯಾಪ್ಯಾದಿಗಳಿಂದ ತುಲ್ಯಯೋಗಕ್ಷೇಮತ್ವವಿದೆ ಎಂದು ಕೃಪ್ತವಾಗಿರುವ ನಿಯಮವನ್ನು ತ್ಯಾಗ ಮಾಡಬಹುದಿತ್ತು. ಬಾಧಕವಿಲ್ಲದೆಯೆ ನಿಷ್ಕಾರಣವಾಗಿ ಕೃಪ್ತವಾದ ನಿಯಮವನ್ನು ತ್ಯಾಗ ಮಾಡಬಹುದಾದರೆ ದೃಶ್ಯತ್ವಕ್ಕೆ ಮಿಥ್ಯಾತ್ವದಿಂದ ವ್ಯಾಪ್ತಿಯನ್ನೂ ಏಕೆ ತ್ಯಾಗ ಮಾಡಬಾರದು?



ननु तथापि कथं प्रामाण्यमिथ्यात्वे विषयमिथ्यात्वम् । प्रत्यक्षस्याप्रमाणत्वेन तद्विषयस्य श्रौतधीप्रामाण्यस्य मिथ्यात्वेऽपि श्रुतेः प्रमाणत्वात्तद्बोध्याद्वैतस्य सत्यत्वोपपत्तेरिति चेन्न । रूप्यादिज्ञानेषु प्रामाण्यमिथ्यात्वे विषयमिथ्यात्वदर्शनात् । अर्थाबाधरूपप्रामाण्यस्याताात्त्विकत्वेऽर्थस्य तात्विकत्वायोगाच्च ।

यत्तूक्तं वाचस्पतिना—

''उपजीव्यविरोधेन श्रुत्यप्रामाण्ये इदंरूप्यमिति
पूर्वधीविरोधान्नेदंरूप्यमिति धीरप्रमा स्याद्'' इति ।

तन्न । यत्प्रामाण्यं स्वरूपसिध्द्यर्थम् अपवादनिरासार्थं वा यत्प्रामाण्यायत्तं तत्तस्योपजीव्यम् । इह नच व्याप्त्यादिज्ञाना-प्रामाण्येऽनुमित्याद्यप्रामाण्यवत्सर्वज्ञत्वनिर्दुःखत्वादिरूपब्रह्मबुध्द्य-

**प्रामाण्ये ब्रह्मात्मैक्यबुध्द्यप्रामाण्यवच्च प्रतिषेध्यज्ञाना-प्रामाण्ये प्रतिषेधकज्ञानाप्रामाण्यम् । येन तदुपजीव्यं स्यात् ।**

---

ननु विषयस्याबाधे तत्वावेदकप्रमाणवेद्यत्वमेव तन्त्रम् । नतु तत्प्रामाण्यसत्यत्वमपि गौरवादिति शङ्कते **ननु तथापीति ।। अर्थाबाधेति ।।** अबाधितार्थकत्वव्यतिरेकेण ज्ञानादौ प्रामाण्यस्यैवासंभवादिति भावः ।। **उपजीव्येति ।।** यथाकथाञ्चिदुपजीव्येत्यर्थः ।। **इदं रूप्यमितीति ।।** पूर्वधियोऽपि बाधकज्ञानोत्थानप्रयोजकत्वेनोपजीव्यत्वादिति भावः ।। **यत्प्रामाण्यमिति ।।** अनुमित्यादिप्रामाण्यं स्वरूपसिद्ध्यर्थं व्याप्त्यादिज्ञानप्रामाण्यायत्तमित्यर्थः । ननु सिद्धिरत्रोत्पत्तिः ज्ञप्तिर्वा । नाद्यः । स्वतस्त्वहानेः । न द्वितीयः । स्वज्ञानस्य ग्राहकप्रामाण्यानधीनत्वात् इत्यनुशयेनाह **अपवादनिरासार्थं वेति ।।** घटादिज्ञानप्रामाण्यं इदमप्रमाणं ज्ञानत्वात् भ्रमवत् इत्यपवादनिरासार्थं दूरे गत्वा साक्षिप्रामाण्यमपेक्षत इति साक्षिण उपजीव्यत्वमित्यर्थः । इह बाध्यबाधकभावव्यवस्थायां कर्तव्यायां विवक्षितमिति शेषः । **सर्वज्ञत्वेति ।।** सर्वज्ञत्वनिर्दुःखादिधर्मैः रूप्यते यत्तत् सर्वज्ञत्वादिरूपं शोधिततत्पदार्थ इत्यर्थः । अत्रादिशब्देन सत्यत्वादिधर्मपरिग्रहः ।। **ब्रह्मात्मैक्येति ।।** अयञ्च दृष्टान्तः परारीत्येति बोध्यम् । अत्रात्मपदेन किञ्चिज्ज्ञत्वदुःखित्वादिधर्मविनिर्मुक्त त्वंशब्दार्थभूत जीवचैतन्यं विवक्षितम् ।



**ನನು ತಥಾಪಿ ಕಥಂ ಪ್ರಾಮಾಣ್ಯಮಿಥ್ಯಾತ್ವೇ ವಿಷಯಮಿಥ್ಯಾತ್ವಮ್ ? ಪ್ರತ್ಯಕ್ಷಸ್ಯಾಪ್ರಮಾಣತ್ವೇನ ತದ್ವಿಷಯಸ್ಯ ಶ್ರೌತಧೀಪ್ರಾಮಾಣ್ಯಸ್ಯ ಮಿಥ್ಯಾತ್ವೇಽಪಿ ಶ್ರುತೇಃ ಪ್ರಮಾಣತ್ವಾತ್ ತದ್ಬೋಧ್ಯಾದ್ವೈತಸ್ಯ ಸತ್ಯತ್ವೋಪಪತ್ತೇರಿತಿ ಚೇನ್ನ ।**

ಅದ್ವೈತಿ ಹೇಳುತ್ತಾನೆ, 'ವ್ಯಾಪ್ತ್ಯಾದಿ ಮಿಥ್ಯಾ ಆದರೆ ಅನುಮೇಯ ಮಿಥ್ಯಾ ಆಗುತ್ತದೆ ಎನ್ನುವುದನ್ನು ಒಪ್ಪಿದರೂ ಅನುಮಿತಿ ಪ್ರಾಮಾಣ್ಯ ಮಿಥ್ಯಾ ಆದ ಮಾತ್ರಕ್ಕೇ ಅನುಮಿತಿ ವಿಷಯವು ಮಿಥ್ಯಾ ಆಗಬೇಕಿಲ್ಲ. ವಿಷಯವು ಅಬಾಧಿತವೆನ್ನಲು ತತ್ವಾವೇದಕ ಪ್ರಮಾಣವೇದ್ಯತ್ವವು

ಪ್ರಯೋಜಕ. ಹೊರತು ಪ್ರಮಾಣದ ಪ್ರಾಮಾಣ್ಯವು ಸತ್ಯವಾಗಿರಬೇಕೆಂದಿಲ್ಲ. ಹಾಗೆ ಒಪ್ಪುವುದು ಗೌರವಗ್ರಸ್ತವಾಗುತ್ತದೆ. ಪ್ರತ್ಯಕ್ಷವು ಅಪ್ರಮಾಣವಾದ್ದರಿಂದ, ಅದರಿಂದ ವೇದ್ಯವಾಗಿರುವ ಶ್ರುತಿ ಜನ್ಯಬೋಧ ಪ್ರಾಮಾಣ್ಯವು ಮಿಥ್ಯಾ ಆದರೂ ಅಪೌರುಷೇಯ ತಾತ್ವಿಕ ಪ್ರಮಾಣಸಿದ್ಧವಾಗಿರುವ ಮಿಥ್ಯಾತ್ವವು ತಾತ್ವಿಕವಾಗಿರಬಹುದು' ಎಂದು. ಇದು ಸರಿಯಲ್ಲ.

**ರೂಪ್ಯಾದಿಜ್ಞಾನೇಷು ಪ್ರಾಮಾಣ್ಯಮಿಥ್ಯಾತ್ವೇ ವಿಷಯಮಿಥ್ಯಾತ್ವದರ್ಶನಾತ್ । ಅರ್ಥಾಬಾಧರೂಪ ಪ್ರಾಮಾಣ್ಯಸ್ಯ ಅತಾತ್ತ್ವಿಕತ್ವೇ ಅರ್ಥಸ್ಯ ತಾತ್ವಿಕತ್ವಾಯೋಗಾಚ್ಚ ।**

ಶುಕ್ತಿರೂಪ್ಯಾದಿಜ್ಞಾನ ಪ್ರಾಮಾಣ್ಯವು ಮಿಥ್ಯಾ ಆದ್ದರಿಂದ ವಿಷಯವಾದ ಶುಕ್ತಿರೂಪ್ಯವು ಮಿಥ್ಯಾ ಆಗಿರುವುದೇ ಕಂಡಿದೆ. ಅದರಿಂದ ಪ್ರಮಾಣದ ಪ್ರಾಮಾಣ್ಯವು ಸತ್ಯವಾಗಿದ್ದರೇ ವಿಷಯವು ಅಬಾಧಿತವಾಗಿರುತ್ತದೆ ಎನ್ನುವುದು ಗೌರವಗ್ರಸ್ತವಲ್ಲ. ಅನುಭವದಲ್ಲಿ ಕಂಡಿದ್ದನ್ನು ಒಪ್ಪುವುದರಲ್ಲಿ ಗೌರವದೋಷವಿರುವುದಿಲ್ಲ. ಅದರಿಂದ ಜ್ಞಾನಪ್ರಾಮಾಣ್ಯ ಮಿಥ್ಯಾ. ಆದರೆ ಅದಕ್ಕೆ ವಿಷಯವು ಮಿಥ್ಯಾ ಆಗಲೇಬೇಕು ಮತ್ತು ಜ್ಞಾನಪ್ರಾಮಾಣ್ಯವೆಂದರೆ ವಿಷಯಾಬಾಧವೆ. 'ವಿಷಯಾಬಾಧವು ಮಿಥ್ಯಾ ಆದರೂ ವಿಷಯವು ಅಬಾಧಿತ, ಸತ್ಯ' ಎನ್ನುವುದು ವ್ಯಾಹತವೂ ಆಗುತ್ತದೆ.

**ಯತ್ತೂಕ್ತಂ ವಾಚಸ್ಪತಿನಾ ''ಉಪಜೀವ್ಯವಿರೋಧೇನ ಶ್ರುತ್ಯಪ್ರಾಮಾಣ್ಯೇ ಇದಂ ರೂಪ್ಯಮಿತಿ ಪೂರ್ವಧೀವಿರೋಧಾತ್ ನೇದಂ ರೂಪ್ಯಮಿತಿ ಧೀಃ ಅಪ್ರಮಾ ಸ್ಯಾತ್'' ಇತಿ ತನ್ನ ।**

ಭಾಮತೀಕಾರನು ಹೇಳಿದ್ದಾನೆ— ಉಪಜೀವ್ಯ ಪ್ರತ್ಯಕ್ಷವಿರೋಧ ಬರುವುದರಿಂದ ಅದ್ವೈತ ಶ್ರುತಿಯು ಅಪ್ರಮಾಣವೆನ್ನುವುದಾದರೆ 'ಇದಂ ರಜತಂ' ಎಂಬ ಭ್ರಾಂತಿಯೂ ಕೂಡ ಮೊದಲಿಗೆ ಬಂದಿದ್ದು ಮುಂದೆ 'ನೇದಂ ರಜತಂ' ಎಂಬ ಬಾಧಕಜ್ಞಾನ ಉದಿಸಲು ಕಾರಣವಾಗುವುದರಿಂದ ಅದಕ್ಕೆ ಉಪಜೀವ್ಯವಾಗಿದೆ. ಹೀಗಾಗಿ ಉಪಜೀವ್ಯ ಭ್ರಾಂತಿಯ ವಿರೋಧ ಬರುವುದರಿಂದ ಬಾಧಕಜ್ಞಾನಕ್ಕೆ ಭ್ರಾಂತಿಯಿಂದ ಬಾಧವೆನ್ನಬೇಕಾಗುವುದು ಎಂದು. ಇದು ಸರಿಯಲ್ಲ.

**ಯತ್ಪ್ರಾಮಾಣ್ಯಂ ಸ್ವರೂಪಸಿದ್ಧ್ಯರ್ಥಮ್ ಅಪವಾದನಿರಾಸಾರ್ಥಂ ವಾ ಯತ್ಪ್ರಾಮಾಣ್ಯಾಯತ್ತಂ ತತ್ ತಸ್ಯೋಪಜೀವ್ಯಮ್ ಇಹ । ನಚ ವ್ಯಾಪ್ತ್ಯಾದಿಜ್ಞಾನಾ ಪ್ರಾಮಾಣ್ಯೇ ಅನುಮಿತ್ಯಾದ್ಯಪ್ರಾಮಾಣ್ಯವತ್ ಸರ್ವಜ್ಞತ್ವ ನಿರ್ದುಃಖತ್ವಾದಿರೂಪ ಬ್ರಹ್ಮಬುದ್ಧ್ಯಪ್ರಾಮಾಣ್ಯೇ ಬ್ರಹ್ಮಾತ್ಮೈಕ್ಯಬುದ್ಧ್ಯಪ್ರಾಮಾಣ್ಯವಚ್ಚ ಪ್ರತಿಷೇಧ್ಯಜ್ಞಾನಾ ಪ್ರಾಮಾಣ್ಯೇ ಪ್ರತಿಷೇಧಕಜ್ಞಾನಾಪ್ರಾಮಾಣ್ಯಮ್ । ಯೇನ ತತ್ ಉಪಜೀವ್ಯಂ ಸ್ಯಾತ್ ।**

ಯಾವುದರ ಪ್ರಾಮಾಣ್ಯವು 'ಸ್ವರೂಪಸಿಧ್ಯರ್ಥಂ' ತನ್ನ ಸ್ವರೂಪಸಿದ್ಧಿಗೆ ಯಾವುದರ ಪ್ರಾಮಾಣ್ಯವನ್ನು ಅವಲಂಬಿಸುವುದೋ ಅದು ಅದಕ್ಕೆ ಉಪಜೀವ್ಯ. ಅನುಮಿತಿ ಪ್ರಾಮಾಣ್ಯವು ತನ್ನ ಸ್ವರೂಪಸಿದ್ಧಿಗೆ ವ್ಯಾಪ್ತ್ಯಾದಿ ಜ್ಞಾನಪ್ರಾಮಾಣ್ಯವನ್ನು ಅವಲಂಬಿಸುವುದರಿಂದ ಅನುಮಿತಿಗೆ ವ್ಯಾಪ್ತಿಜ್ಞಾನವು ಉಪಜೀವ್ಯ.

ಇಲ್ಲಿ ಅದ್ವೈತಿ ಆಕ್ಷೇಪಮಾಡಬಹುದು— 'ಇಲ್ಲಿ ಸ್ವರೂಪಸಿದ್ಧಿ ಎಂದರೆ ಉತ್ಪತ್ತಿಯೆ, ಜ್ಞಪ್ತಿಯೆ? ಅನುಮಿತಿ ಪ್ರಾಮಾಣ್ಯದ ಉತ್ಪತ್ತಿಯು ವ್ಯಾಪ್ತಿಜ್ಞಾನ ಪ್ರಾಮಾಣ್ಯದಿಂದಾಗಬೇಕೆಂದರೆ ಪ್ರಾಮಾಣ್ಯವು ಗುಣಜನ್ಯವಾಗಿದೆ ಎಂದಂತಾಗುವುದರಿಂದ ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಸ್ವತಸ್ತ್ವವಿಲ್ಲವೆಂದಾಗುವುದು. ಅನುಮಿತಿ ಪ್ರಾಮಾಣ್ಯದ ಸ್ವರೂಪಸಿದ್ಧಿ ಎಂದರೆ ಜ್ಞಪ್ತಿ ಎನ್ನುವುದಾದರೆ ಜ್ಞಾನದ ಪ್ರಾಮಾಣ್ಯಜ್ಞಾನವು ಜ್ಞಾನಗ್ರಾಹಕಾಧೀನವೆ ಹೊರತು ಜ್ಞಾನಗ್ರಾಹಕದ ಪ್ರಾಮಾಣ್ಯಕ್ಕೆ ಅಧೀನವಲ್ಲ. ಅದರಿಂದ ಉಪಜೀವ್ಯತ್ವದ ಈ ಪರಿಷ್ಕಾರವು ಸಮರ್ಪಕವಲ್ಲ'

ಈ ಆಕ್ಷೇಪಕ್ಕೆ ಉತ್ತರವಾಗಿ ಸ್ವರೂಪಸಿದ್ಧಿ' ಎಂದರೆ ಉತ್ಪತ್ತಿ ಎಂದೇ ವಿವಕ್ಷೆ ಮಾಡಿ, ಪ್ರಾಮಾಣ್ಯಕ್ಕೆ ಉತ್ಪತ್ತಿಯಲ್ಲಿ ಪರತಸ್ತ್ವವನ್ನು ಹೇಳುವ ತಾರ್ಕಿಕರ ಮತಪ್ರಕಾರ ಹೇಳಿದ್ದೆನ್ನಬೇಕು.

ಈ ಅಸ್ವಾರಸ್ಯಕ್ಕೆ ಅವಕಾಶವಿಲ್ಲದಂತೆ ಪರಿಷ್ಕಾರ ಹೀಗೆ—

'ಅಪವಾದ ನಿರಾಸಾರ್ಥಂ ವಾ' ಅಪವಾದ ನಿರಾಸಕ್ಕಾಗಿ, ಅಂದರೆ ಬುದ್ಧಿದೋಷ ನಿರಾಸಕ್ಕಾಗಿ ಅನುಮಿತಿ ಪ್ರಾಮಾಣ್ಯವು ವ್ಯಾಪ್ತಿಜ್ಞಾನಪ್ರಾಮಾಣ್ಯವನ್ನು ಅವಲಂಬಿಸುತ್ತದೆ. ಆದರಿಂದ ಅನುಮಿತಿಗೆ ವ್ಯಾಪ್ತಿಜ್ಞಾನವು ಉಪಜೀವ್ಯ. ವ್ಯಾಪ್ಯಾದಿ ಜ್ಞಾನವು ಅಪ್ರಮಾಣವಾದರೆ ಅನುಮಿತಿ ಅಪ್ರಮಾಣವಾಗುತ್ತದೆ. ಘಟಾದಿಜ್ಞಾನವು 'ಈ ಜ್ಞಾನವು ಅಪ್ರಮಾಣ, ಜ್ಞಾನವಾದ್ದರಿಂದ ಭ್ರಮದಂತೆ' ಎನ್ನುವ ಬುದ್ಧಿದೋಷ ನಿರಾಸಕ್ಕಾಗಿ ಪರೀಕ್ಷೆ ಮಾಡುತ್ತ ಕೊನೆಯಲ್ಲಿ ಸಾಕ್ಷಿಜ್ಞಾನ ಪ್ರಾಮಾಣ್ಯವನ್ನು ಅವಲಂಬಿಸುತ್ತದೆ. ಅವಲಂಬಿಸಿ ತಾನು ಪ್ರಮಾಣವೆಂದು ಸಿದ್ಧವಾಗುತ್ತದೆ. ಆದರಿಂದ ಘಟಜ್ಞಾನಕ್ಕೆ ಸಾಕ್ಷಿಯು ಉಪಜೀವ್ಯ.

ಇಂಥ ಉಪಜೀವ್ಯತ್ವವೇ 'ಇಹ' ಇದು ಬಾಧ್ಯ, ಇದು ಬಾಧಕ, ಎನ್ನುವ ವ್ಯವಸ್ಥೆ ಮಾಡುವಾಗ, ವಿವಕ್ಷಿತವಾಗಿದೆ.

ಉಪಜೀವ್ಯ ಉಪಜೀವಕ ಭಾವಕ್ಕೆ ಇನ್ನೊಂದು ದೃಷ್ಟಾಂತ ಅದ್ವೈತಿಗೆ ಸಮ್ಮತವಾದುದು ಹೀಗೆ—

'ಸರ್ವಜ್ಞತ್ವನಿರ್ದುಃಖತ್ವಾದಿರೂಪ ಬ್ರಹ್ಮಬುದ್ಧಿ' ಅಂದರೆ ಸರ್ವಜ್ಞತ್ವನಿರ್ದುಃಖತ್ವಾ-ದ್ಯುಪಲಕ್ಷಿತವಾದ ಶೋಧಿತ'ತತ್'ಪದಾರ್ಥಬುದ್ಧಿಯು ಅಪ್ರಮಾಣವಾದರೆ ಬ್ರಹ್ಮಾತ್ಮೈಕ್ಯ ಬುದ್ಧಿಯು ಅಪ್ರಮಾಣವಾಗುತ್ತದೆ. ಅದರಿಂದ ಬ್ರಹ್ಮಾತ್ಮೈಕ್ಯ ಬುದ್ಧಿ ಪ್ರಾಮಾಣ್ಯವು ಅಖಂಡ ಚೈತನ್ಯಬುದ್ಧಿಯ ಪ್ರಾಮಾಣ್ಯವನ್ನು ಅವಲಂಬಿಸುತ್ತದೆ. ಅಖಂಡ ಚೈತನ್ಯಬುದ್ಧಿಯು ಬ್ರಹ್ಮಾತ್ಮೈಕ್ಯ ಬುದ್ಧಿಗೆ ಉಪಜೀವ್ಯ' ಎಂದು.

'ಸರ್ವಜ್ಞತ್ವ ನಿರ್ದುಃಖತ್ವಾದಿರೂಪ ಬ್ರಹ್ಮಬುದ್ಧಿ' ಎಂಬಲ್ಲಿ ಸರ್ವಜ್ಞತ್ವ ನಿರ್ದುಃಖತ್ವಾದಿ ಧರ್ಮೈಃ 'ರೂಪ್ಯತೇ' ಎಂದರೆ 'ಉಪಲಕ್ಷಿತವಾಗುತ್ತದೆ' ಎಂದರ್ಥ. 'ಬ್ರಹ್ಮಾತ್ಮೈಕ್ಯ' ಎಂಬಲ್ಲಿ 'ಬ್ರಹ್ಮ' ಎಂದರೆ ಸರ್ವಜ್ಞತ್ವ ನಿರ್ದುಃಖತ್ವಾದಿಧರ್ಮ ವಿನಿರ್ಮುಕ್ತ ತತ್‌ಪದಾರ್ಥಭೂತ

ಬ್ರಹ್ಮಚೈತನ್ಯ, 'ಅತ್ರ' ಎಂದರೆ ಕಿಂಚಿಜ್ಞತ್ವ ದುಃಖಿತ್ವಾದಿ ಧರ್ಮವಿನಿರ್ಮುಕ್ತ ತ್ವಂಶಬ್ದಾರ್ಥಭೂತ ಜೀವಚೈತನ್ಯವೆಂದರ್ಥ. ಅದರಿಂದ ಈ ದೃಷ್ಟಾಂತವು ಅದ್ವೈತಿಗೆ ಸಮ್ಮತ.

'ನಚ ಪ್ರತಿಷೇಧ್ಯಜ್ಞಾನಾಪ್ರಾಮಾಣ್ಯೇ ಪ್ರತಿಷೇಧಕಜ್ಞಾನಾಪ್ರಾಮಾಣ್ಯಂ'

ಎಂದು 'ನಚ' ಎಂಬುದನ್ನು ಅನ್ವಯಿಸಬೇಕು. ಪ್ರತಿಷೇಧ್ಯಜ್ಞಾನವು ಭ್ರಾಂತಿ. ಪ್ರತಿಷೇಧಕಜ್ಞಾನವು ಬಾಧ. ಭ್ರಾಂತಿ ಅಪ್ರಮಾಣವಾದರೆ ಅದರಿಂದ ಬಾಧವು ಅಪ್ರಮಾಣವೆನಿಸುವುದಿಲ್ಲ. ಭ್ರಾಂತಿ–ಬಾಧಕಗಳಿಗೆ ಉಪಜೀವ್ಯ ಉಪಜೀವಕಭಾವವಿಲ್ಲ. ಹೀಗಾಗಿ 'ಉಪಜೀವ್ಯವಾದ ಭ್ರಾಂತಿಯು ಬಾಧಕವನ್ನು ಬಾಧಿಸೀತು' ಎಂದು ಭಾಮತೀಕಾರನು ಆಪಾದಿಸುವುದು ಸರಿಯಲ್ಲ.



यद्वा येन विना यस्यानुत्थानं तत्तस्योपजीव्यम् । 'इदं रूप्यम्' इति धीश्च प्रतिषेध्यार्पकतया धर्म्यर्पकतया चोपजीव्यैव । तथापि न दोषः । नह्युपजीव्यत्वमेव प्राबल्ये तन्त्रम् । किन्तु परीक्षितत्व-विशिष्टम् । उक्तं हि

''यावच्छक्तिपरीक्षायामुपजीव्यस्य बाधने ।
दोषो नाशोधिते दोष उपजीव्यत्वमस्त्वलम्''इति ।

नहि परत्वं प्राबल्ये तन्त्रमिति त्वन्मतेऽपि परत्वमात्रं तन्त्रम् । किन्तु परीक्षितत्वविशिष्टम् । अन्यथा प्रमानन्तरभ्रमस्य वेदात्परस्य बाह्यागमस्य च तत्त्वं स्यात् । परीक्षितत्वं च न तावत्प्रतिषेध्यार्पके शुक्तिरूप्याभेदज्ञानांशेऽस्ति । सजातीयविजातीय संवादविसंवाद भावाभावौ हि परीक्षा । नचात्र विशेषदर्शनजन्य स्वसमानविषयक ज्ञानान्तररूपः सजातीयसंवादो वा रूप्यार्थक्रियादिरूपो विजातीयसंवादो वास्ति; प्रत्युत तद्विसंवाद एव । दृश्यते चोत्तरस्यैव संवादादिकमिति पूर्वधीर्बाध्या । जगत्सत्यत्वप्रत्यक्षे तु विशेषदर्शनजन्यं 'सन् घटः' इति ज्ञानान्तरं घटार्थक्रिया प्रत्यक्षे क्लृप्तदूरादिदोषाभावश्चास्तीति न तद्बाध्यम् ।

---

उपजीव्यमात्रबाधो न दोषः । परीक्षितोपजीव्यबाध एव दोष इत्यत्र सम्मतिमाह **उक्तं हीति** ।। परीक्षितस्यैवोपजीव्यस्य बाधने दोषो भवति । अशोधिते अपरीक्षिते उपजीव्यत्वमलमस्तु । तथापि तद्बाधने न दोष इति श्लोकार्थः । नन्वेवं परीक्षितत्वमेव प्राबल्यप्रयोजकं स्यात् । नोपजीव्यत्वमित्याशङ्क्य समः समाधिरित्याह **नहीति** ।। **अन्यथेति** ।। परत्वमात्रस्य प्राबल्यप्रयोजकत्वे इत्यर्थः ।। **तदिति** ।। प्राबल्यमित्यर्थः । ननु परीक्षितत्वविशिष्टमुपजीव्यत्वमपि शुक्ताविदं रूप्यमिति ज्ञानेऽप्यस्तीति, उक्तातिप्रसङ्गस्तदवस्थ इत्यत आह **परीक्षितत्वञ्चेति** ।। तथाच यदंशे परीक्षितत्वविशिष्टमुपजीव्यत्वं तदंशे प्राबल्यमस्त्येव । यदंशे केवलमुपजीव्यत्वं न तदंशे प्राबल्यमिति भावः ।। **सजातीयेति** ।। अत्र सजातीयविजातीयशब्दौ संवादविसंवाद भावपदाभ्यां प्रत्येकं सम्बध्येते ।। **अत्रेति** ।। शुक्तिरूप्यादिज्ञानस्थल इत्यर्थः ।। **विसंवाद एवेति** ।। प्रवृत्तिविषयालाभ इत्यर्थः । ननु बाधकज्ञानस्यापि पूर्वधीतुल्यतया, संवादाद्यभावे, किं केन बाध्यतां, इत्यत आह **दृश्यते चेति** ।। ननु विसंवादाभावस्यापि परीक्षात्वात् व्याप्त्यादिरूपजगत्प्रत्यक्षे तदसिद्धेः कथं परीक्षितत्वमित्यत आह **प्रत्यक्ष इति** ।। क्लृप्तदोषाजन्यत्वनिश्चयेन तत्र विसंवादाभावोऽपि निश्चेतुं शक्यत इति भावः ।



**ಯದ್ವಾ ಯೇನ ವಿನಾ ಯಸ್ಯಾನುತ್ಥಾನಂ ತತ್ ತಸ್ಯೋಪಜೀವ್ಯಮ್ । ಇದಂ ರೂಪ್ಯಮ್' ಇತಿ ಧೀಶ್ಚ ಪ್ರತಿಷೇಧ್ಯಾರ್ಪಕತಯಾ ಧರ್ಮ್ಯರ್ಪಕತಯಾ ಚೋಪಜೀವ್ಯೈವ । ತಥಾಪಿ ನ ದೋಷಃ । ನಹ್ಯುಪಜೀವ್ಯತ್ವಮೇವ ಪ್ರಾಬಲ್ಯೇ ತಂತ್ರಮ್ । ಕಿಂತು ಪರೀಕ್ಷಿತತ್ವವಿಶಿಷ್ಟಮ್ ।**

ಅಥವಾ 'ಯಾವುದಿಲ್ಲದೆ ಯಾವುದು ಉಂಟಾಗದೋ ಅದು ಅದಕ್ಕೆ ಉಪಜೀವ್ಯ' ಎಂದೂ ಹೇಳಬಹುದು. 'ಇದಂ ರಜತಂ' ಎಂದು ಭ್ರಮ ಬಾರದೆ 'ನೇದಂ ರಜತಂ' ಎಂದು ಬಾಧ ಹುಟ್ಟುವುದಿಲ್ಲ. ಅಪ್ರಸಕ್ತ ನಿಷೇಧ ಕೂಡುವುದಿಲ್ಲ. ಭ್ರಮವು ನಿಷೇಧಕ್ಕೆ ಅಪೇಕ್ಷಿತವಾದ ನಿಷೇಧ್ಯವಾದ ರಜತವನ್ನೂ ಧರ್ಮಿಯಾದ ಇದಂಪದಾರ್ಥವನ್ನೂ ತಿಳಿಸುತ್ತದೆ. ಆದರಿಂದ ಅದು ಉಪಜೀವ್ಯವೆ. ಆದರೂ ದೋಷವಿಲ್ಲ. ಏಕೆಂದರೆ ಉಪಜೀವ್ಯತ್ವ ಮಾತ್ರವೇ ಪ್ರಾಬಲ್ಯಕ್ಕೆ ಹೇತುವಲ್ಲ. ಪರೀಕ್ಷಿತವಾಗಿರಬೇಕು. ಪರೀಕ್ಷಿತವಾಗಿದ್ದು ಉಪಜೀವ್ಯವಾಗಿರುವುದೇ ಪ್ರಾಬಲ್ಯಕ್ಕೆ ಹೇತು.

**ಉಕ್ತಂ ಹಿ—**

**''ಯಾವಚ್ಛಕ್ತಿಪರೀಕ್ಷಾಯಾಮುಪಜೀವ್ಯಸ್ಯ ಬಾಧನೇ ।**
**ದೋಷೋ ನಾಶೋಧಿತೇ ದೋಷ ಉಪಜೀವ್ಯತ್ವಮಸ್ತ್ವಲಮ್''ಇತಿ ।**

'ಪ್ರಮಾಣವೆಂದು ಪ್ರತೀತವಾಗಿದ್ದು ಯಾವಚ್ಛಕ್ತಿ ಯಥೋಚಿತ ಪರೀಕ್ಷೆಗೊಳಪಡಿಸಿದಾಗಲೂ ಉಪಜೀವ್ಯವನ್ನು ಉಪಜೀವಕವೇ ಬಾಧಿಸಿದರೆ ದೋಷ. ನಾವು ಹೇಳಿದ ನಿಯಮಕ್ಕೆ ಭಂಗ ಉಂಟಾಗುತ್ತದೆ. ಉಪಜೀವ್ಯವನ್ನು ಪರೀಕ್ಷೆಯಿಂದ ಅಪ್ರಮಾಣವಲ್ಲವೆಂದು ನಿರ್ಣಯ ಮಾಡಿರದಿದ್ದರೆ ಉಪಜೀವಕವು ಅದನ್ನು ಬಾಧಿಸಿದರೂ ದೋಷವಿಲ್ಲ. 'ಉಪಜೀವ್ಯವಾದ ವ್ಯಾಪ್ತ್ಯಾದಿಜ್ಞಾನ ಅಪ್ರಮಾಣವಾದರೆ ಅನುಮಿತಿ ಅಪ್ರಮಾಣವಾಗುವುದು' ಎಂದು ನಾವು ಹೇಳಿದ ನಿಯಮಕ್ಕೆ ಭಂಗ ಬರುವುದಿಲ್ಲ. ಆದರಿಂದ ಪೂರ್ವದಲ್ಲಿ ಬರುವ ಇದಂ ರಜತಂ ಎಂಬ ಜ್ಞಾನವು ಉಪಜೀವ್ಯವೆಂದೇ ಆಗಲಿ. ಅನಂತರ ಬರುವ ನೇದಂ ರಜತಂ ಜ್ಞಾನವು ಉಪಜೀವಕವೆಂದೇ ಆಗಲಿ' ಎಂದು ಉಭಯಲಿಂಗಾಧಿಕರಣ (ಬ್ರ.ಸೂ.3.4.34) ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**ನಹಿ ಪರತ್ವಂ ಪ್ರಾಬಲ್ಯೇ ತಂತ್ರಮಿತಿ ತ್ವನ್ಮತೇಽಪಿ ಪರತ್ವಮಾತ್ರಂ ತಂತ್ರಮ್ । ಕಿಂತು ಪರೀಕ್ಷಿತತ್ವವಿಶಿಷ್ಟಮ್ । ಅನ್ಯಥಾ ಪ್ರಮಾನಂತರಭ್ರಮಸ್ಯ ವೇದಾತ್ಪರಸ್ಯ ಬಾಹ್ಯಾಗಮಸ್ಯ ಚ ತತ್ತ್ವಂ ಸ್ಯಾತ್ ।**

'ಪರೀಕ್ಷಿತತ್ವವಿದ್ದರೇ ಉಪಜೀವ್ಯವು ಪ್ರಬಲವೆನಿಸುತ್ತದೆ' ಎಂದರೆ ಪರೀಕ್ಷಿತತ್ವವೇ ಪ್ರಾಬಲ್ಯಕ್ಕೆ ಹೇತು. ಉಪಜೀವ್ಯತ್ವವು ಹೇತುವಲ್ಲ ಎಂದಾದೀತು' ಎಂದು ಅದ್ವೈತಿ ಆಪಾದನೆ ಮಾಡಿದರೆ ಅವನಿಗೂ ಹೀಗೇ ಆಪಾದನೆ ಮಾಡಬೇಕಾಗುತ್ತದೆ.

ಭಟ್ಟವಾರ್ತಿಕದಲ್ಲಿ ಪರತ್ವವು ಪ್ರಾಬಲ್ಯಕ್ಕೆ ಹೇತು ಎಂದಿದೆ. ವ್ಯವಹಾರೇ ಭಟ್ಟನಯಃ ಎನ್ನುತ್ತ ನೀನೂ ಅದನ್ನು ಒಪ್ಪಿರುವೆ. ಆದರಿಂದ ನಿನ್ನ ಮತದಲ್ಲಿಯೂ ಪರತ್ವವು ಪ್ರಾಬಲ್ಯಕ್ಕೆ ಹೇತು. ಆದರೆ ಕೇವಲ ಪರತ್ವವು ಹೇತುವಾಗುವುದಿಲ್ಲ. ಪರೀಕ್ಷಿತತ್ವವೂ ಬೇಕು. ಆಗ ಪರೀಕ್ಷಿತತ್ವವೇ ಹೇತು. ಪರತ್ವವು ಹೇತುವಲ್ಲ ಎಂದಾದೀತು. ಅದಕ್ಕೆ ಇಷ್ಟಾಪತ್ತಿ ಎಂದು ನೀನು ಹೇಳುವುದಾದರೆ ನಾವು ಇಷ್ಟಾಪತ್ತಿ ಎಂದೇ ಹೇಳುವೆವು. ಕೇವಲ ಪರೀಕ್ಷಿತತ್ವವೆ ಹೇತು ಎಂದಾದರೆ ಆಗಲಿ ಎನ್ನುತ್ತೇವೆ.

ಪರೀಕ್ಷಿತವಾಗಿದ್ದರೆ ಮಾತ್ರ ಪರವು ಪ್ರಬಲ ಎಂದು ನೀನು ಹೇಳದಿದ್ದರೆ ಪ್ರಮಾನಂತರದಲ್ಲಿ ಭ್ರಮ ಬಂದಾಗ ಭ್ರಮವೇ ಪ್ರಬಲವಾಗಿದ್ದು ಪ್ರಮೆಯನ್ನು ಇದು ಬಾಧಿಸುತ್ತದೆ ಎನ್ನಬೇಕಾದೀತು. ಅನಾದಿಯಾದ ವೇದಕ್ಕಿಂತ ಪರದಲ್ಲಿ ಬಂದಿರುವ ಬೌದ್ಧಾಗಮವು ಪರತ್ವ ಪ್ರಯುಕ್ತ ಪ್ರಬಲವೆನಿಸಿ ವೇದಕ್ಕೆ ಬಾಧಕವೆಂದಾದೀತು.

**ಪರೀಕ್ಷಿತತ್ವಂ ಚ ನ ತಾವತ್ತ್ರಿಷೇಧ್ಯಾರ್ಪಕೇ ಶುಕ್ತಿರೂಪ್ಯಾಭೇದಜ್ಞಾನಾಂಶೇ ಅಸ್ತಿ । ಸಜಾತೀಯವಿಜಾತೀಯ ಸಂವಾದವಿಸಂವಾದ ಭಾವಾಭಾವೌ ಹಿ ಪರೀಕ್ಷಾ । ನ ಚಾತ್ರ**

**ವಿಶೇಷದರ್ಶನಜನ್ಯ ಸ್ವಸಮಾನವಿಷಯಕ ಜ್ಞಾನಾಂತರರೂಪ ಸಜಾತೀಯಸಂವಾದೋ ವಾ, ರೂಪ್ಯಾರ್ಥಕ್ರಿಯಾದಿರೂಪೋ ವಿಜಾತೀಯಸಂವಾದೋ ವಾಸ್ತಿ; ಪ್ರತ್ಯುತ ತದ್ವಿಸಂವಾದ ಏವ । ದೃಶ್ಯತೇ ಚೋತ್ತರಸ್ಯೈವ ಸಂವಾದಾದಿಕಮಿತಿ ಪೂರ್ವಧೀರ್ಬಾಧ್ಯಾ ।**

ಅದ್ವೈತಿ ಹೇಳುತ್ತಾನೆ— ಪರೀಕ್ಷಿತತ್ವ ವಿಶಿಷ್ಟವಾದ ಉಪಜೀವ್ಯತ್ವವೂ ಇದಂ ರಜತಂ ಎಂಬ ಭ್ರಮದಲ್ಲಿ ಇದಮಂಶದಲ್ಲಿ ಇದೆ. ಆದರಿಂದ ಭ್ರಮವೇ ಬಾಧಕವನ್ನು ಬಾಧಿಸಲಿ ಎನ್ನುವ ಅತಿಪ್ರಸಂಗ ಹಾಗೇ ಇದೆ. ಪರಿಹಾರವಾಗಿಲ್ಲ' ಎಂದು.

ಇದಕ್ಕೆ ನಾವು ಹೇಳುತ್ತೇವೆ, ಪರೀಕ್ಷಿತತ್ವವು ಪ್ರತಿಷೇಧ್ಯಾರ್ಪಕವಾದ ಶುಕ್ತಿ ಮತ್ತು ರೂಪ್ಯಗಳ ಅಭೇದಜ್ಞಾನಾಂಶದಲ್ಲಿ ಇಲ್ಲ. ಸಜಾತೀಯ ಸಂವಾದಭಾವ ಸಜಾತೀಯ ವಿಸಂವಾದ ಅಭಾವ, ವಿಜಾತೀಯ ಸಂವಾದಭಾವ ವಿಜಾತೀಯ ವಿಸಂವಾದ ಅಭಾವ—ಇವೇ ಪರೀಕ್ಷೆಗಳು. 'ಇದಂ ರಜತಂ' ಎಂಬ ಜ್ಞಾನಕ್ಕೆ ಸಜಾತೀಯ ಸಂವಾದವಿಲ್ಲ. ಶುಕ್ತಿರಜತಾಭೇದಕ್ಕೆ ವ್ಯಾಪಕವಾದ ಉಪಾದಾನೋಪಾದೇಯಭಾವದರ್ಶನ ಜನ್ಯವಾದ 'ಇದಂ ರಜತಂ' ಎಂದು ಜ್ಞಾನಾಂತರ ಇಲ್ಲ.

ವಿಜಾತೀಯ ಸಂವಾದವೆಂದರೆ ಶುಕ್ತಿರಜತಾಭೇದಾನುಮಾಪಕವಾದ ರಜತಾರ್ಥಕ್ರಿಯೆ, ಅಂದರೆ ರಜತಾಭರಣಾದಿ ಉತ್ಪಾದನಯೋಗ್ಯತ್ವ. ಇದೂ ಇಲ್ಲ.

ಸಜಾತೀಯ ಸಂವಾದವು ಸಾಕ್ಷಾತ್ತಾಗಿ ಸ್ವವಿಷಯ ವಿಷಯಕವಾಗುವ ಪ್ರಮಾಣಾಂತರ. ವಿಸಂವಾದವೆಂದರೆ ವಿರುದ್ಧ ವಿಷಯಕಮಾನಾಂತರ. ಅದು ಸಾಕ್ಷಾತ್ ವಿರುದ್ಧವಿಷಯಕವಾಗಿರ ಬಹುದು. ಇಲ್ಲವೆ ಸಾಕ್ಷಾತ್ ವಿರುದ್ಧ ವಿಷಯಕವಾದ ಮಾನಾಂತರಕ್ಕೆ ಉಪಸ್ಥಾಪಕವಿರಬಹುದು. ಉದಾ: 'ದೋಷಗಳು ಇವೆ' ಎಂದು ತಿಳಿದರೆ ಅವು ಅದನ್ನು ಉಪಸ್ಥಾಪನ ಮಾಡುವುವು. 'ಇದಂ ರಜತಂ' ಎಂಬ ಭ್ರಮಕ್ಕೆ ಶುಕ್ತಿ-ರಜತ ಅಭೇದವಿಷಯದಲ್ಲಿ ಸಜಾತೀಯ ಸಂವಾದವಾಗಲಿ, ವಿಜಾತೀಯ ಸಂವಾದವಾಗಲಿ, ಎರಡೂ ಇಲ್ಲ. ಮಾತ್ರವಲ್ಲ ಸಜಾತೀಯ ವಿಸಂವಾದ ಮತ್ತು ವಿಜಾತೀಯ ವಿಸಂವಾದಗಳೇ ಇವೆ. ಆದರೆ 'ನೇದಂ ರಜತಂ' ಎಂಬ ಪರದಲ್ಲಿ ಬರುವ ಬಾಧಕ ಜ್ಞಾನಕ್ಕೇ ಸಂವಾದಗಳೂ ಇವೆ, ವಿಸಂವಾದಾಭಾವಗಳೂ ಇವೆ. ಅದರಿಂದ ಪೂರ್ವದಲ್ಲಿ ಬಂದ ಭ್ರಮವೇ ರಜತಾಭೇದವಿಷಯದಲ್ಲಿ ಬಾಧಿತವಾಗುತ್ತದೆ. 'ಇದಂ' ವಿಷಯದಲ್ಲಿ ಪರೀಕ್ಷಿತತ್ವದೊಂದಿಗೆ ಉಪಜೀವ್ಯತ್ವವಿರುವುದರಿಂದ ಆ ವಿಷಯದಲ್ಲಿ ಭ್ರಮ ಬಾಧಿತವಾಗುವುದಿಲ್ಲ. ಹೀಗಾಗಿ ಯಾವ ಅಂಶದಲ್ಲಿ ಜ್ಞಾನಕ್ಕೆ ಪರೀಕ್ಷಿತತ್ವ ವಿಶಿಷ್ಟವಾದ ಉಪಜೀವ್ಯತ್ವವಿರುವುದೋ ಆ ಅಂಶದಲ್ಲಿ ಜ್ಞಾನಕ್ಕೆ ಪ್ರಾಬಲ್ಯವಿದ್ದೇ ಇದೆ. ಯಾವ ಅಂಶದಲ್ಲಿ ಕೇವಲ ಉಪಜೀವ್ಯತ್ವ ಮಾತ್ರವಿರುವುದೋ ಆ ಅಂಶದಲ್ಲಿ ಜ್ಞಾನಕ್ಕೆ ಪ್ರಾಬಲ್ಯವಿಲ್ಲ. ಭ್ರಮದಲ್ಲಿ ಕೇವಲ ಉಪಜೀವ್ಯತ್ವವೇ ಇರುವುದರಿಂದ ಅದು ದುರ್ಬಲ. ಬಾಧಕಜ್ಞಾನಕ್ಕೂ ಪರೀಕ್ಷಿತತ್ವವಿಲ್ಲದಿರುತ್ತಿದ್ದರೆ ಯಾವುದು ಬಾಧ್ಯ ಯಾವುದು ಬಾಧಕವೆನ್ನುವ ನಿರ್ಣಯ ಅಶಕ್ಯವಾಗುತ್ತಿತ್ತು. ಆದರೆ ಬಾಧಕಜ್ಞಾನಕ್ಕೆ ಪರೀಕ್ಷಿತತ್ವವೇ

ಕಂಡುಬರುತ್ತಿದೆ. ಸಂವಾದಗಳಿರುವುದೂ ವಿಸಂವಾದಗಳಿಲ್ಲದಿರುವುದೂ ಕಂಡುಬರುತ್ತಿದೆ. ಆದರಿಂದ ಅದೇ ಬಾಧಕವೆಂದು ನಿರ್ಣಯವಾಗುತ್ತದೆ.

**ಜಗತ್ಸತ್ಯತ್ವಪ್ರತ್ಯಕ್ಷೇ ತು ವಿಶೇಷದರ್ಶನಜನ್ಯಂ 'ಸನ್ ಘಟಃ' ಇತಿ ಜ್ಞಾನಾಂತರಂ ಘಟಾರ್ಥಕ್ರಿಯಾ ಪ್ರತ್ಯಕ್ಷೇ ಕ್ಲಪ್ತದೂರಾದಿದೋಷಾಭಾವಶ್ಚಾಸ್ತೀತಿ ನ ತದ್ ಬಾಧ್ಯಮ್ ।**

'ಜಗತ್ ಸತ್ಯತ್ವ ಪ್ರತ್ಯಕ್ಷದಲ್ಲಿ ಪರೀಕ್ಷಿತತ್ವವು ಹೇಗೆ ನಿರ್ಣಯವಾಗುತ್ತದೆ? ವಿಸಂವಾದಾಭಾವವೂ ಪರೀಕ್ಷೆಯೇ ಆಗಿರುವಾಗ ವ್ಯಾಪ್ಯಾದಿರೂಪ ಜಗತ್ ಪ್ರತ್ಯಕ್ಷದಲ್ಲಿ ವಿಸಂವಾದಾಭಾವವು ಹೇಗೆ ಸಿದ್ಧವಾಗುವುದು?' ಎಂದರೆ— ಅರ್ಥಕ್ರಿಯಾದಿರೂಪವಿಶೇಷ ದರ್ಶನ ಜನ್ಯವಾದ 'ಸನ್ ಘಟಃ' ಎಂಬ ಜ್ಞಾನಾಂತರ ರೂಪ ಸಜಾತೀಯ ಸಂವಾದವೂ ಇದೆ, ಘಟಾರ್ಥಕ್ರಿಯಾ ರೂಪ ವಿಜಾತೀಯ ಸಂವಾದವೂ ಇದೆ, ಮತ್ತು ಪ್ರತ್ಯಕ್ಷದಲ್ಲಿ ಕ್ಲಪ್ತವಾದ ಅತಿದೂರತ್ವ ಅತಿಸಾಮೀಪ್ಯಾದಿ ದೋಷಗಳಿಲ್ಲವೆಂದು ನಿಶ್ಚಯವೂ ಇರುವುದರಿಂದ ವಿಸಂವಾದಾಭಾವವೂ ನಿಶ್ಚಿತವಾಗಿ ಇದೆ. ಆದರಿಂದ ಅದು ಅನುಮಾನಾಗಮಗಳಿಂದ ಬಾಧ್ಯವಾಗದು.



**जीवेशाभेदश्रुतौ च निषेध्यार्पिका भेदश्रुतिः साक्षिप्रत्यक्षं चादोषत्वात् परीक्षितमिति न तदपि बाध्यम् । इत्थमेव च दोषाभावादिज्ञानरूपपरीक्षायामनाश्वासे वेदस्यापौरुषेयत्वेन तज्ज्ञाने, त्वदुक्तानुमाने च योग्यानुपलम्भादिना हेत्वाभासादिराहित्यज्ञाने, ब्रह्ममीमांसायां च प्रत्यधिकरणं सिद्धान्त्यभिप्रेतार्थे उपक्रमाद्यानुगुण्यज्ञाने चानाश्वासः स्यादिति प्रमाणतदाभासादिव्यवस्था न स्यात् । यद्यपि धर्म्यर्पके इदंज्ञानांशे परीक्षितत्वविशिष्टमुपजीव्यत्वमस्ति । तथापि तन्न बाध्यते । शिष्टमैक्यभङ्गे वक्ष्यते ।।**

---

**जीवेशाभेदश्रुतौ चेति ।।** तत्वमस्यादिश्रुतावित्यर्थः । यद्यपीयं श्रुतिः जीवब्रह्माभेदविधायिनी । तथापि अभेदस्य भेदाभाव रूपत्वेनैतच्छ्रुतेः भेदनिषेधकत्वमिति भावः । यद्वा नान्योतोऽस्ति द्रष्टेत्यादि श्रुतावित्यर्थः ।। **साक्षिप्रत्यक्षं चेति ।।** यद्यपि जगत्सत्यत्वग्राहिप्रत्यक्षे त्वित्यादिना जगदन्तः

पातिभेद ग्राहि साक्षिणोऽपि प्रत्यक्षत्वेन प्राबल्यमुक्तम् । तथापि तस्यात्मस्वरूपतया चक्षुरादिजन्यप्रत्यक्षवत् जन्यत्वाभावेन दोषजन्यत्वशङ्कानवसरज्ञापनाय प्रागुपादानमिति ध्येयम् । ननूक्तपरीक्षाया दोषाभावादिज्ञानरूपत्वात् ज्ञानरूपत्वाविशेषेण तत्राप्यनाश्वासे कथं प्राबल्यरूपवस्तुव्यवस्थासिद्धिरित्यत आह **इत्थमेव चेति ।। तज्ज्ञान इति ।।** दोषाभावादिज्ञान इत्यर्थः ।। **यद्यपीति ।।** यद्यपि परीक्षितत्वं च न तावत् प्रतिषेध्यार्पके शुक्तिरूप्याभेदज्ञानांशेऽस्तीति पूर्ववाक्येनैव धर्म्यर्पकेदंज्ञानांशे परीक्षितत्वविशिष्टमुपजीव्यत्वं ज्ञातुं शक्यम् । तथापि मन्दव्युत्पादनाय शब्दतस्तादृशार्थसमर्पणमिति ध्येयम् । नन्वभेदश्रुतेः षड्विधतात्पर्यलिङ्गोपेतत्वेन बलीयस्त्वात् तयैव भेदश्रुतेः बाधो युक्त इत्यत आह **शिष्टमिति ।।**



**ಜೀವೇಶಾಭೇದಶ್ರುತೌ ಚ ನಿಷೇಧ್ಯಾರ್ಪಿಕಾ ಭೇದಶ್ರುತಿಃ ಸಾಕ್ಷಿಪ್ರತ್ಯಕ್ಷಂ ಚ ಅದೋಷತ್ವಾತ್ ಪರೀಕ್ಷಿತಮಿತಿ ನ ತದಪಿ ಬಾಧ್ಯಮ್ ।**

ಜೀವೇಶಾಭೇದಪರವಾದ ತತ್ವಮಸ್ಯಾದಿ ಶ್ರುತಿಗೆ ನಿಷೇಧ್ಯಾರ್ಪಕವಾದ ಭೇದಶ್ರುತಿಯೂ ಸಾಕ್ಷಿ ಪ್ರತ್ಯಕ್ಷವೂ ದೋಷರಹಿತವಾದ್ದರಿಂದ ಪರೀಕ್ಷಿತವೇ ಆಗಿದೆ. ಆದರಿಂದ ಅದು ಬಾಧ್ಯವಾಗಲಾರದು.

ಯದ್ಯಪಿ ತತ್ವಮಸ್ಯಾದಿ ಅಭೇದ ಶ್ರುತಿಯು ಅಭೇದವನ್ನು ವಿಧಾನ ಮಾಡುತ್ತದೆ ಹೊರತು ಭೇದವನ್ನು ನಿಷೇಧಮಾಡುವುದಿಲ್ಲ. ಆದರಿಂದ ಭೇದಶ್ರುತಿಯು ಅದಕ್ಕೆ ನಿಷೇಧ್ಯಾರ್ಪಕವೆನ್ನುವಂತಿಲ್ಲ. ಆದರೂ ಅಭೇದವು ಭೇದಾಭಾವವೆ ಆಗಿರುವುದರಿಂದ ಅಭೇದಶ್ರುತಿಯು ಭೇದನಿಷೇಧಕವೆ. ಅಥವಾ 'ನಾನ್ಯೋಽತೋಽಸ್ತಿ ದ್ರಷ್ಟಾ' ಎಂದು ನೇರವಾಗಿ ಭೇದನಿಷೇಧವೇ ಆದ ಅಭೇದ ಶ್ರುತಿಯನ್ನು ಇಲ್ಲಿ ಇಟ್ಟುಕೊಳ್ಳಬೇಕು.

ಯದ್ಯಪಿ 'ಜಗತ್ ಸತ್ಯತ್ವಗ್ರಾಹಿ ಪ್ರತ್ಯಕ್ಷದಲ್ಲಿ ಪರೀಕ್ಷಿತತ್ವವಿದೆ' ಎಂದು ಹೇಳಿದಾಗಲೆ ಜಗದಂತಃ ಪಾತಿಯಾದ ಭೇದವನ್ನು ಗ್ರಹಿಸುವ ಸಾಕ್ಷಿಪ್ರತ್ಯಕ್ಷಕ್ಕೂ ಪರೀಕ್ಷಿತತ್ವವನ್ನು ಹೇಳಿದಂತಾಗಿದೆ. ಆದರೂ ಸಾಕ್ಷಿಯು ನಿರ್ದೋಷ ಆತ್ಮಸ್ವರೂಪವಾದ್ದರಿಂದ ಚಕ್ಷುರಾದಿ ಜನ್ಯಪ್ರತ್ಯಕ್ಷದಂತೆ ಜನ್ಯವಲ್ಲವಾದ್ದರಿಂದ ದೋಷಜನ್ಯತ್ವ ಶಂಕೆಗೇ ಅವಕಾಶವಿಲ್ಲವೆಂದು ತಿಳಿಸುವುದಕ್ಕಾಗಿ ಹಿಂದೆ ಹೇಳಿದ್ದಾರೆ.

**ಇತ್ಥಮೇವ ಚ ದೋಷಾಭಾವಾದಿ ಜ್ಞಾನರೂಪ ಪರೀಕ್ಷಾಯಾಂ ಅನಾಶ್ವಾಸೇ**

**ವೇದಸ್ಯಾಪೌರುಷೇಯತ್ವೇನ ತಜ್ಜ್ಞಾನೇ, ತ್ವದುಕ್ತಾನುಮಾನೇ ಚ ಯೋಗ್ಯಾನುಪಲಂಭಾದಿನಾ ಹೇತ್ವಾಭಾಸಾದಿರಾಹಿತ್ಯಜ್ಞಾನೇ, ಬ್ರಹ್ಮಮೀಮಾಂಸಾಯಾಂ ಚ ಪ್ರತ್ಯಧಿಕರಣಂ ಸಿದ್ಧಾಂತ್ಯಭಿಪ್ರೇತಾರ್ಥೇ ಉಪಕ್ರಮಾದ್ಯಾನುಗುಣ್ಯಜ್ಞಾನೇ ಚಾನಾಶ್ವಾಸಃ ಸ್ಯಾದಿತಿ ಪ್ರಮಾಣತದಾಭಾಸಾದಿ ವ್ಯವಸ್ಥಾ ನ ಸ್ಯಾತ್ ।**

ಪರೀಕ್ಷೆಯೂ ದೋಷಾಭಾವಾದಿ ಜ್ಞಾನರೂಪವೇ ಆಗಿರುವುದರಿಂದ ಎಲ್ಲ ಜ್ಞಾನಗಳಂತೆ ಈ ಜ್ಞಾನದಲ್ಲಿಯೂ ಅವಿಶ್ವಾಸಪಡಲು ಅವಕಾಶವಿರುವಾಗ, ಪ್ರಾಬಲ್ಯ ದೌರ್ಬಲ್ಯ ವ್ಯವಸ್ಥಾ ಸಿದ್ಧಿಯು ಪರೀಕ್ಷಿತತ್ವ ನಿಶ್ಚಯದಿಂದಾಗುವುದು ಹೇಗೆ? ಎಂದು ಪ್ರಶ್ನೆ ಬಂದರೆ ಹೇಳುತ್ತಾರೆ—

ಪರೀಕ್ಷೆಯೂ ಜ್ಞಾನವೆ ಎಂದಮಾತ್ರಕ್ಕೆ ವಿನಾಕಾರಣ ಎಲ್ಲ ಜ್ಞಾನಗಳಂತೇ ಅದರಲ್ಲಿಯೂ ಅವಿಶ್ವಾಸಪಡಬಹುದೆನ್ನುವುದು ಸ್ವವ್ಯಾಹತವಾಗುವುದು. ವೇದವು ಅಪೌರುಷೇಯವಾದ್ದರಿಂದ ಅದರಲ್ಲಿ ದೋಷವಿಲ್ಲವೆಂದು ತಿಳಿದು ವಿಶ್ವಾಸಪಡುವಿ. ಆದರೆ ಈ ದೋಷಾಭಾವಜ್ಞಾನವೂ ಜ್ಞಾನವೇ ಆಗಿರುವಾಗ ಅವಿಶ್ವಾಸ ಪಡಬಹುದು ತಾನೆ? ನೀನು ಹೇಳುವ ಮಿಥ್ಯಾತ್ವಾನು ಮಾನದಲ್ಲಿಯೂ ಯೋಗ್ಯಾನುಲಬ್ಧ್ಯಾದಿಗಳಿಂದ ಹೇತ್ವಾಭಾಸಾಭಾವ ನಿಶ್ಚಯ ಮಾಡಿಕೊಂಡು ವಿಶ್ವಾಸಪಡುವಿ, ಏಕೆ ಅವಿಶ್ವಾಸಪಡುವುದಿಲ್ಲ? ಬ್ರಹ್ಮವಿಚಾರದಲ್ಲಿ ಪ್ರತಿ ಅಧಿಕರಣದಲ್ಲಿ ಸಿದ್ಧಾಂತಿಯು ಹೇಳುವ ವಿಷಯದಲ್ಲಿ ಉಪಕ್ರಮಾದಿ ಆನುಗುಣ್ಯಜ್ಞಾನ ನಿನಗೆ ಬರುತ್ತಿದೆ. ಅದರಲ್ಲಿ ಏಕೆ ಅವಿಶ್ವಾಸಪಡಬಾರದು?

ಹೀಗೆ ನಿಷ್ಕಾರಣವಾಗಿ ಪರೀಕ್ಷೆಯಲ್ಲಿ ಅವಿಶ್ವಾಸಪಡುತ್ತಿದ್ದರೆ ಪ್ರಮಾಣ-ಅಪ್ರಮಾಣ ವ್ಯವಸ್ಥಾವನ್ನು ಪರೀಕ್ಷೆಯಿಂದ ಮಾಡುವುದೇ ಅಶಕ್ಯವಾದೀತು.

**ಯದ್ಯಪಿ ಧರ್ಮ್ಯರ್ಪಕೇ ಇದಂಜ್ಞಾನಾಂಶೇ ಪರೀಕ್ಷಿತತ್ವವಿಶಿಷ್ಟಮುಪಜೀವ್ಯತ್ವಮಸ್ತಿ । ತಥಾಪಿ ತನ್ನ ಬಾಧ್ಯತೇ ।**

'ಇದಂ ರಜತಂ' ಎಂಬ ಭ್ರಮದಲ್ಲಿಯೂ 'ನೇದಂ ರಜತಂ' ಎಂಬ ನಿಷೇಧಕ್ಕೆ ಧರ್ಮಿಯಾದ 'ಇದಂ' ಅಂಶಾರ್ಪಕವಾದ ಇದಂಜ್ಞಾನಾಂಶದಲ್ಲಿ ಪರೀಕ್ಷಿತತ್ವ ವಿಶಿಷ್ಟವಾದ ಉಪಜೀವ್ಯತ್ವವಿದೆ. ಅದರಿಂದ ಅದು ಬಾಧ್ಯವಾಗಬಾರದು. ಆದರೂ ಬಾಧ್ಯವಾಗುತ್ತಿದೆ, ಹೇಗೆ ಎಂಬ ಪ್ರಶ್ನೆ ಬರುತ್ತದೆ. ಆದರೆ ಯಾವ ಅಂಶದಲ್ಲಿ ಜ್ಞಾನಕ್ಕೆ ಪರೀಕ್ಷಿತತ್ವವಿಶಿಷ್ಟ ಉಪಜೀವ್ಯತ್ವವಿದೆಯೋ ಆ ಅಂಶದಲ್ಲಿ ಜ್ಞಾನವು ಬಾಧ್ಯವಾಗುವುದಿಲ್ಲ. ಪ್ರಕೃತ ಭ್ರಮದಲ್ಲಿ ನಿಷೇಧಕ್ಕೆ ಧರ್ಮ್ಯರ್ಪಕವಾದ ಇದಂಜ್ಞಾನಾಂಶದಲ್ಲಿ ಪರೀಕ್ಷಿತತ್ವವಿಶಿಷ್ಟ ಉಪಜೀವ್ಯತ್ವವಿರುವುದರಿಂದ ಆ ಅಂಶದಲ್ಲಿ ಭ್ರಮವು ಬಾಧಿತವಾಗುತ್ತಿಲ್ಲ.

'ಪರೀಕ್ಷಿತತ್ವವು ಪ್ರತಿಷೇಧ್ಯಾರ್ಪಕ ಶುಕ್ತಿರೂಪ್ಯಾಭೇದ ಜ್ಞಾನಾಂಶದಲ್ಲಿ ಇದೆ' ಎನ್ನಲಾಗದು ಎಂದು ಹಿಂದೆ ಹೇಳಿದ್ದರಿಂದಲೇ ಅರ್ಥಾತ್ ಧರ್ಮ್ಯರ್ಪಕ ಇದಂಜ್ಞಾನಾಂಶದಲ್ಲಿ ಪರೀಕ್ಷಿತತ್ವವಿದೆ ಎಂದು ತಿಳಿಯಬಹುದು. ಆದರೂ ಮಂದರಿಗೆ ತಿಳಿಯುವುದಕ್ಕಾಗಿ ಮುಖತಃ ಅದನ್ನು ಇಲ್ಲಿ ಹೇಳಿದ್ದಾರೆ.

ಇಲ್ಲಿ ಸಿದ್ಧಿಕಾರನ ಆಕ್ಷೇಪ ಹೀಗಿದೆ— 'ಪರೀಕ್ಷಿತವೇ ಆಗಿರುವ ಪ್ರವೃತ್ತಿಸಂವಾದ-ವಿಸಂವಾದಾಭಾವ ದೋಷಾಭಾವಾದಿಗಳಿಂದ ಯುಕ್ತವಾಗಿದ್ದರೂ ಧೂಮವು ಸ್ವಸಮಾನ ದೇಶಕಾಲ ವೃತ್ತಿಯಾದ ವಹ್ನಿಯನ್ನೇ ಸಾಧಿಸುತ್ತದೆ. ಹೊರತು ದೇಶಾಂತರ ಕಾಲಾಂತರ ವೃತ್ತಿವಹ್ನಿಯನ್ನು ಸಾಧನೆ ಮಾಡುವುದಿಲ್ಲ. ಪರೀಕ್ಷಾದಿಂದ ಧೂಮಕ್ಕೆ ಸ್ವಸಮಾನ ದೇಶಕಾಲೀನ ವಿಷಯಾಬಾಧ್ಯತ್ವವೇ ಸಿದ್ಧವಾಗುವುದು. ಹೀಗಾಗಿ ವ್ಯಾವಹಾರಿಕವಾದ ಸತ್ವಪ್ರತ್ಯಕ್ಷಾದಿ ಪ್ರಮಾಣವೂ ಕೂಡ ಪರೀಕ್ಷಿತವೇ ಆದರೂ ವ್ಯವಹಾರ ದಶಾದಲ್ಲಿ ಮಾತ್ರದಲ್ಲಿ ಸತ್ವಕ್ಕೆ ಅಬಾಧ್ಯತ್ವವನ್ನು ಸಾಧಿಸುತ್ತದೆ. ಇದಕ್ಕೆ ಉದಾಹರಣೆ— ದೇಹಾತ್ಮೈಕ್ಯ ಪ್ರತ್ಯಕ್ಷವು ದೇಹಾತ್ಮೈಕ್ಯಕ್ಕೆ ವ್ಯವಹಾರಕಾಲ ಮಾತ್ರ ಅಬಾಧ್ಯತ್ವವನ್ನು ಸಾಧಿಸುತ್ತದೆ. ಅತ್ಯಂತಾಬಾಧ್ಯತ್ವವನ್ನು ಸಾಧಿಸುವುದಿಲ್ಲ. ಅದರಿಂದ ಪರೀಕ್ಷಾದಲ್ಲಿ ವಿಶ್ವಾಸವಾಗಲಿ ಪ್ರಮಾಣ ತದಾಭಾಸ ವ್ಯವಸ್ಥೆಯಾಗಲಿ ಜೀವೇಶಭೇದ ಜಗತ್ ಸತ್ಯತ್ವಗಳಾಗಲಿ ಎಲ್ಲವೂ ವ್ಯಾವಹಾರಿಕವೆಂದು ಮಿಥ್ಯಾತ್ವಾನುಮಾನಾಗಮಗಳಿಂದ ಸಿದ್ಧವಾಗುವುದು' ಎಂದು.

ಇದಕ್ಕೆ ನಾವು ಹೀಗೆ ಹೇಳಬೇಕು— 'ಅದ್ವೈತಾನುಮಾನಾಗಮಗಳು ವ್ಯವಹಾರಕಾಲಾಬಾಧ್ಯತ್ವವನ್ನು ಜೀವೇಶಭೇದಾದಿಗಳಿಗೆ ಸಾಧಿಸುತ್ತವೆ ಎನ್ನುವುದು ಸುಳ್ಳು. ನಾಸ್ತಿ ನಾಸೀನ್ನ ಭವಿಷ್ಯತಿ ಎಂದು ತ್ರಿಕಾಲಬಾಧ್ಯತ್ವವನ್ನೇ ಅವು ಸಾಧಿಸುತ್ತವೆ ಎಂದು ಅದ್ವೈತಿಗಳೇ ಹೇಳುತ್ತಾರೆ. ಆದರಿಂದ ಉಪಜೀವ್ಯವಾದ ಸತ್ವಗ್ರಾಹಿ ಪ್ರತ್ಯಕ್ಷದ ವಿರೋಧ ಅಪರಿಹಾರ್ಯ.

ಪಾರಮಾರ್ಥಿಕತ್ವಾಕಾರೇಣ ತ್ರಿಕಾಲ ನಿಷೇಧಸಾಧನೆಯನ್ನೇ ಅದ್ವೈತಾನುಮಾನಾಗಮಗಳು ಮಾಡುತ್ತಿವೆ ಎಂದರೆ ನಿರ್ಧರ್ಮಕ ಬ್ರಹ್ಮನಲ್ಲಿಯೂ ಪಾರಮಾರ್ಥಿಕತ್ವಾಕಾರೇಣ ತ್ರಿಕಾಲ ನಿಷೇಧವು ಸಿದ್ಧಿಸೀತು. ಪ್ರಪಂಚದಲ್ಲಿ ಹೇಗೋ ಹಾಗೇ ಬ್ರಹ್ಮನಲ್ಲಿಯೂ ಪಾರಮಾರ್ಥಿಕತ್ವರೂಪ ಧರ್ಮವಿಲ್ಲ ತಾನೆ?

ಮತ್ತು ಪರೀಕ್ಷಿತವಾದ ಪ್ರಮಾಣಗಳೂ ಕೂಡ ಸ್ವಕಾಲೀನಾಬಾಧ್ಯತ್ವವನ್ನು ಮಾತ್ರವೆ ಸಾಧಿಸುತ್ತವೆ. ಅತ್ಯಂತಾಬಾಧ್ಯತ್ವವನ್ನು ಸಾಧಿಸುವುದಿಲ್ಲ ಎಂಬ ನಿಯಮವು ಪ್ರಪಂಚ ಸತ್ವಗ್ರಾಹಿ ಪ್ರತ್ಯಕ್ಷಾಗಮಗಳಿಗೆ ಮಾತ್ರವೇ ಏಕೆ ಅನ್ವಯವಾಗಬೇಕು?

ಆದರಿಂದ ಅದ್ವೈತಾನುಮಾನಾಗಮಗಳು ಸ್ವಕಾಲಾಬಾಧ್ಯತ್ವವನ್ನು ಮಾತ್ರ ಬ್ರಹ್ಮನಿಗೆ ಹೇಳುವುದರಿಂದ, ಬೌದ್ಧಾನುಮಾನಾಗಮಗಳಿಗೆ ಬ್ರಹ್ಮನಲ್ಲಿ ಅತ್ಯಂತ ಬಾಧ್ಯತ್ವ ಕ್ಷಣಿಕತ್ವಶೂನ್ಯತ್ವಗಳನ್ನು ಸಾಧಿಸುವಲ್ಲಿ ಅದ್ವೈತಾನುಮಾನಗಳಿಂದ ಏನೂ ವಿರೋಧವಿಲ್ಲವೆಂದಾದೀತು.

**ಶಿಷ್ಟಮೈಕ್ಯಭಂಗೇ ವಕ್ಷ್ಯತೇ ॥**

'ಅಭೇದಶ್ರುತಿಯು ಷಡ್ವಿಧ ತಾತ್ಪರ್ಯ ಲಿಂಗಗಳಿರುವುದರಿಂದ ಪ್ರಬಲವಾಗಿದ್ದು ಭೇದಶ್ರುತಿಯನ್ನು ಬಾಧಿಸುವುದು ಯುಕ್ತ' ಎಂದರೆ, ಇದಕ್ಕೆ ಸಮಾಧಾನ ಹೇಳುವುದು ಮಾತ್ರ ಇಲ್ಲಿ ಉಳಿದಿದೆ. ಅದನ್ನು ಮುಂದೆ ಐಕ್ಯಭಂಗ ಪ್ರಕರಣದಲ್ಲಿ ಹೇಳುತ್ತೇವೆ.



## ಪ್ರತ್ಯಕ್ಷಸ್ಯ ಅನುಮಾನ ಬಾಧ್ಯತ್ವೇ ಬಾಧಕಂ

**यदितु प्रत्यक्षं लिङ्गबाध्यं तर्हि**

**''औदुम्बरीं स्पृष्ट्वोद्गायेत्'' ''ऐन्द्र्या गार्हपत्यमुपतिष्ठते'' ''शरमयं बर्हिर्भवति'' इति श्रुतित्रयग्राहिप्रत्यक्षं च यथाक्रमम् 'औदुम्बरी सर्वा वेष्टयितव्या' इति स्मृतिरूपेण सर्ववेष्टनश्रुत्यनुमानेन ''नेंद्र सश्चसि दाशुषे'' इति मन्त्रसामर्थ्यरूपेण इन्द्रशेषत्वश्रुत्यनुमानेन चोदनालिङ्गसारूप्येण कुशश्रुत्यनुमानेन च बाध्येतेति सर्वैव मीमांसोन्मूलिता स्यात् ।**



पूर्वं प्रत्यक्षस्य प्रबलत्वेन लिङ्गाबाध्यत्वमुक्तम् । इदानीन्तु तस्य तद्बाध्यत्वांगीकारे अतिप्रसङ्गमाह **यदि त्विति । श्रुतित्रयग्राहिप्रत्यक्षमिति ।** यद्यप्युच्चारणज्ञानगर्भानुपूर्वीविशेषविशिष्टायाः श्रुतेः श्रवणेन्द्रियायोग्यत्वं, तथाप्यानु-पूर्व्यंशे उपनयमादाय तथोक्तमिति ध्येयम् ।

**सर्ववेष्टनश्रुत्यनुमानेनेति ।** एतच्च प्रमाणलक्षणे स्मृतिपादे चिन्तितम्—

विरोधे त्वनपेक्षं स्यादसति ह्यनुमानमिति ।।

ज्योतिष्टोमे सदोनामकस्य मण्टपस्य मध्ये काचिदौदुम्बरी शाखा निखन्यते । तत्रौदुम्बरीं स्पृष्ट्वोद्गायेदिति प्रत्यक्षश्रुत्या उदुम्बरमयीं यज्ञसदःस्थूणारूपां शाखां स्पृष्ट्वोद्गात्रोद्गानं कर्तव्यमिति विहितम् । स्मृतिकारास्तु तत्स्पर्शविरुद्धं तस्याः कात्स्न्र्येन वाससा वेष्टनं स्मरन्ति औदुम्बरी सर्वा वेष्टयितव्येति । सा स्मृतिः प्रमाणमप्रमाणं वेति सन्देहे स्मृत्यधिकरणे स्मृतीनां मूलश्रुत्यनुमापकतया अष्टकादिस्मृतीनामिव प्रामाण्यसमर्थनादियं स्मृतिर्मूल-श्रुतिमनुमापयन्ती प्रमाणमिति पूर्वपक्षे स्पर्शनवेष्टनयोर्विरुद्धतया तत्कर्तव्यताबोधकयोरप्यौष्ण्यशैत्यवद्विरुद्धत्वात् वन्ह्यौष्ण्यप्रत्यक्षेण शैत्यानुमानस्येव स्पर्शनश्रुतिप्रत्यक्षेण सर्ववेष्टनस्मृत्या

स्वसमानार्थकस्वमूलभूतश्रुत्यनुमानस्य बाधान्मूलश्रुत्यभावेन सा स्मृतिरप्रमाणमिति सिद्धान्त इति ।।

श्रुतिलिङ्गोदाहरणन्तु प्रागेव प्रतिपादितम् ।

**चोदनालिङ्गसारूप्येणेति ।।** एतच्च दशमे चतुर्थपादे विचारितम् ।। चोदनालिङ्गसंयोगे तद्विकारः प्रतीयेत प्रकृतिसन्निधानात्'' (अ.१० पाः४ सू.२)

''सोमारौद्रं चरुं निर्वपेत्कृष्णानां व्रीहीणामभिचरन्'' इति श्रूयते । अत्र शरमयं बर्हिर्भवतीति श्रुतम् । तत्र किं दार्शपौर्णमासिकाः कुशा निवर्तन्ते न निवर्तन्ते वेति संशये शराणां कुशानां चोपदेशातिदेशरूप प्रमाणद्वयाधिगतत्वात् समुच्चय इति न कुशा निवर्तन्ते । कुतः । मयटा शरप्राचुर्यस्य विधानात् अबाधेनापि तदुपपत्तेरिति पूर्वपक्षयित्वा ''नित्यं वृद्धशरादिभ्यः (पाणिनि सू. ४-३-१४३) इति सूत्रेण शरशब्दात् विकारार्थे मयट् प्रत्ययः प्रतिपदोक्तः । तत्र प्रतिपदोक्तस्यैव ग्रहणं न्याय्यं 'लक्षणप्रतिपदोक्तयोः प्रतिपदोक्तस्यैव ग्रहणमि'ति न्यायात् । अतस्तत्परित्यज्य प्राचुर्यार्थो न ग्रहीतुं शक्यः । प्राचुर्यार्थे प्रकरणान्तरं कल्पनीयं स्यात् । बर्हिःशब्दलक्षिते बर्हिःकार्ये शराणां विधायकस्य वचनस्य प्रत्यक्षत्वात् तैरेव कृतस्वकार्याणां कुशानां प्रापकस्य कुशसाधारणस्यातिदेशवाक्यस्य कल्पनं न प्रवर्तते । किन्तु कुशव्यतिरिक्ताङ्गप्रापकस्यैव तस्यानुमानमिति प्रापकाभावात् कुशा निवर्तन्त इति सिद्धान्तितम् ।।

**इति सर्वेति ।।** एवंविधा या मीमांसा, सा सर्वैवेत्यर्थः ।।



ಯದಿತು ಪ್ರತ್ಯಕ್ಷಂ ಲಿಂಗಬಾಧ್ಯಂ ತರ್ಹಿ

''ಔದುಂಬರೀಂ ಸ್ಪೃಷ್ಟ್ವೋದ್ಗಾಯೇತ್'' ''ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ'' ''ಶರಮಯಂ ಬರ್ಹಿರ್ಭವತಿ'' ಇತಿ ಶ್ರುತಿತ್ರಯಗ್ರಾಹಿಪ್ರತ್ಯಕ್ಷಂ ಚ ಯಥಾ ಕ್ರಮಮ್ ''ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಇತಿ ಸ್ಮೃತಿರೂಪೇಣ ಸರ್ವವೇಷ್ಟನ ಶ್ರುತ್ಯನುಮಾನೇನ ''ನೇಂದ್ರ ಸಶ್ಚಸಿ ದಾಶುಷೇ'' ಇತಿ ಮಂತ್ರಸಾಮರ್ಥ್ಯರೂಪೇಣ

**ಇಂದ್ರಶೇಷತ್ವ ಶ್ರುತ್ಯನುಮಾನೇನ ಚೋದನಾಲಿಂಗ ಸಾರೂಪ್ಯೇಣ ಕುಶಶ್ರುತ್ಯನುಮಾನೇನ ಚ ಬಾಧ್ಯೇತೇತಿ ಸರ್ವೈವ ಮೀಮಾಂಸಾ ಉನ್ಮೂಲಿತಾ ಸ್ಯಾತ್ ।**

ಪ್ರತ್ಯಕ್ಷವು ಪ್ರಬಲವಾದ್ದರಿಂದ ಅನುಮಾನದಿಂದ ಅದು ಬಾಧ್ಯವಾಗಲಾರದೆಂದು ಹಿಂದೆ ಹೇಳಿದ್ದೇವೆ. ಈಗ ಪ್ರತ್ಯಕ್ಷವನ್ನು ಲಿಂಗವು ಬಾಧಿಸುವುದೆಂದರೆ ಅತಿಪ್ರಸಕ್ತಿ ಇದೆ ಎನ್ನುತ್ತೇವೆ.

ಪ್ರತ್ಯಕ್ಷವು ಅನುಮಾನದಿಂದ ಬಾಧಿತವಾಗಬಹುದು ಎಂದರೆ ಅನುಮಿತ ಶ್ರುತಿಯು ಪ್ರತ್ಯಕ್ಷ ಶ್ರುತಿಗೆ ಬಾಧಕವಾದೀತು. 'ಅತ್ತಿಗಿಡದ ಕಂಬವನ್ನು ಹಿಡಿದುಕೊಂಡು ಸಾಮಗಾನ ಮಾಡಬೇಕು' ಎನ್ನುವ ಸ್ಮೃತಿ ಇದೆ. ಸ್ಮೃತಿಯಿಂದ ಅದೇ ಅರ್ಥದ ಶ್ರುತಿಯು ಅನುಮಿತವಾಗುತ್ತದೆ. ಈ ಅನುಮಿತ ಶ್ರುತಿಯು ಪ್ರತ್ಯಕ್ಷ ಶ್ರುತಿಯನ್ನು ಬಾಧಿಸುತ್ತದೆ ಎನ್ನುವ ಪ್ರಸಂಗ ಬರುತ್ತದೆ. ವಸ್ತುತಃ ಕಂಬವನ್ನು ಸ್ಪರ್ಶಿಸಿ ಹಿಡಿದುಕೊಳ್ಳುವುದು ಮತ್ತು ಅದನ್ನು ಪೂರ್ತಿಯಾಗಿ ಬಟ್ಟೆಯಿಂದ ಮುಚ್ಚಿರುವುದು ಎರಡೂ ಪರಸ್ಪರ ಶೀತ ಉಷ್ಣಗಳಂತೆ ವಿರುದ್ಧವಾದ್ದರಿಂದ ಬಟ್ಟೆಯಿಂದ ಮುಚ್ಚಬೇಕೆನ್ನುವ ಶ್ರುತಿಯ ಅನುಮಾನವೇ ಅಶಕ್ಯ.

'ವಿರೋಧೇ ತ್ವನಪೇಕ್ಷಂ ಸ್ಯಾತ್ ಅಸತಿ ಹ್ಯನುಮಾನಂ (ಜೈ.ಸೂ.1.3.3)

'ಶ್ರುತಿ ಸ್ಮೃತಿಗಳಿಗೆ ವಿರೋಧ ಬಂದಾಗ ಸ್ಮೃತಿಯು ಮೂಲ ಶ್ರುತ್ಯನುಮಾನವನ್ನು ಮಾಡದಿರುವುದರಿಂದ ಸ್ಮೃತಿಯು ಅಪ್ರಮಾಣವೆನಿಸುತ್ತದೆ. ವಿರೋಧವಿಲ್ಲದಿದ್ದರೆ ಮೂಲಶ್ರುತಿಯನ್ನು ಅನುಮಾನ ಮಾಡುವುದರಿಂದ ಪ್ರಮಾಣವಾಗುವುದು' ಎಂದು ಸೂತ್ರಾರ್ಥ.

ಜ್ಯೋತಿಷ್ಟೋಮ ಪ್ರಕರಣದಲ್ಲಿ ಸದಸ್ಸಂಬ ಮಂಟಪದ ಮಧ್ಯದಲ್ಲಿ ಅತ್ತಿಗಿಡದ ಕೊಂಬೆಯನ್ನು ನೆಡುತ್ತಾರೆ. ಈ ಅತ್ತಿ ಗಿಡದ ಕಂಬವನ್ನು ಸ್ಪರ್ಶಿಸಿ ಹಿಡಿದು ಸಾಮಗಾನ ಮಾಡಬೇಕೆಂದು ವಿಧಿಸುವ ಪ್ರತ್ಯಕ್ಷಶ್ರುತಿ ಇದೆ. ಈ ಸ್ಪರ್ಶನ ಕ್ರಿಯೆಗೆ ವಿರುದ್ಧವಾಗಿ ಸ್ಮೃತಿಯಲ್ಲಿ ಕಂಬವನ್ನು ಬಟ್ಟೆಯಿಂದ ಪೂರ್ತಿಮುಚ್ಚಬೇಕೆಂದು ಹೇಳಿದೆ. ಈ ಸ್ಮೃತಿಯು ಪ್ರಮಾಣವೋ ಅಪ್ರಮಾಣವೋ ಎಂದು ವಿಚಾರ.

ಸ್ಮೃತ್ಯಧಿಕರಣದಲ್ಲಿ ಸ್ಮೃತಿಯು ಮೂಲಶ್ರುತ್ಯನುಮಾನಮಾಡುವ ಮೂಲಕ ಪ್ರಮಾಣವಾಗುವುದೆಂದು ಸಮರ್ಥಿಸಿರುವುದರಿಂದ ಪ್ರಕೃತ ಸ್ಮೃತಿಯೂ ಮೂಲ ಶ್ರುತ್ಯನುಮಾನದಿಂದ ಅಷ್ಟಕಾ ಸ್ಮೃತಿಯಂತೆ ಪ್ರಮಾಣವೇ ಆಗುತ್ತದೆ ಎಂದು ಪೂರ್ವಪಕ್ಷ. ಕಂಬವನ್ನು ಹಿಡಿದುಕೊಳ್ಳುವುದು ಬಟ್ಟೆಯಿಂದ ಮುಚ್ಚುವುದು ಶೀತ ಉಷ್ಣಗಳಂತೆ ವಿರುದ್ಧವಾದ್ದರಿಂದ ಉಷ್ಣಪ್ರತ್ಯಕ್ಷದಿಂದ ಶೀತಾನುಮಾನವು ಬಾಧಿತವಾಗುವಂತೆ ಪ್ರತ್ಯಕ್ಷ ಶ್ರುತಿಯಿಂದ ಸ್ಮೃತಿ ಸಮಾನಾರ್ಥಕ ಶ್ರುತ್ಯನುಮಾನವು ಬಾಧಿತವಾಗುತ್ತದೆ. ಹೀಗಾಗಿ ಸ್ಮೃತಿಯು ನಿರ್ಮೂಲವೆನಿಸಿ ಅಪ್ರಮಾಣವೇ ಆಗುತ್ತದೆ ಎಂದು ಸಿದ್ಧಾಂತ.

ಪ್ರತ್ಯಕ್ಷವು ಅನುಮಾನದಿಂದ ಬಾಧ್ಯವಾಗುವುದೆಂದು ಒಪ್ಪಿದರೆ 'ಇಂದ್ರಮಂತ್ರದಿಂದ

ಗಾರ್ಹಪತ್ಯಾಗ್ನಿಯನ್ನು ಸ್ತುತಿಸಬೇಕು' ಎನ್ನುವ ಪ್ರತ್ಯಕ್ಷ ಶ್ರುತಿಯನ್ನು 'ಇಂದ್ರಮಂತ್ರದಿಂದ ಇಂದ್ರನನ್ನು ಸ್ತುತಿಸಬೇಕು' ಎನ್ನುವ ಅನುಮಿತ ಶ್ರುತಿಯು ಬಾಧಿಸುತ್ತದೆ ಎಂದಾದೀತು.

'ಶ್ರುತಿ-ಲಿಂಗ-ವಾಕ್ಯ-ಪ್ರಕರಣ-ಸ್ಥಾನ-ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥವಿಪ್ರಕರ್ಷಾತ್' (ಜೈ.ಸೂ.3.3.14)

'ಶ್ರುತಿ ಲಿಂಗ ವಾಕ್ಯ ಪ್ರಕರಣ ಸ್ಥಾನ ಮತ್ತು ಸಮಾಖ್ಯಾ ಎಂಬ ಆರು ವಿನಿಯೋಗ ಪ್ರಮಾಣಗಳು ಪರಸ್ಪರ ವಿರುದ್ಧ ಪ್ರವೃತ್ತಿ ಮಾಡುತ್ತ ಒಂದೆಡೆ ಸೇರಿದಾಗ ಪೂರ್ವಪ್ರಮಾಣಕ್ಕಿಂತ ಪರಪ್ರಮಾಣವು, 'ಅರ್ಥವಿಪ್ರಕರ್ಷ' ಹೆಚ್ಚು ವಿಲಂಬಪ್ರವೃತ್ತಿ ಉಳ್ಳದ್ದಾದ್ದರಿಂದ ದುರ್ಬಲವೆನಿಸುವುದು' ಎಂದು ಸೂತ್ರಾರ್ಥ.

ಶ್ರುತಿ ಮತ್ತು ಲಿಂಗಗಳಿಗೆ ವಿರೋಧ ಬಂದಾಗ ಲಿಂಗಕ್ಕೆ ಶ್ರುತಿಗಿಂತ ವಿಲಂಬ ಪ್ರವೃತ್ತಿ ಇರುವುದರಿಂದ ಲಿಂಗವು ದುರ್ಬಲವೆನ್ನಲು ಉದಾಹರಣೆ— ಅಗ್ನಿಚಯನ ಪ್ರಕರಣದಲ್ಲಿ 'ಐಂದ್ರ್ಯಾ ಗಾರ್ಹಪತ್ಯಂ ಉಪತಿಷ್ಠತೇ' ಅಂದರೆ, 'ಕದಾಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ' 'ಹೇ ಇಂದ್ರನೆ ನೀನು ಎಂದೂ ನಮಗೆ ಹಾನಿ ಉಂಟುಮಾಡುವವನಲ್ಲ. ಹವಿಸ್ಸನ್ನು ಅರ್ಪಿಸುವ ಯಜಮಾನನನ್ನು ಅನುಗ್ರಹಿಸುವಿ' ಎಂದು ಇಂದ್ರಮಂತ್ರದಿಂದ ಗಾರ್ಹಪತ್ಯಾಗ್ನಿಯನ್ನು ಸ್ತುತಿಸಬೇಕೆಂದು ವಿಧಿ ಇದೆ. ಇಂದ್ರನನ್ನು ಹೊಗಳುತ್ತಿರುವುದರಿಂದ ಈ ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ಹೇಳಬೇಕೆ ಅಥವಾ ಶ್ರುತಿಯು ಈ ಮಂತ್ರದಿಂದ ಗಾರ್ಹಪತ್ಯನನ್ನು ಸ್ತುತಿಸಬೇಕೆಂದು ಹೇಳುವುದರಿಂದ ಗಾರ್ಹಪತ್ಯೋಪಸ್ಥಾನದಲ್ಲಿ ಹೇಳಬೇಕೆ ಎಂದು ಸಂದೇಹ.

ಶ್ರುತಿಯು 'ಐಂದ್ರ್ಯಾ' ಎಂದು ತೃತೀಯಾವಿಭಕ್ತಿಯಿಂದ ಈ ಮಂತ್ರವನ್ನು ಗಾರ್ಹಪತ್ಯೋಪಸ್ಥಾನಾಂಗವಾಗಿ ವಿಧಾನಮಾಡುತ್ತಿರುವಂತೆ ಕಂಡರೂ ಇಂದ್ರನನ್ನು ಸ್ತುತಿಸುವ ಈ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ ಅಶಕ್ಯ. ಶಕ್ಯವಾದ ಕಾರ್ಯದಲ್ಲಿ ವಿಧಿಯು ಪ್ರವೃತ್ತಿ ಮಾಡಬೇಕು. ಮಂತ್ರಕ್ಕೆ ಶಕ್ತಿ ಇರುವುದು, ಇಂದ್ರೋಪಸ್ಥಾನದಲ್ಲಿ, ಇದು ಮಂತ್ರದ ಲಿಂಗ. ಆದರಿಂದ ಶ್ರುತಿಯು 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿಯಿಂದ ಮಂತ್ರಕ್ಕೆ ಗಾರ್ಹಪತ್ಯೋಪಸ್ಥಾನಾಂಗತ್ವವನ್ನು ವಿಧಿಸುತ್ತಿದ್ದರೂ, 'ಗಾರ್ಹಪತ್ಯ' ಶಬ್ದಕ್ಕೆ ಸದೃಶಲಕ್ಷಣಯಾ ಇಂದ್ರನೆಂದೇ ಅರ್ಥಮಾಡಬೇಕು. ಗಾರ್ಹಪತ್ಯನು ಅಗ್ನಿ, ಇಂದ್ರನು ದೇವತೆ. ಇಬ್ಬರೂ ಯಾಗಕ್ಕೆ ಆವಶ್ಯಕರಾದ್ದರಿಂದ ಸದೃಶರು, ಎಂದು ಪೂರ್ವಪಕ್ಷ.

**ಸಿದ್ಧಾಂತ ಹೀಗೆ—** ಸರ್ವಥಾ ಅಶಕ್ಯವಾದ ಕಾರ್ಯದಲ್ಲಿ ಮಾತ್ರ ವೇದವು ವಿಧಿಯಲ್ಲಿ ಪ್ರವೃತ್ತಿ ಮಾಡಲಾರದು. ಪ್ರಕೃತ ಇಂದ್ರಮಂತ್ರವು ಗಾರ್ಹಪತ್ಯನನ್ನು ಸ್ತುತಿಸುವುದು ಸರ್ವಥಾ ಅಶಕ್ಯವೇನಲ್ಲ. ಅದು ಗೌಣವೃತ್ತಿಯಿಂದ ಗಾರ್ಹಪತ್ಯನನ್ನು ಹೇಳಬಲ್ಲುದು. ಇಂದ್ರ ಮಂತ್ರದಿಂದ ಗಾರ್ಹಪತ್ಯೋಪಸ್ಥಾನ'ವನ್ನು ಕೂಡಿಸಲು ಮಂತ್ರದ 'ಇಂದ್ರ' ಶಬ್ದಕ್ಕಾಗಲಿ ವಿಧಿ ವಾಕ್ಯದ

'ಗಾರ್ಹಪತ್ಯ' ಶಬ್ದಕ್ಕಾಗಲಿ ಯಾವುದಾದರೊಂದಕ್ಕೆ ಗೌಣಾರ್ಥ ಕಲ್ಪಿಸುವುದು ಆವಶ್ಯಕವೆಂದಮೇಲೆ ಮಂತ್ರದ ಇಂದ್ರಶಬ್ದಕ್ಕೇ ಗೌಣಾರ್ಥವನ್ನು ಹೇಳುವುದು ಉಚಿತ. ಏಕೆಂದರೆ ವಿಧಿವಾಕ್ಯದಂತೆ ಮಂತ್ರವು ಅಪೂರ್ವವಾದುದನ್ನೇನೂ ಹೇಳಲಾರದು. ಸಿದ್ಧವಿಷಯವನ್ನೇ ಅದು ಹೇಳುತ್ತದೆ. ವಿಧಿ ವಾಕ್ಯ ಅಪೂರ್ವಕರ್ಮವನ್ನು ಹೇಳುತ್ತದೆ. ಅದರಿಂದ ವಿಧಿಯಲ್ಲಿ ಲಕ್ಷಣಾ ಇಲ್ಲ, ಗೌಣಾರ್ಥಕಲ್ಪನೆ ಉಚಿತವಲ್ಲ. ಹೀಗಾಗಿ ವಿಧಿಗನುಸಾರವಾಗಿ ಮಂತ್ರಕ್ಕೇ ಗಾರ್ಹಪತ್ಯ ಬೋಧಕತ್ವವನ್ನು ಒಪ್ಪಬೇಕು.

ಯದ್ಯಪಿ ವಿಧಿವಾಕ್ಯದಲ್ಲಿ 'ಐಂದ್ರ್ಯಾ' ಎಂಬ ತೃತೀಯಾವಿಭಕ್ತಿ ರೂಪವಾದ ವಿನಿಯೋಕ್ತ್ರೀ ಶ್ರುತಿಯು ಮಂತ್ರವನ್ನು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡುತ್ತಿರುವಾಗಲೇ ಮಂತ್ರದಲ್ಲಿರುವ ಇಂದ್ರಶಬ್ದವು ಮುಖ್ಯವೃತ್ತಿಯಿಂದ ಇಂದ್ರನನ್ನು ಹೇಳುತ್ತಿರುವುದರಿಂದ ಇಂದ್ರಬೋಧನಶಕ್ತಿರೂಪವಾದ ಲಿಂಗವು ಮಂತ್ರವನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡಬಲ್ಲುದು. ಆದರೂ ಗಾರ್ಹಪತ್ಯೋಪಸ್ಥಾನಾಂಗತ್ವವನ್ನು ಹೇಳುವ ಶ್ರುತಿ ಪ್ರತ್ಯಕ್ಷವಿದೆ. ಅದು ಶೀಘ್ರವಾಗಿ ಮಂತ್ರವನ್ನು ವಿನಿಯೋಗ ಮಾಡಿಬಿಡುತ್ತದೆ. ಲಿಂಗವು ಶ್ರುತಿಯನ್ನು ಕಲ್ಪಿಸಿ ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವುದರೊಳಗೆ ಶ್ರುತಿಯು ಗಾರ್ಹಪತ್ಯೋಪಸ್ಥಾನದಲ್ಲಿ ವಿನಿಯೋಗ ಮಾಡಿರುವುದರಿಂದ ಮಂತ್ರವು ಅಷ್ಟರಿಂದಲೆ ಸಾರ್ಥಕವೆನಿಸಿರುತ್ತದೆ. ಅದರಿಂದ ಅದನ್ನು ಇಂದ್ರೋಪಸ್ಥಾನದಲ್ಲಿ ವಿನಿಯೋಗ ಮಾಡುವ ಆವಶ್ಯಕತೆ ಉಳಿಯುವುದಿಲ್ಲ. ಹೀಗಾಗಿ ಇಲ್ಲಿ ಲಿಂಗವು ಶ್ರುತಿಯನ್ನು ಕಲ್ಪಿಸುವುದೇ ಇಲ್ಲ, ಎಂದು.

ಪ್ರತ್ಯಕ್ಷವು ಅನುಮಾನದಿಂದ ಬಾಧಿತವಾಗಬಹುದು ಎಂದರೆ 'ಶರಮಯ ಬರ್ಹಿಯನ್ನು ವೇದಿಯಲ್ಲಿ ಹಾಸಬೇಕು' ಎನ್ನುವ ಪ್ರತ್ಯಕ್ಷ ಶ್ರುತಿಯನ್ನು ಚೋದನಾಲಿಂಗ ಸಾರೂಪ್ಯದಿಂದ ಕುಶಶ್ರುತ್ಯನುಮಾನವು ಬಾಧಿಸೀತು.

ಚೋದನಾಲಿಂಗಸಂಯೋಗೇ ತದ್ವಿಕಾರಃ ಪ್ರತೀಯೇತ ಪ್ರಕೃತಿ ಸನ್ನಿಧಾನಾತ್ ॥ (ಜೈ.ಸೂ.10.4.2)

'ಸೋಮಾರೌದ್ರಂ ಚರುಂ ನಿರ್ವಪೇತ್ ಕೃಷ್ಣಾನಾಂ ವ್ರೀಹೀಣಾಮಭಿಚರನ್' ಸೋಮಾರೌದ್ರವೆಂಬ ಅಭಿಚಾರಿಕಕೃಷ್ಣವ್ರೀಹಿ ಚರುಯಾಗದಲ್ಲಿ 'ಶರಮಯಂ ಬರ್ಹಿರ್ಭವತಿ' ಎಂದು ಶರಮಯ ದರ್ಭಮುಷ್ಟಿಯನ್ನು ವೇದಿಯಲ್ಲಿ ಹಾಸಲು ವಿಧಿ ಇದೆ. ಆದರೆ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂಬ ನಿಯಮದಂತೆ ಪ್ರಕೃತಿಯಾಗವಾದ ದರ್ಶಪೂರ್ಣ ಮಾಸೇಷ್ಟಿಯಂತೇ ವಿಕೃತಿಯಾಗವಾದ ಸೋಮಾರೌದ್ರ ಚರುಯಾಗವನ್ನು ಮಾಡಬೇಕಾಗಿರುವುದರಿಂದ ಕುಶ ಎಂಬ ದರ್ಭೆಯಿಂದ 'ಬರ್ಹಿ'ಯನ್ನು ದರ್ಭಮುಷ್ಟಿಯನ್ನು ಸಿದ್ಧಪಡಿಸಬೇಕಾಗುತ್ತದೆ. 'ಚೋದನಾ ಸಾರೂಪ್ಯ' ಅಂದರೆ ಪ್ರಕೃತಿಯಾಗ ವಿಧಿಯ ಸಾರೂಪ್ಯವು ಲಿಂಗ. ಈ ಲಿಂಗವು ಪ್ರಕೃತಿಯಂತೆ ವಿಕೃತಿಯಲ್ಲಿಯೂ ಕುಶ ದರ್ಭೆಯನ್ನು ವೇದಿಯಲ್ಲಿ ಹಾಸಬೇಕೆಂದು ಅತಿದೇಶವಾಕ್ಯವನ್ನು ಅನುಮಾನ ಮಾಡಿಕೊಡುತ್ತದೆ.

ಈ ಶರಮಯತ್ವ ವಿಧಿಗೂ ಕುಶಮಯತ್ವಾತಿದೇಶಕ್ಕೂ ವಿರೋಧವಿಲ್ಲ. ಏಕೆಂದರೆ 'ಶರಮಯ' ಎಂಬಲ್ಲಿ 'ಮಯಟ್' ಪ್ರಾಚುರ್ಯಾರ್ಥಕ, ಹೆಚ್ಚು ಶರ, ಕಡಿಮೆ ದರ್ಭೆಗಳಿಗೆ ವಿರೋಧವಿಲ್ಲ. ಅದರಿಂದ ಶರಮಯ ದರ್ಭೆಯನ್ನು ಹಾಸಬೇಕೆನ್ನುವ ಪ್ರತ್ಯಕ್ಷಶ್ರುತಿಯೂ ಕುಶ ದರ್ಭೆಯನ್ನು ಹಾಸಬೇಕೆನ್ನುವ ಅನುಮಿತ ಶ್ರುತಿಯೂ ಸೇರಿ ಶರಕುಶಗಳೆರಡನ್ನೂ ಹಾಸಬೇಕೆಂದು ಸಮುಚ್ಚಯ ವನ್ನು ತಿಳಿಸುತ್ತವೆ ಎಂದು ಪೂರ್ವಪಕ್ಷ.

ಶರವಿಧಾಯಕ ಶ್ರುತಿಯು ಪ್ರತ್ಯಕ್ಷವಿದೆ. ಅದರಿಂದ ವಿಲಂಬವಿಲ್ಲದೆ ಶರಮಯತ್ವವನ್ನು ಅದು ವಿಧಾನ ಮಾಡುತ್ತದೆ. 'ನಿತ್ಯಂ ವೃದ್ಧಶರಾದಿಭ್ಯಃ' 'ವೃದ್ಧಸಂಜ್ಞಕ ಶಬ್ದಗಳಿಗೂ ಶರಾದಿಗಣಪಠಿತವಾದ ಶಬ್ದಗಳಿಗೂ ವಿಕಾರ ಮತ್ತು ಅವಯವಾರ್ಥದಲ್ಲಿ ನಿತ್ಯವಾಗಿ ಮಯಟ್ ಪ್ರತ್ಯಯ ಬರುತ್ತದೆ' ಎಂಬ ಪಾಣಿನಿ ಸೂತ್ರದಂತೆ 'ಶರ' ಶಬ್ದಕ್ಕೆ ಪ್ರತಿಪದೋಕ್ತವಾಗಿ ಪ್ರತ್ಯೇಕವಾಗಿ ವಿಕಾರಾರ್ಥಕ ಮಯಟ್ ಬರಬೇಕು. ಪ್ರತಿಪದೋಕ್ತವಾದ್ದರಿಂದ ಅದನ್ನೇ ಗ್ರಹಣ ಮಾಡಬೇಕು. ಏಕೆಂದರೆ 'ತತ್‌ಪ್ರಕೃತವಚನೇ ಮಯಟ್' 'ಪ್ರಾಚುರ್ಯದಿಂದ ಪ್ರಸ್ತುತವು ಇದು' ಎಂದು ಹೇಳುವಾಗ ಮಯಟ್ ಪ್ರತ್ಯಯ ಬರುತ್ತದೆ' ಎಂದು ವಿಹಿತವಾದ್ದು ಲಕ್ಷಣೋಕ್ತ, ಸೂತ್ರೋಕ್ತಕಾರ್ಯ. ಲಕ್ಷಣೋಕ್ತ ಕಾರ್ಯವೂ ಪ್ರತಿಪದೋಕ್ತ ಕಾರ್ಯವೂ ಬರುವ ಪ್ರಸಂಗದಲ್ಲಿ ಪ್ರತಿಪದೋಕ್ತ ಕಾರ್ಯವೇ ಗ್ರಾಹ್ಯ. ಬಳಿಕ ಕುಶವಿಧಾಯಕವಾದ ಅತಿದೇಶ ವಾಕ್ಯವು ಕುಶವಿಧಾಯಕ ಶ್ರುತಿಯನ್ನು ಅನುಮಾನದಿಂದ ಕಲ್ಪಿಸುವುದು ಅನಾವಶ್ಯಕವಾಗುತ್ತದೆ. ಅದರಿಂದ 'ಪ್ರಕೃತಿಯಂತೇ ವಿಕೃತಿಯ ಅನುಷ್ಠಾನ' ಎನ್ನುವ ಚೋದಕ, ಅತಿದೇಶವಾಕ್ಯವು 'ಕುಶವೂ ಸೇರಿದಂತೆ ಎಲ್ಲ ಅನುಷ್ಠಾನವನ್ನು ಪ್ರಕೃತಿಯಂತೇ ಮಾಡಬೇಕೆಂದು ಹೇಳದು. 'ಕುಶವನ್ನು ಬಿಟ್ಟು ಬೇರೆ ಕಾರ್ಯವನ್ನು ಮಾತ್ರ ಪ್ರಕೃತಿಯಂತೆ ನಡೆಸಬೇಕೆ'ನ್ನುವ ಶ್ರುತಿಯನ್ನೇ ಚೋದನಾಸಾರೂಪ್ಯಲಿಂಗವು ಅನುಮಾನ ಮಾಡಿಕೊಡುತ್ತದೆ. ಏಕೆಂದರೆ ಪ್ರತ್ಯಕ್ಷವಾದ ಶರವಿಧಾಯಕ ಶ್ರುತಿಯು ಪ್ರಬಲ. ಪ್ರಬಲವಾದ ಉಷ್ಣಪ್ರತ್ಯಕ್ಷವು ದುರ್ಬಲವಾದ ಶೈತ್ಯಾನುಮಾನವನ್ನು ಬಾಧಿಸುವಂತೆ, ಪ್ರಬಲವಾದ ಪ್ರತ್ಯಕ್ಷ ಶರಶ್ರುತಿಯು ಕಲ್ಪಿತವಾಗುವ ಕುಶಶ್ರುತಿಯನ್ನು ಬಾಧಿಸುವುದರಿಂದ ಕುಶಶ್ರುತ್ಯನುಮಾನವು ಪ್ರವೃತ್ತಿ ಮಾಡುವುದಿಲ್ಲ.

'ಚೋದನಾಲಿಂಗಸಾರೂಪ್ಯೇಣ' ಎಂಬಲ್ಲಿ 'ಚೋದನಾಸಂಬಂಧಿಯಾದ ಲಿಂಗರೂಪ ಸಾರೂಪ್ಯ', ಅಂದರೆ 'ಸಾರೂಪ್ಯವೆಂಬ ಲಿಂಗ' ಎಂದು ಅರ್ಥವಿಟ್ಟುಕೊಳ್ಳಬೇಕು.

ಶ್ರುತಿತ್ರಯಗ್ರಾಹಿ ಪ್ರತ್ಯಕ್ಷವನ್ನು ಸ್ಮೃತಿ ರೂಪವಾದ ಸರ್ವವೇಷ್ಟನ ಶ್ರುತ್ಯನುಮಾನ, ಇಂದ್ರಪ್ರಕಾಶನ ಸಾಮರ್ಥ್ಯರೂಪ ಲಿಂಗಜನ್ಯವಾದ ಇಂದ್ರ ಶೇಷತ್ವ ಶ್ರುತ್ಯನುಮಾನ ಮತ್ತು ಚೋದನಾಲಿಂಗಸಾರೂಪ್ಯ ಜನ್ಯವಾದ ಕುಶ ಶ್ರುತ್ಯನುಮಾನ– ಈ ಮೂರು ಅನುಮಾನಗಳೇ ಬಾಧಿ ಸುತ್ತವೆ ಎಂದು ಒಪ್ಪಿದರೆ ಎಲ್ಲ ಮೀಮಾಂಸಾ ವಿಚಾರವೂ ಬುಡಮೇಲಾದೀತು.

ಇಲ್ಲಿ ಸಿದ್ಧಿಕಾರನು ಹೇಳುತ್ತಾನೆ— 'ಪ್ರತ್ಯಕ್ಷ-ಅನುಮಾನಗಳಿಗ ವಿರೋಧವೆಂಬುದೇ ಇಲ್ಲ. ವಿರೋಧವು ಪ್ರತ್ಯಕ್ಷಶ್ರುತಿಗೂ ಅನುಮಿತಶ್ರುತಿಗೂ ಇರಬಹುದು. ಪ್ರತ್ಯಕ್ಷಾನುಮಾನಗಳಿಗೆ ವಿರೋಧವಿದೆ ಎಂದುಕೊಂಡು 'ಪ್ರತ್ಯಕ್ಷವನ್ನು ಅನುಮಾನ ಬಾಧಿಸಲಾರದೆಂ'ದು ವಾದಮಾಡುವವನು ಬರಿ ಮೂಢತಮನು' ಎಂದು.

ವಸ್ತುತಃ ಲಿಂಗವನ್ನು ಶ್ರುತಿಯು ಬಾಧಿಸುತ್ತದೆ, ಭೇದಶ್ರುತಿಯನ್ನು ಅಭೇದಶ್ರುತಿಯು ಬಾಧಿಸುತ್ತದೆ ಎಂದು ಸಿದ್ಧಿಕಾರ ತಾನೆ ಒಪ್ಪುತ್ತಾನೆ! ಇದು ಸ್ವವ್ಯಾಹತ.

ಪ್ರತ್ಯಕ್ಷಸಿದ್ಧವಾದ ಮೂರು ಶ್ರುತಿಗಳನ್ನು ಅನುಮಿತವಾದ ಶ್ರುತಿಗಳು ಬಾಧಿಸಬೇಕಾದೀತು ಎಂದು ನಾವು ಆಪಾದಿಸುತ್ತಿದ್ದೇವೆ. ಪ್ರತ್ಯಕ್ಷ ಶ್ರುತ್ಯರ್ಥ-ಅನುಮಿತ ಶ್ರುತ್ಯರ್ಥಗಳಿಗೇ ಸಾಕ್ಷಾದ್ ವಿರೋಧವಿರುತ್ತದೆ. ಆ ಮೂಲಕ ಶ್ರುತಿಗಳಿಗೆ ವಿರೋಧ. ತನ್ಮೂಲಕ ಪ್ರತ್ಯಕ್ಷ ಅನುಮಾನಗಳಿಗೆ ವಿರೋಧ ಎನ್ನುವುದು ಅಯುಕ್ತವಾಗುವುದಿಲ್ಲ. ಸತ್‌ಪ್ರತಿಪಕ್ಷ ಸ್ಥಳದಲ್ಲಿ ವಿರುದ್ಧ ಸಾಧ್ಯದ್ವಯ ವ್ಯಾಪ್ಯಗಳೆರಡಕ್ಕೆ ವಿರೋಧಿಸಾಮಗ್ರೀತ್ವೇನ ವಿರೋಧವು ಸರ್ವಸಮ್ಮತವಾಗಿದೆ. ಹಾಗೇ ಇಲ್ಲಿ ಶ್ರುತಿತ್ರಯಗ್ರಾಹಿ ಪ್ರತ್ಯಕ್ಷ ಮತ್ತು ಸ್ಮೃತ್ಯಾದ್ಯನುಮಾನಗಳಿಗೆ ಸ್ವಗ್ರಾಹ್ಯವಾದ ಪ್ರತ್ಯಕ್ಷ ಗ್ರಾಹ್ಯಶ್ರುತ್ಯರ್ಥ ಮತ್ತು ಅನುಮಾನಗ್ರಾಹ್ಯ ಶ್ರುತ್ಯರ್ಥಗಳಿಗೆ ವಿರೋಧವಿರುವುದರಿಂದಲೇ ತದ್‌ದ್ವಾರಾ ಪ್ರತ್ಯಕ್ಷ ಅನುಮಾನಗಳಿಗೆ ವಿರೋಧವೆಂದಿಟ್ಟುಕೊಂಡು ನಾವು ಬಲಾಬಲ ವಿಚಾರ ಮಾಡುತ್ತಿದ್ದೇವೆ. ಇದರಲ್ಲಿ ಮೂಢತನವೆಲ್ಲಿದೆ?



**अग्न्यौष्ण्यप्रत्यक्षं च तच्छैत्यानुमित्या, विवरणोक्तं आत्मस्थायित्वप्रत्यभिज्ञानं च बौद्धोक्ततत्क्षणिकत्वानुमित्या बाध्येतेति कालात्ययापदिष्टोच्छेदः स्यात् ।**

**तथाच 'शृङ्गित्वे पशुत्वं तन्त्रं नतु तद्विशेषो गोत्वादी' त्यादितर्कानुगृहीतेन पशुत्वादिना शशादेस्तात्त्विकं व्यावहारिकं वा शृङ्गम्, गन्धवद्व्यस्य भूतत्वेनापृथिवीत्वम्, पदार्थत्वादिनान्नाभिमतस्यानन्नत्वम्, सुखस्य निरुपाधिकेष्टत्वाभावः, दुःखस्य निरुपाधिकानिष्टत्वाभावः, असद्वैलक्षण्येन शुक्तिरूप्यस्यापि सत्यत्वम्, अप्रातिभासिकत्वादिना प्रपञ्चस्यादृश्यत्वम्, घटवृत्तित्वादिना दृश्यत्वस्य मिथ्यात्वाव्याप्यत्वं च स्यादिति**

**व्यावहारिक्यपि व्यवस्था न स्यात् । नह्यत्र प्रत्यक्षबाधादन्यो दोषोऽस्ति ॥**



**कालात्ययापदिष्टेति ॥** यद्यप्यनुमानयोर्मध्ये तर्कानुगृहीतेनैकेनापरस्य कालात्ययापदिष्टत्वं सावकाशं तथापि सकलतान्त्रिकोदाहृतकालात्ययापदिष्टोच्छेदः स्यादित्यत्र तात्पर्यम् ॥ **अन्नाभिमतस्येति ॥** अन्नत्वेन सकलसंप्रतिपन्नस्येर्थः ॥ **निरुपाधिकानिष्टत्वेति ॥** अन्यद्वेषानधीनद्वेषविषयत्वेत्यर्थः ॥

❖❖❖

**ಅಗ್ನ್ಯೌಷ್ಣ್ಯಪ್ರತ್ಯಕ್ಷಂ ಚ ತಚ್ಛೈತ್ಯಾನುಮಿತ್ಯಾ, ವಿವರಣೋಕ್ತಂ ಆತ್ಮಸ್ಥಾಯಿತ್ವ ಪ್ರತ್ಯಭಿಜ್ಞಾನಂ ಚ ಬೌದ್ಧೋಕ್ತತತ್ಕ್ಷಣಿಕತ್ವಾನುಮಿತ್ಯಾ ಬಾಧ್ಯೇತೇತಿ ಕಾಲಾತ್ಯಯಾಪದಿಷ್ಟೋಚ್ಛೇದಃ ಸ್ಯಾತ್ ।**

ಪ್ರತ್ಯಕ್ಷವನ್ನು ಅನುಮಾನವೇ ಬಾಧಿಸುವುದಾದರೆ 'ಅಗ್ನಿಯು ಉಷ್ಣವಾಗಿದೆ' ಎಂದು ತಿಳಿಸುವ ಪ್ರತ್ಯಕ್ಷವನ್ನು 'ಅಗ್ನಿ ಉಷ್ಣವಲ್ಲ' ಎಂಬ ಅನುಮಾನವು ಬಾಧಿಸೀತು.

ವಿವರಣದಲ್ಲಿ ಆತ್ಮನ ಸ್ಥಾಯಿತ್ವಕ್ಕೆ ಪ್ರತ್ಯಭಿಜ್ಞೆಯು ಪ್ರಮಾಣವೆಂದಿದ್ದಾರೆ. ಬೌದ್ಧರು ಅನುಮಾನದಿಂದ ಆತ್ಮನಿಗೆ ಕ್ಷಣಿಕತ್ವವನ್ನು ಸಮರ್ಥಿಸುತ್ತಾರೆ. ಈ ಅನುಮಾನವು ವಿವರಣೋಕ್ತ ಪ್ರತ್ಯಭಿಜ್ಞಾಪ್ರತ್ಯಕ್ಷವನ್ನು ಬಾಧಿಸೀತು. ಹೀಗೆ ಅನುಮಾನಕ್ಕೆ ಪ್ರತ್ಯಕ್ಷ ಬಾಧವೆಂಬುದೆ ಇಲ್ಲವೆಂದಾದೀತು.

ಯದ್ಯಪಿ ಅನುಕೂಲತರ್ಕದ ಬಲವುಳ್ಳ ಅನುಮಾನವು ಅದಿಲ್ಲದ ಅನುಮಾನಕ್ಕೆ ಬಾಧಕವಾಗಬಹುದಾದ್ದರಿಂದ ಅನುಮಾನಕ್ಕೆ ಬಾಧವೆ ಇಲ್ಲವೆಂದಾದೀತೆಂದು ಆಪಾದನೆ ಹೇಗೆ ಯುಕ್ತವಾಗುವುದು ಎಂಬ ಪ್ರಶ್ನೆ ಬರಬಹುದು. ಆದರೆ ಶಾಸ್ತ್ರದಲ್ಲಿ ಬಾಧವೆಂದು ಸರ್ವಸಮ್ಮತ ವಾದುದು ಬಾಧವಲ್ಲವೆಂದಾದೀತೆಂದು ಆಪಾದನೆ ಮಾಡುವ ಅಭಿಪ್ರಾಯವಿದೆ.

**ತಥಾಚ 'ಶೃಂಗಿತ್ವೇ ಪಶುತ್ವಂ ತಂತ್ರಂ। ನತು ತದ್ವಿಶೇಷೋ ಗೋತ್ವಾದಿ' ಇತ್ಯಾದಿತರ್ಕಾನುಗೃಹೀತೇನ ಪಶುತ್ವಾದಿನಾ ಶಶಾದೇಸ್ತಾತ್ವಿಕಂ ವ್ಯಾವಹಾರಿಕಂ ವಾ ಶೃಂಗಮ್, ಗಂಧವದ್ದ್ರವ್ಯಸ್ಯ ಭೂತತ್ವೇನ ಅಪೃಥಿವೀತ್ವಮ್, ಪದಾರ್ಥತ್ವಾದಿನಾ ಅನ್ನಾಭಿಮತಸ್ಯ ಅನನ್ನತ್ವಮ್,**

ಮೊಲಕ್ಕೆ ಕೊಂಬಿದೆ, ಪಶುವಾದ್ದರಿಂದ. ಕೊಂಬಿಗೆ ಲಾಘವದಿಂದ ಪಶುತ್ವಸಾಮಾನ್ಯವು

ಪ್ರಯೋಜಕವೇ ಹೊರತು ಗೋತ್ವಾದಿ ಪಶುತ್ವವಿಶೇಷವು ಪ್ರಯೋಜಕವಲ್ಲ. ಅದು ಅನನುಗತವಾದ್ದರಿಂದ ಗೌರವದೋಷ ಬರುತ್ತದೆ. ಎಂದು ಅನುಕೂಲ ತರ್ಕವನ್ನು ಹೇಳಲು ಬರುವುದರಿಂದ ಪಶುತ್ವ ಹೇತುವಿನಿಂದ ಮೊಲಕ್ಕೂ ಕೂಡ ತಾತ್ವಿಕವಾದ ಅಥವಾ ವ್ಯಾವಹಾರಿಕವಾದ ಕೊಂಬನ್ನು ಸಾಧಿಸಬಹುದು. ಪ್ರತ್ಯಕ್ಷ ವಿರೋಧವಿದೆ ಎಂದರೆ ಪ್ರತ್ಯಕ್ಷವು ಅನುಕೂಲತರ್ಕದ ಬಲಉಳ್ಳ ಅನುಮಾನಕ್ಕಿಂತ ದುರ್ಬಲವಾದ್ದರಿಂದ ಅದು ತಾನೇ ಅನುಮಾನದಿಂದ ಬಾಧಿತ ವಾಗುವುದು.

ಗಂಧ ಉಳ್ಳ ದ್ರವ್ಯವು ಪೃಥಿವಿಯಲ್ಲ, ಭೂತವಾದ್ದರಿಂದ ಜಲದಂತೆ ಎಂಬ ಅನುಮಾನದಿಂದ ಪೃಥಿವಿಯಲ್ಲಿ ತಾತ್ವಿಕವಾದ ಅಥವಾ ವ್ಯಾವಹಾರಿಕವಾದ ಪೃಥಿವೀ ಭೇದವು ಸಿದ್ಧವಾದೀತು.

ನಾವೆಲ್ಲರೂ ಅನ್ನವೆಂದು ತಿಳಿದಿರುವ ವಸ್ತು ಅನ್ನವಲ್ಲ, ಪದಾರ್ಥವಾದ್ದರಿಂದ ಮಣ್ಣಿನಂತೆ, ಎಂಬ ಅನುಮಾನದಿಂದ ಸರ್ವಸಂಪ್ರತಿಪನ್ನವಾದ ಅನ್ನದಲ್ಲಿಯೂ ತಾತ್ವಿಕವಾದ ಅಥವಾ ವ್ಯಾವಹಾರಿಕವಾದ ಅನ್ನಭಿನ್ನತ್ವವು ಸಿದ್ಧವಾದೀತು.

**ಸುಖಸ್ಯ ನಿರುಪಾಧಿಕೇಷ್ಟತ್ವಾಭಾವಃ, ದುಃಖಸ್ಯ ನಿರುಪಾಧಿಕಾನಿಷ್ಟತ್ವಾಭಾವಃ, ಅಸದ್ವೈಲಕ್ಷಣ್ಯೇನ ಶುಕ್ತಿರೂಪ್ಯಸ್ಯಾಪಿ ಸತ್ಯತ್ವಮ್, ಅಪ್ರಾತಿಭಾಸಿಕತ್ವಾದಿನಾ ಪ್ರಪಂಚಸ್ಯಾದೃಶ್ಯತ್ವಮ್, ಘಟವೃತ್ತಿತ್ವಾದಿನಾ ದೃಶ್ಯತ್ವಸ್ಯ ಮಿಥ್ಯಾತ್ವಾವ್ಯಾಪ್ಯತ್ವಂ ಚ ಸ್ಯಾದಿತಿ ವ್ಯಾವಹಾರಿಕ್ಯಪಿ ವ್ಯವಸ್ಥಾ ನ ಸ್ಯಾತ್ । ನಹ್ಯತ್ರ ಪ್ರತ್ಯಕ್ಷಬಾಧಾದನ್ಯೋ ದೋಷೋಽಸ್ತಿ ॥**

ಸುಖವು ನಿರುಪಾಧಿಕ ಇಷ್ಟವಲ್ಲ, ಅಂದರೆ ಇತರೇಚ್ಛಾನಧೀನೇಚ್ಛಾ ವಿಷಯವಲ್ಲ. ಪದಾರ್ಥವಾದ್ದರಿಂದ ಕಲತ್ರದಂತೆ, ದುಃಖವು ನಿರುಪಾಧಿಕ ಅನಿಷ್ಟವಲ್ಲ. ಅಂದರೆ ಇತರ ದ್ವೇಷಾನಧೀನ ದ್ವೇಷವಿಷಯವಲ್ಲ, ಕಂಟಕದಂತೆ, ಪದಾರ್ಥವಾದ್ದರಿಂದ. ಶುಕ್ತಿರಜತವು ಸತ್ಯ ಅಸದ್ವಿಲಕ್ಷಣವಾದ್ದರಿಂದ ಬ್ರಹ್ಮನಂತೆ. ಪ್ರಪಂಚವು ದೃಶ್ಯವಲ್ಲ. ಪ್ರಾತಿಭಾಸಿಕವಲ್ಲದ್ದರಿಂದ ಬ್ರಹ್ಮನಂತೆ, ದೃಶ್ಯತ್ವವು ಪ್ರಾತಿಭಾಸಿಕತ್ವರೂಪ ಮಿಥ್ಯಾತ್ವವ್ಯಾಪ್ಯವಲ್ಲ. ಘಟವೃತ್ತಿಯಾದ್ದರಿಂದ, ಘಟತ್ವದಂತೆ. ಘಟತ್ವಾದಿಗಳು ವ್ಯಾವಹಾರಿಕವಾದ್ದರಿಂದ ಪ್ರಾತಿಭಾಸಿಕತ್ವರೂಪ ಮಿಥ್ಯಾತ್ವಕ್ಕೆ ಘಟವೃತ್ತಿತ್ವವು ವ್ಯಾಪ್ಯವಲ್ಲ. ಹೀಗಾಗಿ ಘಟವೃತ್ತಿಯಾದ ದೃಶ್ಯತ್ವಕ್ಕೆ ಪ್ರಾತಿಭಾಸಿಕತ್ವ ರೂಪ ಮಿಥ್ಯಾತ್ವವ್ಯಾಪ್ಯತ್ವವಿಲ್ಲ.

ಇಲ್ಲಿ ಸಿದ್ಧಿಕಾರ ಹೇಳುತ್ತಾನೆ— 'ಮೊಲದಲ್ಲಿ ಪ್ರತ್ಯಕ್ಷಯೋಗ್ಯ ಶೃಂಗಸಾಧನೆ ಮಾಡುವಾಗ ಪ್ರತ್ಯಕ್ಷ ಬಾಧವಿದೆ. ಅದಕ್ಕೆ ಪ್ರತ್ಯಕ್ಷಾಯೋಗ್ಯ ಶೃಂಗ ಸಾಧನೆ ಮಾಡುವಾಗ ಆ ಅನುಮಾನಕ್ಕೆ ಪ್ರತ್ಯಕ್ಷ ಬಾಧವನ್ನು ಹೇಳಲಾಗುವುದಿಲ್ಲ. ತರ್ಕಾಭಾಸವನ್ನೇ ಅಲ್ಲಿ ದೋಷವೆನ್ನಬೇಕಾಗುತ್ತದೆ. ಮಿಥ್ಯಾತ್ವಾನುಮಾನಕ್ಕೆ ಸತ್ತರ್ಕವಿರುವುದರಿಂದ ಅದು ಪ್ರತ್ಯಕ್ಷಕ್ಕೆ ಬಾಧಕವೆ' ಎಂದು. ಇದು ಸರಿಯಲ್ಲ.

ಪ್ರತ್ಯಕ್ಷಾಯೋಗ್ಯ ಶೃಂಗವನ್ನು ಕೂಡ ಶೃಂಗತ್ವೇನೈವ ಸಾಧನೆ ಮಾಡಬೇಕಾಗುತ್ತದೆ. ಹೊರತು ಪ್ರತ್ಯಕ್ಷಾಯೋಗ್ಯಶೃಂಗತ್ವೇನ ಸಾಧನೆ ಮಾಡಲು ಬರುವುದಿಲ್ಲ. ಪ್ರತ್ಯಕ್ಷಾಯೋಗ್ಯಶೃಂಗತ್ವೇನ ಶೃಂಗವ್ಯಾಪ್ತಿಯು ಪದಾರ್ಥತ್ವದಲ್ಲಿ ಕಂಡಿಲ್ಲ. ಹೀಗಾಗಿ ಶೃಂಗತ್ವೇನ ಪ್ರತ್ಯಕ್ಷಾಯೋಗ್ಯ ಶೃಂಗವನ್ನು ಸಾಧನೆ ಮಾಡುವಾಗ ಪ್ರತ್ಯಕ್ಷಬಾಧ ಬಂದೇ ಬರುತ್ತದೆ. ಅದನ್ನು ದೋಷವೆನ್ನಲು ಬರುತ್ತದೆ. 'ತರ್ಕಾಭಾಸವನ್ನೇ ದೋಷವೆನ್ನಬೇಕಾಗುತ್ತದೆ' ಎನ್ನುವ ಪ್ರಸಂಗವಿಲ್ಲ.

ಹೀಗೆ ಪ್ರತ್ಯಕ್ಷಕ್ಕೆ ಅನುಮಾನ ಬಾಧಕತ್ವವನ್ನು ಒಪ್ಪದಿದ್ದರೆ, ವ್ಯಾವಹಾರಿಕವಾದ ಯಾವ ವ್ಯವಸ್ಥೆಯೂ ಕೂಡುವುದಿಲ್ಲ. ಗೋವಿಗೆ ಕೊಂಬು, ಮೊಲಕ್ಕೆ ಕೊಂಬಿಲ್ಲ ಎಂಬ ವ್ಯಾವಹಾರಿಕ ವ್ಯವಸ್ಥೆಯನ್ನು ಅನುಮಾನವು ಬುಡಮೇಲು ಮಾಡುತ್ತದೆ. ಏಕೆಂದರೆ ಪ್ರತ್ಯಕ್ಷ ಬಾಧವನ್ನು ಬಿಟ್ಟು ಬೇರೆ ದೋಷ ಇಲ್ಲಿ ಇಲ್ಲ.



## ಪ್ರತ್ಯಕ್ಷಸ್ಯ ಶಬ್ದ ಬಾಧ್ಯತ್ವೇ ಬಾಧಕಂ

यदि चाक्षं शब्दबाध्यं तर्हि जैमिनिना 'तस्माद्धूम एवाग्नेर्दिवा ददृशे नार्चिः' इत्याद्यर्थवादस्य 'अदितिर्द्यौः' इत्यादिमन्त्रस्य च दृष्टविरोधेनाप्रामाण्ये प्राप्ते तदविरोधाय ''गुणवादस्तु'' ''गुणादविप्रतिषेधः स्याद्'' इत्यादिना गौणार्थता नोच्येत। तत्सिद्धिरित्यादितत्सिद्धिपेटिकया च ''यजमानः प्रस्तरः'' इत्यादेर्गौणार्थता नोच्येत। त्वया च प्रत्यक्षाविरोधाय तत्त्वंपदयोर्लक्षणा नोच्येत। श्रुतिविरोधात्प्रत्यक्षस्यैवाप्रामाण्य-संभवात्।

एतेन- 'अद्वैतवाक्यमनन्यपरत्वान्नामुख्यार्थं। प्रस्तरवाक्यादिकं तु अन्यपरम्।' इतिवाचस्पत्युक्तं निरस्तम्। सत्यपि तात्पर्यलिङ्गे मानान्तरविरोधे प्रस्तरादिवाक्यवत् सोमेन यजेत' इत्यादिवच्चानन्यपरत्वस्यैवायोगात्। नहि कुरूपाम्, अशूरं चोद्दिश्य 'अहो दर्शनीया' इति 'सिंहः' इति च शतकृत्वः प्रयुक्तमपि वाक्यं वाच्यार्थपरं भवति। न वा तत्वमसिवाक्यं षड्विधतात्पर्यलिङ्गो-पेतमपि मानान्तरविरुद्धं वाच्यार्थपरम्।

---

इदानीं प्रत्यक्षस्य शब्दबाध्यत्वे बाधकमाह **यदिचेति**॥ **तस्माद्धूम एवाग्नेरिति**॥ एतच्च प्रमाणलक्षणे अर्थवादाधिकरणे चिन्तितम्। तस्माद्धूम एवाग्नेर्दिवा ददृशे नार्चिः। तस्मादर्चिरेवाग्नेर्नक्तं ददृशे न धूम इत्यर्थवादयोर्दिवाप्यर्चिर्दर्शनात् नक्तमपि धूमदर्शनात् दृष्टविरोधेनानर्थक्ये शङ्किते गुणवादस्त्विवति सिद्धान्तसूत्रेण (१-२-१-१०) दिवा नक्तं चार्चिर्धूम-योरदर्शनशब्दो गौण इति दृष्टविरोधः समाहितः। गौणतानिमित्तं च दूरभूयस्त्वात् (१-२-१-१२) इति सूत्रेण 'यथा दिवा धूमो दूरस्थैर्भूम्ना दृश्यते न तथार्चिः' यथाच

रात्रावर्चिर्दूरस्थैर्भूम्ना दृश्यते न तथा धूम इति न ददृश इत्यत्र दर्शनमात्रवाचिना दृशिना दूर भूम्ना विशिष्टे दर्शने लक्षिते तदभावस्तयोर्नञा बोध्यत इत्युक्तम् ।।

**अदितिर्द्यौरिति ।।** इदञ्च मन्त्राधिकरणे चिन्तितम् ।। अदितिर्द्यौरदितिरन्तरिक्षमित्यादिमन्त्रस्यैकस्या अदितेः परस्परभिन्न द्युगगनाद्यनेकात्मकत्वविरोधेन विवक्षितार्थत्वे अर्थविप्रतिषेधात् (१-२-४-३६) इति सूत्रेण दूषिते गुणादविप्रतिषेधः स्यात् (१-२-४-४७) इति सिद्धान्तसूत्रेणादितेर्द्युकार्यकारित्वादिना त्वमेव माता च पिता त्वमेवेत्यादौ मात्रादिशब्दानामिव द्युशब्दादीनां गौणत्वमाश्रित्य विरोधः समाहितः ।।

**तत्सिद्धिरिति ।।** एतच्च नामधेयपादे चिन्तितम् । ''तत्सिद्धिजातिसारूप्यप्रशंसाभूमलिङ्गसमवाया गुणाश्रयाः (१-४-१३-२३) इति सूत्रेण ''यजमानः प्रस्तरः अग्निर्वै ब्राह्मणः, आदित्यो यूपः, अपशवो वा अन्ये गोअश्वेभ्यः'' इति श्रुतिषु प्रस्तरस्य यज्ञसाधनभूतदर्भमुष्टिविशेषस्य यजमानत्वं, ब्राह्मणस्याग्नित्वं, यूपस्यादित्यत्वं, गवाश्वव्यतिरिक्तानामजादीनामपशुत्वं च प्रत्यक्षविरुद्धमिति तत्परिहाराय प्रस्तरादिषु यजमानादिशब्दा गौणा इति तेषां प्रवृत्तिनिमित्तभूता गुणाः प्रदर्शिताः । तत्र यजमानशब्दस्य प्रस्तरे प्रवृत्तौ तत्कार्यकरत्वरूपा तत्सिद्धिर्गुणः । उभयोरपि यज्ञसाधनत्वेनैककार्यकरत्वात् । अग्निशब्दस्य ब्राह्मणे प्रवृत्तौ जातिर्जन्म एकप्रभवत्वं गुणः । ब्राह्मणोऽस्य मुखमासीत्, मुखादिन्द्रश्चाग्निश्चेति तयोर्मुखजत्वश्रवणात् । आदित्यशब्दस्य यूपे प्रवृत्तौ ऊर्ध्वत्वमाज्याञ्जननिमित्तमौज्वल्यं च गुणः । इदमेव सूत्रे सारूप्यमित्युक्तम् । अजादिष्वपशुशब्दस्य प्रवृत्तौ प्रशंसा निमित्तम् । पशुशब्देन गवाश्वगतेनोपकारातिशयेन प्राशस्त्यत्वे लक्षिते नञा तदभावः पश्वन्तरेषु बोध्यत इति । भूमलिङ्गसमवायोदाहरणन्तु प्रकृतानुपयुक्तमिति न लिख्यते ।। **अनन्यपरत्वेनेति ।।** स्वार्थतात्पर्यकत्वेनेत्यर्थः ।। **सत्यपीति ।।** तथाच मानान्तराविरोधे सत्येवोपक्रमादीनां तात्पर्यलिङ्गत्वमिति भावः ।। **प्रस्तरादिवाक्यवदिति ।।** यद्यपि प्रस्तरादिवाक्यस्य प्रहरणशास्त्रविरोधेनैवान्यपरत्वं, न प्रत्यक्षविरोधेनेति शक्यते वक्तुम् । तथापि प्रहरणशास्त्रप्रयुक्तविरोधोऽपि

स्वात्मलाभाय प्रत्यक्षमेवापेक्षत इति दूरे गत्वा तद्विरोधादेव तस्यान्यपरत्वमित्यवधेयम् । मानान्तराविरोधस्य तात्पर्यलिङ्गविशेषणत्वं न केवलं मयोपेयते, किन्तु त्वयापीत्याह **न वेति** ।। अन्यथा तत्वंपदवाच्ययोरेवाभेदान्वयः स्यादिति भावः ।



**ಯದಿ ಚಾಕ್ಷಂ ಶಬ್ದಬಾಧ್ಯಂ ತರ್ಹಿ ಜೈಮಿನಿನಾ 'ತಸ್ಮಾದ್ಧೂಮ ಏವಾಗ್ನೇರ್ದಿವಾ ದದೃಶೇ ನಾರ್ಚಿಃ' ಇತ್ಯಾದ್ಯರ್ಥವಾದಸ್ಯ 'ಅದಿತಿರ್ದ್ಯೌಃ' ಇತ್ಯಾದಿಮಂತ್ರಸ್ಯ ಚ ದೃಷ್ಟವಿರೋಧೇನಾಪ್ರಾಮಾಣ್ಯೇ ಪ್ರಾಪ್ತೇ ತದವಿರೋಧಾಯ ''ಗುಣವಾದಸ್ತು'' ''ಗುಣಾದವಿಪ್ರತಿಷೇಧಃ ಸ್ಯಾದ್'' ಇತ್ಯಾದಿನಾ ಗೌಣಾರ್ಥತಾ ನೋಚ್ಯೇತ। ತತ್ಸಿದ್ಧಿರಿತ್ಯಾದಿ ತತ್ಸಿದ್ಧಿಪೇಟಿಕಯಾ ಚ ''ಯಜಮಾನಃ ಪ್ರಸ್ತರಃ'' ಇತ್ಯಾದೇರ್ಗೌಣಾರ್ಥತಾ ನೋಚ್ಯೇತ।**

ಪ್ರತ್ಯಕ್ಷವು ಆಗಮದಿಂದ ಬಾಧ್ಯವೆಂದರೆ ಅದಕ್ಕೆ ಬಾಧಕವನ್ನು ಹೇಳುತ್ತಾರೆ—

ಪ್ರತ್ಯಕ್ಷವು ಅನುಮಾನದಿಂದ ಬಾಧ್ಯವಾಗಿದ್ದರೆ ಜೈಮಿನಿಯು 'ಹಗಲಿನಲ್ಲಿ ಬೆಂಕಿಯ ಹೊಗೆ ಮಾತ್ರ ಕಾಣುತ್ತದೆ. ಬೆಂಕಿ ಕಾಣುವುದಿಲ್ಲ, ರಾತ್ರಿಯಲ್ಲಿ ಬೆಂಕಿ ಮಾತ್ರ ಕಾಣುತ್ತದೆ. ಹೊಗೆ ಕಾಣುವುದಿಲ್ಲ ಎಂದು ಪ್ರತ್ಯಕ್ಷಕ್ಕೆ ವಿರೋಧವಾಗಿ ಹೇಳುವಂತೆ ಕಾಣುವ ಅರ್ಥವಾದಕ್ಕೂ, 'ಅದಿತಿಯೇ ಸ್ವರ್ಗ, ಅದಿತಿಯೇ ಅಂತರಿಕ್ಷ' ಎಂದು ಮುಂತಾಗಿ ಪ್ರತ್ಯಕ್ಷಕ್ಕೆ ವಿರೋಧವಾಗಿ ಹೇಳುವಂತೆ ಕಾಣುವ ಮಂತ್ರಕ್ಕೂ ಪ್ರತ್ಯಕ್ಷ ವಿರೋಧದಿಂದ ಅಪ್ರಾಮಾಣ್ಯ ಪ್ರಾಪ್ತವಾದಾಗ ಪ್ರತ್ಯಕ್ಷವಿರೋಧ ಬಾರದಿರಲು 'ಗುಣವಾದಸ್ತು' 'ಗುಣಾದವಿಪ್ರತಿಷೇಧಃ' ಎಂಬಿತ್ಯಾದಿ ಸೂತ್ರಗಳಿಂದ ಪ್ರತ್ಯಕ್ಷಾನುಸಾರವಾಗಿ ಗೌಣಾರ್ಥತ್ವವನ್ನು ಹೇಳುತ್ತಿರಲಿಲ್ಲ.

'ತತ್ಸಿದ್ಧಿಃ' ಎಂದು ಮುಂತಾಗಿ ತತ್‌ಸಿದ್ಧಿ ಪೇಟಿಕೆಯಿಂದ 'ಯಜಮಾನನು ದರ್ಭಮುಷ್ಟಿಯೆ ಆಗಿರುವನು' ಎಂದು ಮುಂತಾದ ವಾಕ್ಯಗಳಿಗೆ ಪ್ರತ್ಯಕ್ಷವಿರೋಧ ಬಾರದಿರಲು ಪ್ರತ್ಯಕ್ಷಾನುಸಾರವಾಗಿ ಗೌಣಾರ್ಥತ್ವವನ್ನು ಹೇಳುತ್ತಿರಲಿಲ್ಲ.

ಪೂರ್ವಮೀಮಾಂಸೆಯ ಅರ್ಥವಾದಾಧಿಕರಣ (ಜೈ.ಸೂ.1.2.1)ದಲ್ಲಿ ಅರ್ಥವಾದ ವಾಕ್ಯಗಳಿಗೆ ಹೇಗೆ ಪ್ರಾಮಾಣ್ಯವೆಂದು ವಿಚಾರ ಮಾಡಿದ್ದಾರೆ. ಅರ್ಥವಾದದಲ್ಲಿ 'ಹಗಲಿನಲ್ಲಿ ಹೊಗೆ ಮಾತ್ರ ಕಾಣುತ್ತದೆ, ಬೆಂಕಿ ಕಾಣುವುದಿಲ್ಲ, ರಾತ್ರಿಯಲ್ಲಿ ಬೆಂಕಿ ಮಾತ್ರ ಕಾಣುತ್ತದೆ, ಹೊಗೆ ಕಾಣುವುದಿಲ್ಲ' ಎನ್ನುವುದು, ಹಗಲಿನಲ್ಲಿಯೂ ಬೆಂಕಿ ಕಾಣುತ್ತದೆ, ರಾತ್ರಿಯಲ್ಲಿಯೂ ಹೊಗೆ ಕಾಣುತ್ತದೆಯಾದ್ದರಿಂದ ಪ್ರತ್ಯಕ್ಷವಿರುದ್ಧವಾಗಿದೆ. ಅದರಿಂದ ಅಪ್ರಮಾಣ ಎಂದು ಪೂರ್ವಪಕ್ಷ ಮಾಡಿಕೊಂಡು 'ಗುಣವಾದಸ್ತು' ಗೌಣಾರ್ಥವು ಅಭಿಪ್ರೇತವಾಗಿದೆ ಎಂಬ ಸಿದ್ಧಾಂತ ಸೂತ್ರ

(1.2.10)ದಲ್ಲಿ ಹಗಲಿನಲ್ಲಿ ಬೆಂಕಿ ರಾತ್ರಿಯಲ್ಲಿ ಹೊಗೆ ಕಾಣುವುದಿಲ್ಲ ಎನ್ನುವುದು ಗೌಣಾರ್ಥಕ ವೆಂದು ಪ್ರತ್ಯಕ್ಷ ವಿರೋಧವನ್ನು ಪರಿಹಾರ ಮಾಡಿದ್ದಾರೆ.

ದೂರಭೂಯಸ್ತ್ವಾತ್ (ಜೈ.ಸೂ.1.2.12) ಎಂಬ ಸೂತ್ರದಲ್ಲಿ ಈ ಅರ್ಥವಾದ ವಾಕ್ಯಕ್ಕೆ ಹೇಗೆ ಗೌಣಾರ್ಥ ಮಾಡಬೇಕು ಎಂಬುದನ್ನು ಹೇಳಿದ್ದಾರೆ— 'ದೂರದಲ್ಲಿರುವವರಿಗೆ, ಹಗಲಿನಲ್ಲಿ ಹೊಗೆ ಹೇಗೆ ಹೆಚ್ಚಾಗಿ ಕಾಣುವುದೋ ಹಾಗೆ ಹೆಚ್ಚಾಗಿ ಬೆಂಕಿ ಕಾಣುವುದಿಲ್ಲ. ರಾತ್ರಿಯಲ್ಲಿ ಬೆಂಕಿ ಹೇಗೆ ಹೆಚ್ಚಾಗಿ ಕಾಣುವುದೋ ಹಾಗೆ ಹೊಗೆ ಹೆಚ್ಚಾಗಿ ಕಾಣುವುದಿಲ್ಲ' ಎನ್ನುವುದು ಅರ್ಥವಾದದ ಅಭಿಪ್ರೇತ ಅರ್ಥ. 'ನ ದದೃಶೇ' 'ಕಾಣುವುದಿಲ್ಲ' ಎಂಬಲ್ಲಿ 'ದೃಶ' ಧಾತುವಿಗೆ 'ಕಾಣುವುದು' ವಾಚ್ಯಾರ್ಥ. 'ದೂರದಲ್ಲಿರುವವರಿಗೆ ಹೆಚ್ಚಾಗಿ ಚೆನ್ನಾಗಿ ಕಾಣುವುದು' ಎಂಬರ್ಥದಲ್ಲಿ ಲಕ್ಷಣಾ. 'ನ ದದೃಶೇ' ಎಂದು ನಕಾರದಿಂದ 'ಚೆನ್ನಾಗಿ ಹೆಚ್ಚಾಗಿ ಕಾಣುವುದಿಲ್ಲ' ಎಂದು ಅರ್ಥವು ಬೋಧಿತವಾಗುತ್ತದೆ' ಎಂದು ಹೇಳಿದ್ದಾರೆ.

ಮಂತ್ರಾಧಿಕರಣದಲ್ಲಿ, 'ಅದಿತಿಯೆ ಸ್ವರ್ಗ ಅದಿತಿಯೆ ಅಂತರಿಕ್ಷ' ಎಂದು ಮುಂತಾಗಿ ಮಂತ್ರವು ಪ್ರತ್ಯಕ್ಷ ವಿರುದ್ಧವಾಗಿ ಹೇಳುತ್ತಿದೆ. ಒಬ್ಬಳು ಅದಿತಿಯು ಪರಸ್ಪರ ಭಿನ್ನ ಸ್ವರ್ಗ ಅಂತರಿಕ್ಷಾದ್ಯ ಭಿನ್ನಳೆನಿಸುವುದು ಕೂಡುವುದಿಲ್ಲ. ಅದು ವಿವಕ್ಷಿತಾರ್ಥವೆಂದಿಟ್ಟುಕೊಂಡರೆ ಪ್ರತ್ಯಕ್ಷ ವಿರೋಧ ಬರುತ್ತದೆ, ಎಂದು 'ಅರ್ಥವಿಪ್ರತಿಷೇಧಾತ್'(ಜೈ.ಸೂ.1.2.36) ಎಂಬ ಪೂರ್ವಪಕ್ಷ ಸೂತ್ರದಲ್ಲಿ ಹೇಳಿ, ಮುಂದೆ 'ಗುಣಾದವಿಪ್ರತಿಷೇಧಃ ಸ್ಯಾತ್' (ಜೈ.ಸೂ.1.2.47) ಎಂಬ ಸಿದ್ಧಾಂತ ಸೂತ್ರದಲ್ಲಿ, 'ತ್ವಮೇವ ಮಾತಾ ಚ ಪಿತಾ ತ್ವಮೇವ' 'ನೀನೇ ತಾಯಿ ನೀನೆ ತಂದೆ' ಎನ್ನುವುದು ಪ್ರತ್ಯಕ್ಷ ವಿರುದ್ಧವಾಗುವುದರಿಂದ ತಾಯಿಯಂತೆಯೂ ತಂದೆಯಂತೆಯೂ ನೋಡಿಕೊಳ್ಳುವಿ' ಎಂದು ಗೌಣಾರ್ಥ ಮಾಡುವಂತೆ 'ಅದಿತಿಯು ಸ್ವರ್ಗದಂತೆಯೂ ಅಂತರಿಕ್ಷದಂತೆಯೂ ಸುಖಕಾರಿ' ಎಂದು ಗೌಣಾರ್ಥ ಮಾಡಬೇಕು. ಆಗ ಪ್ರತ್ಯಕ್ಷವಿರೋಧ ಬರುವುದಿಲ್ಲ ಎಂದು ಸಮಾಧಾನ ಮಾಡಿದ್ದಾರೆ.

'ತತ್‌ಸಿದ್ಧಿ–ಜಾತಿ–ಸಾರೂಪ್ಯ–ಪ್ರಶಂಸಾ–ಭೂಮ–ಲಿಂಗಸಮವಾಯಾ ಗುಣಾಶ್ರಯಾಃ' (ಜೈ.ಸೂ.1.4.23) ಎಂಬ ಸೂತ್ರದಲ್ಲಿ 'ಯಜಮಾನನು ದರ್ಭಮುಷ್ಟಿಯೇ' 'ಬ್ರಾಹ್ಮಣನು ಅಗ್ನಿಯೇ' 'ಯೂಪವು ಆದಿತ್ಯನೆ' 'ಗೋ ಅಶ್ವಗಳು ಹೊರತು ಬೇರೆ ಪಶುವೇ ಅಲ್ಲ' ಎನ್ನುವ ಶ್ರುತಿಗಳು ಹೇಳುವುದು ಎಲ್ಲವೂ ಪ್ರತ್ಯಕ್ಷ ವಿರುದ್ಧ. ಅಪ್ರಮಾಣವೆಂದು ಪೂರ್ವಪಕ್ಷವನ್ನು ಪರಿಹರಿಸಲು 'ದರ್ಭಮುಷ್ಟಿ ಮುಂತಾದುವನ್ನು ಯಜಮಾನನೆಂದು ಮುಂತಾಗಿ ಹೇಳುವುದು ಗೌಣಾರ್ಥ ವಿವಕ್ಷೆಯಿಂದ' ಎಂದಿದ್ದಾರೆ. ಗೌಣವೃತ್ತಿಗೆ ನಿಮಿತ್ತವಾದ ಸಾದೃಶ್ಯವನ್ನು ತೋರಿಸಿದ್ದಾರೆ.

ದರ್ಭಮುಷ್ಟಿಯನ್ನು 'ಯಜಮಾನ' ಎನ್ನುವುದು ಅದು 'ಯಜಮಾನಕಾರ್ಯಕಾರಿ' ಎನ್ನುವ ವಿವಕ್ಷೆಯಿಂದ. ಇದೇ 'ತತ್‌ಸಿದ್ಧಿ' ಎಂಬ ನಿಮಿತ್ತ. ಯಜಮಾನ–ದರ್ಭಮುಷ್ಟಿಗಳೆರಡೂ ಯಜ್ಞ ನಡೆಯಲು ಅವಶ್ಯಬೇಕು ಎಂಬುದು ಇಲ್ಲಿ ಸಾದೃಶ್ಯ. ಬ್ರಾಹ್ಮಣನನ್ನು ಅಗ್ನಿ ಎನ್ನಲು ಕಾರಣ, ಅವರಿಬ್ಬರೂ ಪರಮಪುರುಷನ ಮುಖದಿಂದ ಹುಟ್ಟಿದವರು, 'ಬ್ರಾಹ್ಮಣನು ಪುರುಷನ ಮುಖದಿಂದ

ಜನಿಸಿದನು'. 'ಮುಖದಿಂದಲೇ ಇಂದ್ರ, ಅಗ್ನಿಗಳೂ ಜನಿಸಿದರು' ಎಂದು ಶ್ರುತಿ ಹೇಳುವುದರಿಂದ ಇಬ್ಬರೂ ಒಂದೇ ಅವಯವದಿಂದ ಹುಟ್ಟಿದ್ದಾರೆ ಎನ್ನುವುದು ಸಾದೃಶ್ಯ. ಯೂಪವನ್ನು ಆದಿತ್ಯ ಎನ್ನಲು ಕಾರಣವು ಯೂಪವು ಆದಿತ್ಯನಂತೆ ಎತ್ತರವಾಗಿದೆ ಮತ್ತು ತುಪ್ಪ ಸವರಿದ್ದರಿಂದ ಬೆಳಕಿನಲ್ಲಿ ಆದಿತ್ಯನಂತೆ ಹೊಳೆಯುತ್ತದೆ ಎನ್ನುವ ಸಾದೃಶ್ಯ ಎರಡರಲ್ಲಿದೆ. ಇದನ್ನೇ ಸೂತ್ರದಲ್ಲಿ ಸಾರೂಪ್ಯ ಎಂದಿದ್ದಾರೆ.

ಗೋ ಅಶ್ವವ್ಯತಿರಿಕ್ತವಾದ ಆಡುಕುರಿ ಮುಂತಾದುವನ್ನು 'ಪಶುವಲ್ಲ' ಎಂದುದು ಗೋ ಅಶ್ವಗಳ ಪ್ರಶಂಸೆಗಾಗಿ. 'ಅಪಶವಃ' ಎಂಬಲ್ಲಿ 'ಪಶು' ಶಬ್ದಕ್ಕೆ 'ಹೆಚ್ಚು ಉಪಕಾರ ಮಾಡುವ ಪ್ರಶಸ್ತವಾದ ಪ್ರಾಣಿ' ಎಂಬರ್ಥದಲ್ಲಿ ಲಕ್ಷಣಾ. ನಕಾರದಿಂದ, 'ಅಂಥ ಪ್ರಶಸ್ತತ್ವವು ಬೇರೆ ಆಡುಕುರಿ ಮುಂತಾದವುಗಳಲ್ಲಿ ಇಲ್ಲ' ಎಂದು ಬೋಧಿತವಾಗುತ್ತದೆ.

ಭೂಮ ಮತ್ತು ಲಿಂಗಸಮವಾಯಗಳಿಗೆ ಉದಾಹರಣೆಗಳು ಪ್ರಕೃತ ಅನುಪಯುಕ್ತವಾದ್ದರಿಂದ ಬೇಡ.

**ತ್ವಯಾ ಚ ಪ್ರತ್ಯಕ್ಷಾವಿರೋಧಾಯ ತತ್ತ್ವಂಪದಯೋರ್ಲಕ್ಷಣಾ ನೋಚ್ಯೇತ । ಶ್ರುತಿವಿರೋಧಾತ್ ಪ್ರತ್ಯಕ್ಷಸ್ಯೈವಾಪ್ರಾಮಾಣ್ಯಸಂಭವಾತ್ ।**

ಪ್ರತ್ಯಕ್ಷವು ಅನುಮಾನದಿಂದ ಬಾಧ್ಯವಾಗುತ್ತಿದ್ದರೆ ಅದ್ವೈತಿಯು 'ತತ್ವಮಸಿ' ಎಂಬಲ್ಲಿ 'ತತ್' 'ತ್ವಂ' ಪದಗಳಿಗೆ ಲಕ್ಷಣಾ ಎನ್ನುತ್ತಿರಲಿಲ್ಲ. ಶ್ರುತಿವಿರೋಧದಿಂದ ಪ್ರತ್ಯಕ್ಷವನ್ನೇ ಅಪ್ರಮಾಣ ಎನ್ನಬಹುದಿತ್ತು.

**ಏತೇನ 'ಅದ್ವೈತವಾಕ್ಯಮನನ್ಯಪರತ್ವೇನ ನಾಮುಖ್ಯಾರ್ಥಂ ಪ್ರಸ್ತರವಾಕ್ಯಾದಿಕಂ ತು ಅನ್ಯಪರಮ್' ಇತಿ ವಾಚಸ್ಪತ್ಯುಕ್ತಂ ನಿರಸ್ತಮ್ । ಸತ್ಯಪಿ ತಾತ್ಪರ್ಯಲಿಂಗೇ ಮಾನಾಂತರವಿರೋಧೇ ಪ್ರಸ್ತರಾದಿ ವಾಕ್ಯವತ್ 'ಸೋಮೇನ ಯಜೇತ' ಇತ್ಯಾದಿವಚ್ಚ ಅನನ್ಯಪರತ್ವಸ್ಯೈವಾಯೋಗಾತ್ ।**

ಭಾಮತೀಕಾರನು ಹೇಳಿದ್ದಾನೆ. 'ಸ್ವಾರ್ಥದಲ್ಲಿ ತಾತ್ಪರ್ಯಯುಕ್ತವಾಗಿರುವುದರಿಂದ ಅದ್ವೈತ ವಾಕ್ಯವು ಅದ್ವೈತಪರವೆ ಹೊರತು ಬೇರೆ ಗೌಣಾರ್ಥಪರವಲ್ಲ. ಪ್ರಸ್ತರ ವಾಕ್ಯವು ಮಾತ್ರ ಅನ್ಯಪರ. ಸ್ವಾರ್ಥದಲ್ಲಿ ತಾತ್ಪರ್ಯಯುಕ್ತವಲ್ಲ' ಎಂದು. ಇದು ಸರಿಯಲ್ಲ. ತಾತ್ಪರ್ಯಲಿಂಗಗಳಿದ್ದರೂ ಪ್ರಮಾಣಾಂತರ ವಿರೋಧವಿದ್ದರೆ 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯದಂತೆ, 'ಸೋಮೇನ ಯಜೇತ' ಎಂಬ ವಾಕ್ಯದಂತೆ, ಸ್ವಾರ್ಥತಾತ್ಪರ್ಯವತ್ತ್ವವೇ ಕೂಡುವುದಿಲ್ಲ. ಪ್ರಮಾಣಾಂತರ ವಿರೋಧವಿಲ್ಲದಿದ್ದರೆ ಮಾತ್ರ ಉಪಕ್ರಮಾದಿಗಳು ತಾತ್ಪರ್ಯಲಿಂಗವೆನಿಸುವುವು.

ಯದ್ಯಪಿ 'ಯಜಮಾನಃ ಪ್ರಸ್ತರಃ' ಎಂಬ ವಾಕ್ಯವು ಗೌಣಾರ್ಥಪರವೆನಿಸಿದುದು ಪ್ರತ್ಯಕ್ಷ ವಿರೋಧವಿದೆ ಎಂಬ ಕಾರಣದಿಂದಲ್ಲ. 'ಸೂಕ್ತವಾಕೇನ ಪ್ರಸ್ತರಂ ಪ್ರಹರತಿ' ಎಂದು

ಸೂಕ್ತವಾಕಮಂತ್ರದಿಂದ ಪ್ರಸ್ತರವನ್ನು ಅಗ್ನಿಯಲ್ಲಿ ಹಾಕಲು ವಿಧಿ ಇದೆ. ಯಜಮಾನನು ಪ್ರಸ್ತರಾಭಿನ್ನನಾದರೆ ಅವನನ್ನು ಅಗ್ನಿಯಲ್ಲಿ ಹಾಕುವ ಪ್ರಸಂಗ ಬರುತ್ತದೆ. ಆಕಾರಣದಿಂದ ಅಭೇದಾನ್ವಯವನ್ನು ಮಾಡುತ್ತಿಲ್ಲ ಹೊರತು ಪ್ರತ್ಯಕ್ಷವಿರೋಧ ಬರುತ್ತದೆ ಎಂಬ ಕಾರಣದಿಂದಲ್ಲ ಎನ್ನಲು ಬರುತ್ತದೆ.

ಆದರೂ ಪ್ರಹರಣವಿಧಿ ಪ್ರಯುಕ್ತ ವಿರೋಧವು ಕೂಡ ಪ್ರತ್ಯಕ್ಷವಿರೋಧ ಮೂಲಕವೇ ಆಗಿರುವುದರಿಂದ ಕೊನೆಗೂ ಪ್ರತ್ಯಕ್ಷವಿರೋಧ ಪ್ರಯುಕ್ತವಾಗಿಯೇ ಗೌಣಾರ್ಥಪರತ್ವವನ್ನು ಹೇಳಬೇಕಾಗುತ್ತದೆ.

ಹೀಗಾಗಿ ಪ್ರತ್ಯಕ್ಷವು ಅನುಮಾನದಿಂದ ಬಾಧ್ಯವಾಗಿರುತ್ತಿದ್ದರೆ ಪ್ರಸ್ತರವಾಕ್ಯಕ್ಕೆ ಅನ್ಯಾರ್ಥಮಾಡುವ ಆವಶ್ಯಕತೆ ಬರುತ್ತಿರಲಿಲ್ಲ. ಪ್ರಮಾಣಾಂತರ ವಿರೋಧವಿಲ್ಲದಿದ್ದರೆ ಮಾತ್ರ ಉಪಕ್ರಮಾದಿಗಳು ತಾತ್ಪರ್ಯಲಿಂಗಗಳೆನಿಸುವವು ಎಂಬುದನ್ನು ನಾವು ಮಾತ್ರವಲ್ಲ, ನೀನೂ ಒಪ್ಪುತ್ತಿರುವೆ. ತತ್ವಮಸಿ ಎಂಬಲ್ಲಿ ತತ್ ತ್ವಂ ಪದಗಳಿಗೆ ಲಕ್ಷಣಾ ಮಾಡುತ್ತಿರುವೆ. ಇಲ್ಲದಿದ್ದರೆ, ತತ್ ತ್ವಂ ಪದಗಳ ವಾಚ್ಯಾರ್ಥವಾದ ವಿಶಿಷ್ಟಚೈತನ್ಯಗಳಿಗೇ ಅಭೇದಾನ್ವಯವನ್ನು ಮಾಡಬಹುದಿತ್ತು.

ಸೋಮೇನ ಯಜೇತ ಎಂಬಲ್ಲಿ 'ಸೋಮರಸವೆಂಬ ಯಾಗವನ್ನು ಮಾಡಬೇಕು' ಎಂದರ್ಥ ಮಾಡಿದರೆ ಯಾಗಕ್ಕೆ ಸೋಮರಸದ ಅಭೇದವು ಪ್ರತ್ಯಕ್ಷವಿರುದ್ಧವಾದ್ದರಿಂದ ಮತ್ವರ್ಥ ಲಕ್ಷಣಾ ಮಾಡಿ ಸೋಮರಸದ ಆಹುತಿ ಉಳ್ಳ ಯಾಗವೆಂದು ಗೌಣಾರ್ಥವೇ ಸ್ವೀಕೃತವಾಗಿದೆ. ಹಾಗೇ, ಪ್ರತ್ಯಕ್ಷ ವಿರೋಧದಿಂದ ಅದ್ವೈತವಾಕ್ಯವೂ ಕೂಡ ಮುಖ್ಯಾರ್ಥ ಅದ್ವೈತಪರವಾಗುವುದು ಅಯುಕ್ತವೇ ಆಗುವುದು. ಅಮುಖ್ಯಾರ್ಥವನ್ನೇ ಹೇಳಬೇಕಾಗುವುದು.

**ನಹಿ ಕುರೂಪಾಮ್, ಅಶೂರಂ ಚೋದ್ದಿಶ್ಯ 'ಅಹೋ ದರ್ಶನೀಯಾ' ಇತಿ, 'ಸಿಂಹಃ' ಇತಿ ಚ ಶತಕೃತ್ವಃ ಪ್ರಯುಕ್ತಮಪಿ ವಾಕ್ಯಂ ವಾಚ್ಯಾರ್ಥಪರಂ ಭವತಿ। ನ ವಾ ತತ್ವಮಸಿ ವಾಕ್ಯಂ ಷಡ್ವಿಧ ತಾತ್ಪರ್ಯಲಿಂಗೋಪೇತಮಪಿ ಮಾನಾಂತರವಿರುದ್ಧಂ ವಾಚ್ಯಾರ್ಥ ಪರಮ್ ।**

ಕುರೂಪಳಾದ ಸ್ತ್ರೀಯನ್ನು 'ಓ ಎಷ್ಟು ಸುಂದರಳಾಗಿರುವಳು' ಎಂದು ನೂರುಬಾರಿ ಹೊಗಳಿದರೂ ಪ್ರತ್ಯಕ್ಷವಾಗಿ ಕುರೂಪಳಾಗಿ ಕಾಣುತ್ತಿರುವಾಗ ಸುಂದರ ಶಬ್ದವು ಮುಖ್ಯಾರ್ಥ ಸುಂದರ ಪರವಾಗುವುದಿಲ್ಲ. ವಿಪರೀತಲಕ್ಷಣೆಯಿಂದ ಕುರೂಪಳೆಂದೇ ಗೌಣಾರ್ಥಪರವಾಗುವುದು. ಹೇಡಿಯನ್ನು ತೋರಿಸಿ 'ಇವನು ಸಿಂಹ!' ಎಂದು ನೂರುಬಾರಿ ಹೊಗಳಿದರೂ 'ಅವನು ಹೇಡಿ' ಎಂದು ಪ್ರತ್ಯಕ್ಷ ನೋಡಿತಿಳಿದಿರುವವರಿಗೆ 'ಶೂರ'ಶಬ್ದವು ವಿಪರೀತಲಕ್ಷಣೆಯಿಂದ ಹೇಡಿ ಎಂದು ಗೌಣಾರ್ಥಪರವೇ ಆಗುವುದು. ಮುಖ್ಯಾರ್ಥಪರವಾಗುವುದಿಲ್ಲ. ಪ್ರಮಾಣಾಂತರ

ವಿರುದ್ಧವಾಗಿರುವ ತತ್ತ್ವಮಸಿ ವಾಕ್ಯವು ಆರು ಬಗೆ ತಾತ್ಪರ್ಯಲಿಂಗೋಪೇತವಾದರೂ ವಾಚ್ಯಾರ್ಥಪರವಾಗುವುದಿಲ್ಲ. ಲಕ್ಷಣಯಾ ಗೌಣಾರ್ಥಪರವೇ ಆಗುವುದು.



**किञ्चोपक्रमोपसंहारादिकं हि प्रत्येकं तात्पर्यलिङ्गम्, अस्ति च प्रस्तरादिवाक्येऽपूर्वता । त्वत्पक्षे च प्रत्यक्षसिद्धे भेदे श्रुतिरिवैकलिङ्ग-सिद्धे तात्पर्ये लिङ्गान्तरमनुवादकमेवेति किं तद्बाहुल्येन ?**

**यच्चोक्तं वाचस्पतिना— 'प्रस्तरादिवाक्यमन्यशेषत्वादमुख्यार्थम्, अद्वैतवाक्यं तु न तथा । उक्तं हि शाबरभाष्ये ''न विधौ परः शब्दार्थः'' इति । तन्न । अन्यशेषेऽपि प्रत्यक्षाविरुद्धे लोके ''इयं गौः क्रय्या बहुक्षीरा''इत्यादौ ''कामधेनुः'' इत्यादाविवामुख्यवृत्तेः, वेदेऽपि ''सोऽरोदीद्'' इत्यादौ प्रस्तरादिवाक्य इवामुख्यवृत्ते-रनाश्रयणात् ।**

---

मानान्तरविरोधस्याकिञ्चित्करत्वे प्रस्तरादिवाक्यमपि तात्पर्यलिङ्गबलेन स्वार्थपरं स्यादित्याह **किञ्चेति** ।। ननु स्वार्थपरत्वे षड्विधतात्पर्यलिङ्गवत्त्वमेव तन्त्रम् । नत्वैकैकलिङ्गवत्त्वम् । अतो नोक्त दोष इत्यत आह **त्वत्पक्षे चेति** ।। **श्रुतिरिवेति** ।। भेदश्रुतिरिवेत्यर्थः ।। **अनुवादकमिति** ।। ज्ञातज्ञापकमित्यर्थः । एतच्चाभ्युपेत्य । लिङ्गानां क्रमेणैवोपस्थितेः प्रथमोपस्थितलिङ्गेन तात्पर्ये सिद्धे लिङ्गान्तरेण तात्पर्यानुमितौ प्रतिबन्धकत्वेन ज्ञातज्ञापकत्वमपि न संभवतीति ध्येयम् । **किं तद्बाहुल्येनेति** ।। अन्यथा पूर्वोत्तरमीमांसयोः विधिस्तु धारणेऽपूर्वत्वात् ।(जै.सू.अ.३ पा.४ अधि.९, सू.१९) आनन्दमयोऽभ्यासादित्यादौ एकैकलिङ्गोदाहरणं न स्यादिति भावः । **अन्यशेषत्वादिति** ।। विध्यपेक्षितप्राशस्त्य-समर्पकत्वेन विध्यर्थत्वादित्यर्थः । परः मुख्यार्थादन्यः । मुख्यार्थत्यागेऽन्यशेषत्वं न तन्त्रं लोकवेदयोरन्वयव्यभिचाराद् व्यतिरेकव्यभिचाराच्च । किन्तु मानान्तरविरोध

एवेत्याह **अन्यशेषेऽपीति ।।** कामधेनुरित्यादाविवेति प्रस्तरादिवाक्य इवेति च व्यतिरेकदृष्टान्तौ । अमुख्यवृत्तेरिति षष्ठ्यन्तद्वयस्यानाश्रयणादिति पञ्चम्यन्तेन संबन्धः ।



**ಕಿಂಚೋಪಕ್ರಮೋಪಸಂಹಾರಾದಿಕಂ ಹಿ ಪ್ರತ್ಯೇಕಂ ತಾತ್ಪರ್ಯಲಿಂಗಮ್, ಅಸ್ತಿ ಚ ಪ್ರಸ್ತರಾದಿ ವಾಕ್ಯೇ ಅಪೂರ್ವತಾ ।**

ಉಪಕ್ರಮ ಉಪಸಂಹಾರಾದಿಗಳು ಪ್ರತ್ಯೇಕವಾಗಿ ತಾತ್ಪರ್ಯಲಿಂಗವೆನಿಸುತ್ತವೆ. ಎಲ್ಲವೂ ಒಂದುಕಡೆ ಜೊತೆಯಾಗಿ ಬರಬೇಕಿಲ್ಲ. ಪ್ರಸ್ತರಾದಿ ವಾಕ್ಯದಲ್ಲಿ ಅಪೂರ್ವತಾ ಎಂಬ ಒಂದು ತಾತ್ಪರ್ಯಲಿಂಗವಿದೆ. ಅದರಿಂದ ಅದು ಅದ್ವೈತವಾಕ್ಯದಂತೆ ಮುಖ್ಯಾರ್ಥಪರವೇ ಆಗಬೇಕು. ಆದರೂ ಅಮುಖ್ಯಾರ್ಥ ಪರವೆಂದು ಭಾಮತೀಕಾರ ಹೇಳುತ್ತಿದ್ದಾನೆ!

**ತ್ವತ್ಪಕ್ಷೇ ಚ ಪ್ರತ್ಯಕ್ಷಸಿದ್ಧೇ ಭೇದೇ ಶ್ರುತಿರಿವ ಏಕಲಿಂಗಸಿದ್ಧೇ ತಾತ್ಪರ್ಯೇ ಲಿಂಗಾಂತರಂ ಅನುವಾದಕಮೇವೇತಿ ಕಿಂ ತದ್‌ಬಾಹುಲ್ಯೇನ ?**

'ಪ್ರಸ್ತರಾದಿ ವಾಕ್ಯದಲ್ಲಿ ಒಂದೇ ತಾತ್ಪರ್ಯಲಿಂಗವಿದೆ. ಅದ್ವೈತವಾಕ್ಯದಲ್ಲಿ ಆರೂ ತಾತ್ಪರ್ಯಲಿಂಗಗಳಿವೆ. ಬಹಳ ತಾತ್ಪರ್ಯಲಿಂಗಗಳಿರುವುದರಿಂದ ಅದ್ವೈತವಾಕ್ಯವು ಮುಖ್ಯಾರ್ಥ ಪರ. ಪ್ರಸ್ತರವಾಕ್ಯಕ್ಕೆ ಒಂದೇ ತಾತ್ಪರ್ಯಲಿಂಗವಿರುವುದರಿಂದ ಅದು ಅಮುಖ್ಯಾರ್ಥಪರ ಎನ್ನುವುದು ಭಾಮತೀಕಾರನ ಅಭಿಪ್ರಾಯ' ಎಂದರೆ, ಅದು ಸರಿಯಲ್ಲ.

ಭಾಮತೀಕಾರನ ಪಕ್ಷದಲ್ಲಿ ಭೇದವು ಪ್ರತ್ಯಕ್ಷಸಿದ್ಧವಾದ್ದರಿಂದ ಭೇದವಾಕ್ಯವು ಕೇವಲ ಅನುವಾದಕ. ಹಾಗೇ ಒಂದು ತಾತ್ಪರ್ಯಲಿಂಗದಿಂದ ಅದ್ವೈತತಾತ್ಪರ್ಯ ತಿಳಿಯಿತೆಂದರೆ ಬೇರೆ ತಾತ್ಪರ್ಯಲಿಂಗಗಳು ಕೇವಲ ಅನುವಾದಕವೆನಿಸುತ್ತವೆ. ಹೀಗೆ ಅನುವಾದಕವೆನಿಸುವ ತಾತ್ಪರ್ಯ ಲಿಂಗಗಳು ಬಹಳ ಇದ್ದೇನು ಫಲ?

ಅನುವಾದಕಗಳು ಬಹಳ ಇದ್ದೇನು ಫಲ? ಎಂದು ದೋಷವನ್ನು ಹೇಳಿದ್ದು ಅಭ್ಯುಪಗಮ ವಾದ.

ವಸ್ತುತಃ 'ಅನುವಾದಕ' ಎಂದರೆ ಜ್ಞಾತಜ್ಞಾಪಕ. ಒಂದು ಲಿಂಗವು ಅದ್ವೈತತಾತ್ಪರ್ಯವನ್ನು ಜ್ಞಾಪಿಸಿದ ಬಳಿಕ ಇನ್ನೊಂದು ಲಿಂಗವೂ ಅದನ್ನೇ ಜ್ಞಾಪಿಸುವುದರಿಂದ ಜ್ಞಾತಜ್ಞಾಪಕವಾಯಿತು ಎಂದು ಒಪ್ಪಿಕೊಂಡು ಅದು ವ್ಯರ್ಥವೆಂದು ದೋಷವನ್ನು ಹೇಳಿದ್ದಾರೆ.

ವಸ್ತುತಃ ಒಂದು ಲಿಂಗವು ತಾತ್ಪರ್ಯವನ್ನು ಅನುಮಾನ ಮಾಡಿಕೊಟ್ಟರೆ ತಾತ್ಪರ್ಯವು ಸಿದ್ಧವಾಯಿತು. ಬಳಿಕ ಇನ್ನೊಂದು ಲಿಂಗವು ಸಿದ್ಧವಾದ ಅದೇ ತಾತ್ಪರ್ಯವನ್ನು ಅನುಮಾನ

ಮಾಡಿಕೊಡಲಾರದು. ಸಿದ್ಧಿಯು ಅನುಮಿತಿಗೆ ಪ್ರತಿಬಂಧಕ. ಹೀಗಾಗಿ ಆ ಇನ್ನೊಂದು ಲಿಂಗವು ಲಿಂಗವೇ ಆಗಲಾರದು. ಆದರಿಂದ ಬಹಳ ಲಿಂಗಗಳಿವೆ ಎಂದು ಭಾಮತೀಕಾರ ಹೇಳುವುದು ಯುಕ್ತವಲ್ಲ.

ಬಹಳ ತಾತ್ಪರ್ಯಲಿಂಗಗಳಿದ್ದು ಏನು ಪ್ರಯೋಜನ? ಎಂದು ಆಕ್ಷೇಪಿಸಿದ್ದು ಶಾಸ್ತ್ರಕಾರರಿಗೆ ಸಮ್ಮತವೆ. ಇಲ್ಲದಿದ್ದರೆ, ಪೂರ್ವ ಮೀಮಾಂಸಾದಲ್ಲಿ 'ವಿಧಿಸ್ತು ಧಾರಣೇಽಪೂರ್ವತ್ವಾತ್' (ಜೈ.ಸೂ.3.4.15) ಎಂಬ ಸೂತ್ರದಲ್ಲಿ ಸ್ರುಕ್ಕಿನ ಮೇಲ್ಗಡೆ ಸಮಿತ್ತನ್ನಿಟ್ಟುಕೊಂಡು ಒಯ್ಯುವುದು ಅಪ್ರಾಪ್ತವಾದ್ದರಿಂದ ಅಪೂರ್ವವಾಗಿದೆ. ಆದರಿಂದ ಅದು ವಿಧಿಯೆ ಹೊರತು ಅನುವಾದವಲ್ಲ ಎಂದು ವಿಧಿಗೆ ಅಪೂರ್ವತ್ವವೆಂಬ ಒಂದೇ ಲಿಂಗವನ್ನು ಹೇಳಿದ್ದಾರೆ. ಅನೇಕ ಲಿಂಗಗಳನ್ನು ಹೇಳಿಲ್ಲ. 'ಆನಂದಮಯೋಽಭ್ಯಾಸಾತ್' ಎಂಬ ಬ್ರಹ್ಮಸೂತ್ರದಲ್ಲಿ ಆನಂದಮಯನು ಬ್ರಹ್ಮ ಎನ್ನಲು ಬ್ರಹ್ಮಶಬ್ದಾಭ್ಯಾಸ ಎಂದು ಒಂದೇ ಲಿಂಗವನ್ನು ಹೇಳಿದ್ದಾರೆ. ಹೀಗೆ ಪೂರ್ವಮೀಮಾಂಸಾ ವೇದಾಂತಗಳೆರಡರಲ್ಲಿಯೂ ಒಂದೊಂದೇ ಲಿಂಗಗಳನ್ನು ಹೇಳುವುದು ಕಂಡಿದೆ. ಆದರಿಂದ ಅದ್ವೈತವಾಕ್ಯಗಳಲ್ಲಿಯೂ ಒಂದೊಂದೇ ಲಿಂಗ ಸಾಕು, ಬಹಳ ಲಿಂಗಗಳನ್ನು ಹೇಳುವುದು ವ್ಯರ್ಥ.

**ಯಚ್ಚೋಕ್ತಂ ವಾಚಸ್ಪತಿನಾ – ಪ್ರಸ್ತರಾದಿವಾಕ್ಯಂ ಅನ್ಯಶೇಷತ್ವಾತ್ ಅಮುಖ್ಯಾರ್ಥಂ, ಅದ್ವೈತವಾಕ್ಯಂ ತು ನ ತಥಾ। ಉಕ್ತಂ ಹಿ ಶಾಬರಭಾಷ್ಯೇ ''ನ ವಿಧೌ ಪರಃ ಶಬ್ದಾರ್ಥಃ'' ಇತಿ— ತನ್ನ। ಅನ್ಯಶೇಷೇಽಪಿ ಪ್ರತ್ಯಕ್ಷಾವಿರುದ್ಧೇ ಲೋಕೇ ''ಇಯಂ ಗೌಃ ಕ್ರಯ್ಯಾ ಬಹುಕ್ಷೀರಾ'' ಇತ್ಯಾದೌ ''ಕಾಮಧೇನುಃ'' ಇತ್ಯಾದಾವಿವ ಅಮುಖ್ಯವೃತ್ತೇಃ, ವೇದೇಽಪಿ ''ಸೋಽರೋದೀದ್'' ಇತ್ಯಾದೌ ಪ್ರಸ್ತರಾದಿವಾಕ್ಯ ಇವ ಅಮುಖ್ಯವೃತ್ತೇರನಾಶ್ರಯಣಾತ್ ।**

ಭಾಮತೀಕಾರನು ಹೀಗೂ ಹೇಳುತ್ತಾನೆ— 'ಪ್ರಸ್ತರವಾಕ್ಯವು ಅರ್ಥವಾದ. ಅಂದರೆ ವಿಧಿಗೆ ಅಪೇಕ್ಷಿತವಾದ ಪ್ರಾಶಸ್ತ್ಯವನ್ನು ಹೇಳುತ್ತ 'ಅನ್ಯಕ್ಕೆ' ಪ್ರಧಾನವಾದ ವಿಧಿಗೆ 'ಶೇಷ'ವಾಗಿದೆ, ಅಂಗವಾಗಿದೆ. ಅದ್ವೈತವಾಕ್ಯವು ಹಾಗೆ ಬೇರೆ ವಾಕ್ಯಕ್ಕೆ ಅಂಗವಾಗಿಲ್ಲ. ಅಂಗ ವಾಕ್ಯದಲ್ಲಿ ಲಕ್ಷಣಾ ಮಾಡಬಹುದು. ಪ್ರಧಾನವಾಕ್ಯದಲ್ಲಿ ಅದು ಕೂಡದು. ಶಾಬರಭಾಷ್ಯದಲ್ಲಿ 'ಅಂಗವಾಕ್ಯ ಅರ್ಥವಾದ ವಾಕ್ಯದಲ್ಲಿ ಲಕ್ಷಣಾ ಮಾಡಬಹುದು. ಪ್ರಧಾನವಾದ ವಿಧಿವಾಕ್ಯದಲ್ಲಿ ಮುಖ್ಯಾರ್ಥ ತ್ಯಾಗರೂಪ ಲಕ್ಷಣಾ ಮಾಡಬಾರದು' ಎಂದಿದೆ ಎಂದು. ಇದೂ ಸರಿಯಲ್ಲ.

ಮುಖ್ಯಾರ್ಥ ತ್ಯಾಗಕ್ಕೆ ಅನ್ಯಶೇಷತ್ವವು ಪ್ರಯೋಜಕವಲ್ಲ. ಅದಕ್ಕೆ ಲೋಕ ವೇದಗಳೆರಡರಲ್ಲಿಯೂ ಅನ್ವಯ ವ್ಯಭಿಚಾರಗಳಿವೆ. ವ್ಯತಿರೇಕವ್ಯಭಿಚಾರಗಳೂ ಇವೆ. ಮಾನಾಂತರ ವಿರೋಧವನ್ನೇ ಮುಖ್ಯಾರ್ಥ ತ್ಯಾಗಕ್ಕೆ ಪ್ರಯೋಜಕವೆನ್ನಬೇಕು.

ಲೋಕದಲ್ಲಿ 'ಈ ಹಸು ಕ್ರಯಕ್ಕೆ ಕೊಳ್ಳಲು ಯೋಗ್ಯ' ಏಕೆಂದರೆ ಬಹಳ ಹಾಲು ನೀಡುತ್ತದೆ' ಎಂಬ ಕ್ರಯಣ ಶೇಷವಾಗಿ ಬಹುಕ್ಷೀರತ್ವವನ್ನು ಹೇಳಿದ್ದರೂ ಪ್ರತ್ಯಕ್ಷವಿರುದ್ಧವಲ್ಲದ್ದರಿಂದ

'ಬಹುಕ್ಷೀರಾ' ಪದಕ್ಕೆ ಮುಖ್ಯಾರ್ಥತ್ಯಾಗ ಮಾಡುವುದಿಲ್ಲ. 'ಕ್ರಯಕ್ಕೆ ಕೊಳ್ಳಲು ಯೋಗ್ಯ, ಏಕೆಂದರೆ ಇದು 'ಕಾಮಧೇನು' ಎಂದು ಹೇಳಿದರೆ ಮಾತ್ರ ಪ್ರತ್ಯಕ್ಷವಿರೋಧವಿರುವುದರಿಂದ 'ಕಾಮಧೇನು' ಶಬ್ದಕ್ಕೆ ಮುಖ್ಯಾರ್ಥತ್ಯಾಗ ಮಾಡುತ್ತೇವೆ. ಹಸುವು ಕಾಮಧೇನುವಿನಿಂದ ಅಭಿನ್ನವಲ್ಲ. ಕಾಮಧೇನುವಿನಂತೆ ಬಹಳ ಹಾಲು ನೀಡುತ್ತದೆ ಎಂದು ಲಕ್ಷಣಯಾ ಅರ್ಥವನ್ನು ಗ್ರಹಿಸುತ್ತೇವೆ.

ವೇದದಲ್ಲಿಯೂ 'ರುದ್ರನು ಕಣ್ಣೀರು ಸುರಿಸಿದನು. ಕಣ್ಣೀರೇ ಬೆಳ್ಳಿಯ ಉತ್ಪತ್ತಿಗೆ ಕಾರಣವಾಯಿತು' ಎಂದು ಅರ್ಥವಾದವು 'ಬರ್ಹಿ ಎಂಬ ಯಾಗದಲ್ಲಿ ರಜತದಾನ ಕೂಡದು' ಎಂಬ ನಿಷೇಧವಾಕ್ಯಕ್ಕೆ ಅಪೇಕ್ಷಿತವಾದ ರಜತನಿಂದೆಯನ್ನು ತಿಳಿಸುತ್ತ ನಿಷೇಧಶೇಷವಾಗಿದೆ. ಕಣ್ಣೀರು ಸುರಿಸಿದ್ದು ಮಾನಾಂತರ ವಿರುದ್ಧವಲ್ಲವಾದ್ದರಿಂದ 'ಅರೋದೀತ್' ಎಂಬ ಶಬ್ದದ ಮುಖ್ಯಾರ್ಥತ್ಯಾಗ ಮಾಡುತ್ತಿಲ್ಲ. ಪ್ರಸ್ತರಾದಿ ವಾಕ್ಯವು ಪ್ರತ್ಯಕ್ಷವಿರುದ್ಧವಾದ್ದರಿಂದ ಮುಖ್ಯಾರ್ಥತ್ಯಾಗ ಮಾಡುತ್ತಿದ್ದೇವೆ. ಮುಖ್ಯಾರ್ಥತ್ಯಾಗಕ್ಕೆ ಅನ್ಯಶೇಷತ್ವವು ಪ್ರಯೋಜಕವಲ್ಲ. ಪ್ರಮಾಣಾಂತರ ವಿರೋಧವೇ ಪ್ರಯೋಜಕ.

ಅದ್ವೈತವಾಕ್ಯವು ಅನನ್ಯಶೇಷವಾದರೂ ಪ್ರಮಾಣಾಂತರ ವಿರುದ್ಧವಾದ್ದರಿಂದ ಅಖಂಡಾರ್ಥಕ್ಕಾಗಿ ಮುಖ್ಯಾರ್ಥತ್ಯಾಗ ಮಾಡುತ್ತಾರೆ ಅದ್ವೈತಿಗಳು. ಭಾಮತೀಕಾರನು ಮುಖ್ಯಾರ್ಥತ್ಯಾಗ ಮಾಡುವುದಿಲ್ಲ ಎನ್ನುತ್ತಾನೆ.



**अनन्यशेषेऽपि ''सोमेन यजेत'' इत्यादौ वैयधिकरण्येनान्वये विरुद्धत्रिकद्वयापातात् सामानाधिकरण्येनान्वये प्रत्यक्षाविरोधाय 'सोमवता यागेन' इति मत्वर्थलक्षणायाः, विचारविधायके च जिज्ञासासूत्रे 'तद्विजिज्ञासस्व' इत्यादिश्रुतौ च प्रत्यक्षाविरोधाय जिज्ञासाशब्देन विचारलक्षणायाः, 'सर्वं खल्विदं ब्रह्म' इत्यादौ अमुख्यार्थतायाश्च स्वीकृतत्वाच्च । सर्वस्यापि वाक्यस्यावाच्ये ब्रह्मणि लक्षणाया एवेष्टत्वेनामुख्यार्थत्वनिषेधायोगाच्च । अन्वयानुपपत्ते-स्तात्पर्यानुपपत्तेर्वा लक्षणाबीजस्य विध्यविधिसाधारण्याच्च ।**

**शाबरवचनं तु—**

**'अनुवादमुख्यार्थत्वाय विधौ लक्षणा न युक्ता' इत्येवंपरम् ।**

**तस्मान्न प्रत्यक्षं शब्दबाध्यम् । तदुक्तम्—**

**यजमानप्रस्तरत्वं यथा नार्थः श्रुतेर्भवेत् ।**
**ब्रह्मत्वमपि जीवस्य प्रत्यक्षस्याविशेषतः इति ।।**

---

अमुख्यार्थत्वाश्रयणे अन्यशेषत्वस्येव मुख्यार्थग्रहणेऽपि अनन्यशेषत्वं न कारणं व्यभिचारादित्याह **अनन्यशेषेऽपीति ।**

**सोमेन यजेतेत्यादाविति ।** एतच्च नामधेयपादे विचारितम् । ''नामधेये गुणश्रुतेः स्याद्विधानमिति चेत्'' । (जै.सू.अ.१ पा.४ अधि ६ सू. ६) वाजपेयेन स्वाराज्यकामो यजेतेत्यत्र वाजपेयशब्दो गुणविधिः नामधेयं वेति संशये वाजशब्दस्यान्नवाचकत्वात् वाजमन्नं यत्पेयं तद्वाजपेयमिति योगोपस्थित यवाग्वादिलक्षण गुणविधिः न तु यागनामधेयं नातिप्रयोजनत्वादिति पूर्वपक्षयित्वा गुणविधित्वे वाजपेयवता यागेन फलं भावयेदिति द्रव्यविशिष्टस्य यजेः फलभावनायां करणत्वेन विधिमुपगम्य वाजपेयशब्दस्य यजिना सामानाधिकरण्येनान्वयाङ्गीकारे तदन्वयनिर्वाहाय तस्य मत्वर्थलक्षणादोष आपततीति वाजपेयेन यागं भावयेत् यागेन स्वाराज्यमिति यागकर्मिकायां भावनायां द्रव्यस्य करणत्वेन फलकर्मिकायां यागस्य करणत्वेन च विधिमुपगम्य तस्य वैयधिकरण्येनान्वयांगीकारे भावनायां द्रव्यस्य करणतयान्वयाय यागस्य कर्मत्वेन, फलस्य कर्मतयान्वयाय च यागस्य करणत्वेन प्रत्येतव्यत्वात् तथा प्रत्यययोश्च क्रमिकत्वे यजेरावृत्तिलक्षणवाक्यदोषप्रसंगादेकस्यैव यजेर्युगपदनुपपन्न परस्परविरुद्धकर्मत्वकरणत्वरूपद्वयोपस्थापकत्वात्मकवैरूप्यस्य यागे कर्मत्वानुबन्धिप्रधानत्वानुवाद्यत्वोद्देश्यत्व करणत्वानुबन्धिगुणत्व-विधेयत्वोपादेयत्वरूप विरुद्धत्रिकद्वयस्य च प्रसङ्गात् गुणविधानानुपपत्तेः कर्मनामधेयपरं वाजपेयपदमिति सिद्धान्तितमिति ।

एवञ्च सोमेन यजेतेत्यत्रापि वैयधिकरण्येन गुणविधिस्वीकारे सोमेन यागं कुर्यात् यागेन समीहितमिति विरुद्धत्रिकद्वयापत्तेः सामानाधिकरण्ये वक्तव्ये न नामतया यागसामानाधिकरण्यं, लतारूपेऽर्थान्तरे रूढस्य तस्य शक्त्यन्तरकल्पनापत्तेरतः ततो वरं लक्षणेति मत्वर्थलक्षणया गुणविधित्वेन

सामानाधिकरण्यम् मत्वर्थलक्षणाया अप्यभावे सोमलताया यागक्रियायाश्च भेदस्य प्रत्यक्षसिद्धत्वेन सामानाधिकरण्यस्य तेन बाधप्रसङ्गादिति तस्य प्रकृतोपयोगो द्रष्टव्यः । **प्रत्यक्षेति ।** सोमलताया यागस्य च भेदग्राहक प्रत्यक्षेत्यर्थः । यद्यपि मत्वर्थलक्षणाश्रयणं नात्र प्रत्यक्षविरोधात् किन्तु द्रव्यान्तरकल्पनागौरवादिति शक्यते वक्तुम् । तथापि ध्रौवाज्यसत्वेन कल्पनागौरवाभावात् प्रत्यक्षविरोधादेव तत्र मत्वर्थलक्षणाश्रयणमिति द्रष्टव्यम् । **प्रत्यक्षाविरोधायेति ।** श्रुतिसूत्रयोर्जिज्ञासा-शब्दार्थस्य ज्ञानेच्छारूपस्य प्रमाणवस्तुपरतन्त्रत्वेन पुरुषप्रयत्नसाध्यत्वस्य प्रत्यक्षबाधिततया तदविरोधायेत्यर्थः । इदमपि पररीत्येति द्रष्टव्यम् । **अमुख्यार्थताया इति ।।** बाधायां सामानाधिकरण्यरूपामुख्यार्थताया इत्यर्थः । **सर्वस्यापीति ।।** ज्ञेयब्रह्मनिष्ठसर्ववाक्यगतपदस्येत्यर्थः । इष्टत्वेनेत्यनन्तरं त्वयेति शेषः । **तात्पर्यानुपपत्तेरिति ।।** तात्पर्यविषयान्वयानुपपत्तेरित्यर्थः । नन्वेवं शाबरवचन-विरोध इत्यत आह **शाबरवचनं त्विति ।।** न विधौ परः शब्दार्थ इति शाबरवचनं विध्यनुवादयोरन्यतरामुख्यवृत्तावाश्रयितव्यायामनुवादमुख्यार्थत्वाय विधौ न लक्षणेत्येवंपरमित्यर्थः । **प्रत्यक्षस्येति ।** विरोधिप्रत्यक्षस्येत्यर्थः ।



**ಅನನ್ಯಶೇಷೇಽಪಿ ''ಸೋಮೇನ ಯಜೇತ'' ಇತ್ಯಾದೌ ವೈಯಧಿಕರಣ್ಯೇನಾನ್ವಯೇ ವಿರುದ್ಧತ್ರಿಕದ್ವಯಾಪಾತಾತ್ ಸಾಮಾನಾಧಿಕರಣ್ಯೇನಾನ್ವಯೇ ಪ್ರತ್ಯಕ್ಷಾವಿರೋಧಾಯ 'ಸೋಮವತಾ ಯಾಗೇನ' ಇತಿ ಮತ್ವರ್ಥಲಕ್ಷಣಾಯಾಃ,**

ಅಮುಖ್ಯಾರ್ಥಮಾಡಲು ಅನ್ಯಶೇಷತ್ವವು ಹೇಗೆ ಕಾರಣವಲ್ಲವೋ ಹಾಗೇ ಮುಖ್ಯಾರ್ಥ ಗ್ರಹಣಮಾಡುವುದಕ್ಕೂ ಅನನ್ಯ ಶೇಷತ್ವವು ಕಾರಣವಾಗುವುದಿಲ್ಲ. ಏಕೆಂದರೆ ವ್ಯಭಿಚಾರವಿದೆ.

'ಸೋಮೇನ ಯಜೇತ' ಎಂಬುದು ವಿಧಿವಾಕ್ಯವಾದ್ದರಿಂದ ಅನನ್ಯಶೇಷವೇ. ಅನ್ಯಕ್ಕೆ ಅದು ಶೇಷವಲ್ಲ. ಆದರೂ ವೈಯಧಿಕರಣ್ಯೇನ ಅನ್ವಯ ಮಾಡುವ ಪಕ್ಷದಲ್ಲಿ ವಿರುದ್ಧತ್ರಿಕದ್ವಯಾ ಪತ್ತಿದೋಷ ಬರುವುದರಿಂದ ಸಾಮಾನಾಧಿರಣ್ಯೇನ ಅನ್ವಯವನ್ನೇ ಮಾಡಬೇಕಾಗಿದೆ. ಆಗ ಪ್ರತ್ಯಕ್ಷವಿರೋಧ ಬರುತ್ತದೆ. ವಿರೋಧವನ್ನು ತಪ್ಪಿಸುವುದಕ್ಕಾಗಿ ಮತ್ವರ್ಥಲಕ್ಷಣಾದಿಂದ ಸೋಮ ಶಬ್ದಕ್ಕೆ ಸೋಮಾಹುತಿ ಉಳ್ಳ ಯಾಗ' ಎಂದು ಅಮುಖ್ಯಾರ್ಥವನ್ನೇ ಗ್ರಹಣ ಮಾಡಬೇಕು ಎಂದು ಮೀಮಾಂಸಕರು ಹೇಳುತ್ತಿದ್ದಾರೆ. ಅನನ್ಯ ಶೇಷವಾಗಿದೆ ಎಂಬ ಕಾರಣಕ್ಕೆ 'ಸೋಮಲತಾಽ-ಭಿನ್ನಯಾಗ' ಎಂದು ಮುಖ್ಯಾರ್ಥ ಗ್ರಹಣ ಮಾಡುವುದಿಲ್ಲ.

'ನಾಮಧೇಯೇ ಗುಣಶ್ರುತೇಃ ಸ್ಯಾದ್ ವಿಧಾನಮಿತಿ ಚೇತ್'(ಜೈ.ಸೂ.1.4.6)

ಎಂಬಲ್ಲಿ 'ವಾಜಪೇಯೇನ ಸ್ವಾರಾಜ್ಯ ಕಾಮೋ ಯಜೇತ' ಎಂಬ ವಿಧಿ ವಾಕ್ಯದಲ್ಲಿ 'ವಾಜಪೇಯ' ಶಬ್ದವು ಗುಣವಿಧಿಯೆ? ನಾಮಧೇಯವೆ? ಎಂದು ಸಂಶಯ. 'ವಾಜ' ಅಂದರೆ ಅನ್ನ. ಅದು 'ಪೇಯ' ಎಂದು ಯೋಗವೃತ್ತಿಯಿಂದ 'ಪೇಯವಾದ ಅಂಬಲಿಯಿಂದ ಯಾಗ ಮಾಡಬೇಕು' ಎಂದು ಅಂಬಲಿ ಎಂಬ ಗುಣವಿಧಿಯೆ ಹೊರತು 'ವಾಜಪೇಯ' ಎಂಬುದೊಂದು ಯಾಗದ ಹೆಸರು ಎಂದು ಗ್ರಹಿಸಬಾರದು. ಅದಕ್ಕೆ ವಿಶೇಷ ಪ್ರಯೋಜನವಿಲ್ಲ, ಎಂದು ಪೂರ್ವಪಕ್ಷ.

ನಾಮಧೇಯವೆ ಎಂದು ಸಿದ್ಧಾಂತ. ಏಕೆಂದರೆ ಗುಣವಿಧಿ ಪಕ್ಷದಲ್ಲಿ 'ವಾಜಪೇಯ' ಎಂಬ ದ್ರವ್ಯಉಳ್ಳಯಾಗದಿಂದ ಸ್ವಾರಾಜ್ಯ ಫಲವನ್ನು ಸಾಧಿಸಿಕೊಳ್ಳಬೇಕು ಎಂದು ದ್ರವ್ಯವಿಶಿಷ್ಟಯಾಗಕ್ಕೆ ಸ್ವಾರಾಜ್ಯಫಲಭಾವನಾದಲ್ಲಿ ಕರಣತ್ವೇನ ವಿಧಿಯನ್ನು ಅಂಗೀಕರಿಸಿ ವಾಜಪೇಯಶಬ್ದಕ್ಕೆ ಯಾಗದಲ್ಲಿ ಅಭೇದಾನ್ವಯ ಮಾಡಬೇಕಾಗುತ್ತದೆ. ಹೀಗೆ ಅಭೇದಾನ್ವಯವನ್ನು ನಿರ್ವಾಹ ಮಾಡುವುದಕ್ಕಾಗಿ 'ವಾಜಪೇಯ' ಎಂದರೆ 'ವಾಜಪೇಯ ಎಂಬ ದ್ರವ್ಯಉಳ್ಳ' ಎಂದು ಮತ್ವರ್ಥಲಕ್ಷಣಾ ಮಾಡುವುದು ಆವಶ್ಯಕವಾಗುತ್ತದೆ. ಈ ದೋಷ ಬರಬಾರದೆಂದರೆ 'ವಾಜಪೇಯ ದ್ರವ್ಯದಿಂದ ಯಾಗ ಮಾಡಬೇಕು, ಯಾಗದಿಂದ ಸ್ವರ್ಗ ಪಡೆದುಕೊಳ್ಳಬೇಕು' ಎಂದು ವೈಯಧಿಕರಣ್ಯೇನ ಅನ್ವಯ ಮಾಡಬೇಕು, ಆಗ ಯಾಗಕರ್ಮಕ ಭಾವನಾದಲ್ಲಿ ವಾಜಪೇಯ ದ್ರವ್ಯಕ್ಕೆ ಕರಣತ್ವೇನ ವಿಧಾನ, ಫಲಕರ್ಮಕ ಭಾವನಾದಲ್ಲಿ ಯಾಗಕ್ಕೆ ಕರಣತ್ವೇನ ವಿಧಾನ ಎನ್ನಬೇಕು. ಭಾವನಾದಲ್ಲಿ ದ್ರವ್ಯವು ಕರಣವಾಗಿ ಅನ್ವಯ ಹೊಂದಬೇಕಾದರೆ ಯಾಗವು ಕರ್ಮವೆಂದೂ, ಫಲವು ಕರ್ಮವಾಗಿ ಅನ್ವಯಹೊಂದಬೇಕಾದರೆ ಯಾಗವು ಕರಣವೆಂದೂ ಅನ್ವಯ ಹೊಂದಬೇಕು. ಯಾಗ ಕರ್ಮತ್ವ ಯಾಗಕರಣತ್ವ ಜ್ಞಾನಗಳು ಕ್ರಮವಾಗಿ ಬರಬೇಕೆಂದರೆ 'ಯಜ' ಧಾತುವನ್ನು ಆವೃತ್ತಿಮಾಡಿಕೊಳ್ಳಬೇಕಾಗುತ್ತದೆ. ಅದು ವಾಕ್ಯದೋಷ. ಆದರಿಂದ ಒಮ್ಮೆಲೆ ಎರಡೂ ಜ್ಞಾನಗಳು ಬರಬೇಕು. ಒಂದೇ ಯಜಧಾತು ಒಮ್ಮೆಲೆ ಪರಸ್ಪರ ವಿರುದ್ಧವಾದ ಕರ್ಮತ್ವಕರಣತ್ವಗಳೆರಡನ್ನೂ ಉಪಸ್ಥಾಪನ ಮಾಡುತ್ತದೆ ಎಂದರೆ ವೈರೂಪ್ಯವು ಯುಕ್ತವಲ್ಲ. ಮತ್ತು ಕರ್ಮತ್ವ ಪ್ರಯುಕ್ತವಾಗಿ ಯಾಗದಲ್ಲಿ ಪ್ರಧಾನತ್ವ–ಅನುವಾದ್ಯತ್ವ–ಉದ್ದೇಶ್ಯತ್ವಗಳು ಎಂದು ಒಂದು ವಿರುದ್ಧತ್ರಿಕ. ಕರಣತ್ವ ಪ್ರಯುಕ್ತವಾಗಿ ಗುಣತ್ವ–ವಿಧೇಯತ್ವ–ಉಪಾದೇಯತ್ವಗಳು ಎಂದು ಇನ್ನೊಂದು ವಿರುದ್ಧತ್ರಿಕ–ಹೀಗೆ ಎರಡು ವಿರುದ್ಧತ್ರಿಕಗಳು ಒಮ್ಮೆಲೆ ಬರುವುದೂ ಯುಕ್ತವಲ್ಲ. ಹೀಗೆ ವಾಜಪೇಯದ್ರವ್ಯವೆಂಬ ಗುಣವಿಧಾನವು ಕೂಡುವುದಿಲ್ಲ. ಆದರಿಂದ ವಾಜಪೇಯವೆಂಬುದು ಯಾಗದ ನಾಮಧೇಯ ಪರವಾದ ಶಬ್ದ ಎಂದು ಸಿದ್ಧಾಂತ ಮಾಡಿದ್ದಾರೆ.

ಆದರಿಂದ 'ಸೋಮೇನ ಯಜೇತ' ಎಂಬಲ್ಲಿಯೂ ವೈಯಧಿಕರಣ್ಯೇನ ಗುಣವಿಧಿ ಎಂದು ಸ್ವೀಕಾರ ಮಾಡುವ ಪಕ್ಷದಲ್ಲಿ ಸೋಮದಿಂದ ಯಾಗ ಮಾಡಬೇಕು ಯಾಗದಿಂದ ಅಭೀಷ್ಟಫಲವನ್ನು ಪಡೆದುಕೊಳ್ಳಬೇಕು ಎಂದು ಅನ್ವಯ ಮಾಡಬೇಕಾಗುತ್ತದೆ. ಆಗ ವಿರುದ್ಧತ್ರಿಕಗಳು ಎರಡು

ಏಕಕಾಲದಲ್ಲಿ ಬರುವುದು ಅಯುಕ್ತವಾಗುವುದು. ಅದಕ್ಕೆ ಸಾಮಾನಾಧಿಕರಣ್ಯೇನ ಅನ್ವಯವನ್ನೇ ಮಾಡಬೇಕು. ಸೋಮನಾಮಕ ಯಾಗವೆಂದು ಹೇಳಬೇಕು. ಆದರೆ ಸೋಮ ಎಂಬ ಹೆಸರು ಸೋಮಲತೆ ಎಂಬ ಅರ್ಥದಲ್ಲಿಯೆ ಪ್ರಸಿದ್ಧ. ಯಾಗ ಎಂಬ ಅರ್ಥದಲ್ಲಿ ಆ ಹೆಸರಿಗೆ ಬೇರೆ ಶಕ್ತಿಯನ್ನು ಕಲ್ಪನೆ ಮಾಡಬೇಕಾಗುತ್ತದೆ. ಅದಕ್ಕಿಂತ ಲಕ್ಷಣಾ ಮಾಡುವುದು ಒಳ್ಳೆಯದು. ಮತ್ವರ್ಥಲಕ್ಷಣಾಮಾಡಿ, ಸೋಮಾಹುತಿ ಉಳ್ಳ ಯಾಗವೆಂದು ಸಾಮಾನಾಧಿಕರಣ್ಯೇನ ಅನ್ವಯವನ್ನೇ ಮಾಡಬೇಕು. ಮತ್ವರ್ಥ ಲಕ್ಷಣಾ ಮಾಡದಿದ್ದರೆ ಪ್ರಸಿದ್ಧ ಸೋಮಲತೆಗೂ ಯಾಗಕ್ಕೂ ಭೇದವು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಸಾಮಾನಾಧಿಕರಣ್ಯಕ್ಕೆ, ಅಭೇದಾನ್ವಯಕ್ಕೆ ಬಾಧ ಬಂದೀತು. ಆದರಿಂದ ಈ ದೃಷ್ಟಾಂತವು ಪ್ರಕೃತದಲ್ಲಿ ಪ್ರತ್ಯಕ್ಷಕ್ಕೆ ಅಬಾಧ್ಯತ್ವವನ್ನು ಹೇಳಲು ಉಪಯುಕ್ತವೇ ಆಗಿದೆ.

ಯದ್ಯಪಿ ಮತ್ವರ್ಥ ಲಕ್ಷಣಾ ಮಾಡದಿದ್ದರೆ ಸೋಮರೂಪ ದ್ರವ್ಯವು ಸಿಗುವುದಿಲ್ಲ, ಬೇರೆ ದ್ರವ್ಯವನ್ನು ಕಲ್ಪನೆ ಮಾಡಬೇಕಾಗುತ್ತದೆ. ಅದು ಗೌರವ. ಗೌರವ ಬರುವುದರಿಂದ ಮತ್ವರ್ಥಲಕ್ಷಣಾ ಮಾಡಬೇಕಾಯಿತು, ಪ್ರತ್ಯಕ್ಷ ವಿರೋಧ ಬರುವುದರಿಂದಲ್ಲ ಎಂದು ಹೇಳಲು ಬರುತ್ತದೆ. ಆದರೆ ಸೋಮರೂಪ ದ್ರವ್ಯ ಸಿಗದಿದ್ದರೂ ಧ್ರೌವಾಜ್ಯ, ಧ್ರುವಾಪಾತ್ರೆಯಲ್ಲಿ ತುಂಬಿದ ಘೃತರೂಪ ದ್ರವ್ಯವು ಎಲ್ಲ ಯಾಗಗಳಿಗೂ ಇರುವುದರಿಂದ ದ್ರವ್ಯಾಂತರಕಲ್ಪನಾಗೌರವಕ್ಕೆ ಅವಕಾಶವಿಲ್ಲ. ಆದರಿಂದ ಪ್ರತ್ಯಕ್ಷ ವಿರೋಧಪ್ರಸಕ್ತಿಯೇ ಮತ್ವರ್ಥ ಲಕ್ಷಣಾ ಮಾಡಲು ಕಾರಣ ಎನ್ನಬೇಕು.

**ವಿಚಾರವಿಧಾಯಕೇ ಚ ಜಿಜ್ಞಾಸಾಸೂತ್ರೇ 'ತದ್ವಿಜಿಜ್ಞಾಸಸ್ವ' ಇತ್ಯಾದಿಶ್ರುತೌ ಚ ಪ್ರತ್ಯಕ್ಷಾವಿರೋಧಾಯ ಜಿಜ್ಞಾಸಾಶಬ್ದೇನ ವಿಚಾರಲಕ್ಷಣಾಯಾಃ,**

ವಿಚಾರವಿಧಾಯಕವಾದ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರದಲ್ಲಿಯೂ 'ತದ್ ವಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿಯೂ ಜಿಜ್ಞಾಸಾ ಶಬ್ದಕ್ಕೆ ವಿಚಾರದಲ್ಲಿ ಲಕ್ಷಣಾವನ್ನು ಅದ್ವೈತಿಗಳು ಮಾಡಿದ್ದಾರೆ. ಈ ಶ್ರುತಿ ಸೂತ್ರಗಳೆರಡೂ ವಿಚಾರವಿಧಾಯಕವಾದ್ದರಿಂದ ಅನನ್ಯ ಶೇಷಗಳೇ. ಆದರೂ ಜಿಜ್ಞಾಸಾ ಶಬ್ದದ ಮುಖ್ಯಾರ್ಥವಾದ ಜ್ಞಾನೇಚ್ಛೆಯನ್ನು ವಿಧಾನ ಮಾಡಲಾಗದು. ಇಚ್ಛೆಯು ಅವಿಧೇಯ. ವಿಧೇಯತ್ವವು ಅನುಭವರೂಪ ಪ್ರತ್ಯಕ್ಷಕ್ಕೆ ವಿರುದ್ಧವಾಗಿದೆ ಬಾಧಿತವಾಗಿದೆ ಎಂದೇ ವಿಚಾರದಲ್ಲಿ ಲಕ್ಷಣಾ ಎಂದು ಅಂಗೀಕರಿಸಿದ್ದಾರೆ. ಮುಖ್ಯಾರ್ಥತ್ಯಾಗ ಮಾಡಿದ್ದಾರೆ. ಅನನ್ಯ ಶೇಷತ್ವವು ಮುಖ್ಯಾರ್ಥಗ್ರಹಣಕ್ಕೆ ಇಲ್ಲಿ ಕಾರಣವಾಗಿಲ್ಲ.

**'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದೌ ಅಮುಖ್ಯಾರ್ಥತಾಯಾಶ್ಚ ಸ್ವೀಕೃತತ್ವಾಚ್ಚ।**

'ಸರ್ವಂ ಅಖಲ್ವಿದಂ ಬ್ರಹ್ಮ' ಎಂಬಲ್ಲಿ 'ಸರ್ವ'ಕ್ಕೂ ಬ್ರಹ್ಮನಿಗೂ ಮುಖ್ಯವಾದ ಸಾಮಾನಾಧಿ ಕರಣ್ಯವನ್ನು ಬಿಟ್ಟು ಅಮುಖ್ಯವಾದ ಬಾಧಾಯಾಂ ಸಾಮಾನಾಧಿಕರಣ್ಯವನ್ನು ಸ್ವೀಕರಿಸಿದ್ದಾರೆ. 'ಯದ್ ರಜತಂ ಸಾ ಶುಕ್ತಿಃ' ಎಂಬಲ್ಲಿ 'ರಜತ ಬಾಧಕ್ಕೆ ಶುಕ್ತಿಯು ಅವಧಿ' ಎಂಬರ್ಥದಲ್ಲಿ

ಸಾಮಾನಾಧಿಕರಣ್ಯ. ಹಾಗೇ 'ಸರ್ವಬಾಧಾವಧಿಯು ಬ್ರಹ್ಮ' ಎಂದು ಅರ್ಥದಲ್ಲಿ ಸಾಮಾನಾಧಿಕರಣ್ಯವನ್ನು 'ಸರ್ವಂ ಬ್ರಹ್ಮ' ಎಂಬಲ್ಲಿ ಹೇಳುತ್ತಾರೆ. ಇದು ಪ್ರತ್ಯಕ್ಷವು ಅಬಾಧ್ಯವಾದ ಪ್ರಯುಕ್ತ.

**ಸರ್ವಸ್ಯಾಪಿ ವಾಕ್ಯಸ್ಯ ಅವಾಚ್ಯೇ ಬ್ರಹ್ಮಣಿ ಲಕ್ಷಣಾಯಾ ಏವ ಇಷ್ಟತ್ವೇನ ಅಮುಖ್ಯಾರ್ಥತ್ವನಿಷೇಧಾಯೋಗಾಚ್ಚ ।**

ಬ್ರಹ್ಮವು ಅವಾಚ್ಯವಾದ್ದರಿಂದ ಬ್ರಹ್ಮನನ್ನು ಹೇಳುವ ಎಲ್ಲ ವಾಕ್ಯಗಳಲ್ಲಿಯೂ ಪದಕ್ಕೆ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವಾದ ಅಖಂಡ ಚೈತನ್ಯದಲ್ಲಿ ಲಕ್ಷಣಾವನ್ನೇ ಮಾಡುವುದು ಅದ್ವೈತಿಗೆ ಇಷ್ಟವಾಗಿರುವಾಗ 'ಅದ್ವೈತವಾಕ್ಯವು ಅಮುಖ್ಯಾರ್ಥಪರವಾಗುವುದೇ ಇಲ್ಲ' ಎಂದು ಭಾಮತೀಕಾರ ಹೇಳುವುದು ಅತ್ಯಂತ ಅಯುಕ್ತ.

**ಅನ್ವಯಾನುಪಪತ್ತೇಸ್ತಾತ್ಪರ್ಯಾನುಪಪತ್ತೇರ್ವಾ ಲಕ್ಷಣಾಬೀಜಸ್ಯ ವಿಧ್ಯವಿಧಿ ಸಾಧಾರಣ್ಯಾಚ್ಚ । ಶಾಬರವಚನಂ ತು 'ಅನುವಾದಮುಖ್ಯಾರ್ಥತ್ವಾಯ ವಿಧೌ ಲಕ್ಷಣಾ ನ ಯುಕ್ತಾ' ಇತ್ಯೇವಂಪರಮ್ ।**

'ವಿಧಿವಾಕ್ಯದಲ್ಲಿ ಲಕ್ಷಣಾ ಕೂಡದು. ಶಾಬರಭಾಷ್ಯದಲ್ಲಿ ಹಾಗೆ ಹೇಳಿದ್ದಾರೆ' ಎಂದು ಭಾಮತೀಕಾರನು ಹೇಳುವುದು ಸರಿಯಲ್ಲ. ಲಕ್ಷಣಾಬೀಜವು ಎಲ್ಲಕಡೆ ಆಪಾತತಃ ಅನ್ವಯವು ಕೂಡದಿರುವುದು ಅಥವಾ ತಾತ್ಪರ್ಯವಿಷಯವಾದ ಅನ್ವಯ ಕೂಡದಿರುವುದು. ಇವೆರಡೂ ವಿಧಿ ವಾಕ್ಯಗಳಿಗೂ ಅನುವಾದ ವಾಕ್ಯಗಳಿಗೂ ಸಮಾನವೆ. ಆದರಿಂದ ವಿಧಿವಾಕ್ಯದಲ್ಲಿಯೂ ಲಕ್ಷಣಾ ಮಾಡಬಹುದು ಮಾಡಬಾರದೆನ್ನಲು ಕಾರಣವಿಲ್ಲ. ಹೀಗೆ ಹೇಳಿದರೆ ಶಾಬರಭಾಷ್ಯವಿರೋಧ ಬರುತ್ತದೆ ಎನ್ನಬಾರದು. ವಿಧಿ ಅನುವಾದಗಳಲ್ಲಿ ಒಂದಕ್ಕೆ ಲಕ್ಷಣಾ ಮಾಡುವುದು ಆವಶ್ಯಕವಾದರೆ ವಿಧಿಗೆ ಮುಖ್ಯಾರ್ಥ ರಕ್ಷಣೆಗಾಗಿ ಅನುವಾದಕ್ಕೆ ಲಕ್ಷಣಾ ಮಾಡಬಹುದು ಹೊರತು ಅನುವಾದಕ್ಕೆ ಮುಖ್ಯಾರ್ಥ ರಕ್ಷಣೆಗಾಗಿ ವಿಧಿಗೆ ಲಕ್ಷಣಾ ಮಾಡುವುದು ಯುಕ್ತವಲ್ಲ ಎನ್ನುವುದು ಶಾಬರ ಭಾಷ್ಯದ ಅಭಿಪ್ರಾಯ.

ಇಲ್ಲಿ ಸಿದ್ಧಿಕಾರನ ಆಕ್ಷೇಪ ಹೀಗಿದೆ— ಪ್ರಮಾಣಾಂತರಸಂವಾದ ಅರ್ಥಕ್ರಿಯಾದಿರೂಪ ಪರೀಕ್ಷೆಯಿಂದ ಪ್ರತ್ಯಕ್ಷಕ್ಕೆ ಸಿದ್ಧವಾಗುವುದು ವ್ಯಾವಹಾರಿಕಪ್ರಾಮಾಣ್ಯ. ಅದನ್ನು ಅದ್ವೈತಾಗಮವು ಬಾಧಿಸುವುದಿಲ್ಲ. ತಾತ್ವಿಕ ಪ್ರಾಮಾಣ್ಯವನ್ನು ಮಾತ್ರ ಅದು ಬಾಧಿಸುತ್ತದೆ. ಅದು ಪರೀಕ್ಷೆಯಿಂದ ಸಿದ್ಧವಾಗಿಲ್ಲ. ಆದರಿಂದ ಪ್ರತ್ಯಕ್ಷ ವಿರೋಧದಿಂದ ವ್ಯಾವಹಾರಿಕವಾದ ಯಜಮಾನ ಪ್ರಸ್ತರಾದಿ ವಾಕ್ಯಕ್ಕೆ ಮಾತ್ರ ಅಮುಖ್ಯಾರ್ಥತ್ವ ಹೊರತು ಅದ್ವೈತಾಗಮಕ್ಕೆ ಅಮುಖ್ಯಾರ್ಥತ್ವ ಪ್ರಸಕ್ತಿ ಇಲ್ಲ.

ತತ್‌ತ್ವಂ ಪದಗಳಿಗೆ ಅಮುಖ್ಯಾರ್ಥವನ್ನು ಪ್ರತ್ಯಕ್ಷ ವಿರೋಧ ಪರಿಹಾರಕ್ಕಾಗಿ ನೀವೇ ಮಾಡಿರುವಿರಿ ತಾನೆ? ಎಂದರೆ ಅದು ಪ್ರತ್ಯಕ್ಷ ವಿರೋಧದಿಂದಲ್ಲ. ತಾತ್ಪರ್ಯಾನುಪಪತ್ತಿಯಿಂದ. ಅಖಂಡಾರ್ಥಲ್ಲಿ ತಾತ್ಪರ್ಯವಿರುವುದರಿಂದ ಅದಕ್ಕನುಗುಣವಾಗಿ ಲಕ್ಷಣಾಮಾಡಿ

ಸರ್ವಜ್ಞತ್ವಾದಿಗಳನ್ನು ಮಾತ್ರ ಪರಿತ್ಯಾಗ ಮಾಡಿದ್ದೇವೆ. 'ಲಕ್ಷಣಾ ಮಾಡಿದರೆ ಅಮುಖ್ಯಾರ್ಥವಾಗುವುದು ತಾನೆ?' ಎಂದರೆ, ಪ್ರತೀಯಮಾನಾರ್ಥವನ್ನು ತ್ಯಾಗ ಮಾಡಿದರೇ ಅಮುಖ್ಯಾರ್ಥತ್ವ. ನಾವು ತತ್‌ತ್ವಂ ಪದಗಳ ಸಾಮಾನಾಧಿಕರಣ್ಯದಿಂದ ಪ್ರತೀತವಾದ ಐಕ್ಯವನ್ನು ತ್ಯಾಗಮಾಡಿಲ್ಲ. ಬೇರೆ ಅಶಕ್ಯಾರ್ಥವನ್ನು ಇಟ್ಟುಕೊಂಡಿಲ್ಲ. ಶಕ್ಯದಲ್ಲಿ ಏಕದೇಶವಾದ ವಿಶೇಷ್ಯಚೈತನ್ಯಾಂಶವನ್ನು ಇಟ್ಟುಕೊಂಡಿದ್ದೇವೆ. ಹೀಗಾಗಿ ಅಮುಖ್ಯಾರ್ಥತ್ವ ಬರುವುದೇ ಇಲ್ಲ' ಎಂದು.

ಇದು ಸರಿಯಲ್ಲ. ಪ್ರತ್ಯಕ್ಷಕ್ಕೆ ಪರೀಕ್ಷೆಯಿಂದ ಅದ್ವೈತಾಗಮಕ್ಕೆ ಹೇಳುವ ಪ್ರಾಮಾಣ್ಯವೇ ಸಿದ್ಧವಾಗುವುದು. ಕೇವಲ ವ್ಯಾವಹಾರಿಕ ಪ್ರಾಮಾಣ್ಯವಲ್ಲ. ಆದರಿಂದ ಅದ್ವೈತಾಗಮಕ್ಕೆ ಪ್ರತ್ಯಕ್ಷ ವಿರೋಧವು ಅಪರಿಹಾರ್ಯ. ಪ್ರತ್ಯಕ್ಷಪ್ರಮಾಣ ವಿರೋಧವಿರುವಾಗ ಅಖಂಡಾರ್ಥದಲ್ಲಿ ತಾತ್ಪರ್ಯವೂ ಸಿದ್ಧವಾಗಲಾರದು. ಅಖಂಡದಲ್ಲಿ ತಾತ್ಪರ್ಯಸಿದ್ಧವಾದರೆ ಅದಕ್ಕನುಸಾರವಾಗಿ ವಿಶೇಷಣ ತ್ಯಾಗಮಾಡಿ ಕೇವಲ ವಿಶೇಷ್ಯ ಪರತ್ವವನ್ನು ಹೇಳಿದಾಗ ಪ್ರತ್ಯಕ್ಷ ವಿರೋಧವಿಲ್ಲ. ಪ್ರತ್ಯಕ್ಷಾವಿರೋಧ ಸಿದ್ಧವಾದರೆ ಅಖಂಡದಲ್ಲಿ ತಾತ್ಪರ್ಯಸಿದ್ಧಿ' ಎಂದು ಅನ್ಯೋನ್ಯಾಶ್ರಯ. ಲೌಕಿಕವಾಕ್ಯಗಳಲ್ಲಿ ಮಾನಾಂತರ ವಿರೋಧವಿದ್ದರೂ ತಾತ್ಪರ್ಯವಿರುವುದುಂಟು. ವೇದವಾಕ್ಯಗಳಲ್ಲಿ ಮಾನಾಂತರ ಅವಿರುದ್ಧವಾದ ವಿಷಯದಲ್ಲಿಯೇ ತಾತ್ಪರ್ಯಲಿಂಗದಿಂದ ತಾತ್ಪರ್ಯವನ್ನು ಅನುಮಾನ ಮಾಡುತ್ತೇವೆ. ಹೀಗಾಗಿ ಪ್ರತ್ಯಕ್ಷವಿರೋಧವಿರುವಾಗ ಅಖಂಡದಲ್ಲಿ ತಾತ್ಪರ್ಯ ಸಿದ್ಧಿಸಲಾರದು.

**ತಸ್ಮಾನ್ನ ಪ್ರತ್ಯಕ್ಷಂ ಶಬ್ದಬಾಧ್ಯಮ್ । ತದುಕ್ತಮ್—**
**ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ ।**
**ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಸ್ಯಾವಿಶೇಷತಃ ॥ ಇತಿ ॥**

ಆದರಿಂದ ಪ್ರತ್ಯಕ್ಷವು ಆಗಮದಿಂದ ಬಾಧ್ಯವಾಗುವುದಿಲ್ಲ. ಜಿಜ್ಞಾಸಾಧಿಕರಣ ಅನುವ್ಯಾಖ್ಯಾನದಲ್ಲಿ ಭಗವತ್ಪಾದರು ಹೇಳಿದ್ದಾರೆ— 'ಯಜಮಾನಃ ಪ್ರಸ್ತರಃ' ಎಂಬ ಶ್ರುತಿಗೆ ಯಜಮಾನ ಪ್ರಸ್ತರಾಭೇದವು ಹೇಗೆ ಅರ್ಥವಾಗದೋ ಹಾಗೇ ಅದ್ವೈತಾಗಮಕ್ಕೆ ಜೀವಬ್ರಹ್ಮಾಭೇದವೂ ಅರ್ಥವಾಗಲಾರದು. ಏಕೆಂದರೆ ಉಪಜೀವ್ಯ ಪ್ರತ್ಯಕ್ಷ ವಿರೋಧವು ಉಭಯತ್ರ ಸಮಾನ. ಯಜಮಾನ ಪ್ರಸ್ತರ ವಾಕ್ಯಕ್ಕೆ ಯಜಮಾನಗ್ರಾಹಿ ಪ್ರತ್ಯಕ್ಷವು ಹೇಗೆ ಉಪಜೀವ್ಯವೋ ಹಾಗೇ ಅದ್ವೈತವಾಕ್ಯಕ್ಕೆ ಜೀವಗ್ರಾಹಿ ಪ್ರತ್ಯಕ್ಷವು ಉಪಜೀವ್ಯವಾಗಿದೆ. ಎರಡು ಪ್ರತ್ಯಕ್ಷಗಳಲ್ಲಿ ವಿಶೇಷವಿಲ್ಲ' ಎಂದು.



# ಅಪಚ್ಛೇದ ನ್ಯಾಯ ವೈಷಮ್ಯಂ

**यत्तूक्तं वाचस्पतिना 'पूर्वस्य प्रत्यक्षस्य परेणागमेनापच्छेद न्यायेन बाधः' इति तन्न । नह्यस्माभिः पूर्वत्वमात्रेण प्रत्यक्षस्य बाधकतोक्ता, किन्तूपजीव्यत्वेन । नचापच्छेदे पूर्वमुपजीव्यम् ।**

---

**अपच्छेदन्यायेनेति ।** एतच्च षष्ठे पञ्चमपादे विचारितम् । पौर्वापर्ये पूर्वदौर्बल्यं प्रकृतिवत् । ज्योतिष्टोमेऽन्योन्यं संबध्य यज्ञशालातो निर्गच्छताम् ऋत्विजाम् ''अध्वर्युं प्रस्तोतान्वारभते । प्रस्तोतारं प्रतिहर्ता । प्रतिहर्तारमुद्गाता । उद्गातारं ब्रह्मा । तं यजमानः । यजमानं प्रशास्ते''ति श्रुत्या विहितस्यान्वारम्भणस्य विच्छेदे प्रायश्चित्तविशेषाः श्रूयन्ते । यदि प्रस्तोता अपच्छिन्द्यात् ब्रह्मणे वरं दद्यात् । यदि प्रतिहर्ता अपच्छिन्द्यात् सर्ववेदसं (वेतसं) दद्यात् । यद्युद्गातापच्छिन्द्याददक्षिणं (तं) यज्ञमिष्ट्वा तेन पुनर्यजेत । तत्र तद्दद्यात् यत् पूर्वस्मिन् दास्यन्स्यादिति । तत्र क्रमेण उद्गातृप्रतिहर्त्रोरपच्छेदे किं पूर्वनिमित्तं अदक्षिणं कर्तव्यमुतोत्तरनिमित्तं सर्वस्वदक्षिणाप्रायश्चित्तमिति संशये उपक्रमाधिकरणन्यायेनासंजातविरोधितया बलीयस्त्वात् पूर्वनिमित्तकं प्रायश्चित्तं कर्तव्यमिति पूर्वपक्षे उपसंहारस्य प्रथमप्रवृत्तोपक्रमैकवाक्यत्वेन तदाकांक्षितार्थसमर्पणनियमेन तद्विरुद्धार्थविषयत्वेन लब्धात्मतैव नास्तीति युक्तमुपक्रमाधिकरणे पूर्वप्राबल्यम् । इह तु परस्परनिरपेक्ष शास्त्रद्वयाधीनकर्तव्यताज्ञानयोराद्येन द्वितीयस्योत्पत्तिप्रतिबन्धासंभवादुत्पद्यमानस्य च तस्य नानुपमृद्य पूर्वं तद्विरोध्युत्तरमुत्पत्तुमर्हतीति पूर्वोपमर्देनोत्पत्तेः परस्य प्राबल्यं न्याय्यमिति परनिमित्तकं प्रायश्चित्तं कर्तव्यमिति सिद्धान्त इत्यपच्छेदन्यायेनेत्यर्थः ।

**नहीति ।** तथाच परस्परनिरपेक्षतया प्रवृत्तयोरपच्छेदनिमित्तप्रायश्चित्तशास्त्रयोः पूर्वस्य परेण बाधो युक्तः । इह तु आगमप्रवृत्तेर्नियमेन प्रत्यक्षसापेक्षतया न तेन प्रत्यक्षस्य बाधो युक्तः । तदाहुः

पूर्वात् परबलीयस्त्वं तत्र तावत् प्रतीयताम् ।

अन्योन्यनिरपेक्षाणां यत्र जन्म धियां भवेत्। इतीति भावः । **अपच्छेद इति ।** अपच्छेदनिमित्तकप्रायश्चित्तशास्त्र इत्यर्थः ।



**ಯತ್ತೂಕ್ತಂ ವಾಚಸ್ಪತಿನಾ— 'ಪೂರ್ವಸ್ಯ ಪ್ರತ್ಯಕ್ಷಸ್ಯ ಪರೇಣಾಗಮೇನ ಅಪಚ್ಛೇದನ್ಯಾಯೇನ ಬಾಧಃ' ಇತಿ ತನ್ನ ।**

**ನಹ್ಯಸ್ಮಾಭಿಃ ಪೂರ್ವತ್ವಮಾತ್ರೇಣ ಪ್ರತ್ಯಕ್ಷಸ್ಯ ಬಾಧಕತೋಕ್ತಾ । ಕಿಂತು ಉಪಜೀವ್ಯತ್ವೇನ, ನಚ ಅಪಚ್ಛೇದೇ ಪೂರ್ವಮುಪಜೀವ್ಯಮ್ ।**

ಭಾಮತೀಕಾರ ಹೇಳಿದ್ದಾನೆ— 'ಪೂರ್ವದಲ್ಲಿ ಪ್ರವೃತ್ತಿಮಾಡುವ ಪ್ರತ್ಯಕ್ಷಕ್ಕೆ ಪರದಲ್ಲಿ ಬರುವ ಆಗಮದಿಂದ ಅಪಚ್ಛೇದನ್ಯಾಯದಂತೆ ಬಾಧವು ಯುಕ್ತ' ಎಂದು. ಇದು ಸರಿಯಲ್ಲ, ನಾವು ಪ್ರತ್ಯಕ್ಷವು ಪೂರ್ವದಲ್ಲಿ ಪ್ರವೃತ್ತಿ ಮಾಡುವ ಮಾತ್ರದಿಂದಲೆ ಬಾಧಕವಾಗುತ್ತದೆ ಎನ್ನುತ್ತಿಲ್ಲ, ಉಪಜೀವ್ಯವಾದ್ದರಿಂದ ಬಾಧಕವಾಗುತ್ತದೆ ಎನ್ನುತ್ತಿದ್ದೇವೆ. ಅಪಚ್ಛೇದದಲ್ಲಿ ಪೂರ್ವವು ಪರಕ್ಕೆ ಉಪಜೀವ್ಯವಲ್ಲ, ಆದರಿಂದ ಅಪಚ್ಛೇದ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ,

'ಪೌರ್ವಾಪರ್ಯೇ ಪೂರ್ವದೌರ್ಬಲ್ಯಂ ಪ್ರಕೃತಿವತ್ (ಜೈ.ಸೂ.6.5.54)'

ಎಂಬ ಸೂತ್ರದಲ್ಲಿ ಹೀಗೆ ವಿಚಾರವಿದೆ— ಜ್ಯೋತಿಷ್ಟೋಮ ಎಂಬ ಸೋಮಯಾಗದಲ್ಲಿ ಪ್ರಾತಃಸವನದಲ್ಲಿ ಬಹಿಷ್ಪವಮಾನವೆಂಬ ಸಾಮಗಾನಕ್ಕೆಂದು ಋತ್ವಿಜರೂ ಯಜಮಾನನೂ ಯಾಗಶಾಲೆಯಿಂದ ಹವಿರ್ಧಾನ ಮಂಡಪಕ್ಕೆ ನಡೆಯುತ್ತಾರೆ. ಅಧ್ವರ್ಯು ಪ್ರಸ್ತೋತೃ ಪ್ರತಿಹರ್ತೃ ಉದ್ಗಾತೃ ಬ್ರಹ್ಮ ಯಜಮಾನ ಮತ್ತು ಪ್ರಶಾಸ್ತೃಗಳು ಮುಂದು ಮುಂದಿನವರ ಕಚ್ಛೆಯನ್ನು ಹಿಂದಿನವರು ಸ್ಪರ್ಶಿಸುತ್ತ ನಡೆಯಬೇಕೆಂದು ವಿಧಿ ಇದೆ. ಸ್ಪರ್ಶವನ್ನು ಯಾರಾದರೂ ಬಿಟ್ಟರೆ ಅದು ಅಪಚ್ಛೇದ, ಅದಕ್ಕೆ ಪ್ರಾಯಶ್ಚಿತ್ತವನ್ನು ಯಜಮಾನನು ಮಾಡಬೇಕೆಂದೂ ವಿಧಿ ಇದೆ'. ಪ್ರಸ್ತೋತೃ ಅಪಚ್ಛೇದ ಮಾಡಿದರೆ ಬ್ರಹ್ಮನಿಗೆ 'ವರ'ವನ್ನು ಅಂದರೆ ಅವನು ಕೇಳುವಷ್ಟು ದಕ್ಷಿಣೆಯನ್ನು ಅವನಿಗೆ ನೀಡಬೇಕು. ಪ್ರತಿಹರ್ತೃ ಅಪಚ್ಛೇದ ಮಾಡಿದರೆ ಸರ್ವಸ್ವ ದಾನ ಮಾಡಬೇಕು. ಉದ್ಗಾತೃ ಅಪಚ್ಛೇದ ಮಾಡಿದರೆ ದಕ್ಷಿಣೆ ಇಲ್ಲದೇ ಆ ಯಾಗವನ್ನು ಸಮಾಪ್ತಿ ಮಾಡಿ ತಿರುಗಿ ಅದೇ ಯಾಗವನ್ನು ಮಾಡಬೇಕು. ಅದರಲ್ಲಿ ಹಿಂದೆ ಕೊಡಬೇಕಾಗಿದ್ದ ದಕ್ಷಿಣೆಯನ್ನು ನೀಡಬೇಕು ಎಂದು.

ಕ್ರಮೇಣ ಉದ್ಗಾತೃವೂ ಪ್ರತಿಹರ್ತೃವೂ ಅಪಚ್ಛೇದ ಮಾಡಿದರೆ ಹೇಗೆ ಪ್ರಾಯಶ್ಚಿತ್ತ ಮಾಡಬೇಕು? ಮೊದಲಿನ ಉದ್ಗಾತ್ರಪಚ್ಛೇದ ನಿಮಿತ್ತಕವಾಗಿ ದಕ್ಷಿಣೆಯಿಲ್ಲದೆ ಯಾಗ ಸಮಾಪ್ತಿ ಮಾಡಬೇಕೆ? ಅಥವಾ ಪ್ರತಿಹರ್ತ್ರಪಚ್ಛೇದ ಪ್ರಯುಕ್ತ ಸರ್ವಸ್ವದಾನ ಮಾಡಬೇಕೆ? ಎಂದು ಸಂಶಯ. ಉಪಕ್ರಮಾಧಿಕರಣದಲ್ಲಿ ಹೇಳಿದಂತೆ ಅನುಪಸಂಜಾತ ವಿರೋಧ ನ್ಯಾಯವು

ಪ್ರಬಲವಾದ್ದರಿಂದ ಪೂರ್ವದ ನಿಮಿತ್ತವಾಗಿ ದಕ್ಷಿಣೆ ಇಲ್ಲದೆ ಯಾಗ ಸಮಾಪ್ತಿ ಮಾಡಬೇಕು ಎಂದು ಪೂರ್ವಪಕ್ಷ. ಉಪಸಂಹಾರವು ಪೂರ್ವಪ್ರವೃತ್ತ ಉಪಕ್ರಮದೊಂದಿಗೆ ಏಕವಾಕ್ಯತೆಗಾಗಿ ಉಪಕ್ರಮಕ್ಕೆ ಆಕಾಂಕ್ಷಿತವಾದ ವಿಷಯವನ್ನೇ ಹೇಳಬೇಕಾಗಿರುವುದರಿಂದ ಅದಕ್ಕೆ ವಿರುದ್ಧವಾಗಿ ಪ್ರವೃತ್ತಿಯನ್ನೆ ಮಾಡುವುದಿಲ್ಲ. ಆದರಿಂದ ಉಪಕ್ರಮಾಧಿಕರಣದಲ್ಲಿ ಪೂರ್ವಕ್ಕೆ ಪ್ರಾಬಲ್ಯವನ್ನು ಸಿದ್ಧಾಂತ ಮಾಡಿದ್ದಾರೆ. ಆದರೆ ಈ ಅಪಚ್ಛೇದ ಸ್ಥಳದಲ್ಲಿ ಎರಡು ಪ್ರಾಯಶ್ಚಿತ್ತ ವಿಧಿವಾಕ್ಯಗಳು ಪರಸ್ಪರ ನಿರಪೇಕ್ಷವಾಗಿ ಪ್ರಾಯಶ್ಚಿತ್ತ ವಿಧಾನ ಮಾಡುತ್ತಿರುವುದರಿಂದ ಮೊದಲನೆಯದು ಎರಡನೆಯದರ ಪ್ರವೃತ್ತಿಯನ್ನು ತಡೆಯಲಾರದು. ಆದರೆ ಎರಡನೆಯದು ಮೊದಲನೆಯದನ್ನು ಬಾಧಿಸದೆ ವಿರೋಧವಾಗಿ ಪ್ರವೃತ್ತಿ ಮಾಡಲಾರದು. ಬಾಧಿಸಿಯೇ ಪ್ರವೃತ್ತಿ ಮಾಡಬೇಕು. ಆದರಿಂದ ಮೊದಲಿಗಿಂತ ಎರಡನೆಯದೇ ಪ್ರಬಲ. ಪರನಿಮಿತ್ತ ಪ್ರಾಯಶ್ಚಿತ್ತವನ್ನೇ ಮಾಡಬೇಕು ಎಂದು ಸಿದ್ಧಾಂತ.

ಇಲ್ಲಿ ಪರಸ್ಪರ ನಿರಪೇಕ್ಷವಾಗಿ ಪ್ರವೃತ್ತಿ ಮಾಡುವ ಎರಡು ಪ್ರಾಯಶ್ಚಿತ್ತ ವಿಧಿಗಳಲ್ಲಿ ಪೂರ್ವಕ್ಕೆ ವಿರೋಧಿಯಾದ ಪರದಿಂದ ಪೂರ್ವಕ್ಕೆ ಬಾಧವು ಯುಕ್ತ. ಪ್ರಕೃತ ಪ್ರತ್ಯಕ್ಷ ಆಗಮಗಳಲ್ಲಿ ಆಗಮವು ಪ್ರತ್ಯಕ್ಷವನ್ನು ಉಪಜೀವಿಸಿಯೇ ಪ್ರವೃತ್ತಿ ಮಾಡುವುದರಿಂದ ಉಪಜೀವಕವಾದ ಆಗಮದಿಂದ ಉಪಜೀವ್ಯವಾದ ಪ್ರತ್ಯಕ್ಷಕ್ಕೆ ಬಾಧವು ಯುಕ್ತವಲ್ಲ. 'ಅನ್ಯೋನ್ಯ ನಿರಪೇಕ್ಷವಾಗಿ ಇಲ್ಲಿ ಪ್ರಮಾಣಗಳು ಹುಟ್ಟುವುದಿಲ್ಲ. ಎಲ್ಲಿ ಹುಟ್ಟುವವೋ ಅಲ್ಲಿ ಪೂರ್ವಕ್ಕಿಂತ ಪರವು ಪ್ರಬಲವಾದರೆ ಆಗಲಿ' ಎಂದಿದ್ದಾರೆ.



**किञ्च प्रतिहर्त्रुद्गात्रोः क्रमेणापच्छेदे प्रतिहर्त्रपच्छेद निमित्त सर्ववेदसदानस्य परेणोद्गात्रपच्छेदनिमित्तादाक्षिण्येन बाधेऽपि नात्यन्तबाधः । प्रतिहर्तृमात्रापच्छेदे, द्वयोरपि युगपदपच्छेदे, क्रमेणापच्छेदेऽपि प्रतिहर्त्रपच्छेदस्य पश्चात्त्वे च ''यदि प्रतिहर्तापच्छिन्यात्तर्हि सर्ववेदसं दद्याद्'' इति शास्त्रप्रामाण्यसंभवात् ।**

**अत एव षष्ठे ''तत्र विप्रतिषेधाद्विकल्पः स्याद्'' इत्यधिकरणे द्वयोर्युगपदपच्छेदे विकल्प उक्तः ।**

---

किञ्चापच्छेदस्थले पूर्वस्य परेण न नियमेन बाधः । प्रकृते तु पूर्वस्य प्रत्यक्षस्य

परेणागमेन नियमेन बाधान्नापच्छेदन्यायविषयतेत्याह **किश्चेति । प्रतिहर्त्रुद्गात्रोः क्रमेणेति ।** यत्र प्रतिहर्त्रपच्छेदः पूर्वमुद्गात्रपच्छेदश्च पश्चाज्जातस्तत्रेत्यर्थः । अत्यन्ताबाधमेवोपपादयति **प्रतिहर्तृमात्रेति । द्वयोरिति ।** उद्गातृप्रतिहर्त्रोरित्यर्थः । **क्रमेणापच्छेदेऽपीति ।** युगपदपच्छेदाभावेऽपीत्यर्थः । शास्त्रप्रामाण्यसंभवादित्येतत् अपिशब्दसमभिव्याहृतसप्तम्यन्तमात्रेण संबध्यते ।

प्रतिहर्तृमात्रापच्छेदस्थले प्रतिहर्त्रपच्छेदस्य पश्चात्त्वे च प्रामाण्यं सूपपादमित्यतस्तदुपपादनमकृत्वा युगपदपच्छेदस्थलप्रामाण्यमुपपादयति **अत एवेति ।** तत्र विप्रतिषेधाद्विकल्पः स्यात् । उद्गातृप्रतिहर्त्रोर्युगपदपच्छेदे किं नैमित्तिकद्वयं समुच्चीयते किं वा विकल्प्यत इति संशये विकल्पस्यादोषदुष्टत्वात् पुनर्यजेतेति प्रयोगद्वयसद्भावेन पूर्वस्मिन्नदक्षिणत्वमुत्तरस्मिम् सर्ववेदसमित्युभय-संभवाच्च समुच्चीयत इति पूर्वपक्षे यत्र प्रयोगे निमित्तं तस्यैवाङ्गं नैमित्तिकम् । न प्रयोगान्तरे क्रियमाणं निमित्तवतः प्रयोगस्य साद्गुण्यावहमित्येकस्मिन्नेव प्रयोगे द्वयमापतितम् । विरोधात्समुच्चेतुमशक्यं सद्विकल्प्यत इति सिद्धान्त इति षष्ठ एव विकल्प उक्त इत्यर्थः ।

❖❖❖

**ಕಿಂಚ ಪ್ರತಿಹರ್ತ್ರುದ್ಗಾತ್ರೋಃ ಕ್ರಮೇಣಾಪಚ್ಛೇದೇ ಪ್ರತಿಹರ್ತ್ರಪಚ್ಛೇದ ನಿಮಿತ್ತ ಸರ್ವವೇದಸ ದಾನಸ್ಯ ಪರೇಣ ಉದ್ಗಾತ್ರಪಚ್ಛೇದ ನಿಮಿತ್ತಾದಾಕ್ಷಿಣ್ಯೇನ ಬಾಧೇऽಪಿ ನ ಅತ್ಯಂತಬಾಧಃ। ಪ್ರತಿಹರ್ತೃಮಾತ್ರಾಪಚ್ಛೇದೇ, ದ್ವಯೋರಪಿ ಯುಗಪದಪಚ್ಛೇದೇ, ಕ್ರಮೇಣಾಪಚ್ಛೇದೇऽಪಿ ಪ್ರತಿಹರ್ತ್ರಪಚ್ಛೇದಸ್ಯ ಪಶ್ಚಾತ್ತ್ವೇ ಚ**

**''ಯದಿ ಪ್ರತಿಹರ್ತಾಪಚ್ಛಿಂದ್ಯಾತ್ ತರ್ಹಿ ಸರ್ವವೇದಸಂ ದದ್ಯಾತ್''**

**ಇತಿ ಶಾಸ್ತ್ರಪ್ರಾಮಾಣ್ಯಸಂಭವಾತ್। ಅತ ಏವ ಷಷ್ಠೇ ''ತತ್ರ ವಿಪ್ರತಿಷೇಧಾದ್ವಿಕಲ್ಪಃ ಸ್ಯಾದ್'' ಇತ್ಯಧಿಕರಣೇ ದ್ವಯೋರ್ಯುಗಪದಪಚ್ಛೇದೇ ವಿಕಲ್ಪಃ ಉಕ್ತಃ।**

ಪ್ರತಿಹರ್ತೃ ಉದ್ಗಾತೃಗಳು ಕ್ರಮವಾಗಿ ಅಪಚ್ಛೇದ ಮಾಡಿದಾಗ ಪ್ರತಿಹರ್ತ್ರಪಚ್ಛೇದ ಪ್ರಯುಕ್ತ ಕೊಡಬೇಕಾದ ಸರ್ವಸ್ವದಾನವನ್ನು ಅನಂತರ ಮಾಡಿದ ಉದ್ಗಾತ್ರಪಚ್ಛೇದ ಪ್ರಯುಕ್ತ ದಕ್ಷಿಣಾಭಾವವು ಬಾಧಿಸಿದರೂ, ಅದು ಅತ್ಯಂತ ಬಾಧವಲ್ಲ. ಅಂದರೆ, ಪ್ರತಿಹರ್ತ್ರ ಪಚ್ಛೇದಪ್ರಯುಕ್ತವಾಗಿ ಸರ್ವಸ್ವದಾನ ಮಾಡಬೇಕೆನ್ನುವ ಶಾಸ್ತ್ರವು ತಾನು ಹೇಳುವ ಸರ್ವಸ್ವದಾನ

ಪ್ರಾಯಶ್ಚಿತ್ತವನ್ನು ಮಾಡಿಸದೆ ಅಪ್ರವರ್ತಕವಾಗಿ ಅಪ್ರಮಾಣವೆನಿಸುವುದಿಲ್ಲ. ಏಕೆಂದರೆ ಅದು ಉದ್ಗಾತ್ರಪಚ್ಛೇದವಾದ ಸ್ಥಳದಲ್ಲಿ ಮಾತ್ರ ಪ್ರವರ್ತಕವಾಗುವುದಿಲ್ಲ, ಹೊರತು ಪ್ರತಿಹರ್ತೃ ಮಾತ್ರ ಅಪಚ್ಛೇದ ಮಾಡಿದಾಗ ಪ್ರವರ್ತಕವೇ ಆಗುತ್ತದೆ. ಪ್ರತಿಹರ್ತೃ ಉದ್ಗಾತೃಗಳಿಬ್ಬರೂ ಒಮ್ಮೆಲೆ ಅಪಚ್ಛೇದ ಮಾಡಿದಾಗಲೂ ವಿಕಲ್ಪವಾಗಿ ಪ್ರವರ್ತಕವಾಗಿಯೇ ಆಗುತ್ತದೆ. ಒಮ್ಮೆಲೆ ಇಬ್ಬರೂ ಅಪಚ್ಛೇದ ಮಾಡದಿದ್ದಲ್ಲಿಯೂ ಪ್ರತಿಹರ್ತ್ರರ್ತೃಅನಂತರ ಅಪಚ್ಛೇದ ಮಾಡಿದಾಗ ಆ ಶಾಸ್ತ್ರವು ಪ್ರವರ್ತಕವೇ ಆಗುವುದು. ಪ್ರಮಾಣವೇ ಆಗುವುದು. ಆದರಿಂದ ಷಷ್ಠಾಧ್ಯಾಯದಲ್ಲಿ 'ತತ್ರವಿಪ್ರತಿಷೇಧಾತ್ ವಿಕಲ್ಪಃ ಸ್ಯಾತ್'(ಜೈ.ಸೂ.6.5.51) ಎಂಬ ಅಧಿಕರಣದಲ್ಲಿ ಇಬ್ಬರೂ ಒಮ್ಮೆಲೆ ಅಪಚ್ಛೇದ ಮಾಡಿದಾಗ ವಿಕಲ್ಪದಿಂದ ಎರಡೂ ಶಾಸ್ತ್ರಗಳು ಪ್ರವರ್ತಕವಾಗುವುವು ಎಂದಿದ್ದಾರೆ—

ಉದ್ಗಾತೃ ಪ್ರತಿಹರ್ತೃಗಳಿಬ್ಬರೂ ಒಮ್ಮೆಲೇ ಅಪಚ್ಛೇದ ಮಾಡಿದಾಗ ತತ್‌ಪ್ರಯುಕ್ತ ಪ್ರಾಯಶ್ಚಿತ್ತಗಳೆರಡಕ್ಕೆ ಸಮುಚ್ಚಯವೆ ಅಥವಾ ವಿಕಲ್ಪವೆ? ಎಂದು ಸಂಶಯ. ವಿಕಲ್ಪವು ಅಷ್ಟದೋಷ ದುಷ್ಟವಾದ್ದರಿಂದ, ಮತ್ತು ಪುನಃ ಯಾಗ ಮಾಡಬೇಕೆಂಬ ವಿಧಿಯಂತೆ ಎರಡುಬಾರಿ ಯಾಗ ಪ್ರಯೋಗಗಳಿರುವುದರಿಂದ ಮೊದಲನೆ ಪ್ರಯೋಗದಲ್ಲಿ ದಕ್ಷಿಣಾಭಾವ ಎರಡನೆ ಪ್ರಯೋಗದಲ್ಲಿ ಸರ್ವಸ್ವದಾನ ಎಂದು ಎರಡೂ ಕೂಡುವುದರಿಂದ ಸಮುಚ್ಚಯವೆ ಎಂದು ಪೂರ್ವಪಕ್ಷ. ಯಾವ ಪ್ರಯೋಗದಲ್ಲಿ ನಿಮಿತ್ತವಿದೆಯೋ ಆ ಪ್ರಯೋಗದಲ್ಲಿಯೆ ಪ್ರಾಯಶ್ಚಿತ್ತ ಮಾಡಬೇಕು. ಬೇರೆ ಪ್ರಯೋಗದಲ್ಲಿ ಪ್ರಾಯಶ್ಚಿತ್ತ ಮಾಡಿದರೆ ನಿಮಿತ್ತಉಳ್ಳ ಈ ಪ್ರಯೋಗವು ಸಫಲವಾಗಲಾರದು. ಆದರಿಂದ ಒಂದೇ ಪ್ರಯೋಗದಲ್ಲಿ ಸರ್ವಸ್ವದಾನ ದಕ್ಷಿಣಾಭಾವಗಳೆರಡೂ ಪ್ರಾಪ್ತವಾಗುವುದರಿಂದ ವಿರುದ್ಧವಾದ ಅವೆರಡಕ್ಕೆ ಸಮುಚ್ಚಯ ಕೂಡದಿರುವುದರಿಂದ ವಿಕಲ್ಪವೆ ಎಂದು ಷಷ್ಠಾಧ್ಯಾಯದಲ್ಲಿ ಸಿದ್ಧಾಂತ ಮಾಡಿದ್ದಾರೆ.



किञ्च ''यद्युद्गाता जघन्यः स्यात् पुनर्यज्ञे सर्ववेदसं दद्याद्'' इत्यधिकरणे उद्गात्रपच्छेदस्य प्रतिहर्त्रपच्छेदात्परत्वे उद्गात्रपच्छेदनिमित्तके प्रथमप्रयोगं दक्षिणाहीनं समाप्य कर्तव्ये ज्योतिष्टोमस्य द्वितीयप्रयोगे ''तद्दद्यायत्पूर्वस्मिन् दास्यन्स्याद्''इति या श्रुत्युक्ता दक्षिणा सा पूर्वभाविप्रतिहर्त्रपच्छेदनिमित्तकपूर्वप्रयोगस्थ सर्वस्वदित्साया अबाधेन सर्वस्वरूपैव । ननु या ज्योतिष्टोमे नित्या द्वादशशतरूपा सा । तस्मान्न प्रतिहर्त्रपच्छेदस्य सर्वथा बाधः । किन्तु

**प्रयोगान्तरे निक्षेप इत्युक्तम् । उक्तं हि टुप्टीकायां ''तस्य प्रयोगांतरे निक्षेपः क्रियते'' इति ।**



यदापि क्रमेणापच्छेदः प्रतिहर्त्रपच्छेदश्च पूर्वं तदापि तन्निमित्तप्रायश्चित्तशास्त्रस्य अत्यन्ताबाधमुपपादयति **किञ्चेति । इत्यधिकरण इति ।** यद्युद्गात्रपच्छेदः परो भवति तदा तन्निमित्तके पुनर्यज्ञे किं क्रतुसंकल्पकाले दित्सितं द्वादशशतमेव तत्र देयमुत प्रतिहर्त्रपच्छेदे दित्सितं सर्वस्वमिति संशये, पूर्वस्मिन् दास्यन्नित्यनेन यन्नित्यवत् क्रतुस्वभावतो देयं तदेव प्रतीयते, न त्वागन्तुकमिति द्वादशशतमेव तत्र देयमिति पूर्वपक्षे, प्रथमं यद् द्वादशशतं दास्यन्नासीत् तत्परेण सर्ववेदसेन बाधितमेव । नच तदपि परेणादाक्षिण्येन बाधितमिति वाच्यम् । तस्याबाधेनैव प्रयोगान्तरे निक्षेपोपपत्तेस्तत्र सर्वस्वमेव देयमिति सिद्धान्त इति अधिकरण इत्यर्थः । **प्रतिहर्त्रपच्छेदस्येति ।** प्रतिहर्त्रपच्छेदनिमित्तकप्रायश्चित्तशास्त्रस्येत्यर्थः । **उक्तमिति ।** एतच्च **इत्यधिकरण** इत्यनेन संबध्यते । **तस्येति ।** सर्ववेदसदानस्येत्यर्थः ।

❖❖❖

**ಕಿಂಚ ''ಯದ್ಯುದ್ಗಾತಾ ಜಘನ್ಯಃ ಸ್ಯಾತ್ ಪುನರ್ಯಜ್ಞೇ ಸರ್ವವೇದಸಂ ದದ್ಯಾತ್'' ಇತ್ಯಧಿಕರಣೇ ಉದ್ಗಾತ್ರಪಚ್ಛೇದಸ್ಯ ಪ್ರತಿಹರ್ತ್ರಪಚ್ಛೇದಾತ್ ಪರತ್ವೇ ಉದ್ಗಾತ್ರಪಚ್ಛೇದನಿಮಿತ್ತಕೇ ಪ್ರಥಮಪ್ರಯೋಗಂ ದಕ್ಷಿಣಾಹೀನಂ ಸಮಾಪ್ಯ ಕರ್ತವ್ಯೇ ಜ್ಯೋತಿಷ್ಟೋಮಸ್ಯ ದ್ವಿತೀಯಪ್ರಯೋಗೇ ''ತದ್ದದ್ಯಾದ್ಯತ್ ಪೂರ್ವಸ್ಮಿನ್ ದಾಸ್ಯನ್ ಸ್ಯಾದ್''ಇತಿ ಯಾ ಶ್ರುತ್ಯುಕ್ತಾ ದಕ್ಷಿಣಾ ಸಾ ಪೂರ್ವಭಾವಿ ಪ್ರತಿಹರ್ತ್ರಪಚ್ಛೇದ ನಿಮಿತ್ತಕ ಪೂರ್ವಪ್ರಯೋಗಸ್ಥ ಸರ್ವಸ್ವದಿತ್ಸಾಯಾ ಅಬಾಧೇನ ಸರ್ವಸ್ವರೂಪೈವ। ನತು ಯಾ ಜ್ಯೋತಿಷ್ಟೋಮೇ ನಿತ್ಯಾ ದ್ವಾದಶಶತರೂಪಾ ಸಾ। ತಸ್ಮಾನ್ನ ಪ್ರತಿಹರ್ತ್ರಪಚ್ಛೇದಸ್ಯ ಸರ್ವಥಾ ಬಾಧಃ ಕಿಂತು ಪ್ರಯೋಗಾಂತರೇ ನಿಕ್ಷೇಪಃ ಇತ್ಯುಕ್ತಮ್। ಉಕ್ತಂ ಹಿ ಟುಪ್ ಟೀಕಾಯಾಂ ''ತಸ್ಯ ಪ್ರಯೋಗಾಂತರೇ ನಿಕ್ಷೇಪಃ ಕ್ರಿಯತೇ'' ಇತಿ।**

ಯದ್ಯುದ್ಗಾತಾ ಜಘನ್ಯಃ ಸ್ಯಾತ್ ಪುನರ್ಯಜ್ಞೇ ಸರ್ವವೇದಸಂ ದದ್ಯಾದ್ ಯಥೇತರಸ್ಮಿನ್(ಜೈ.ಸೂ.6.5.55) 'ಪ್ರತಿಹರ್ತ್ರಪಚ್ಛೇದಾನಂತರದಲ್ಲಿ ಉದ್ಗಾತೃ ಅಪಚ್ಛೇದ ಮಾಡಿದರೆ ಪುನಃ ಮಾಡುವ ಯಜ್ಞದಲ್ಲಿ ಸರ್ವಸ್ವದಾನವನ್ನೇ ಮಾಡಬೇಕು. ಪ್ರತಿಹರ್ತ್ರಪಚ್ಛೇದ ಮಾತ್ರವಾದ

ಸ್ಥಳದಲ್ಲಿ ಹೇಗೋ ಹಾಗೆ' ಎಂಬ ಅಧಿಕರಣದಲ್ಲಿ ಹೀಗೆ ಹೇಳಿದೆ— 'ಪ್ರತಿಹರ್ತೃಪಚ್ಛೇದದ ಪರದಲ್ಲಿ ಉದ್ಗಾತೃ ಅಪಚ್ಛೇದ ಮಾಡಿದಾಗ ಯಾಗದ ಆ ಮೊದಲನೆ ಪ್ರಯೋಗವನ್ನು ದಕ್ಷಿಣೆ ಇಲ್ಲದೆ ಮಾಡಿ ಮುಗಿಸಿ ಪುನಃ ಮಾಡುವ ಎರಡನೇ ಪ್ರಯೋಗದಲ್ಲಿ ಹಿಂದೆ ಮೊದಲಿನ ಪ್ರಯೋಗದಲ್ಲಿ ಪ್ರತಿಹರ್ತೃಪಚ್ಛೇದಕ್ಕೆ ಮಾಡಬೇಕಿದ್ದ ದಾನವನ್ನೇ ಮಾಡಬೇಕೆಂದು ಶ್ರುತಿ ಇದೆ.

ಇಲ್ಲಿ ಸಂಶಯ— ಹಿಂದೆ ಮಾಡಬೇಕಿದ್ದ ದಾನವೆಂದರೆ ಯಾಗ ಸಂಕಲ್ಪಕಾಲದಲ್ಲಿ ನಿಶ್ಚಯ ಮಾಡಿದ್ದ ದ್ವಾದಶ ಶತ ದಕ್ಷಿಣೆಯೆ ಅಥವಾ ಪ್ರತಿಹರ್ತೃಪಚ್ಛೇದವಾದೊಡನೆ ಪ್ರಾಯಶ್ಚಿತ್ತವಾಗಿ ಕೊಡಲು ನಿಶ್ಚಯ ಮಾಡಿದ ಸರ್ವಸ್ವ ದಾನವೆ? ಎಂದು.

ಪೂರ್ವಪಕ್ಷ ಹೀಗೆ— 'ಪೂರ್ವದಲ್ಲಿ ಕೊಡಲು ನಿಶ್ಚಯಿಸಿದ್ದ ದಾನ'ವೆಂದರೆ ನಿತ್ಯಕರ್ಮವಾಗಿ ಜ್ಯೋತಿಷ್ಟೋಮಯಾಗಸ್ವಭಾವಾನುಗುಣವಾಗಿ ನೀಡುವ ದ್ವಾದಶಶತದಕ್ಷಿಣಾ ದಾನವೆಂದೇ ಅರ್ಥ ಕಾಣುತ್ತದೆ. ಹೊರತು ಆಗಂತುಕನಿಮಿತ್ತ ಪ್ರಯುಕ್ತವಾದ ಸರ್ವಸ್ವ ದಾನವೆಂದು ಅರ್ಥವಾಗುವುದಿಲ್ಲ. ಆದರಿಂದ ದ್ವಾದಶಶತ ದಕ್ಷಿಣೆಯನ್ನೇ ಎರಡನೆ ಪ್ರಯೋಗದ ಕೊನೆಯಲ್ಲಿ ಕೊಡಬೇಕು' ಎಂದು.

ಸಿದ್ಧಾಂತ— ಮೊದಲು ಯಾಗ ಸಂಕಲ್ಪಕಾಲದಲ್ಲಿ ದ್ವಾದಶಶತ ದಕ್ಷಿಣೆಯನ್ನು ಕೊಡಲು ಯಜಮಾನನು ನಿಶ್ಚಯಿಸಿದ್ದಾನೆ. ಆದರೆ ಅದು ಪ್ರತಿಹರ್ತೃಪಚ್ಛೇದವಾದಾಗ ಪ್ರಾಪ್ತವಾದ ಸರ್ವಸ್ವದಾನದಿಂದ ಬಾಧಿತವಾಗಿ ಹೋಗಿದೆ. ಆ ಸರ್ವಸ್ವದಾನವೂ ಕೂಡ ಅದಕ್ಕಿಂತ ಪರದಲ್ಲಿ ಪ್ರಾಪ್ತವಾದ ದಕ್ಷಿಣಾಭಾವದಿಂದ ಬಾಧಿತವಾಯಿತು ತಾನೆ? ಎಂದರೆ ಬಾಧಿತವಾಗಲಿಲ್ಲ, ಎರಡನೇ ಪ್ರಯೋಗಕ್ಕೆ ಮುಂದೂಡಲ್ಪಟ್ಟಿದೆಯಷ್ಟೆ. ಅದರಿಂದ ಎರಡನೆ ಪ್ರಯೋಗದಲ್ಲಿ ಆ ಸರ್ವಸ್ವದಾನವೇ ಕರ್ತವ್ಯವಾಗುತ್ತದೆ. ಆದರಿಂದ 'ಪ್ರತಿಹರ್ತೃಪಚ್ಛೇದ'ಕ್ಕೆ ಅಂದರೆ ಪ್ರತಿಹರ್ತೃಪಚ್ಛೇದ ನಿಮಿತ್ತವಾಗಿ ಪ್ರಾಯಶ್ಚಿತ್ತವನ್ನು ವಿಧಿಸುವ ವಾಕ್ಯಕ್ಕೆ ಸರ್ವಥಾ ಬಾಧವಿಲ್ಲ. ಪ್ರಾಯಶ್ಚಿತ್ತವನ್ನು ಎರಡನೇ ಪ್ರಯೋಗಕ್ಕೆ ಮುಂದೂಡಲಾಯಿತಷ್ಟೆ ಎಂದು.

ಟುಪ್‌ಟೀಕೆಯಲ್ಲಿ ಹೇಳಿದ್ದಾರೆ— ಮೊದಲನೆ ಪ್ರಯೋಗದಲ್ಲಿ ಕೊಡಬೇಕಾಗಿದ್ದ ಸರ್ವಸ್ವದಾನವನ್ನು ಎರಡನೇ ಪ್ರಯೋಗಕ್ಕೆ ಮುಂದೂಡಿದೆಯಷ್ಟೆ ಹೊರತು ಸರ್ವಥಾ ಬಾಧಿಸಿಲ್ಲ' ಎಂದು.



**अपि चैकस्मिन्नपि प्रयोगे क्रमिकाभ्यां निमित्ताभ्यां क्रतौ तत्तन्नैमित्तिककर्तव्यतयोर्बदरफले श्यामरक्तरूपयोरिव क्रमेणोत्पत्तेः रूपज्ञानद्वयवच्छास्त्रद्वयमपि प्रमाणमेव । उक्तं ह्यपच्छेदाधिकरणे**

**''नैमित्तिकशास्त्रस्य ह्ययमर्थः निमित्तोपजननात्प्रागन्यथाकर्तव्योऽपि क्रतुर्निमित्ते सत्येवं कर्तव्यः'' इति ।**

**ततश्चार्थस्यैव बदरफलस्येव श्यामरक्तरूपेण, प्राक्तथाभूतस्य पश्चादन्यथाभावात् पूर्वशास्त्रस्य प्रामाण्यमेव, न पूर्वशास्त्रस्याप्रामाण्यम् । नहि बदरफले श्यामत्वविज्ञानम् अनन्तरस्य रक्तत्वस्यावगत्या मिथ्या भवतीति ।**

---

पूर्वं पाक्षिकबाधमभ्युपेत्यापच्छेदन्यायवैषम्यमुक्तं, सम्प्रति विषयसत्त्वेन पाक्षिकोऽपि बाधो नेति नैवंविधविषयेऽपच्छेदन्यायप्रसर इत्यभिप्रेत्याह **अपि चेति । तत्तन्निमित्तकर्तव्यतयोरिति ।** ननु किमिदं कर्तव्यत्वं यत्परनैमित्तिककर्तव्यत्वोत्पत्त्या निवर्तते ? न तावत् पूर्वनैमित्तिकस्य कृतिसाध्यत्वयोग्यत्वम् । तस्य फलोपकारितया सन्निपातितया वा कारणत्वविशेषरूपत्वेन पश्चादप्यनपायात् । नापि फलोपधानरूपं कृतिसाध्यत्वम् । तस्य पूर्वमनुत्पत्तेः । नापि यदननुष्ठाने क्रतोर्वैकल्यं तत्त्वमङ्गत्वं वा । अननुष्ठाने क्रतुवैकल्यप्रयोजकत्वस्य नियमविशेषरूपत्वेन, कर्माङ्गत्वस्य फलोपकारितया तत्सन्निपातितया वा कारणत्वविशेषरूपत्वेन च यावद्धर्मिभावितया तयोः कादाचित्कत्वायोगात् । नाप्यागमापाययोग्यं पदार्थान्तरं मानाभावादिति चेन्न ।

निमित्तोपजननात् प्रागिदमित्थं कर्तव्यमासीत् । निमित्ते सत्यन्यथा कर्तव्यं जातमित्यबाधितानुभवबलेन कर्तव्यत्वस्यागमापाययोग्य-पदार्थान्तररूपत्वसंभवात् ।

यद्वाङ्गत्वमेव कर्तव्यत्वम् । तच्च फलोपकारितया सन्निपातितया वा साधनत्वम् । तदपि साधनतावच्छेदकावच्छिन्नत्वरूपयोग्यत्वमेव । तदवच्छेदकं चोद्गात्रपच्छेदनिमित्तस्य कर्मणः उत्तरभाविप्रतिहर्त्रपच्छेदाभावावच्छिन्नत्वे सति उद्गात्रपच्छेदोत्तरकालावच्छिन्नतत्कर्मकत्वम् । उद्गात्रपच्छेदरूपनिमित्ताभावस्थले उत्तरभाविप्रतिहर्त्रपच्छेदरूपनिमित्तस्थले चानुष्ठितस्योद्गात्रपच्छेदनिमित्तस्य कर्मणः क्रतुस्वरूपं प्रति तत्साध्यापूर्वं प्रति वा साधनत्वाभावात् ।

तथा चोद्गात्रपच्छेदरूपनिमित्ते सति तद्घटिततत्तद्धर्मावच्छिन्नत्वरूपयोग्यताया उत्पत्तिः । अनन्तरं प्रतिहर्त्रपच्छेदरूपनिमित्ते सति तत्प्रागभावापगमेन तद्घटितधर्मावच्छिन्नत्वरूपयोग्यताया अपायः । तत्प्रतिहर्त्रपच्छेदनिमित्तकसर्व-वेदसदाने तद्घटितधर्मावच्छिन्नत्वरूपयोग्यताया निष्पत्तिश्च ।

एवं प्रतिहर्त्रपच्छेदपूर्वकोद्गात्रपच्छेदस्थलेऽपि योग्यताया उत्पत्तिविनाशौ द्रष्टव्याविति ।

**एवमिति ।** नैमित्तिकशास्त्रोक्तप्रकारेणेत्यर्थः । एतावता प्रबन्धेन फलितमर्थं दर्शयति **ततश्चेति ।** यथा बदरफलस्य श्यामरक्तरूपेणान्यथाभावः, एवमनुष्ठेयस्यार्थस्य तत्र नैमित्तिककर्तव्यतोत्पत्त्या प्राक् तथाभूतस्यैव पश्चादन्यथाभावेन विषयसत्वान्न पूर्वशास्त्रस्याप्रामाण्यमित्यर्थः ।



**ಅಪಿ ಚ ಏಕಸ್ಮಿನ್ನಪಿ ಪ್ರಯೋಗೇ ಕ್ರಮಿಕಾಭ್ಯಾಂ ನಿಮಿತ್ತಾಭ್ಯಾಂ ಕ್ರತೌ ತತ್ತನ್ನೈಮಿತ್ತಿಕ ಕರ್ತವ್ಯತಯೋರ್ಬದರಫಲೇ ಶ್ಯಾಮರಕ್ತ ರೂಪಯೋರಿವ ಕ್ರಮೇಣೋತ್ಪತ್ತೇಃ ರೂಪಜ್ಞಾನದ್ವಯವತ್ ಶಾಸ್ತ್ರ ದ್ವಯಮಪಿ ಪ್ರಮಾಣಮೇವ। ಉಕ್ತಂ ಹ್ಯಪಚ್ಛೇದಾಧಿಕರಣೇ "ನೈಮಿತ್ತಿಕಶಾಸ್ತ್ರಸ್ಯ ಹಿ ಅಯಮರ್ಥಃ ನಿಮಿತ್ತೋಪಜನನಾತ್ ಪ್ರಾಗನ್ಯಥಾಕರ್ತವ್ಯೋಽಪಿ ಕ್ರತುಃ ನಿಮಿತ್ತೇ ಸತಿ ಏವಂ ಕರ್ತವ್ಯಃ" ಇತಿ।**

ಒಂದೇ ಪ್ರಯೋಗದಲ್ಲಿಯೂ ಕೂಡ ನಿಮಿತ್ತಗಳು ಎರಡು ಕ್ರಮವಾಗಿ ಬಂದಾಗ ತನ್ನಿಮಿತ್ತಕವಾಗಿ ಎರಡು ಬೇರೆಬೇರೆ ಕರ್ತವ್ಯತ್ವಗಳು ಕ್ರಮವಾಗಿ ಬರುತ್ತವೆ, ಒಂದೇ ಬೋರೆ ಹಣ್ಣಿನಲ್ಲಿ ಹಸಿರು ಕೆಂಪು ಎಂದು ಎರಡು ಬಣ್ಣಗಳು ಕ್ರಮವಾಗಿ ಬರುವಂತೆ. ಹಣ್ಣು ಹಸಿರಾಗಿದ್ದಾಗ 'ಹಸಿರಾಗಿದೆ' ಎಂಬ ಜ್ಞಾನ, ಕೆಂಪಾದಾಗ 'ಕೆಂಪಾಗಿದೆ' ಎಂಬ ಜ್ಞಾನ. ಜ್ಞಾನಗಳೆರಡೂ ಕೂಡ ಪ್ರಮಾಣವೆ. ಒಂದು ಇನ್ನೊಂದನ್ನು ಬಾಧಿಸುವುದಿಲ್ಲ. ಹಾಗೇ ಪ್ರತಿಹರ್ತ್ರಪಚ್ಛೇದವಾದಾಗ ಸರ್ವಸ್ವದಾನ ಕರ್ತವ್ಯತ್ವ ಉಂಟಾಯಿತು. ಬಳಿಕ ಉದ್ಗಾತ್ರಪಚ್ಛೇದವಾದಾಗ ದಕ್ಷಿಣಾಭಾವಕರ್ತವ್ಯತ್ವ ಉಂಟಾಯಿತು. ಹಸಿರೆಂದು ಕೆಂಪೆಂದು ಜ್ಞಾನಗಳೆರಡೂ ಹೇಗೆ ಪ್ರಮಾಣವೋ ಹಾಗೇ ಎರಡು ಕರ್ತವ್ಯತ್ವಬೋಧಕ ವಾಕ್ಯಗಳೂ ಪ್ರಮಾಣವೆ.

ಅಪಚ್ಛೇದಾಧಿಕರಣದಲ್ಲಿ ಮೀಮಾಂಸಕರು ಹೀಗೆ ಹೇಳಿದ್ದಾರೆ—

ನೈಮಿತ್ತಿಕ ಕರ್ತವ್ಯತಾಬೋಧಕವಾದ ಶಾಸ್ತ್ರಕ್ಕೆ

'ನಿಮಿತ್ತೋತ್ಪತ್ತಿಗೆ ಪೂರ್ವದಲ್ಲಿ ಅನ್ಯಥಾ ಕರ್ತವ್ಯವಾಗಿದ್ದ ಯಾಗವೇ ನಿಮಿತ್ತೋತ್ಪತ್ತಿ ಯಾದಾಗ ಹೀಗೆ ಕರ್ತವ್ಯವೆನಿಸುತ್ತದೆ' ಎಂದರ್ಥ.

ಇಲ್ಲಿ ಪ್ರಶ್ನೆ ಬರುತ್ತದೆ— ಪೂರ್ವನೈಮಿತ್ತಿಕದ ಕರ್ತವ್ಯತ್ವವು ಪರನೈಮಿತ್ತಿಕದ ಕರ್ತವ್ಯತ್ವದಿಂದ ನಿವೃತ್ತವಾಗುತ್ತದೆ ಎನ್ನುತ್ತಿದ್ದಾರೆ. ಆದರೆ ಈ 'ಕರ್ತವ್ಯತ್ವ'ವೆಂದರೇನು? ಕೃತಿ ಸಾಧ್ಯತ್ವ ಯೋಗ್ಯತ್ವವಲ್ಲ. ಅದು ಸಾಕ್ಷಾತ್ತಾಗಿ ಅಥವಾ ಪರಂಪರಯಾ ಕೃತಿಸಾಧ್ಯತ್ವರೂಪವಾಗಿದ್ದು ನೈಮಿತ್ತಿಕದ ಉತ್ಪತ್ತಿಗೆ ಪೂರ್ವದಲ್ಲಿಯೂ ಇರುತ್ತದೆ, ಅನಂತರವೂ ಇರುತ್ತದೆ, ಎಂದೂ ನಿವೃತ್ತವಾಗುವುದಿಲ್ಲ. ಫಲೋಪಧಾನರೂಪ ಕೃತಿಸಾಧ್ಯತ್ವವೆಂದರೆ ಅದು ನೈಮಿತ್ತಿಕದ ಉತ್ಪತ್ತಿಗೆ ಪೂರ್ವದಲ್ಲಿ ಇರುವುದಿಲ್ಲ. 'ಯಾವುದನ್ನು ಅನುಷ್ಠಾನ ಮಾಡದಿದ್ದರೆ ಯಾಗಕ್ಕೆ ಅಂಗವೈಕಲ್ಯ ಬರುವುದೋ, ಅದು, ಅಥವಾ ಅಂಗವೇ' ಎಂದರೆ ಅದು ಅನುಷ್ಠಾನಮಾಡದಿದ್ದರೆ ಅಂಗವೈಕಲ್ಯದ ಆಪಾದಕವಾಗುತ್ತದೆ ಯಾದ್ದರಿಂದ ಅದೊಂದು ನಿಯಮರೂಪವೆಂದಂತಾಯಿತು. ಕರ್ಮಾಂಗತ್ವವೆಂದರೂ ಸಾಕ್ಷಾತ್ತಾಗಿ ಅಥವಾ ಪರಂಪರಯಾ ಕಾರಣತ್ವ ವಿಶೇಷವೆಂದಂತಾಯಿತು. ಇವೆರಡೂ ಯಾವದ್ಧರ್ಮಿಭಾವಿ. ಬಂದು ಹೋಗುವಂಥದ್ದಲ್ಲ ಬಂದು ಹೋಗುವಂಥ ಒಂದು ಪದಾರ್ಥಾಂತರವೆಂದನ್ನೋಣವೆಂದರೆ ಅಂಥ ಪದಾರ್ಥಾಂತರ ಉಂಟೆನ್ನಲು ಪ್ರಮಾಣವಿಲ್ಲ.

ಮೇಲಿನ ಪ್ರಶ್ನೆಗೆ ಹೀಗೆ ಸಮಾಧಾನ— 'ನಿಮಿತ್ತ ಬರುವುದಕ್ಕೆ ಮೊದಲು ಹೀಗೆ ಕರ್ತವ್ಯವಾಗಿತ್ತು. ನಿಮಿತ್ತ ಬಂದಮೇಲೆ ಈಗ ಹೀಗೆ ಕರ್ತವ್ಯವಾಯಿತು' ಎಂದು ಅಬಾಧಿತವಾದ ಅನುಭವಾನುಸಾರ ಕರ್ತವ್ಯತ್ವವು ಬಂದು ಹೋಗಬಲ್ಲ ಪದಾರ್ಥಾಂತರರೂಪವಾಗಿದೆ ಎಂದು ಒಪ್ಪಬೇಕು.

ಅಥವಾ ಹೀಗೆ ಹೇಳೋಣ— ಅಂಗತ್ವವೇ ಕರ್ತವ್ಯತ್ವ. ಅದು ಫಲೋಪಕಾರಿತ್ವೇನ ಅಥವಾ ಸನ್ನಿಪಾತಿತ್ವೇನ ಸಾಧನತ್ವವೆ. ಬೇರೇನೂ ಅಲ್ಲ. ಆದರೆ ಸಾಧನತ್ವವೆಂದರೆ ಸಾಧನತಾವಚ್ಛೇದಕಾವಚ್ಛಿನ್ನತ್ವರೂಪಯೋಗ್ಯತ್ವವೆ. ಸಾಧನತಾವಚ್ಛೇದಕವು ಪ್ರಕೃತದಲ್ಲಿ ಉದ್ಗಾತೃಪಚ್ಛೇದ ನಿಮಿತ್ತಕರ್ಮದಲ್ಲಿ ಉತ್ತರಭಾವಿ ಪ್ರತಿಹರ್ತೃಪಚ್ಛೇದಾಭಾವಾವಚ್ಛಿನ್ನತ್ವೇ ಸತಿ ಉದ್ಗಾತೃಪಚ್ಛೇದೋತ್ತರ ಕಾಲಾವಚ್ಛಿನ್ನ ತತ್‌ಕರ್ಮಕತ್ವವೆ.

ಏಕೆಂದರೆ ಉದ್ಗಾತೃಪಚ್ಛೇದರೂಪನಿಮಿತ್ತಾಭಾವ ಸ್ಥಳದಲ್ಲಿಯೂ ಉತ್ತರಭಾವಿ ಪ್ರತಿಹರ್ತೃಪಚ್ಛೇದರೂಪ ನಿಮಿತ್ತ ಸ್ಥಳದಲ್ಲಿಯೂ ಅನುಷ್ಠಿತವಾದ ಉದ್ಗಾತೃಪಚ್ಛೇದನಿಮಿತ್ತ ಕರ್ಮವು ಯಾಗಕ್ಕಾಗಲಿ ಅದರಿಂದಾಗುವ ಅಪೂರ್ವಕ್ಕಾಗಲಿ ಸಾಧನವಾಗುವುದಿಲ್ಲ. ಉದ್ಗಾತೃಪಚ್ಛೇದರೂಪನಿಮಿತ್ತ ಬಂದಾಗ ಅಲ್ಲಿ ತನ್ನಿಮಿತ್ತಕ ಕರ್ಮದಲ್ಲಿ, ಉದ್ಗಾತೃಪಚ್ಛೇದೋತ್ತರ ಕಾಲಾವಚ್ಛಿನ್ನ ತತ್ಕರ್ಮಕತ್ವರೂಪಯೋಗ್ಯತ್ವವು ಉತ್ಪನ್ನವಾಗುತ್ತದೆ. ಅಂದರೆ ಆ ಕರ್ಮವು ಉದ್ಗಾತೃಪಚ್ಛೇದೋತ್ತರ ಕಾಲದಲ್ಲಿ ಕರ್ತವ್ಯವಾಗುತ್ತದೆ. ಉತ್ತರಭಾವಿ ಪ್ರತಿಹರ್ತೃಪಚ್ಛೇದರೂಪ ನಿಮಿತ್ತ ಬಂದಾಗ ಆ ಅಪಚ್ಛೇದದ ಪ್ರಾಗಭಾವವು ನಿವೃತ್ತವಾಗುವುದರಿಂದ,

ಉತ್ತರಭಾವಿಪ್ರತಿಹರ್ತ್ರಪಚ್ಛೇದಾಭಾವಾವಚ್ಛಿನ್ನತ್ವವಿಶಿಷ್ಟ ಉದ್ಗಾತ್ರಪಚ್ಛೇದೋತ್ತರಕಾಲಾವಚ್ಛಿನ್ನತ್ವವು ಆ ಕರ್ಮದಲ್ಲಿ ಬಾರದಿರುವುದರಿಂದ ಯೋಗ್ಯತ್ವವು ನಿವೃತ್ತವಾಗುತ್ತದೆ. ಪ್ರತಿಹರ್ತ್ರಪಚ್ಛೇದನಿಮಿತ್ತಕ ಸರ್ವವೇದಸದಾನರೂಪ ಕರ್ಮದಲ್ಲಿ ಪ್ರತಿಹರ್ತ್ರಪಚ್ಛೇದೋತ್ತರಕಾಲಾವಚ್ಛಿನ್ನ ತತ್ಕರ್ಮಕತ್ವರೂಪಯೋಗ್ಯತೆಯು ಉಂಟಾಗುತ್ತದೆ.

ಹೀಗೆಯೆ ಪ್ರತಿಹರ್ತ್ರಪಚ್ಛೇದವಾದ ಬಳಿಕ ಉದ್ಗಾತ್ರಪಚ್ಛೇದವಾಗುವ ಸ್ಥಳದಲ್ಲಿಯೂ ಯೋಗ್ಯತೆಯ ಉತ್ಪತ್ತಿ ವಿನಾಶಗಳು ಹೇಗೆಂಬುದನ್ನು ತಿಳಿಯಬೇಕು. ಅಂದರೆ ಉತ್ತರಭಾವಿ ಉದ್ಗಾತ್ರಪಚ್ಛೇದಾಭಾವಾವಚ್ಛಿನ್ನತ್ವೇ ಸತಿ ಪ್ರತಿಹರ್ತ್ರಪಚ್ಛೇದೋತ್ತರಕಾಲಾವಚ್ಛಿನ್ನ ತತ್ಕರ್ಮಕತ್ವವನ್ನು ಪ್ರತಿಹರ್ತ್ರಪಚ್ಛೇದನಿಮಿತ್ತಕಕರ್ಮದಲ್ಲಿ ಯೋಗ್ಯತೆ ಎಂದಿಟ್ಟುಕೊಳ್ಳಬೇಕು.

**ತತಶ್ಚಾರ್ಥಸ್ಯೈವ ಬದರಫಲಸ್ಯೇವ ಶ್ಯಾಮರಕ್ತರೂಪೇಣ ಪ್ರಾಕ್ ತಥಾಭೂತಸ್ಯ ಪಶ್ಚಾತ್ ಅನ್ಯಥಾಭಾವಾತ್ ಪೂರ್ವಶಾಸ್ತ್ರಸ್ಯ ಪ್ರಾಮಾಣ್ಯಮೇವ। ನ ಪೂರ್ವಶಾಸ್ತ್ರಸ್ಯ ಅಪ್ರಾಮಾಣ್ಯಮ್ । ನಹಿ ಬದರಫಲೇ ಶ್ಯಾಮತ್ವವಿಜ್ಞಾನಮ್ ಅನಂತರಸ್ಯ ರಕ್ತತ್ವಸ್ಯಾವಗತ್ಯಾ ಮಿಥ್ಯಾ ಭವತೀತಿ ।**

ಪ್ರಮಾಣದ ವಿಷಯವೇ ಹಿಂದೆ ಒಂದುರೀತಿ ಇದ್ದುದು ಅನಂತರ ಬೇರೆ ರೀತಿಯಾಗಿರುವುದರಿಂದ ಹಿಂದಿನ ರೀತಿಯನ್ನು ಗ್ರಹಿಸಿದ್ದ ಹಿಂದಿನ ಪ್ರಮಾಣವು ಅಪ್ರಮಾಣವಾಗುವುದಿಲ್ಲ. ಬೋರೆಹಣ್ಣು ಹಿಂದೆ ಹಸಿರಾಗಿತ್ತು. ಬಳಿಕ ಅದೇ ಕೆಂಪಾಯಿತು. ಅದರಿಂದ ಹಿಂದೆ ಹಸಿರನ್ನು ಗ್ರಹಿಸಿದ್ದ ಪ್ರಮಾಣವು ಪ್ರಮಾಣವೇ. ಅಪ್ರಮಾಣವೆನಿಸಲಿಲ್ಲ. ಹಿಂದೆ ಇದ್ದ ಹಸಿರನ್ನು ಗ್ರಹಿಸಿದ್ದ ಪ್ರಮಾಣವನ್ನು ಬಳಿಕ ಬಂದ ಕೆಂಪನ್ನು ಗ್ರಹಿಸುವ ಪ್ರಮಾಣವು ಬಾಧಿಸುವುದೆಂದಿಲ್ಲ ತಾನೆ?



तस्मात्—

पौर्वापर्यं विरोधश्च पूर्वाप्रामाण्यमेव च ।
नियमान्नास्ति यत्रासावपच्छेदनयो भवेत् ।।

नचैवं प्रकृते प्रत्यक्षाप्रामाण्यस्यावकाशोऽस्तीति नापच्छेद न्यायः ।

एतेन— 'सगुणसप्रपञ्चश्रुत्योर्निर्गुणनिष्प्रपञ्चश्रुतिभ्यामपच्छेद न्यायेन बाधः' इति निरस्तम् । एतेनैव—

तत्परत्वात्परत्वाच्च निर्दोषत्वाच्च वैदिकम् ।
पूर्वस्य बाधकं नायं सर्प इत्याप्तवाक्यवत् ।।

**इत्यानन्दबोधोक्तं निरस्तम् । यतः—**

**तत्परत्वमसिद्धत्वात्परत्वं व्यभिचारतः ।**
**निर्दोषताऽन्यथासिद्धेः प्राबल्यं नैव साधयेत् ।।**

**असिद्धं हि मानान्तरविरोधे श्रुतेः तत्परत्वम् । परत्वं तु प्रमानन्तरभ्रमे व्यभिचारि । दृश्यते च ''न क्त्वा सेट्'' इति परं प्रति ''मृडमृद...'' इत्यादिपूर्वं बाधकम् । निर्दोषत्वं तु अर्थान्तरे प्रामाण्येनान्यथासिद्धमिति ।।**

---

ननु परेण पूर्वस्यात्यन्ताबाधेऽपि बाधमात्रसत्त्वात् कथं प्रकृते नापच्छेदन्याय-विषयतेत्याशङ्कां उपसंहारव्याजेन परिहरति **तस्मादिति । नचैवमिति ।** तथाच पूर्वस्य प्रत्यक्षस्य परेणागमेन बाध्यत्वे नियमेनाप्रामाण्यप्राप्तेः नापच्छेदन्यायविषयतेति भावः । **एतेनेति ।** अपच्छेदन्यायवैषम्यव्युत्पादनेनेत्यर्थः ।। **तत्परत्वादिति ।।** तत्तात्पर्यकत्वादित्यर्थः । श्लोकं व्याचष्टे **असिद्धं हीति । दृश्यते चेति ।** समानकर्तृकयोः पूर्वकाले (क्त्वा)(पा.३.४.२१) इति क्त्वाप्रत्यये सेडनिट् साधारण्येन विद्यमानस्यौपदेशिक(कि)त्त्वस्य सेण्मात्रे परेण 'न क्त्वा सेडि'ति सूत्रेण कित्त्वनिषेधे प्राप्ते तद्विशेषे कित्त्वस्य पूर्वेण मृडेत्यादिसूत्रेण प्रतिप्रसवः क्रियत इत्यर्थः ।



ತಸ್ಮಾತ್

''ಪೌರ್ವಾಪರ್ಯಂ ವಿರೋಧಶ್ಚ ಪೂರ್ವಾಪ್ರಾಮಾಣ್ಯಮೇವ ಚ ।
ನಿಯಮಾನ್ನಾಸ್ತಿ ಯತ್ರಾಸಾವಪಚ್ಛೇದನಯೋ ಭವೇತ್ ।।''

ಆದರಿಂದ ಹೀಗೆ ಹೇಳಬೇಕು— ಪೌರ್ವಾಪರ್ಯ ಮತ್ತು ವಿರೋಧವೂ ಇದ್ದು ಪೂರ್ವಕ್ಕೆ ನಿಯಮೇನ ಅಪ್ರಾಮಾಣ್ಯಾಪತ್ತಿ ಇಲ್ಲದಿರುವ ಸ್ಥಳದಲ್ಲಿ ಮಾತ್ರ ಪೂರ್ವವನ್ನು ಪರವು ಬಾಧಿಸುತ್ತದೆ ಎನ್ನುವ ಅಪಚ್ಛೇದ ನ್ಯಾಯ ಪ್ರವೃತ್ತಿ ಹೊರತು ನಿಯಮೇನ ಪೂರ್ವಕ್ಕೆ ಅಪ್ರಾಣ್ಯಾಪತ್ತಿ ಬರುವಲ್ಲಿ ಅಲ್ಲ.

**ನಚೈವಂ ಪ್ರಕೃತೇ ಪ್ರತ್ಯಕ್ಷಾಪ್ರಾಮಾಣ್ಯಸ್ಯಾವಕಾಶೋಽಸ್ತೀತಿ ನಾಪಚ್ಛೇದನ್ಯಾಯಃ । ಏತೇನ— 'ಸಗುಣ ಸಪ್ರಪಂಚ ಶ್ರುತ್ಯೋರ್ನಿರ್ಗುಣ ನಿಷ್ಪ್ರಪಂಚ ಶ್ರುತಿಭ್ಯಾಂ ಅಪಚ್ಛೇದನ್ಯಾಯೇನ ಬಾಧಃ' ಇತಿ ನಿರಸ್ತಮ್ ।**

ಅಪಚ್ಛೇದ ಸ್ಥಳದಲ್ಲಿ ಪೂರ್ವಕ್ಕೆ ಅನ್ಯತ್ರ ಅವಕಾಶವಿರುವ ಕಾರಣ ನಿಯಮೇನ ಅಪ್ರಾಮಾಣ್ಯಪ್ರಸಕ್ತಿ ಇಲ್ಲ. ಪ್ರಕೃತ ಪ್ರತ್ಯಕ್ಷ ಅನುಮಾನಗಳ ವಿಷಯದಲ್ಲಿ ಹಾಗೆ ಹೇಳಲು ಬರುವುದಿಲ್ಲ. ಪರತ್ವೇನ ಅನುಮಾನವನ್ನು ಬಾಧಕವೆಂದೇ ಸ್ವೀಕರಿಸಿದರೆ ಪ್ರತ್ಯಕ್ಷವು ನಿಯಮೇನ ಅಪ್ರಮಾಣವೇ ಆಗುತ್ತದೆ. ಅದಕ್ಕೆ ಬೇರೆ ಅವಕಾಶವಿಲ್ಲ. ಆದರಿಂದ ಪ್ರತ್ಯಕ್ಷಾನುಮಾನಗಳ ವಿಷಯದಲ್ಲಿ ಅಪಚ್ಛೇದನ್ಯಾಯಪ್ರವೃತ್ತಿ ಇಲ್ಲ. ಹೀಗೆ ಹೇಳಿದ್ದರಿಂದ 'ಸಗುಣ ಸಪ್ರಪಂಚ ಶ್ರುತಿಗಳಿಗೆ ನಿರ್ಗುಣ ನಿಷ್ಪ್ರಪಂಚ ಶ್ರುತಿಗಳಿಂದ ಅಪಚ್ಛೇದ ನ್ಯಾಯದಿಂದ ಬಾಧ' ಎಂದು ಅದ್ವೈತಿಗಳು ಹೇಳುವುದು ಅಯುಕ್ತವೆಂದು ಸಿದ್ಧವಾಗುವುದು. ಸಗುಣ ಸಪ್ರಪಂಚಶ್ರುತಿಗಳಿಗೆ ಬಾಧವನ್ನು ಹೇಳುವ ಪಕ್ಷದಲ್ಲಿ ಅವುಗಳಿಗೆ ನಿಯಮೇನ ಬಾಧ ಎಂದಾಗುತ್ತದೆ. ಅವುಗಳಿಗೆ ಬೇರೆ ಅವಕಾಶವಿಲ್ಲ.

**ಏತೇನೈವ —**

**ತತ್ಪರತ್ವಾತ್ಪರತ್ವಾಚ್ಚ ನಿರ್ದೋಷತ್ವಾಚ್ಚ ವೈದಿಕಮ್ ।**
**ಪೂರ್ವಸ್ಯ ಬಾಧಕಂ ನಾಯಂ ಸರ್ಪ ಇತ್ಯಾಪ್ತವಾಕ್ಯವತ್ ॥**

**ಇತ್ಯಾನಂದಬೋಧೋಕ್ತಂ ನಿರಸ್ತಮ್ । ಯತಃ**

**ತತ್ಪರತ್ವಮಸಿದ್ಧತ್ವಾತ್ ಪರತ್ವಂ ವ್ಯಭಿಚಾರತಃ ।**
**ನಿರ್ದೋಷತಾಽನ್ಯಥಾಸಿದ್ಧೇಃ ಪ್ರಾಬಲ್ಯಂ ನೈವ ಸಾಧಯೇತ್ ॥**

**ಅಸಿದ್ಧಂ ಹಿ ಮಾನಾಂತರವಿರೋಧೇ ಶ್ರುತೇಃ ತತ್ಪರತ್ವಮ್ । ಪರತ್ವಂ ತು ಪ್ರಮಾನಂತರಭ್ರಮೇ ವ್ಯಭಿಚಾರಿ । ದೃಶ್ಯತೇ ಚ ''ನ ಕ್ವಾ ಸೇಟ್'' ಇತಿ ಪರಂ ಪ್ರತಿ ''ಮೃಡಮೃದ...'' ಇತ್ಯಾದಿ ಪೂರ್ವಂ ಬಾಧಕಮ್ । ನಿರ್ದೋಷತ್ವಂ ತು ಅರ್ಥಾಂತರೇ ಪ್ರಾಮಾಣ್ಯೇನಾನ್ಯಥಾಸಿದ್ಧಮಿತಿ ॥**

'ಅದ್ವೈತಶ್ರುತಿಗೆ ತಾನು ಹೇಳುವ ಅದ್ವೈತದಲ್ಲಿ ತಾತ್ಪರ್ಯವಿರುವುದರಿಂದ, ತಾನು ದ್ವೈತ ಪ್ರತ್ಯಕ್ಷಾದಿಗಳಿಗೆ ಪರದಲ್ಲಿ ಬರುವುದರಿಂದ ಮತ್ತು ತಾನು ನಿರ್ದೋಷವಾದ್ದರಿಂದ ಪೂರ್ವದಲ್ಲಿ ಬರುವ ದ್ವೈತಪ್ರತ್ಯಕ್ಷಾದಿಗಳಿಗೆ ಬಾಧಕವೆ. 'ಅಯಂ ಸರ್ಪಃ' ಎಂದು ಭ್ರಾಂತಿಗೆ 'ನಾಯಂ ಸರ್ಪಃ' ಎಂಬ ಆಪ್ತವಾಕ್ಯವು ಹೇಗೆ ಬಾಧಕವೇ ಆಗುವುದೋ ಹಾಗೆ. 'ನಾಯಂ ಸರ್ಪಃ' ಎನ್ನುವ ಆಪ್ತವಾಕ್ಯಕ್ಕೆ ತಾನು ಹೇಳುವ ಸರ್ಪತ್ವಾಭಾವದಲ್ಲಿ ತಾತ್ಪರ್ಯವಿದೆ. ತಾನು 'ಅಯಂ ಸರ್ಪಃ' ಎಂಬ ಭ್ರಾಂತಿಗೆ ಪರದಲ್ಲಿ ಬಂದಿರುತ್ತದೆ. ಮತ್ತು ಆಪ್ತವಾಕ್ಯವಾದ್ದರಿಂದ ವಕ್ತೃದೋಷರಹಿತವಾಗಿದೆ.

ಆದರಿಂದ ಪೂರ್ವದಲ್ಲಿ ಬಂದ ಭ್ರಾಂತಿಗೆ ಬಾಧಕವೆ ಎಂದು ಆನಂದಬೋಧನು ಹೇಳಿದ್ದಾನೆ. ಅದೂ ಸರಿಯಲ್ಲ.

ಏಕೆಂದರೆ ಅದ್ವೈತ ಶ್ರುತಿಗೆ ಪ್ರತ್ಯಕ್ಷಾದಿ ಪ್ರಮಾಣ ವಿರೋಧವಿರುವುದರಿಂದ ಅದಕ್ಕೆ ತಾನು ಹೇಳುವ ಅದ್ವೈತದಲ್ಲಿ ತಾತ್ಪರ್ಯ ಅಸಂಭವವಾದ್ದರಿಂದ ಅಸಿದ್ಧ. ದ್ವೈತಪ್ರತ್ಯಕ್ಷಾದಿಗಳಿಗೆ ಪರದಲ್ಲಿ ಬರುತ್ತಿದೆ ಎನ್ನುವ ಹೇತು ವ್ಯಭಿಚಾರಿಯಾಗಿದೆ. ಅದ್ವೈತ ಶ್ರುತಿಯು ನಿರ್ದೋಷವಾಗಿದೆ ಎನ್ನುವ ಹೇತುವು ಅನ್ಯಥಾಸಿದ್ಧವಾಗಿದೆ. ಹೀಗೆ ಈ ಮೂರೂ ಹೇತುಗಳು ಅಸಿದ್ಧಿ ವ್ಯಭಿಚಾರ ಅನ್ಯಥಾಸಿದ್ಧಿ ದೋಷದುಷ್ಟವಾದ್ದರಿಂದ ಅವು ಪ್ರಾಬಲ್ಯ ಸಾಧನೆಗೆ ಹೇತುವಾಗುವುದಿಲ್ಲ.

ಪ್ರಮಾಣಾಂತರವಿರೋಧವಿರುವಾಗ ವೇದವಾಕ್ಯಕ್ಕೆ ತಾನು ಆಪಾತತಃ ಹೇಳುವ ಅರ್ಥದಲ್ಲಿ ತಾತ್ಪರ್ಯವಿರುವುದಿಲ್ಲ. ಆದರಿಂದ ತಾತ್ಪರ್ಯವಿದೆ ಎನ್ನುವ ಹೇತು ಅಸಿದ್ಧ.

ಪರತ್ವವೆಂಬ ಹೇತುವು ಪ್ರಮಾನಂತರ ಬರುವ ಭ್ರಮೆಯಲ್ಲಿ ವ್ಯಭಿಚಾರಿ. ಭ್ರಮವು ದೋಷಜನ್ಯವಾದ್ದರಿಂದ ದುರ್ಬಲ. ಪರತ್ವವೆಂಬ ಹೇತುವು ಅದರಲ್ಲಿ ಪ್ರಾಬಲ್ಯವನ್ನು ಸಾಧನೆ ಮಾಡಲಾರದು.

'ಸಮಾನಕರ್ತೃಕಯೋಃ ಪೂರ್ವಕಾಲೇ' ಎಂಬುದು ಪಾಣಿನಿಸೂತ್ರ. ಇದು ಕ್ತ್ವಾ ಪ್ರತ್ಯಯವನ್ನು ವಿಧಾನಮಾಡುತ್ತದೆ. ಈ ಪ್ರತ್ಯಯದಲ್ಲಿ ಸೇಟ್ ಅನಿಟ್ ಧಾತುಗಳಲ್ಲಿ ಸಾಧಾರಣವಾಗಿ ಕಿತ್ತ್ವವಿದೆ. 'ನ ಕ್ತ್ವಾ ಸೇಟ್ ಎಂಬ ಸೂತ್ರವು ಸೇಟ್‌ಧಾತುವಿನಲ್ಲಿ ಕ್ತ್ವಾ ಪ್ರತ್ಯಯಕ್ಕೆ ಕಿತ್ತ್ವವನ್ನು ನಿಷೇಧ ಮಾಡುತ್ತದೆ. ಆದರೆ 'ಮೃಡ–ಮೃದ–ಗುಧ–ಕುಷ–ಕ್ಲಿಶ–ವದ–ವಸಃ ಕ್ತ್ವಾ' ಎಂಬ ಸೂತ್ರವು 'ಮೃಡಮೃದ' ಮುಂತಾದ ಧಾತುಗಳ ಪರದಲ್ಲಿ ಬರುವಾಗ ಕ್ತ್ವಾಪ್ರತ್ಯಯವು ಕಿತ್ತೇ ಆಗಿರುತ್ತದೆ. 'ನ ಕ್ತ್ವಾ ಸೇಟ್' ಎಂಬ ಕಿತ್ತ್ವನಿಷೇಧವು ಇಲ್ಲಿ ಬರುವುದಿಲ್ಲ ಎಂದು ಕಿತ್ತ್ವಕ್ಕೆ ಪ್ರತಿಪ್ರಸವವನ್ನು ಹೇಳುತ್ತಿದೆ.

ಇಲ್ಲದಿದ್ದರೆ 'ಕ್ತ್ವಾ' ಪ್ರತ್ಯಯದಲ್ಲಿ ಸ್ವತಃ ಕಕಾರ ಇತ್ ಸ್ಪಷ್ಟ ಕಾಣುತ್ತಿದ್ದರೂ 'ಮೃಡಮೃದ' ಸೂತ್ರವು 'ಕ್ತ್ವಾ' ಎನ್ನುತ್ತ ಕಿತ್ತ್ವವನ್ನು ಏಕೆ ಹೇಳಬೇಕು? ವ್ಯರ್ಥವಾಗದೆ? ಆದರಿಂದ 'ವ್ಯರ್ಥಂ ಸತ್ ಕಿಂಚಿದಿಷ್ಟಂ ಜ್ಞಾಪಯತಿ' ಎಂಬ ನ್ಯಾಯದಂತೆ 'ನ ಕ್ತ್ವಾ ಸೇಟ್' ಸೂತ್ರದಿಂದ ಕಿತ್ವ ನಿಷೇಧ ಪ್ರಸಕ್ತಿ ಬಂದಾಗ ಪ್ರತಿಪ್ರಸವ ಮಾಡಲು 'ಮೃಡಮೃದ' ಸೂತ್ರವು ಪ್ರವೃತ್ತವಾಗಿದೆ ಎನ್ನಬೇಕು. 'ನ ಕ್ತ್ವಾ ಸೇಟ್' ಎಂಬ ಪರಸೂತ್ರವನ್ನು 'ಮೃಡಮೃದ' ಎಂಬ ಪೂರ್ವಸೂತ್ರವೇ ಬಾಧಿಸುತ್ತಿದೆ. ಆದರಿಂದ ಪರತ್ವಹೇತು ಪ್ರಾಬಲ್ಯಕ್ಕೆ ವ್ಯಭಿಚಾರಿಯಾಗಿದೆ.

ನಿರ್ದೋಷತ್ವ ಹೇತುವು ಅನ್ಯಥಾಸಿದ್ಧ. ಏಕೆಂದರೆ ಅದ್ವೈತ ಶ್ರುತಿಗೆ ಅದ್ವೈತದಲ್ಲಿ ತಾತ್ಪರ್ಯವಿಲ್ಲದಿದ್ದರೂ ಬೇರೆ ಅರ್ಥದಲ್ಲಿ ಅದು ಪ್ರಮಾಣವಾಗಬಹುದು. ನಿರ್ದೋಷತ್ವವು ಕೂಡಬಹುದು.

## ಮಿಥ್ಯಾತ್ವಾನುಮಿತೇಃ ಅಗ್ನಿಶೈತ್ಯಾನುಮಿತಿ ಸಾಮ್ಯಂ

एवंचाक्षस्य लिङ्गादिबाध्यत्वे कालात्ययापदिष्टादेर्दोषता वा त्याज्या व्यवस्थापकं वा वक्तव्यम् । अत्रोक्तं खण्डने—

''तत्राक्षसिद्ध स्पर्शनश्रुत्युष्णत्वायजमानत्वादिवल्लिङ्गशब्दग्राह्य-सर्ववेष्टनश्रुत्यनुष्णत्व यजमानत्वादिकमपि व्यावहारिकम् । इह त्वक्षसिद्धं सत्यत्वं व्यावहारिकम् । लिङ्गशब्दग्राह्यं मिथ्यात्वं तु तात्विकम् । एवञ्च

''पारमार्थिकमद्वैतं प्रविश्य शरणं श्रुतिः ।
विरोधादुपजीव्येन न बिभेति कदाचन'' इति ।

---

**एवं चेति ।** उक्तरीत्या प्रत्यक्षस्य प्राबल्ये सिद्धेऽपीत्यर्थः । कालात्ययापदिष्टादेरित्यादिपदेन योग्यताविरहपरिग्रहः । **अत्रोक्तमिति ।** अक्षस्य लिङ्गादिबाध्यत्वे व्यवस्थापकमुक्तमित्यर्थः । **तत्रेति ।** श्रुतिस्मृत्यादिविरोधस्थल इत्यर्थः । **लिङ्गशब्दग्राह्येति ।।** औदुम्बरी सर्वा वेष्टयितव्येति स्मृतिरूपेण कृतकत्वादिरूपेण च लिङ्गेन यजमानः प्रस्तरः आदित्यो यूप इत्यादिशब्देन च ग्राह्येत्यर्थः । **शब्दग्राह्येति ।** यजमानत्वादिकमित्यनेन सम्बध्यते । आदिपदादादित्यत्वादिपरिग्रहः ।



**ಏವಂಚಾಕ್ಷಸ್ಯ ಲಿಂಗಾದಿಬಾಧ್ಯತ್ವೇ ಕಾಲಾತ್ಯಯಾಪದಿಷ್ಟಾದೇಃ ದೋಷತಾ ವಾ ತ್ಯಾಜ್ಯಾ, ವ್ಯವಸ್ಥಾಪಕಂ ವಾ ವಕ್ತವ್ಯಮ್ ।**

ಹೀಗೆ ಪ್ರತ್ಯಕ್ಷಕ್ಕೆ ಪ್ರಾಬಲ್ಯ ಸಿದ್ಧವಾದರೂ ಅದು ಅನುಮಾನಾದಿಗಳಿಂದ ಬಾಧ್ಯವೆ ಎನ್ನುವುದಾದರೆ 'ಅನುಮಾನಕ್ಕೆ ಬಾಧವು ದೋಷವೆ ಅಲ್ಲ, ಆಗಮಕ್ಕೂ ಯೋಗ್ಯತಾ ವಿರಹವು ದೋಷವಲ್ಲ' ಎನ್ನಬೇಕು. ಅಥವಾ 'ಅದು ಎಲ್ಲಿ ದೋಷ? ಎಲ್ಲಿ ದೋಷವಲ್ಲ?' ಎಂದು ವ್ಯವಸ್ಥೆಯನ್ನಾದರೂ ಹೇಳಬೇಕು.

**ಅತ್ರೋಕ್ತಂ ಖಂಡನೇ— ''ತತ್ರಾಕ್ಷಸಿದ್ಧ ಸ್ಪರ್ಶನಶ್ರುತ್ಯುಷ್ಣತ್ವಾಯಜಮಾನತ್ವಾದಿವತ್ ಲಿಂಗಶಬ್ದಗ್ರಾಹ್ಯಸರ್ವವೇಷ್ಟನ ಶ್ರುತ್ಯನುಷ್ಣತ್ವ ಯಜಮಾನತ್ವಾದಿಕಮಪಿ ವ್ಯಾವಹಾರಿಕಮ್। ಇಹತು ಅಕ್ಷಸಿದ್ಧಂ ಸತ್ಯತ್ವಂ ವ್ಯಾವಹಾರಿಕಮ್। ಲಿಂಗಶಬ್ದಗ್ರಾಹ್ಯಂ ಮಿಥ್ಯಾತ್ವಂ ತು ತಾತ್ವಿಕಮ್ । ಏವಂಚ**

**''ಪಾರಮಾರ್ಥಿಕಮದ್ವೈತಂ ಪ್ರವಿಶ್ಯ ಶರಣಂ ಶ್ರುತಿಃ ।**
**ವಿರೋಧಾದುಪಜೀವ್ಯೇನ ನ ಬಿಭೇತಿ ಕದಾಚನ'' ಇತಿ ।**

ವ್ಯವಸ್ಥೆಯನ್ನು ಹೇಳಬೇಕೆನ್ನುವ ವಿಷಯದಲ್ಲಿ ಖಂಡನಕಾರನು ಹೇಳಿದ್ದಾನೆ— ಪ್ರತ್ಯಕ್ಷಸಿದ್ಧವಾಗಿರುವ ಸ್ಪರ್ಶನಶ್ರುತಿ, ವಹ್ನಿಯ ಉಷ್ಣತ್ವ ಪ್ರಸ್ತರ ಅಯಜಮಾನತ್ವ ಮುಂತಾದವುಗಳಂತೇ 'ಔದುಂಬರೀ ಸರ್ವಾ ವೇಷ್ಟಯಿತವ್ಯಾ' ಎಂದು ಸ್ಮೃತಿರೂಪವಾದ ಅನುಮಾನ, 'ಅನುಷ್ಣಃ ಕೃತಕತ್ವಾತ್' ಇತ್ಯಾದಿ ಅನುಮಾನಗಳು ಮತ್ತು 'ಯಜಮಾನಃ ಪ್ರಸ್ತರಃ' 'ಆದಿತ್ಯೋ ಯೂಪಃ' ಇತ್ಯಾದಿ ಆಗಮಗಳು ಗ್ರಹಿಸುವ ಸರ್ವವೇಷ್ಟನಶ್ರುತಿ–ವಹ್ನಿಯ ಅನುಷ್ಣತ್ವಗಳು ಮತ್ತು ಯಜಮಾನತ್ವ–ಆದಿತ್ಯತ್ವಗಳು ಕೂಡ ವ್ಯಾವಹಾರಿಕವೆ. ಅದರಿಂದ ಪ್ರತ್ಯಕ್ಷದಿಂದ ಅನುಮಾನ ಆಗಮಗಳು ಬಾಧಿತವಾದುವು. ಆದರೆ ಪ್ರತ್ಯಕ್ಷ ಸಿದ್ಧವಾಗಿರುವ ಜಗತ್ ಸತ್ಯತ್ವವು ವ್ಯಾವಹಾರಿಕ. ಅನುಮಾನಾಗಮ ಗ್ರಾಹ್ಯವಾದ ಜಗನ್ಮಿಥ್ಯಾತ್ವವು ತಾತ್ವಿಕ. ಹೀಗಾಗಿ ಅನುಮಾನ ಆಗಮಗಳೇ ಬಾಧಕ. ಅವುಗಳಲ್ಲಿ ಬಾಧ ಯೋಗ್ಯತಾವಿರಹಗಳು ದೋಷವಲ್ಲ. ಪಾರಮಾರ್ಥಿಕವಾದ ಅದ್ವೈತವನ್ನು ವಿಷಯವನ್ನಾಗಿ ಆಶ್ರಯಿಸಿರುವ ಅದ್ವೈತ ಶ್ರುತಿಯು ಉಪಜೀವ್ಯವಾದ ಪ್ರತ್ಯಕ್ಷದವಿರೋಧದಿಂದ ಎಂದೂ ಬಾಧಿತವಾಗುವುದಿಲ್ಲ. ಅದಕ್ಕೆ ಭಯಪಡುವುದಿಲ್ಲ' ಎಂದು.



**तत्र किं सत्यत्वमिथ्यात्व ग्राहिणोर्व्यावहारिकतात्विक विषयकत्वाद्बाध्यबाधकतैव नेति भावः, किं वा मिथ्यात्वग्राहि तात्विकविषयकत्वाद्बाधकमेव, न तु बाध्यमिति ?**

**आद्येऽप्यनुमित्यादिकं किमक्षसिद्धव्यावहारिकसत्त्वस्याभावम-गृहीत्वैव तदसिद्धस्य तात्विकसत्यत्वस्यैवाभावं गृह्णाति, किंवा तत्सिद्धस्यैव प्रतिपन्नोपाधौ तात्विकमभावम् ?**

**नाद्यः । मिथ्यात्व श्रुत्यादेरप्रसक्तप्रतिषेधत्वापातात् । अक्ष-सिद्धस्य सत्वस्य प्रतिपन्नोपाधावभावाग्रहणे तस्य तात्विकत्वापाताच्च ।**

न द्वितीयः। प्रतिपन्नोपाधौ तात्त्विकतदभावग्राहिण एव तद्बाधकत्वेनाबाधोक्त्ययोगात्। नांत्यः। उपजीव्यप्रत्यक्षबाधितस्य मिथ्यात्वस्य तात्त्विकत्वायोगात्। योगे वाऽनौष्ण्यमपि तात्त्विकं स्यात्। एवञ्च "आदित्यो यूपः" इत्यादावपि

'तात्त्विकादित्यतां यूपस्याश्रित्य शरणं श्रुतिः।
विरोधादुपजीव्येन न बिभेति कदाचन' इति स्यात्।

नन्विदमनौष्ण्यमतात्त्विकविश्वांतर्गतेन जलाद्यनौष्ण्येन तुल्यस्वभावं चेन्न तात्त्विकम्। नचेदद्वैतस्यैव नामांतरं स्यादिति चेत् न। विश्वमिथ्यात्वमपि घटादितुल्यतयाऽक्षसिद्धेनातात्त्विकेन रूप्यादिमिथ्यात्वेन समस्वभावं चेन्न तात्त्विकम्। नचेत् द्वैतस्यैव नामांतरं स्यादिति साम्यात्। ननु तात्त्विकत्वमात्रेण विलक्षणमपि तन्मिथ्यात्वलक्षणयुक्तमिति चेदिदमपि तन्मात्रेण विलक्षणमपि स्पर्शत्वव्याप्यजातिविशेषवदाश्रयत्वरूपानौष्ण्यलक्षणयुक्तमिति समम्।

---

**किं वेति**॥ यद्यपि द्वितीयतृतीययोरभेदः। तथापि बाधकत्वोक्त्यनुक्तिभ्यां भेदो बोध्यः। **तत्सिद्धस्यैवेति**॥ अक्षसिद्धस्यैवेत्यर्थः। **मिथ्यात्वश्रुत्यादेरिति**॥ तात्त्विकसत्त्वस्य प्रत्यक्षसिद्धत्वाभावादिति भावः। **अप्रसक्तेति**। तात्त्विकसत्त्वस्य प्रत्यक्षसिद्धत्वाभावादिति भावः। ननु तात्पर्यापरिज्ञानदशायामैतदात्म्यमिदं सर्वं तत्सत्यमिति श्रुत्या जगति तात्त्विकसत्त्वप्रसक्तिसंभवात् नाप्रसक्तप्रतिषेधत्वमित्यरुचेराह **अक्षसिद्धस्येति**। **न बिभेतीति**। भिन्नविषयतयोपजीव्यविरोधस्यैवाभावादिति भावः। **अद्वैतस्यैव नामान्तरं स्यादिति**। अतत्समानस्वभावस्य चैतन्यमात्रस्यैवानौष्ण्यमिति नाम कृतं स्यादिति भावः। **द्वैतस्यैवेति**। भेदप्रपञ्चस्यैव मिथ्यात्वमिति नाम कृतं स्यादित्यर्थः। ननु न द्वैतस्यैव नामान्तरकरणम्।

मिथ्यात्वलक्षणयोगित्वात् साध्यभूतमिथ्यात्वमपि रूप्यादिमिथ्यात्ववत् मिथ्यात्व-शब्दवाच्यमेव । नचैवं तद्वैलक्षण्यानुपपत्तिः । तात्त्विकत्वमात्रेण तद्वैलक्षण्योपपत्तेरिति शङ्कते **ननु तात्त्विकत्वेति । तदिति ।** विश्वमिथ्यात्वमित्यर्थः । **इदमपि तन्मात्रेणेति ।** अनौष्ण्यमपि तात्त्विकत्वमात्रेणेत्यर्थः । नचैवमद्वैतस्यैव नामान्तर-करणम् । तस्य निरुच्यमानानौष्ण्यलक्षणयोगित्वेन अनौष्ण्यशब्दार्थत्वोपपत्तेः । तथाचोपजीव्यप्रत्यक्षबाधितस्य मिथ्यात्वस्य न तात्त्विकत्वमङ्गीकर्तुं शक्यमिति भावः ।



**ತತ್ರ ಕಿಂ ಸತ್ಯತ್ವ ಮಿಥ್ಯಾತ್ವ ಗ್ರಾಹಿಣೋರ್ವ್ಯಾವಹಾರಿಕ ತಾತ್ವಿಕ ವಿಷಯಕತ್ವಾದ್ ಬಾಧ್ಯಬಾಧಕತ್ವೈವ ನೇತಿ ಭಾವಃ? ಕಿಂವಾ ಮಿಥ್ಯಾತ್ವಗ್ರಾಹಿ ತಾತ್ವಿಕವಿಷಯಕತ್ವಾದ್ ಬಾಧಕಮೇವ, ನ ತು ಬಾಧ್ಯಮಿತಿ ?**

ಖಂಡನಕಾರನ ಅಭಿಪ್ರಾಯವೇನು? ಸತ್ಯತ್ವಗ್ರಾಹಿಯಾದ ಪ್ರಮಾಣವೆಲ್ಲವೂ ಕೇವಲ ವ್ಯಾವಹಾರಿಕ ವಿಷಯಕವಾಗಿವೆ. ಮಿಥ್ಯಾತ್ವಗ್ರಾಹಕವೆಲ್ಲವೂ ತಾತ್ವಿಕ ವಿಷಯಕವಾಗಿವೆ, ಆದರಿಂದ ಭಿನ್ನವಿಷಯಕವಾಗಿರುವುದರಿಂದ ಅವುಗಳಲ್ಲಿ ಒಂದು ಬಾಧ್ಯ, ಇನ್ನೊಂದು ಬಾಧಕವೆಂದು ವ್ಯವಸ್ಥೆಯೇ ಇಲ್ಲವೆಂದೆ? ಅಥವಾ ಮಿಥ್ಯಾತ್ವಗ್ರಾಹಿ ತಾತ್ವಿಕವಿಷಯಕವಾದ್ದರಿಂದ ಬಾಧಕವೆ ಹೊರತು ಬಾಧ್ಯವಲ್ಲವೆಂದೆ?

**ಆದ್ಯೇಽಪಿ ಅನುಮಿತ್ಯಾದಿಕಂ ಕಿಂ ಅಕ್ಷಸಿದ್ಧ ವ್ಯಾವಹಾರಿಕ ಸತ್ತ್ವಸ್ಯ ಅಭಾವಮಗೃಹೀತ್ವೈವ ತದಸಿದ್ಧಸ್ಯ ತಾತ್ವಿಕಸತ್ಯತ್ವಸ್ಯೈವ ಅಭಾವಂ ಗೃಹ್ಣಾತಿ? ಕಿಂವಾ ತತ್ಸಿದ್ಧಸ್ಯೈವ ಪ್ರತಿಪನ್ನೋಪಾಧೌ ತಾತ್ವಿಕಮಭಾವಮ್ ?**

ಸತ್ಯತ್ವ ಮಿಥ್ಯಾತ್ವಗ್ರಾಹಕಗಳಿಗೆ ಬಾಧ್ಯಬಾಧಕ ಭಾವವಿಲ್ಲ ಎನ್ನುವ ಮೊದಲನೆ ಪಕ್ಷದಲ್ಲಿಯೂ ಅನುಮಿತ್ಯಾದಿಗಳು ಪ್ರತ್ಯಕ್ಷಸಿದ್ಧ ವ್ಯಾವಹಾರಿಕ ಸತ್ವದ ಅಭಾವವನ್ನು ಗ್ರಹಿಸದೆ ಪ್ರತ್ಯಕ್ಷಸಿದ್ಧವಲ್ಲದ ತಾತ್ವಿಕಸತ್ವದ ಅಭಾವವನ್ನೆ ಗ್ರಹಿಸುವುದೆ? ಅಥವಾ ಪ್ರತ್ಯಕ್ಷಸಿದ್ಧ ಸತ್ವದ ತಾತ್ವಿಕ ಅಭಾವವನ್ನೇ ಗ್ರಹಿಸುವುದೆ?

ಇಲ್ಲಿ ಯದ್ಯಪಿ 'ಮಿಥ್ಯಾತ್ವಗ್ರಾಹಕವು ತಾತ್ವಿಕವಿಷಯಕವಾದ್ದರಿಂದ ಬಾಧಕವೆ' ಎನ್ನುವ ಎರಡನೆ ವಿಕಲ್ಪವೂ ಮಿಥ್ಯಾತ್ವಗ್ರಾಹಕವು ಪ್ರತ್ಯಕ್ಷಸಿದ್ಧಸತ್ವದ ತಾತ್ವಿಕ ಅಭಾವವನ್ನು ಗ್ರಹಿಸುತ್ತದೆ' ಎನ್ನುವ ಮೂರನೆ ವಿಕಲ್ಪವೂ ಒಂದೆ. ಆದರೂ ಎರಡನೆ ವಿಕಲ್ಪದಲ್ಲಿ ಮಿಥ್ಯಾತ್ವವು ಬಾಧಕವೆ ಎಂದು ಬಾಧಕತ್ವವು ಉಕ್ತವಾಗುತ್ತಿದೆ. ಮೂರನೆ ವಿಕಲ್ಪದಲ್ಲಿ ತಾತ್ವಿಕ ಅಭಾವವನ್ನು ಗ್ರಹಣ ಮಾಡುತ್ತದೆ ಎಂದು ಮಾತ್ರ ಹೇಳಿದೆ. ಬಾಧಕತ್ವ ಉಕ್ತವಾಗಿಲ್ಲ ಎಂದು ಭೇದವಿದೆ.

**ನಾದ್ಯಃ । ಮಿಥ್ಯಾತ್ವಶ್ರುತ್ಯಾದೇರಪ್ರಸಕ್ತ ಪ್ರತಿಷೇಧತ್ವಾಪಾತಾತ್ । ಅಕ್ಷಸಿದ್ಧಸ್ಯ ಸತ್ವಸ್ಯ ಪ್ರತಿಪನ್ನೋಪಾಧಾವಭಾವಾಗ್ರಹಣೇ ತಸ್ಯ ತಾತ್ತ್ವಿಕತ್ವಾಪಾತಾಚ್ಚ ।**

ಪ್ರತ್ಯಕ್ಷಸಿದ್ಧವಲ್ಲದ ತಾತ್ತ್ವಿಕಸತ್ವದ ಅಭಾವವನ್ನೇ ಮಿಥ್ಯಾತ್ವಶ್ರುತಿಯು ಗ್ರಹಿಸುತ್ತದೆ ಎನ್ನುವ ಮೊದಲನೆ ಪಕ್ಷ ಸರಿಯಲ್ಲ. ಈ ಪಕ್ಷದಲ್ಲಿ ತಾತ್ತ್ವಿಕಸತ್ವವು ಪ್ರತ್ಯಕ್ಷ ಸಿದ್ಧವಲ್ಲವಾದ್ದರಿಂದ ಅದನ್ನು ಶ್ರುತಿಯು ನಿಷೇಧಮಾಡುವುದು ಅಪ್ರಸಕ್ತ ಪ್ರತಿಷೇಧವಾಗುತ್ತದೆ.

'ತಾತ್ಪರ್ಯ ಜ್ಞಾನವಿಲ್ಲದಿದ್ದ ಕಾಲದಲ್ಲಿ 'ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ' ಎನ್ನುವ ಶ್ರುತಿಯಿಂದಲೇ ಜಗತ್ತಿನಲ್ಲಿ ತಾತ್ತ್ವಿಕ ಸತ್ವವು ಪ್ರಸಕ್ತವಾಗುವ ಸಂಭವವಿರುವುದರಿಂದ ಮಿಥ್ಯಾತ್ವಶ್ರುತಿಯು ಪ್ರತ್ಯಕ್ಷಸಿದ್ಧವಾಗದ ತಾತ್ತ್ವಿಕಸತ್ವವನ್ನು ನಿಷೇಧ ಮಾಡಿದಾಗ ಅದು ಅಪ್ರಸಕ್ತನಿಷೇಧವಾಗಲಾರದು' ಎನ್ನುವ ಅರುಚಿ ಈ ಪಕ್ಷದೋಷದಲ್ಲಿ ಇದೆ ಎಂದರೆ ಬೇರೆ ದೋಷವೂ ಇದೆ. ಏನೆಂದರೆ, 'ಪ್ರತಿಪನ್ನೋಪಾಧಿಯಲ್ಲಿ ಪ್ರತ್ಯಕ್ಷ ಸಿದ್ಧವಾಗಿರುವ ಜಗತ್‌ಸತ್ಯತ್ವದ ಅಭಾವವನ್ನು ಶ್ರುತ್ಯನುಮಾನಗಳು ಗ್ರಹಿಸದಿದ್ದರೆ ಪ್ರತ್ಯಕ್ಷ ಸಿದ್ಧವಾದ ಆ ಸತ್ವವು ತಾತ್ತ್ವಿಕವೆಂದೇ ಆದೀತು' ಎಂದು.

**ನ ದ್ವಿತೀಯಃ । ಪ್ರತಿಪನ್ನೋಪಾಧೌ ತಾತ್ತ್ವಿಕ ತದಭಾವ ಗ್ರಾಹಿಣ ಏವ ತದ್ಬಾಧಕತ್ವೇನ ಅಬಾಧೋಕ್ತ್ಯಯೋಗಾತ್ ।**

ಪ್ರತ್ಯಕ್ಷ ಸಿದ್ಧವಾಗಿರುವ ಸತ್ಯತ್ವದ ತಾತ್ತ್ವಿಕ ಅಭಾವವನ್ನೆ ಶ್ರುತ್ಯನುಮಾನಗಳು ಗ್ರಹಿಸುತ್ತವೆ ಎನ್ನುವ ಮೊದಲನೆ ವಿಕಲ್ಪದ ಎರಡನೆ ಪಕ್ಷವೂ ಸರಿಯಲ್ಲ. ಪ್ರತ್ಯಕ್ಷಸಿದ್ಧ ಸತ್ವದ ತಾತ್ತ್ವಿಕ ಅಭಾವವನ್ನು ಪ್ರತಿಪನ್ನೋಪಾಧಿಯಲ್ಲಿ ಶ್ರುತ್ಯನುಮಾನಗಳು ಗ್ರಹಿಸುತ್ತವೆ ಎಂದರೆ ಅದು ಪ್ರತ್ಯಕ್ಷಸತ್ವಕ್ಕೆ ಬಾಧವೆ ಆಗುವುದರಿಂದ ಶ್ರುತ್ಯನುಮಾನಗಳು ಬಾಧಕವೇ ಎಂದಂತಾಗುವುದು. ಬಾಧಕವಲ್ಲ ಎನ್ನಲಾಗದು.

**ನಾಂತ್ಯಃ । ಉಪಜೀವ್ಯಪ್ರತ್ಯಕ್ಷಬಾಧಿತಸ್ಯ ಮಿಥ್ಯಾತ್ವಸ್ಯ ತಾತ್ತ್ವಿಕತ್ವಾಯೋಗಾತ್ ।**

ಮಿಥ್ಯಾತ್ವಗ್ರಾಹಕ ಶ್ರುತ್ಯನುಮಾನಗಳು ತಾತ್ತ್ವಿಕ ವಿಷಯಕವಾದದ್ದರಿಂದ ಬಾಧಕವೇ ಹೊರತು ಪ್ರತ್ಯಕ್ಷದಿಂದ ಬಾಧ್ಯವಾಗುವುದಿಲ್ಲ ಎನ್ನುವ ಅಂತಿಮಪಕ್ಷವೂ ಸರಿಯಲ್ಲ. ಉಪಜೀವ್ಯಪ್ರತ್ಯಕ್ಷದಿಂದ ಶ್ರುತ್ಯಾದಿಗ್ರಾಹ್ಯ ಮಿಥ್ಯಾತ್ವವು ಬಾಧಿತವಾಗಿರುವುದರಿಂದ ಅದು ತಾತ್ತ್ವಿಕವಾಗದು. ಶ್ರುತ್ಯಾದಿಗಳು ತಾತ್ತ್ವಿಕ ವಿಷಯಕವಾಗಲಾರವು.

**ಯೋಗೇ ವಾ ಅನೌಷ್ಣ್ಯಮಪಿ ತಾತ್ತ್ವಿಕಂ ಸ್ಯಾತ್ । ಏವಂಚ ''ಆದಿತ್ಯೋ ಯೂಪಃ'' ಇತ್ಯಾದಾವಪಿ—**

**'ತಾತ್ತ್ವಿಕಾದಿತ್ಯತಾಂ ಯೂಪಸ್ಯಾಶ್ರಿತ್ಯ ಶರಣಂ ಶ್ರುತಿಃ ।**
**ವಿರೋಧಾದುಪಜೀವ್ಯೇನ ನ ಬಿಭೇತಿ ಕದಾಚನ' ॥ ಇತಿ ಸ್ಯಾತ್ ।**

ಉಪಜೀವ್ಯ ಪ್ರತ್ಯಕ್ಷವಿರೋಧದಿಂದ ಶ್ರುತ್ಯಾದಿಗ್ರಾಹ್ಯ ಮಿಥ್ಯಾತ್ವವು ಬಾಧಿತವಾದರೂ ಅದು ತಾತ್ವಿಕವೆ ಎನ್ನುವುದಾದರೆ ಉಪಜೀವ್ಯ ಪ್ರತ್ಯಕ್ಷಬಾಧಿತವಾದ ವಹ್ನ್ಯನೌಷ್ಣ್ಯವೂ ತಾತ್ವಿಕ ವೆಂದಾದೀತು. ಹೀಗಾಗಿ 'ಆದಿತ್ಯೋ ಯೂಪಃ' ಎಂಬಲ್ಲಿಯೂ ಶ್ರುತಿಯು ತಾತ್ವಿಕ ಆದಿತ್ಯಾ ಭೇದವನ್ನು ವಿಷಯವಾಗಿ ಆಶ್ರಯಿಸಿ ಉಪಜೀವ್ಯಪ್ರತ್ಯಕ್ಷ ವಿರೋಧಕ್ಕೆ ಎಂದೂ ಭಯಪಡುವುದಿಲ್ಲ ಎಂದು ನಾವೂ ಹೇಳಬಹುದು.

**ನನ್ವಿದಮನೌಷ್ಣ್ಯಮತಾತ್ವಿಕ ವಿಶ್ವಾಂತರ್ಗತೇನ ಜಲಾದ್ಯನೌಷ್ಣ್ಯೇನ ತುಲ್ಯಸ್ವಭಾವಂ ಚೇತ್ ನ ತಾತ್ವಿಕಮ್। ನಚೇತ್ ಅದ್ವೈತಸ್ಯೈವ ನಾಮಾಂತರಂ ಸ್ಯಾದಿತಿ ಚೇತ್ ನ। ವಿಶ್ವಮಿಥ್ಯಾತ್ವಮಪಿ ಘಟಾದಿತುಲ್ಯತಯಾ ಅಕ್ಷಸಿದ್ಧೇನ ಅತಾತ್ವಿಕೇನ ರೂಪ್ಯಾದಿ ಮಿಥ್ಯಾತ್ವೇನ ಸಮಸ್ವಭಾವಂ ಚೇತ್ ನ ತಾತ್ವಿಕಮ್। ನಚೇತ್ ದ್ವೈತಸ್ಯೈವ ನಾಮಾಂತರಂ ಸ್ಯಾದಿತಿ ಸಾಮ್ಯಾತ್।**

ಅದ್ವೈತಿ ಕೇಳುತ್ತಾನೆ— ವಹ್ನಿಯು ಅನುಷ್ಣ, ಕೃತಕವಾದ್ದರಿಂದ ಎಂಬ ಅನುಮಾನದಿಂದ ಸಾಧಿಸುವ ಅನೌಷ್ಣ್ಯಕ್ಕೆ ಉಪಜೀವ್ಯಪ್ರತ್ಯಕ್ಷ ವಿರೋಧವಿದ್ದರೂ ಅದು ತಾತ್ವಿಕವೆಂದಾದೀತೆಂದು ಆಪಾದಿಸಿದರೆ ಅದಕ್ಕೇನರ್ಥ? 'ಅತಾತ್ವಿಕ ವಿಶ್ವಾಂತರ್ಗತವಾದ ಜಲಾದಿಯ ಅನೌಷ್ಣ್ಯದಂತೆಯೇ ತತ್‌ಸಮಾನ ಸ್ವಭಾವವುಳ್ಳ ವಹ್ನಿಯ ಅನೌಷ್ಣ್ಯವೂ ವ್ಯಾವಹಾರಿಕವಾಗಿ ಸತ್ಯವಾದೀತೆಂದೆ? ಹಾಗಿದ್ದರೆ ಅದು ತಾತ್ವಿಕವಲ್ಲ, ತಾತ್ವಿಕವಾದೀತೆಂದು ಆಪಾದನೆ ಕೂಡಲಾರದು.

ಅದು ಜಲಾದಿಯ ವ್ಯಾವಹಾರಿಕ ಅನೌಷ್ಣ್ಯಕ್ಕೆ ಸಮಾನಸ್ವಭಾವದ್ದಲ್ಲ, ತಾತ್ವಿಕವೆ ತತ್ ಸಮಾನಸ್ವಭಾವದ್ದಾಗಿ ಆದೀತೆಂದರೆ ಇಷ್ಟಾಪತ್ತಿ, ಏಕೆಂದರೆ ಅನೌಷ್ಣ್ಯವೆಂದರೆ ಉಷ್ಣತ್ವಾಭಾವ. ಅದು ನಮಗೆ ಇಷ್ಟವಾಗಿರುವ ತಾತ್ವಿಕ ದ್ವಿತೀಯಾಭಾವವೆ ಎಂದಂತಾಯಿತು. ವ್ಯಾವಹಾರಿಕ ಸತ್ಯಕ್ಕೆ ಸಮಾನಸ್ವಭಾವದ್ದಾಗದ ಚೈತನ್ಯ ಮಾತ್ರಕ್ಕೇ ಅನೌಷ್ಣ್ಯವೆಂದು ನಾಮಾಂತರ ಮಾಡಿದಂತಾಯಿತು' ಎಂದು.

ಅದ್ವೈತಿ ಹೀಗೆ ಹೇಳುವುದು ಸರಿಯಲ್ಲ. ದೃಶ್ಯತ್ವಾನುಮಾನದಿಂದ ಸಾಧಿಸುವ ವಿಶ್ವಮಿಥ್ಯಾತ್ವವೂ ವ್ಯಾವಹಾರಿಕ ವಿಶ್ವಾಂತರ್ಗತ ಘಟಾದಿಗಳಂತೆಯೆ, ವ್ಯಾವಹಾರಿಕವಾಗಿ ಪ್ರತ್ಯಕ್ಷಸಿದ್ಧವಾದ ಅತಾತ್ವಿಕ ಶುಕ್ತಿರೂಪ್ಯಾದಿ ಮಿಥ್ಯಾತ್ವದಂತೆಯೆ, ವ್ಯಾವಹಾರಿಕವೇ ಎಂದೊಪ್ಪಿದರೆ ಅದು ತಾತ್ವಿಕವಲ್ಲ, ಅತಾತ್ವಿಕವೆಂದೇ ಹೇಳಿದಂತಾಯಿತು. ಅತಾತ್ವಿಕ ಮಿಥ್ಯಾತ್ವವುಳ್ಳ ಪ್ರಪಂಚ ಪಾರಮಾರ್ಥಿಕವೇ ಎಂದಂತಾಯಿತು.

ಪ್ರಪಂಚ ಮಿಥ್ಯಾತ್ವವು ಶುಕ್ತಿರೂಪ್ಯಮಿಥ್ಯಾತ್ವಕ್ಕೆ ಸಮಸ್ವಭಾವದ್ದಲ್ಲ. ಶುಕ್ತಿರೂಪ್ಯ ಮಿಥ್ಯಾತ್ವವು ಪ್ರತಿಯೋಗಿ ಸ್ವರೂಪಕ್ಕೆ ವಿರೋಧಿ. ಪ್ರಪಂಚಮಿಥ್ಯಾತ್ವವು ಪ್ರತಿಯೋಗಿ ಸ್ವರೂಪಕ್ಕೆ ವಿರೋಧಿಯಲ್ಲ ಎನ್ನುವುದಾದರೆ ಪ್ರತಿಯೋಗಿ ಪ್ರಪಂಚ ಸತ್ವಾವಿರೋಧಿಯಾದ ಮಿಥ್ಯಾತ್ವವು ದ್ವೈತಕ್ಕೇ ಪಾರಿಭಾಷಿಕವಾದ ನಾಮ ಮಾತ್ರವಾಯಿತೆಂದು ನಾವೂ ಹೇಳಬಹುದು.

**ನನು ತಾತ್ವಿಕತ್ವಮಾತ್ರೇಣ ವಿಲಕ್ಷಣಮಪಿ ತತ್ ಮಿಥ್ಯಾತ್ವಲಕ್ಷಣಯುಕ್ತಮಿತಿ ಚೇತ್ ಇದಮಪಿ ತನ್ಮಾತ್ರೇಣ ವಿಲಕ್ಷಣಮಪಿ ಸ್ಪರ್ಶತ್ವವ್ಯಾಪ್ಯ ಜಾತಿವಿಶೇಷವದಾಶ್ರಯತ್ವ ರೂಪಾನೌಷ್ಣ್ಯಲಕ್ಷಣ ಯುಕ್ತಮಿತಿ ಸಮಮ್।**

ಅದ್ವೈತಿ ಪುನಃ ಹೇಳುತ್ತಾನೆ— 'ಪ್ರಪಂಚಮಿಥ್ಯಾತ್ವವೆಂಬುದು ದ್ವೈತಕ್ಕೆ ನಾಮಾಂತರವಲ್ಲ. ಮಿಥ್ಯಾತ್ವ ಲಕ್ಷಣವಿರುವುದರಿಂದ ಶುಕ್ತಿರೂಪ್ಯ ಮಿಥ್ಯಾತ್ವದಂತೆಯೇ ಮಿಥ್ಯಾತ್ವ ಶಬ್ದಕ್ಕೆ ವಾಚ್ಯವೇ ಆಗಿದೆ. ಹಾಗಾದರೆ ಶುಕ್ತಿರೂಪ್ಯಮಿಥ್ಯಾತ್ವಕ್ಕಿಂತ ವೈಲಕ್ಷಣ್ಯ ಹೇಗೆ ಎಂದರೆ ತಾತ್ವಿಕತ್ವ ಮಾತ್ರದಿಂದಲೇ ಅತಾತ್ವಿಕ ಶುಕ್ತಿರೂಪ್ಯಮಿಥ್ಯಾತ್ವಕ್ಕಿಂತ ಪ್ರಪಂಚ ಮಿಥ್ಯಾತ್ವವು ವಿಲಕ್ಷಣವಾಗಿದೆ ಎನ್ನುತ್ತೇವೆ' ಎಂದು. ಇದು ಸರಿಯಲ್ಲ. ಅದ್ವೈತಿ ಹೇಳುವಂತೆಯೆ ನಾವೂ ಹೇಳಬಹುದು. ವಹ್ನಿಯ ಅನೌಷ್ಣ್ಯವೂ ಕೂಡ ಅದರ ಲಕ್ಷಣ ಯುಕ್ತವಾಗಿಯೇ ಇದೆ. ಪಾರಿಭಾಷಿಕವಲ್ಲ. ಚೈತನ್ಯ ಮಾತ್ರಕ್ಕೇ ಇಟ್ಟ ನಾಮಾಂತರವಲ್ಲ. ಸ್ಪರ್ಶತ್ವವ್ಯಾಪ್ಯ ಶೀತತ್ವಜಾತಿವಿಶೇಷಉಳ್ಳ ಶೀತಸ್ಪರ್ಶಕ್ಕೆ ಆಶ್ರಯವಾದ ಜಲಾದಿಯೇ 'ಅನುಷ್ಣ' ಶಬ್ದಾರ್ಥ. ತನ್ನಿಷ್ಠ ಧರ್ಮವೆ ಅನೌಷ್ಣ್ಯ. ನಿರ್ಧರ್ಮಕವಾದ ಚೈತನ್ಯ ಮಾತ್ರದಲ್ಲಿ ಈ ಧರ್ಮ ಬರುವುದಿಲ್ಲ. ಆದಕ್ಕೆ ಅನೌಷ್ಣ್ಯವು ನಾಮಾಂತರವಾಗುವುದಿಲ್ಲ. ವಹ್ನಿಯಲ್ಲಿ ಸಾಧನೆ ಮಾಡುತ್ತಿರುವ ಅನೌಷ್ಣ್ಯವೂ ಕೂಡ ಈ ಅನೌಷ್ಣ್ಯ ಲಕ್ಷಣಯುಕ್ತವೇ ಆಗಿದೆ. ಆದರೆ ತಾತ್ವಿಕತ್ವ ಮಾತ್ರದಿಂದ ಜಲಾದಿಯ ಅನೌಷ್ಣ್ಯಕ್ಕಿಂತ ವಹ್ನಿಯ ಅನೌಷ್ಣ್ಯವು ವಿಲಕ್ಷಣ ಎನ್ನುತ್ತೇವೆ.



**ननु प्रातिभासिकस्यैव मिथ्यात्वं व्यावहारिकं, व्यावहारिकस्य तु तात्विकमिति चेन्न । जलादिस्थस्य प्रातिभासिकौष्ण्यस्याभाव एव व्यावहारिकः, अग्न्यादिस्थस्य व्यावहारिकौष्ण्यस्य तु तात्विक इत्यापातात् । तस्मान्मिथ्यात्वं तात्विकं, अनौष्ण्यं तु व्यावहारिकमिति व्यवस्था न युक्ता ।**

**अस्तु वा सा, तथापि तात्त्विकमिथ्यात्वानुमितिबाधेन सत्यत्वस्य व्यावहारिकत्ववत् व्यावहारिकानुष्णत्वानुमितिबाधेनौष्ण्यं नभोनैल्यवत् स्वार्थक्रियया सह स्वप्नवत् प्रातिभासिकं स्यात् ।**

**तत्वप्रदीपिकायां तु औष्ण्यधीप्रामाण्ये उभयसंमतिः, सत्वबुद्धौ तु नेत्युक्तं तन्न । इहासंमतौ हेत्वभावात् ।**

**तत्त्वशुद्धौ तु मिथ्यात्वानुमितिः श्रुत्यनुगृहीतेति नाक्षबाध्या,**

**इतरातु नेति तद्बाध्येत्युक्तं, तन्न । मिथ्यात्वश्रुतेः 'अग्निर्हिमस्य भेषजम्'इति श्रुतेरनुमित हिमनिवारणशक्त्यनुवादित्ववत् अनुमितासत्यमिथ्यात्वानुवादित्वोपपत्तेः । मिथ्यात्वानुमितिस्तर्कानुगृहीता, इतरा तु नेति चेन्न । तर्काणां मिथ्यात्वानुमितिवत् अक्षबाधेनात्मक्षणिकत्वादितर्काणामिवाभासत्वात् । उक्तं च सुरेश्वरवार्तिके बौद्धं प्रति—**

**''प्रत्यभिज्ञायमानेऽर्थे तदेवेदमिति ध्रुवे ।**
**लिङ्गमाभासतामेति प्रत्यक्षार्थविरुद्धदृग्'' इति ।**

---

ननु मिथ्यात्वस्य धर्मिसत्ताधिकसत्ताकत्वनियमात् व्यावहारिकविश्वमिथ्यात्वं तात्विकमेव स्यादित्यभिप्रेत्य शङ्कते **नन्विति । अभाव एवेति ।** अधिष्ठानान्यगत इति शेषः । **इत्यापातादिति ।** त्वदुक्तनियमस्याप्रयोजकत्वेन विनिगमनाविरहादिति भावः । नन्वर्थक्रियाकारित्वात् कथमौष्ण्यं नभोनैल्यवत् प्रतिभासिकं स्यादित्यत आह **स्वार्थक्रिययेति । अनुमितासत्येति ।** नचैवं श्रुतेरप्रामाण्यम् । त्वन्मते सत्यत्वश्रुतेरिव मिथ्यात्वश्रुतेरपि प्रतियोगिसमर्पकत्वेन प्रामाण्योपपत्तेरिति भावः । **इतरा** अनौष्ण्यानुमितिः । **आभासत्वादिति ।** तथाच सत्तर्कानुगृहीतत्वमेवानाभासत्वप्रयोजकमिति भावः ।



**ನನು ಪ್ರಾತಿಭಾಸಿಕಸ್ಯೈವ ಮಿಥ್ಯಾತ್ವಂ ವ್ಯಾವಹಾರಿಕಂ। ವ್ಯಾವಹಾರಿಕಸ್ಯ ತು ತಾತ್ವಿಕಮಿತಿ ಚೇನ್ನ। ಜಲಾದಿಸ್ಥಸ್ಯ ಪ್ರಾತಿಭಾಸಿಕೌಷ್ಣ್ಯಸ್ಯಾಭಾವ ಏವ ವ್ಯಾವಹಾರಿಕಃ, ಅಗ್ನ್ಯಾದಿಸ್ಥಸ್ಯ ವ್ಯಾವಹಾರಿಕೌಷ್ಣ್ಯಸ್ಯ ತು ತಾತ್ವಿಕಃ ಇತ್ಯಾಪಾತಾತ್।**

ಅದ್ವೈತಿಯು ತಾತ್ವಿಕತ್ವ ಅತಾತ್ವಿಕತ್ವ ವ್ಯವಸ್ಥೆಯನ್ನು ಇನ್ನೊಂದು ಬಗೆಯಿಂದ ಹೇಳುತ್ತಾನೆ— 'ಪ್ರಾತಿಭಾಸಿಕದ ಅಭಾವವು ಮಾತ್ರ ವ್ಯಾವಹಾರಿಕ, ವ್ಯಾವಹಾರಿಕದ ಅಭಾವವು ತಾತ್ವಿಕ' ಎಂದು. ವಹ್ನಿಯಲ್ಲಿ ಸಾಧಿಸುವ ಅನೌಷ್ಣ್ಯವು ಪ್ರಾತಿಭಾಸಿಕವಾದ್ದರಿಂದ ಅದರ ಅಭಾವವು ವ್ಯಾವಹಾರಿಕವೆ, ತಾತ್ವಿಕವಾಗುವುದಿಲ್ಲ, ತಾತ್ವಿಕವೆಂದಾಗಲಿ ಎಂದು ಆಪಾದನೆ ಕೂಡುವುದಿಲ್ಲ' ಎಂದು. ಇದೂ ಸರಿಯಲ್ಲ.

ಪ್ರಾತಿಭಾಸಿಕದ ಅಧಿಷ್ಠಾನಾನ್ಯಗತವಾದ ಅಭಾವವು ವ್ಯಾವಹಾರಿಕವೆ ಏಕಾಗಬೇಕು, ತಾತ್ವಿಕವೇಕಾಗಬಾರದು. ಅದರಿಂದ ಈ ನಿಯಮವು ಅಪ್ರಯೋಜಕ. ಇದಕ್ಕೆ ಪ್ರತಿಬಂದಿ ಜಲಾದಿಗಳಲ್ಲಿ ಕಾಣುವ ಪ್ರಾತಿಭಾಸಿಕ ಔಷ್ಣ್ಯದ ಅಗ್ನ್ಯಾದಿಗತವಾದ ಅಭಾವವೇ ವ್ಯಾವಹಾರಿಕ, ವಹ್ನಿಯಲ್ಲಿ ಕಾಣುವ ವ್ಯಾವಹಾರಿಕ ಔಷ್ಣ್ಯದ ಜಲಾದಿಗತವಾದ ಅಭಾವವು ತಾತ್ವಿಕ ಎಂದಾದೀತು ಎಂದು.

ಇಲ್ಲಿ 'ಮಿಥ್ಯಾತ್ವ'ವೆಂದರೆ ಅಭಾವವೆಂದೂ 'ಅನೌಷ್ಣ್ಯ'ವೆಂದರೆ ಉಷ್ಣತ್ವಾಭಾವವೆಂದೂ ಇಟ್ಟುಕೊಂಡಿದ್ದಾರೆ.

**ತಸ್ಮಾತ್ ಮಿಥ್ಯಾತ್ವಂ ತಾತ್ವಿಕಂ, ಅನೌಷ್ಣ್ಯಂ ತು ವ್ಯಾವಹಾರಿಕಮಿತಿ ವ್ಯವಸ್ಥಾ ನ ಯುಕ್ತಾ ।**

**ಅಸ್ತು ವಾ ಸಾ, ತಥಾಪಿ ತಾತ್ತ್ವಿಕಮಿಥ್ಯಾತ್ವಾನುಮಿತಿಬಾಧೇನ ಸತ್ಯತ್ವಸ್ಯ ವ್ಯಾವಹಾರಿಕತ್ವವತ್ ವ್ಯಾವಹಾರಿಕಾನುಷ್ಣತ್ವಾನುಮಿತಿಬಾಧೇನೌಷ್ಣ್ಯಂ ನಭೋನೈಲ್ಯವತ್ ಸ್ವಾರ್ಥಕ್ರಿಯಯಾ ಸಹ ಸ್ವಪ್ನವತ್ ಪ್ರಾತಿಭಾಸಿಕಂ ಸ್ಯಾತ್ ।**

ಅದರಿಂದ ವಿಶ್ವಮಿಥ್ಯಾತ್ವವು ತಾತ್ವಿಕ. ವಹ್ನಿಯ ಅನೌಷ್ಣ್ಯವು ಮಾತ್ರ ವ್ಯಾವಹಾರಿಕ ಎಂದು ಖಂಡನಕಾರನು ಹೇಳಿದ ವ್ಯವಸ್ಥೆ ಸರಿಯಲ್ಲ. ಅಥವಾ ಸರಿ ಎಂದೇ ಒಪ್ಪೋಣ. ಒಪ್ಪಿದರೂ ತಾತ್ವಿಕಮಿಥ್ಯಾತ್ವಾನುಮಿತಿಯಿಂದ ಬಾಧಿತವಾದ ವಿಶ್ವಸತ್ಯತ್ವವು ವ್ಯಾವಹಾರಿಕವಾಗುವಂತೆ ವ್ಯಾವಹಾರಿಕವಾದ ಅನುಷ್ಣತ್ವಾನುಮಿತಿಯಿಂದ ಬಾಧಿತವಾಗುವ ವಹ್ನಿಯ ಔಷ್ಣ್ಯವು ಆಕಾಶದ ನೀಲಬಣ್ಣದಂತೆ ಪ್ರಾತಿಭಾಸಿಕವಾದೀತು. ವಹ್ನಿಯ ಔಷ್ಣ್ಯವು ದಾಹರೂಪ ಅರ್ಥಕ್ರಿಯಾಕಾರಿಯಾದರೂ ಸ್ವಾಪ್ನ ಪದಾರ್ಥವು ಅದರ ಭಯಕಂಪಾದಿ ಅರ್ಥಕ್ರಿಯೆಯೊಂದಿಗೇ ಪ್ರಾತಿಭಾಸಿಕವಾಗುವಂತೆ ದಾಹರೂಪ ಅರ್ಥಕ್ರಿಯೆಯೊಂದಿಗೇ ಔಷ್ಣ್ಯವು ಬಾಧಿತವಾಗಿ ಪ್ರಾತಿಭಾಸಿಕವಾದೀತು.

**ತತ್ವಪ್ರದೀಪಿಕಾಯಾಂ ತು— ಔಷ್ಣ್ಯಧೀಪ್ರಾಮಾಣ್ಯೇ ಉಭಯಸಂಮತಿಃ, ಸತ್ವಬುದ್ಧೌ ತು ನೇತ್ಯುಕ್ತಂ ತನ್ನ । ಇಹ ಅಸಂಮತೌ ಹೇತ್ವಭಾವಾತ್ ।**

ತತ್ವಪ್ರದೀಪಿಕೆಯಲ್ಲಿ ಹೀಗೆ ಹೇಳಿದೆ— 'ವಹ್ನಿಯಲ್ಲಿ ಉಷ್ಣತ್ವಾನುಭವವು ಪ್ರಮಾಣವೆಂದು ವಾದಿ ಪ್ರತಿವಾದಿ ಉಭಯ ಸಮ್ಮತವಾಗಿದೆ. ಅದರಿಂದ ಅನೌಷ್ಣ್ಯಾನುಮಾನಕ್ಕೆ ಪ್ರತ್ಯಕ್ಷವು ಬಾಧಕವಾಗಿದೆ. ಪ್ರಪಂಚಸತ್ಯತ್ವಾನುಭವದಲ್ಲಿ ಹಾಗೆ ಉಭಯ ಸಮ್ಮತಿ ಇಲ್ಲ. ವಿವಾದವೇ ಇದೆ. ಅದರಿಂದ ಸತ್ವಪ್ರತ್ಯಕ್ಷದಿಂದ ಮಿಥ್ಯಾತ್ವಾನುಮಿತಿ ಬಾಧಿತವಾಗುವುದಿಲ್ಲ'—ಇದೂ ಸರಿಯಲ್ಲ. ಪ್ರಪಂಚ ಸತ್ಯತ್ವಾನುಭವ ಪ್ರಮಾಣವೆನ್ನುವಲ್ಲಿ ಉಭಯ ಸಮ್ಮತಿ ಇಲ್ಲದಿರಲು ಕಾರಣವಿಲ್ಲ.

**ತತ್ತ್ವಶುದ್ಧೌ ತು—ಮಿಥ್ಯಾತ್ವಾನುಮಿತಿಃ ಶ್ರುತ್ಯನುಗೃಹೀತೇತಿ ನಾಕ್ಷಬಾಧ್ಯಾ । ಇತರಾ**

**ತು ನೇತಿ ತದ್‌ಬಾಧ್ಯೇತ್ಯುಕ್ತಂ, ತನ್ನ। ಮಿಥ್ಯಾತ್ವಶ್ರುತೇಃ, 'ಅಗ್ನಿರ್ಹಿಮಸ್ಯ ಭೇಷಜಮ್'ಇತಿ ಶ್ರುತೇಃ ಅನುಮಿತ ಹಿಮನಿವಾರಣಶಕ್ತ್ಯನುವಾದಿತ್ವವತ್ ಅನುಮಿತಾಸತ್ಯ ಮಿಥ್ಯಾತ್ವಾನು-ವಾದಿತ್ವೋಪಪತ್ತೇಃ।**

**ಮಿಥ್ಯಾತ್ವಾನುಮಿತಿಸ್ತರ್ಕಾನುಗೃಹೀತಾ, ಇತರಾ ತು ನೇತಿ ಚೇನ್ನ। ತರ್ಕಾಣಾಂ ಮಿಥ್ಯಾತ್ವಾನುಮಿತಿವತ್ ಅಕ್ಷಬಾಧೇನ ಆತ್ಮಕ್ಷಣಿಕತ್ವಾದಿ ತರ್ಕಾಣಾಮಿವ ಆಭಾಸತ್ವಾತ್।**

ತತ್ವಶುದ್ಧಿಯಲ್ಲಿ ಹೀಗೆ ಹೇಳಿದೆ— 'ಮಿಥ್ಯಾತ್ವಾನುಮಿತಿಗೆ ಮಿಥ್ಯಾತ್ವಶ್ರುತಿಯು ಸಂವಾದಿಯಾಗಿದೆ. ಪ್ರತ್ಯಕ್ಷದಿಂದ ಅದು ಬಾಧ್ಯವಾಗಲಾರದು. ವಹ್ನ್ಯನೌಷ್ಣ್ಯಾನುಮಿತಿ ಹಾಗಿಲ್ಲ. ಆದರಿಂದ ಪ್ರತ್ಯಕ್ಷದಿಂದ ಬಾಧ್ಯವಾಗುವುದು' ಎಂದು. ಅದೂ ಸರಿಯಲ್ಲ. ಮಿಥ್ಯಾತ್ವ ಶ್ರುತಿಯು ಸಂವಾದಿಯಾಗಿಲ್ಲ. ಅನುಮಿತ ಅಸತ್ಯ ಮಿಥ್ಯಾತ್ವವನ್ನು ಅನುವಾದ ಮಾಡುತ್ತದೆ. ಅನುವಾದಕವಾದ ಮಾತ್ರಕ್ಕೆ ಶ್ರುತಿಯು ಅಪ್ರಮಾಣವಾಗಬೇಕಿಲ್ಲ. ನಿನ್ನ ಮತದಲ್ಲಿ ಸತ್ಯತ್ವ ಶ್ರುತಿಯಂತೆ ನನ್ನ ಮತದಲ್ಲಿ ಮಿಥ್ಯಾತ್ವಶ್ರುತಿಯು ನಿಷೇಧಕ್ಕೆ ಪ್ರತಿಯೋಗಿಸಮರ್ಪಕವೆನ್ನಲು ಶಕ್ಯವಿದೆ. ವಹ್ನಿಯಲ್ಲಿ ಅನುಮಿತವಾಗುವ ಹಿಮನಿವಾರಣಶಕ್ತಿಯನ್ನು 'ಅಗ್ನಿರ್ಹಿಮಸ್ಯ ಭೇಷಜಂ' ಎಂದು ಶ್ರುತಿಯು ಅನುವಾದ ಮಾಡುವುದು ಕಂಡಿದೆಯಾದ್ದರಿಂದ ಮಿಥ್ಯಾತ್ವ ಶ್ರುತಿಯು ಕೂಡ ಹಾಗೇ ಅನುಮಿತ ಮಿಥ್ಯಾತ್ವವನ್ನು ಅನುವಾದ ಮಾಡಬಹುದು.

'ಮಿಥ್ಯಾತ್ವಾನುಮಿತಿಗೆ ಅನುಕೂಲತರ್ಕದ ಬೆಂಬಲವಿದೆ. ವಹ್ನಿಯಲ್ಲಿ ಅನೌಷ್ಣ್ಯ ಅನುಮಿತಿಗೆ ಅನುಕೂಲತರ್ಕವಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಆದರೆ ಆತ್ಮನು ಕ್ಷಣಿಕ ಎನ್ನಲು ಬೌದ್ಧನು ಅನುಮಾನ ಮಾಡುತ್ತ ಅದಕ್ಕೂ 'ಯತ್‌ಸತ್ ತತ್‌ಕ್ಷಣಿಕಂ' 'ಸತ್ಯವಾದುದು ನಿಯಮೇನ ಕ್ಷಣಿಕವೇ ಆಗಿರುತ್ತದೆ' ಎಂದು ವ್ಯಾಪ್ತಿಗೆ ಅನುಕೂಲತರ್ಕವನ್ನು ಹೇಳುತ್ತಾನೆ. ಈ ಅನುಮಾನವೂ ಅನುಕೂಲ ತರ್ಕವೂ ಪ್ರತ್ಯಕ್ಷಬಾಧಿತ ಎಂದು ಅದ್ವೈತಿಯೇ ಹೇಳುತ್ತಾನೆ. ಹಾಗೇ ಮಿಥ್ಯಾತ್ವಾನುಮಾನವೂ ಅದಕ್ಕೆ ಅದ್ವೈತಿಯು ಹೇಳುವ ಅನುಕೂಲತರ್ಕವೂ ಪ್ರತ್ಯಕ್ಷದಿಂದ ಬಾಧಿತವಾಗಿದೆ.

**ಉಕ್ತಂ ಚ ಸುರೇಶ್ವರವಾರ್ತಿಕೇ ಬೌದ್ಧಂ ಪ್ರತಿ—**
**ಪ್ರತ್ಯಭಿಜ್ಞಾಯಮಾನೇಽರ್ಥೇ ತದೇವೇದಮಿತಿ ಧ್ರುವೇ।**
**ಲಿಂಗಮಾಭಾಸತಾಮೇತಿ ಪ್ರತ್ಯಕ್ಷಾರ್ಥವಿರುದ್ಧದೃಗ್'' ಇತಿ॥**

ಸುರೇಶ್ವರವಾರ್ತಿಕದಲ್ಲಿ ಬೌದ್ಧನಿಗೆ ಇದನ್ನೇ ಹೇಳುತ್ತಾನೆ— 'ಅದೇ ಇದೆಂ'ದು ಪ್ರತ್ಯಭಿಜ್ಞೆ ದೃಢವಾಗಿರುವಾಗ ಈ ಪ್ರತ್ಯಕ್ಷಕ್ಕೆ ವಿರುದ್ಧವಾಗಿ ಹೇಳುವ ಆತ್ಮಕ್ಷಣಿಕತ್ವಾನುಮಾನವು ಅಸಾಧಕವಾಗುತ್ತದೆ' ಎಂದು.



नन्वनौष्ण्यस्यौष्ण्यनिरूप्यत्वात्तस्य चाग्न्यादावेव ग्राह्यत्वात्तत्र तदभावानुमा बाधिता। मिथ्यात्वं तु न सत्यत्वाभावः। किन्तु भावान्तरम्। अभावत्वेऽपि तत्प्रतियोगि सत्वं ब्रह्मणि प्रसिद्धमिति चेन्न। औष्ण्यतदभावयोर्व्यावहारिकत्वतात्त्विकत्वाभ्यां प्रातिभासिकत्वव्यावहारिकत्वाभ्यां वा व्यवस्थोक्तेः। तत्र प्रतियोगिग्राहिण उपजीव्यत्वे इह च धर्म्यादिग्राहिणस्सुतरामुपजीव्यत्वाच्च। उष्णमात्रे शैत्यस्य उष्णविशेषे वानुष्णत्वस्य साधनेऽबाधापाताच्च।

एतेनौष्ण्यात्यन्ताभावात्मकमनौष्ण्यम् औष्ण्यमिथ्यात्वरूपमेवेति तस्य तात्त्विकतेष्टेति निरस्तम्। शैत्यस्यातद्रूपत्वात्। तस्मात्

स्वतःप्रमात्वं प्रत्यक्षे लिङ्गाद्यैः स्वोपजीविभिः।
स्वविरोधान्मृत्यवस्थामापन्नैर्नैव बाध्यते॥

---

**किन्तु भावान्तरमिति।** प्रतिपन्नोपाधिप्रवेशेनोपाध्यन्तरत्वादिति भावः। ननु सद्रूपत्वाभावरूपमिथ्यात्वसाधने बाधः स्यादेवेत्यत आह **अभावत्वेपीति**॥ ननु धर्मी सर्वथा नापलप्यते व्यावहारिकसत्वस्वीकारात्। अपि तु सर्वस्य पारमार्थिकी सत्ता नास्तीत्येवोच्यते। नचैतावतोपजीव्यविरोध इत्यत आह **उष्णमात्र इति**॥ उक्तमर्थमुपसंहरति **तस्मादिति**।



ನನ್ವನೌಷ್ಣ್ಯಸ್ಯೌಷ್ಣ್ಯನಿರೂಪ್ಯತ್ವಾತ್ ತಸ್ಯ ಚಾಗ್ನ್ಯಾದಾವೇವ ಗ್ರಾಹ್ಯತ್ವಾತ್ ತತ್ರ ತದಭಾವಾನುಮಾ ಬಾಧಿತಾ। ಮಿಥ್ಯಾತ್ವಂ ತು ನ ಸತ್ಯತ್ವಾಭಾವಃ। ಕಿಂತು ಭಾವಾಂತರಮ್। ಅಭಾವತ್ವೇऽಪಿ ತತ್ಪ್ರತಿಯೋಗಿ ಸತ್ವಂ ಬ್ರಹ್ಮಣಿ ಪ್ರಸಿದ್ಧಮಿತಿ ಚೇನ್ನ। ಔಷ್ಣ್ಯತದಭಾವಯೋರ್ವ್ಯಾವಹಾರಿಕತ್ವ ತಾತ್ವಿಕತ್ವಾಭ್ಯಾಂ ಪ್ರಾತಿಭಾಸಿಕತ್ವ ವ್ಯಾವಹಾರಿಕತ್ವಾಭ್ಯಾಂ ವಾ ವ್ಯವಸ್ಥೋಕ್ತೇಃ।

ಅದ್ವೈತಿ ಹೇಳುತ್ತಾನೆ— ಅನೌಷ್ಣ್ಯವು ಔಷ್ಣ್ಯಪ್ರತಿಯೋಗಿಕವಾದ ಒಂದು ಅಭಾವ

ಪದಾರ್ಥ. ಅದರ ಪ್ರತಿಯೋಗಿಯನ್ನು ಅಗ್ನಿಯಲ್ಲಿಯೇ ಗ್ರಹಣ ಮಾಡಬೇಕು. ಆ ಅಗ್ನಿಯಲ್ಲಿಯೇ ಅದರ ಅಭಾವವನ್ನು ಅನುಮಾನ ಮಾಡಲು ಹೊರಟರೆ ಉಪಜೀವ್ಯ ವಿರೋಧದಿಂದ ಬಾಧಿತವಾಗುತ್ತದೆ. ಮಿಥ್ಯಾತ್ವವು ಪ್ರತಿಪನ್ನೋಪಾಧಿಘಟಿತವಾದ್ದರಿಂದ ಅಭಾವಪದಾರ್ಥವಲ್ಲ. ಅದರಿಂದ 'ಸತ್ಯತ್ವರೂಪ ಪ್ರತಿಯೋಗಿಗ್ರಾಹಕ ಪ್ರತ್ಯಕ್ಷವಿರೋಧ' ಎನ್ನಲಾಗುವುದಿಲ್ಲ. ಅದರಿಂದ ಪ್ರತ್ಯಕ್ಷ ಬಾಧಿತವಾಗುವುದಿಲ್ಲ. ಸದ್ರೂಪತ್ವಾಭಾವ ರೂಪ ಮಿಥ್ಯಾತ್ವ ಸಾಧನಪಕ್ಷದಲ್ಲಿ ಸದ್ರೂಪತ್ವರೂಪ ಪ್ರತಿಯೋಗಿಯು ಬ್ರಹ್ಮನಲ್ಲಿ ಪ್ರಸಿದ್ಧವಿದೆ. ಅದರ ಅಭಾವವನ್ನು ಪ್ರಪಂಚದಲ್ಲಿ ಸಾಧನೆ ಮಾಡುತ್ತೇವೆ. ಹೀಗಾಗಿ ಉಪಜೀವ್ಯಪ್ರತ್ಯಕ್ಷದಿಂದ ಬಾಧಪ್ರಸಕ್ತಿ ಇಲ್ಲ.' ಎಂದು. ಇದೂ ಸರಿಯಲ್ಲ. ಅನೌಷ್ಣ್ಯಾನುಮಾನಕ್ಕೂ ಪ್ರತ್ಯಕ್ಷದಿಂದ ಬಾಧಪ್ರಸಕ್ತಿ ಇಲ್ಲ. ಔಷ್ಣ್ಯವು ವ್ಯಾವಹಾರಿಕ, ಅನೌಷ್ಣ್ಯವು ತಾತ್ವಿಕ. ಅಥವಾ ಔಷ್ಣ್ಯವು ಪ್ರಾತಿಭಾಸಿಕ, ಅನೌಷ್ಣ್ಯವು ವ್ಯಾವಹಾರಿಕ ಎಂದು ವ್ಯವಸ್ಥೆಯಲ್ಲಿ ಔಷ್ಣ್ಯಪ್ರತ್ಯಕ್ಷವೂ ಅನೌಷ್ಣ್ಯಾನುಮಿತಿಯೂ ಭಿನ್ನಭಿನ್ನವಿಷಯಕವಾದ್ದರಿಂದ ಅವುಗಳಿಗೆ ಬಾಧ್ಯ ಬಾಧಕಭಾವವೇ ಇಲ್ಲ. ಅನೌಷ್ಣ್ಯಾನುಮಾನವು ಪ್ರತ್ಯಕ್ಷಬಾಧಿತವೆನ್ನುವುದು ಯುಕ್ತವಲ್ಲ.

**ತತ್ರ ಪ್ರತಿಯೋಗಿಗ್ರಾಹಿಣ ಉಪಜೀವ್ಯತ್ವೇ ಇಹ ಚ ಧರ್ಮ್ಯಾದಿಗ್ರಾಹಿಣಃ ಸುತರಾಮುಪಜೀವ್ಯತ್ವಾಚ್ಚ ।**

'ಔಷ್ಣ್ಯಾಭಾವಕ್ಕೆ ಪ್ರತಿಯೋಗಿಗ್ರಾಹಕವು ಔಷ್ಣ್ಯಪ್ರತ್ಯಕ್ಷ. ಅದು ಪ್ರತಿಯೋಗಿಗ್ರಾಹಕತ್ವೇನ ಉಪಜೀವ್ಯ. ಅದರಿಂದ ಅನೌಷ್ಣ್ಯಾನುಮಾನವು ಪ್ರತ್ಯಕ್ಷ ಬಾಧಿತವಾಗುವುದು' ಎಂದು ಅದ್ವೈತಿ ಹೇಳುತ್ತಾನೆ. ಆದರೆ, ಮಿಥ್ಯಾತ್ವಾನುಮಿತಿಯಲ್ಲಿಯೂ ಕೂಡ ಪ್ರತ್ಯಕ್ಷವೇ ಧರ್ಮ್ಯಾದಿಗ್ರಾಹಕತ್ವೇನ ಸುತರಾಂ ಉಪಜೀವ್ಯವಾಗಿದ್ದು ಬಾಧಕವಾಗುತ್ತದೆ.

**ಉಷ್ಣಮಾತ್ರೇ ಶೈತ್ಯಸ್ಯ ಉಷ್ಣವಿಶೇಷೇ ವಾನುಷ್ಣತ್ವಸ್ಯ ಸಾಧನೇಽಬಾಧಾಪಾತಾಚ್ಚ ।**

'ಧರ್ಮಿಗೆ ವ್ಯಾವಹಾರಿಕಸತ್ವವನ್ನು ಅಂಗೀಕರಿಸಿರುವುದರಿಂದ ಧರ್ಮಿಸ್ವರೂಪವನ್ನೇ ಸರ್ವಥಾ ಅಪಲಾಪಮಾಡುವುದಿಲ್ಲ. ಪಾರಮಾರ್ಥಿಕಸತ್ಯತ್ವವನ್ನು ಮಾತ್ರ ನಿಷೇಧ ಮಾಡುತ್ತಿದ್ದೇವೆ. ಅದರಿಂದ ಉಪಜೀವ್ಯವಿರೋಧವಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಇದಕ್ಕೆ ನಾವೂ ಹೇಳುತ್ತೇವೆ. ಉಷ್ಣಪದಾರ್ಥವೆಲ್ಲವನ್ನೂ ಪಕ್ಷ ಮಾಡುವ ಪಕ್ಷದಲ್ಲಿ ನಾವು ಶೈತ್ಯವನ್ನು ಸಾಧನೆ ಮಾಡುತ್ತೇವೆ. ಆಗ ಧರ್ಮಿಯನ್ನು ಅಪಲಾಪ ಮಾಡುವ ಪ್ರಸಂಗವಿಲ್ಲ. ಉಷ್ಣವಿಶೇಷವನ್ನು ಪಕ್ಷ ಮಾಡುವಾಗಲು, ಪಕ್ಷಕ್ಕಿಂತ ಬೇರೆಯಾದ ಇನ್ನೊಂದು ಉಷ್ಣಪದಾರ್ಥದಲ್ಲಿ ಪ್ರತಿಯೋಗಿಯು ಪ್ರತ್ಯಕ್ಷದಿಂದ ಸಿದ್ಧವಾಗುವುದರಿಂದ, ಉಷ್ಣತ್ವಾಭಾವವನ್ನು ಪಕ್ಷದಲ್ಲಿ ಸಾಧನೆ ಮಾಡಿದರೆ ಉಪಜೀವ್ಯ ವಿರೋಧಕ್ಕೆ ಪ್ರಸಕ್ತಿ ಇಲ್ಲ. ಬಾಧ ಬರುವುದಿಲ್ಲ.

**ಏತೇನ ಔಷ್ಣ್ಯಾತ್ಯಂತಾಭಾವಾತ್ಮಕಂ ಅನೌಷ್ಣ್ಯಮ್ ಔಷ್ಣ್ಯಮಿಥ್ಯಾತ್ವರೂಪಮೇವೇತಿ ತಸ್ಯ ತಾತ್ವಿಕತಾ ಇಷ್ಟೇತಿ ನಿರಸ್ತಮ್ । ಶೈತ್ಯಸ್ಯ ಅತದ್ರೂಪತ್ವಾತ್ ।**

'ಅನೌಷ್ಣ್ಯವೆಂದರೆ ಔಷ್ಣ್ಯಾಭಾವ. ಅದು ಔಷ್ಣ್ಯದ ಮಿಥ್ಯಾತ್ವರೂಪವೆ. ಅದು ತಾತ್ವಿಕವೆಂದಾದೀತೆಂದರೆ ನಮಗೆ ಇಷ್ಟಾಪತ್ತಿ.' ಎಂದು ಅದ್ವೈತಿ ಹೇಳಿದರೆ ನಾವು ಹೇಳುತ್ತೇವೆ ಅನೌಷ್ಣ್ಯವೆಂದರೆ ಶೈತ್ಯ ಎಂದಿದ್ದೇವೆ. ಶೈತ್ಯವು ಔಷ್ಣ್ಯದ ಮಿಥ್ಯಾತ್ವರೂಪವಲ್ಲ, ಅದು ತಾತ್ವಿಕವಾಗಲೆಂದು ನಾವು ಆಪಾದಿಸುವಾಗ ಇಷ್ಟಾಪತ್ತಿ ಎನ್ನುವಂತಿಲ್ಲ.

**ತಸ್ಮಾತ್**

**ಸ್ವತಃ ಪ್ರಮಾತ್ವಂ ಪ್ರತ್ಯಕ್ಷೇ ಲಿಂಗಾದ್ಯೈಃ ಸ್ವೋಪಜೀವಿಭಿಃ ।**
**ಸ್ವವಿರೋಧಾನ್ಮೃತ್ಯವಸ್ಥಾಮಾಪನ್ನೈರ್ನೈವ ಬಾಧ್ಯತೇ'' ॥**

ಅದರಿಂದ ಮಿಥ್ಯಾತ್ವಾನುಮಾನಾದಿಗಳು ಪ್ರತ್ಯಕ್ಷೋಪಜೀವಿಗಳಾದ್ದರಿಂದ, ಅವು ಪ್ರತ್ಯಕ್ಷ ವಿರೋಧದಿಂದ ಸ್ವತಃ ಮರಣಾವಸ್ಥೆಯನ್ನು ಹೊಂದಿರುತ್ತವೆ. ಅದರಿಂದ ಪ್ರತ್ಯಕ್ಷದಲ್ಲಿರುವ ಸ್ವತಃ ಪ್ರಾಪ್ತ ಪ್ರಾಮಾಣ್ಯವನ್ನು ಅವು ಸರ್ವಥಾ ಬಾಧಿಸಲಾರವು.



# ಪ್ರತ್ಯಕ್ಷಸ್ಯ ಲಿಂಗಾದ್ಯಬಾಧ್ಯತ್ವೇ ಬಾಧಕೋದ್ಧಾರಃ

**'इदं रूप्यम्' इति प्रत्यक्षमपि 'नेदं रूप्यम्' इति सयुक्तिकबलवत्प्रत्यक्षेण बाध्यम् । न तु युक्त्यैव । 'गौरोऽहम्' इत्याद्यपि 'मम शरीरम्' इति बलवत्प्रत्यक्षबाध्यं, कर्दमलिप्ते वस्त्रे 'कृष्णं वस्त्रम्' इतिवद्गौणं वा । 'उष्णं जलम्'इत्यपि गौणमेव । न तु लिङ्गादिबाध्यम् । यद्वा निश्चितद्रव्यान्तरसमभिव्यवहाररूपदोषेण शङ्किताप्रामाण्येन 'उष्णं जलम्' इत्यनेनावकाशे दत्ते लिङ्गादिकं प्रवर्तते । न तु तल्लिङ्गादिबाध्यम् । 'अहमिहैवास्मि सदने जानानः' इत्यादि तु प्रमाणमेव । जीवस्याणुत्वात् न तु लिङ्गादिबाध्यम् । ज्वालैक्यप्रत्यक्षमपि निर्वापितारोपितदीपे चेद्भेदग्राहिप्रत्यक्षेण बाधितमेव जायते । अन्यत्रापि 'दीर्घोऽयं दीपो ह्रस्वो न' इति प्रत्यक्षेण बाध्यते नत्वनुमित्या । तादृशप्रत्यक्षाभावे तु न दीपभेदः ।**

---

ननु यद्युक्तरीत्या प्रत्यक्षं लिङ्गाद्यबाध्यं स्यात् तदा इदंरजतमित्यादिभ्रमस्य युक्त्यादिना बाधो न स्यात् । नच भाविप्रत्यक्षेणैव तद्बाधः । प्रत्यक्षत्वाविशेषेण वैपरीत्यापत्तेरित्यत आह **इदं रूप्यमिति ।। सयुक्तिकेति ।।** विशेषदर्शनजन्येत्यर्थः । नच पूर्वप्रत्यक्षविरोधात् बाधकज्ञानस्यैवानुत्पत्तिरिति वाच्यम् । विरोधिज्ञानसामग्रीसमवहितस्य ज्ञानस्याप्रतिबन्धकत्वेन बाधकज्ञानोत्पत्तिसंभवात् ।। **बलवदिति ।।** परीक्षितेत्यर्थः । बलवत्त्वं च देहात्मैक्याध्यासभङ्गे स्पष्टीभविष्यति ।। **गौणमिति ।।** परंपरासम्बन्धावगाहीत्यर्थः । **उष्णं जलमिति ।** विशेषदर्शनकालीनमिति शेषः ।। **गौणमेवेति ।।** केचित्तु जलादौ वह्न्यादिसम्बन्धादौष्ण्यादिकमुत्पद्यत इति उष्णं जलमिति ज्ञानं साक्षात्सम्बन्धावगाहित्वेपि लोहितः स्फटिक इत्यादिवत् प्रमैव । नच युगपद्विरुद्धस्पर्शद्वयसमावेशानुपपत्तिः । स्फटिकादौ विरुद्धरूपद्वयसमावेशवत्तदुपपत्तेः । तत्र शौक्ल्यानुपलम्भवदत्रापि शैत्यानुपलम्भो-

पपत्तेश्च । नच यदुष्णं तत्तेज इति श्रुतिविरोधः । तस्याः स्वाभाविकौष्ण्यवद्विषयत्वादित्याहुः ।। **नन्विति** ।। अन्यथा ततः संवाद्युष्णार्थिप्रवृत्त्यनुदयप्रसङ्ग इति भावः ।

ननु तथापि विशेषादर्शनकालीनस्योष्णं जलमिति प्रत्यक्षस्य लिङ्गेनैव वाधो वक्तव्यः । अन्यथा शैत्यानुमितिरेव न स्यादित्यत आह **यद्वेति** ।। तथाच प्रतिबन्धकाभावादेव तत्र लिङ्गं प्रवर्तते । नतु तेन तस्य बाध इति भावः । ननु विभुजीवे परिच्छिन्नत्वग्राहिप्रत्यक्षस्य नानुमानादन्यद्बाधकमस्तीत्यत आह **अहमिति । अणुत्वादिति** ।। यथा चैतत्तथाग्रे आकर एव स्पष्टीभविष्यति ।



**'ಇದಂ ರೂಪ್ಯಮ್' ಇತಿ ಪ್ರತ್ಯಕ್ಷಮಪಿ 'ನೇದಂ ರೂಪ್ಯಮ್' ಇತಿ ಸಯುಕ್ತಿಕಬಲವತ್ ಪ್ರತ್ಯಕ್ಷೇಣ ಬಾಧ್ಯಮ್। ನ ತು ಯುಕ್ತ್ಯೈವ। 'ಗೌರೋಽಹಮ್' ಇತ್ಯಾದ್ಯಪಿ 'ಮಮ ಶರೀರಮ್' ಇತಿ ಬಲವತ್ ಪ್ರತ್ಯಕ್ಷಬಾಧ್ಯಂ, ಕರ್ದಮಲಿಪ್ತೇ ವಸ್ತ್ರೇ 'ಕೃಷ್ಣಂ ವಸ್ತ್ರಮ್' ಇತಿವದ್ಗೌಣಂ ವಾ। 'ಉಷ್ಣಂ ಜಲಮ್' ಇತ್ಯಪಿ ಗೌಣಮೇವ। ನ ತು ಲಿಂಗಾದಿಬಾಧ್ಯಮ್ ।**

ಅದ್ವೈತಿ ಹೇಳುತ್ತಾನೆ— ಪ್ರತ್ಯಕ್ಷವು ಅನುಮಾನಾಗಮಗಳಿಂದ ಅಬಾಧ್ಯವೆಂದಾದರೆ 'ಇದಂ ರಜತಂ' ಎಂಬ ಭ್ರಮಕ್ಕೆ ಅನುಮಾನದಿಂದ ಬಾಧವಿಲ್ಲವೆಂದಾದೀತು. ಮುಂದೆ ಬರುವ ಇನ್ನೊಂದು ಪ್ರತ್ಯಕ್ಷದಿಂದಲೆ ಈ ಪ್ರತ್ಯಕ್ಷಭ್ರಮಕ್ಕೆ ಬಾಧ ಎನ್ನುವುದು ಯುಕ್ತವಲ್ಲ. ಎರಡೂ ಪ್ರತ್ಯಕ್ಷವೇ ಆಗಿರುವುದರಿಂದ ಈ ಪ್ರತ್ಯಕ್ಷ ಭ್ರಮವೆ ಮುಂದೆ ಬರುವ ಪ್ರತ್ಯಕ್ಷಕ್ಕೆ ಬಾಧಕವಾದೀತು' ಎಂದು.

ನಾವು ಹೇಳುತ್ತೇವೆ— 'ಚಿಪ್ಪು ಬೆಳ್ಳಿಯಲ್ಲ. ಏಕೆಂದರೆ ಅದು ಬೆಂಕಿಯಲ್ಲಿ ಸುಟ್ಟು ಹೋಗುತ್ತದೆ. ಕುಟ್ಟಿದರೆ ಪುಡಿಯಾಗುತ್ತದೆ' ಎಂಬ ಯುಕ್ತಿ ಇರುವುದರಿಂದ ಮುಂದೆ ಬರುವ ಬಾಧಕಪ್ರತ್ಯಕ್ಷವು ಪ್ರಬಲವಾಗಿರುತ್ತದೆ. ಹೀಗೆ ಪ್ರಬಲವಾದ ಪ್ರತ್ಯಕ್ಷದಿಂದಲೇ ಪ್ರತ್ಯಕ್ಷಭ್ರಮಕ್ಕೆ ಬಾಧ. ಹೊರತು ಕೇವಲ ಯುಕ್ತಿಯಿಂದಲೂ ಅಲ್ಲ, ಯುಕ್ತಿ ಬಲವಿಲ್ಲದ ಬೇರೆ ಸಾಮಾನ್ಯ ಪ್ರತ್ಯಕ್ಷದಿಂದಲೂ ಅಲ್ಲ.

'ನಾನು ಗೌರವರ್ಣನು' ಎಂದು ದೇಹಾತ್ಮೈಕ್ಯಭ್ರಮವೂ ಕೂಡ ಅನುಮಾನದಿಂದ ಬಾಧ್ಯವಲ್ಲ. 'ಶರೀರವು ನಾನಲ್ಲ, ನಾನು ಚೇತನನಾದ್ದರಿಂದ' ಎಂಬ ಯುಕ್ತಿಯ ಬಲಉಳ್ಳ 'ನನ್ನ ಶರೀರ' ಎನ್ನುವ ಪ್ರಬಲ ಪ್ರತ್ಯಕ್ಷದಿಂದಲೇ ಬಾಧ್ಯ.

ಹಿಂದಿನ ಪ್ರತ್ಯಕ್ಷಭ್ರಮದ ವಿರೋಧವಿರುವಾಗ ಮುಂದಿನ ಬಾಧಕಪ್ರತ್ಯಕ್ಷ ಹೇಗೆ ಹುಟ್ಟುತ್ತದೆ

ಎಂದರೆ ವಿರೋಧಿ ಬಾಧಕಜ್ಞಾನ ಸಾಮಗ್ರಿ ಇರುವಾಗ ಹಿಂದಿನ ಜ್ಞಾನವು ಮುಂದಿನ ಬಾಧಕ ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾಗುವುದಿಲ್ಲ. ಆದರಿಂದ ಮುಂದಿನ ಪ್ರಬಲವಾದ ಬಾಧಕ ಪ್ರತ್ಯಕ್ಷ ಜ್ಞಾನವು ಉತ್ಪನ್ನವಾಗಬಹುದು.

'ನನ್ನ ಶರೀರ' ಎಂಬ ಪ್ರತ್ಯಕ್ಷವು ಪ್ರಬಲವಾಗಿದೆ ಎನ್ನುವುದು ಮುಂದೆ ದೇಹಾತ್ಮೈಕ್ಯಾಧ್ಯಾಸಭಂಗ ಪ್ರಕರಣದಲ್ಲಿ ಸ್ಪಷ್ಟವಾಗುವುದು.

ಅಥವಾ 'ನಾನು ಗೌರವರ್ಣ ಉಳ್ಳವನು' ಎಂಬುದು 'ಬಟ್ಟೆ ಕಪ್ಪಾಗಿದೆ' ಎಂಬಂತೆ ಗೌರವರ್ಣಉಳ್ಳಶರೀರರೂಪ ಪರಂಪರಾ ಸಂಬಂಧಾವಗಾಹಿಯಾಗಿದೆ. ಆದರಿಂದ ಅದು ಭ್ರಮವಲ್ಲ. ಅನುಮಾನಾದಿ ಬಾಧ್ಯವಲ್ಲ. 'ನೀರು ಬಿಸಿ ಇದೆ' ಎನ್ನುವುದೂ ಹಾಗೇ ವಿಶೇಷ ದರ್ಶನ ಕಾಲದಲ್ಲಿ, ಅಂದರೆ ಬಿಸಿಯಾದ ಅಗ್ನಿಯ ಸಂಬಂಧವೆಂಬ ವ್ಯಾಪ್ಯ ದರ್ಶನಕಾಲದಲ್ಲಿ ಗೌಣವ್ಯವಹಾರ. ಪರಂಪರಾಸಂಬಂಧದಿಂದ ಉಷ್ಣತ್ವವು ಅಗ್ನಿದ್ವಾರಾ ಜಲದಲ್ಲಿ ಕಾಣುತ್ತದೆ.

ಕೆಲವರು ಹೇಳುತ್ತಾರೆ— ಜಲದಲ್ಲಿಯೆ ಅಗ್ನಿ ಸಂಬಂಧದಿಂದ ಔಪಾಧಿಕವಾಗಿ ಉಷ್ಣಸ್ಪರ್ಶ ಜನಿಸಿ ಸಾಕ್ಷಾತ್ ಸಂಬಂಧದಿಂದಲೇ ಜಲದಲ್ಲಿ ಬರುತ್ತದೆ, ಸ್ಫಟಿಕದಲ್ಲಿ ಜಪಾ ಕುಸುಮ ಸಂಬಂಧದಿಂದ ಔಪಾಧಿಕವಾಗಿ ಕೆಂಪುಬಣ್ಣ ಬರುವಂತೆ. ಆದರಿಂದ ಸಾಕ್ಷಾತ್ ಸಂಬಂಧದಿಂದ ಉಷ್ಣತ್ವವು ಜಲದಲ್ಲಿ ಕಂಡರೂ ಅದು ಯಥಾರ್ಥವೆ, ಭ್ರಮವಲ್ಲ. ಯದ್ಯಪಿ ಒಂದೇ ಜಲದ್ರವ್ಯದಲ್ಲಿ ವಿರುದ್ಧವಾದ ಎರಡು ಉಷ್ಣಶೀತ ಸ್ಪರ್ಶಗಳ ಸಮಾವೇಶ ಹೇಗೆ ಎನ್ನುವ ಪ್ರಶ್ನೆ ಬರಬಹುದು. ಅದಕ್ಕೆ ಸ್ಫಟಿಕದಲ್ಲಿ ವಿರುದ್ಧವಾದ ಬಿಳಿ ಮತ್ತು ಕೆಂಪು ರೂಪದ್ವಯ ಸಮಾವೇಶದಂತೆ ಎಂದು ಉತ್ತರ. ಸ್ಫಟಿಕದಲ್ಲಿ ಬಿಳಿಬಣ್ಣವಿದ್ದರೂ ಅದು ಜಪಾಕುಸುಮ ಸಂಬಂಧವಿರುವಾಗ ಕಾಣುವುದಿಲ್ಲ. ಹಾಗೇ ಜಲದಲ್ಲಿ ಶೀತಸ್ಪರ್ಶವಿದ್ದರೂ ಕಾಣುವುದಿಲ್ಲ. 'ಯದುಷ್ಣಂ ತತ್ ತೇಜಃ' ಪದಾರ್ಥಗಳಲ್ಲಿ ಉಷ್ಣತ್ವ ಕಂಡರೆ ಅದು ಅಗ್ನಿಯ ಉಷ್ಣತ್ವವೇ ಎಂದು ಉಪನಿಷತ್ತಿನಲ್ಲಿ ಹೇಳಿದ್ದು ಸ್ವಾಭಾವಿಕ ಉಷ್ಣತ್ವದ ವಿಷಯದಲ್ಲಿ, ಆದ್ದರಿಂದ ಶ್ರುತಿ ವಿರೋಧವಿಲ್ಲ' ಎಂದು ಹೇಳುತ್ತಾರೆ.

'ನೀರು ಬಿಸಿ' ಎನ್ನುವುದು ಬರಿ ಭ್ರಮವೇ ಆಗಿದ್ದರೆ ಬಿಸಿ ನೀರೆರೆದುಕೊಳ್ಳುವ ಪ್ರವೃತ್ತಿ ಮಾಡಿದಾಗ ಪ್ರವೃತ್ತಿ ಸಫಲವಾಗುವುದು ಕೂಡಲಾರದು. ಆದರಿಂದ ಅದು ಅನುಮಾನಾದಿಗಳಿಂದ ಬಾಧ್ಯವಲ್ಲ.

**ಯದ್ವಾ ನಿಶ್ಚಿತ ದ್ರವ್ಯಾಂತರ ಸಮಭಿವ್ಯವಹಾರ ರೂಪ ದೋಷೇಣ ಶಂಕಿತಾಪ್ರಾಮಾಣ್ಯೇನ 'ಉಷ್ಣಂ ಜಲಮ್' ಇತ್ಯನೇನಾವಕಾಶೇ ದತ್ತೇ ಲಿಂಗಾದಿಕಂ ಪ್ರವರ್ತತೇ । ನ ತು ತಲ್ಲಿಂಗಾದಿಬಾಧ್ಯಮ್ ।**

ಅಥವಾ ವಿಶೇಷಾದರ್ಶನಕಾಲೀನವಾದ 'ಉಷ್ಣಂ ಜಲಂ' ಎಂಬ ಪ್ರತ್ಯಕ್ಷಕ್ಕೆ ಅನುಮಾನದಿಂದ ಬಾಧವನ್ನು ಒಪ್ಪಲೇಬೇಕು. ಇಲ್ಲದಿದ್ದರೆ ಶೈತ್ಯಾನುಮಾನ ಪ್ರವೃತ್ತಿಯೇ ಆಗದೆ ಹೋದೀತು. ಆದರಿಂದ ಹೀಗೆ ಹೇಳಬೇಕು— ಬೇರೆ ಒಂದು ಉಷ್ಣದ್ರವ್ಯ ನೀರಿನಲ್ಲಿ ಸೇರಿದೆ ಎಂದು

ನಿಶ್ಚಯವಿರುವಾಗ 'ನೀರು ಬಿಸಿ' ಎನ್ನುವ ಜ್ಞಾನ ಬರುವಾಗಲೇ ಅದರ ಪ್ರಾಮಾಣ್ಯವು ಸಂದೇಹಾಸ್ಪದವಾಗಿರುತ್ತದೆ. ಆಗ ಆ ಜ್ಞಾನವೇ ವಿರೋಧಿಯಾದ ಲಿಂಗಶಬ್ದಗಳಿಗೆ ಪ್ರತಿಬಂಧ ಮಾಡದೆ ಅವಕಾಶ ಕೊಡುತ್ತದೆ. ಅದರಿಂದ ಆ ಲಿಂಗಶಬ್ದಗಳು ಪ್ರವೃತ್ತಿ ಮಾಡುತ್ತವೆ ಹೊರತು ಅವುಗಳಿಂದ 'ನೀರು ಬಿಸಿ' ಎನ್ನುವ ಪ್ರತ್ಯಕ್ಷವು ಬಾಧಿತವಾಗುವುದಿಲ್ಲ.

**'ಅಹಮಿಹೈವಾಸ್ಮಿ ಸದನೇ ಜಾನಾನಃ' ಇತ್ಯಾದಿ ತು ಪ್ರಮಾಣಮೇವ ಜೀವಸ್ಯಾಣುತ್ವಾತ್ । ನ ತು ಲಿಂಗಾದಿಬಾಧ್ಯಮ್ ।**

'ಜೀವಾತ್ಮನು, ವಿಭು, ವ್ಯಾಪಕ, ಅವನು ಹೋದಲ್ಲೆಲ್ಲ ಜ್ಞಾನಾದಿಕಾರ್ಯ ಮಾಡುವುದರಿಂದ' ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ಅದರಿಂದ 'ನಾನು ಜ್ಞಾನಾದಿಕಾರ್ಯಗಳನ್ನು ಮಾಡುತ್ತ ಇಲ್ಲೇ ಮನೆಯೊಳಗೇ ಇದ್ದೇನೆ, ಹೊರಗೆ ಇಲ್ಲ' ಎನ್ನುವ ಜ್ಞಾನವು ಈ ಅನುಮಾನದಿಂದ ಬಾಧಿತವಾಗುತ್ತದೆ'— ಹೀಗೆ ಹೇಳಿದರೆ ಅದು ಸರಿಯಲ್ಲ. ಜೀವಾತ್ಮನು ಅಣು. 'ಉತ್ಕ್ರಾಂತಿ ಗತ್ಯಾಗತೀನಾಂ'(ಬ್ರ.ಊಸ.2.3.20) ಎಂಬ ಸೂತ್ರದಲ್ಲಿ ಹೇಳಿದಂತೆ ಉತ್ಕ್ರಾಂತಿ ಗತಿ ಆಗತಿ ಹೇತುಗಳಿಂದ ಜೀವಾಣುತ್ವವು ಸಿದ್ಧವಾಗುತ್ತದೆ. ಅದರಿಂದ ನಾನು ಇಲ್ಲಿ ಮನೆಯೊಳಗೇ ಇದ್ದೇನೆ' ಎನ್ನುವ ಜ್ಞಾನವು ಭ್ರಮವಲ್ಲ. ಅದು ಅನುಮಾನದಿಂದ ಬಾಧಿತವಾಗುವುದಿಲ್ಲ.

**ಜ್ವಾಲೈಕ್ಯಪ್ರತ್ಯಕ್ಷಮಪಿ, ನಿರ್ವಾಪಿತಾರೋಪಿತ ದೀಪೇ ಚೇದ್ ಭೇದಗ್ರಾಹಿಪ್ರತ್ಯಕ್ಷೇಣ ಬಾಧಿತಮೇವ ಜಾಯತೇ । ಅನ್ಯತ್ರಾಪಿ 'ದೀರ್ಘೋಽಯಂ ದೀಪೋ, ಹ್ರಸ್ವೋ ನ' ಇತಿ ಪ್ರತ್ಯಕ್ಷೇಣ ಬಾಧ್ಯತೇ । ನತ್ವನುಮಿತ್ಯಾ । ತಾದೃಶಪ್ರತ್ಯಕ್ಷಾಭಾವೇ ತು ನ ದೀಪಭೇದಃ ।**

'ದೀಪಜ್ವಾಲೆಗಳಲ್ಲಿ ಹಿಂದಿನದು ಬೇರೆ, ಸಣ್ಣದು, ಈಗಿನದು ಬೇರೆ, ದೊಡ್ಡದೆಂದು ಭೇದಾನುಮಾನದಿಂದ 'ಅದೇ ದೀಪ ಇದು' ಎನ್ನುವ ಐಕ್ಯಪ್ರತ್ಯಕ್ಷವು ಬಾಧಿತವಾಗುತ್ತದೆ' ಎಂದು ತಿಳಿಯಬಾರದು. ಏಕೆಂದರೆ ದೀಪಜ್ವಾಲೆಯು ಆರಿಸಿ ತಿರುಗಿ ಹೊತ್ತಿಸಿದ್ದಾದರೆ ಮೊದಲೇ ಅದು 'ಆರಿಸಿ ಹೊತ್ತಿಸಿದ್ದೆಂ'ದು ಭೇದಜ್ಞಾನವಿರುವುದರಿಂದ 'ಅದೇ ದೀಪ ಇದು' ಎನ್ನುವ ಜ್ಞಾನವು ಹುಟ್ಟುವಾಗಲೆ ಪ್ರತ್ಯಕ್ಷದಿಂದ ಬಾಧಿತವಾಗಿಯೇ ಹುಟ್ಟಿರುತ್ತದೆ ಹೊರತು, ಹುಟ್ಟಿದ ಬಳಿಕ ಅನುಮಾನದಿಂದ ಬಾಧಿತವಾಗುವುದಿಲ್ಲ. ಸಣ್ಣಗಿದ್ದ ದೀಪವನ್ನು ದೊಡ್ಡದು ಮಾಡಿದ್ದರೆ 'ಈ ದೀಪ ಈಗ ದೊಡ್ಡದಿದೆ, ಸಣ್ಣದಲ್ಲ' ಎಂಬ ಪರಿಮಾಣ ಭೇದವನ್ನು ಗ್ರಹಿಸುತ್ತಲೇ 'ಅದೇ ದೀಪವಿದು' ಎನ್ನುವ ಜ್ಞಾನ ಬರುವುದರಿಂದ ಅದು ಪ್ರತ್ಯಕ್ಷದಿಂದ ಬಾಧ್ಯ ಹೊರತು ಹುಟ್ಟಿದ ಬಳಿಕ ಆ ಜ್ಞಾನವು ಅನುಮಾನದಿಂದ ಬಾಧ್ಯವಾಗುವುದಿಲ್ಲ. ಸಣ್ಣದು ದೊಡ್ಡದೆಂದು ಪರಿಮಾಣದಲ್ಲಿ ವೈಲಕ್ಷಣ್ಯ ಕಾಣದೇ ಇದ್ದರೆ ದೀಪವು ಒಂದೇ ಹೊರತು ಅದರಲ್ಲಿ ಭೇದವಿಲ್ಲ. ಆಗ ಭೇದಾನುಮಾನವೇ ಬಾರದಿರುವುದರಿಂದ ಅಭೇದಜ್ಞಾನಕ್ಕೆ ಅನುಮಾನದಿಂದ ಬಾಧ ಪ್ರಸಕ್ತಿ ಇಲ್ಲ.



दूरस्थस्य 'अयं सर्पः' इत्याद्यपि प्रत्यक्षं न शब्दमात्रेण बाध्यं। किन्तु 'नायं सर्पः' इत्याप्तवाक्यमूलपरीक्षितप्रत्यक्षगौरवादेव। राजगौरवादिव राजभृत्येनामात्यः। श्रुतिगौरवादिव वा श्रुत्यनुसारिप्रकरणादिना लिङ्गादिकम्। उक्तं हि

दुर्बलस्य प्रमाणस्य बलवानाश्रयो यदा।
तदापि विपरीतत्वं शिष्टाकोपे यथोदितम्।। इति।

न हि प्रधानभूताचमनादि पदार्थ विषय स्मृत्या पदार्थधर्मभूत क्रम विषया ''वेदं कृत्वा वेदिं करोति''इति श्रुतिर्बाधितेति, अन्यत्रापि तया सा बाध्यते। अत एव 'नायं सर्पः' इत्युक्ते प्रतिवदंति ''किमेवं वदसि केवलम्, अपि पुनः परामृश्य पश्यसी''ति।

ननु तथापि 'पीतः शङ्खः' 'नीलं नभः' इत्यादिप्रत्यक्षं श्वैत्यनीरूपत्वाद्यनुमित्यैव चन्द्रप्रादेशत्वप्रत्यक्षं चाप्रत्यक्षमूलशब्देनैव बाध्यं दृष्टमिति चेत् उच्यते। द्विविधं हि ज्ञानं संदेहरूपमेकाकारं चेति। द्वितीयमप्यप्रामाण्यधीकलंकितं तदकलंकितं चेति द्वेधा। कलंकितत्वमपि द्वेधा, बाधकाभिमतज्ञानोदयात् प्रागेव दोषज्ञानेन वाऽर्थाभावनिश्चयेन वा। तत्राद्यं यथा चन्द्रप्रादेशत्वग्राहि। शैलाग्रस्थतरुपरिमाणादिज्ञाने दूरादेर्दोषत्वनिश्चयात्। द्वितीयं यथा सवितृशङ्खादौ सुषिरपीतत्वादिग्राहि। प्रागेव तत्र परीक्षितप्रत्यक्षेण सुषिराद्यभावनिश्चयात्। एवञ्च चन्द्रप्रादेशत्वादिप्रत्यक्षेण प्रागेव ज्ञातदूरादिदोषेण अप्रमाणत्वेन ज्ञातेन संदेहवत्स्वार्थपरिच्छेद-पराङ्मुखेन निःशङ्कप्रवृत्त्यजनकेनावकाशे दत्ते पश्चाच्छब्दादिः प्रवर्तते। न तु तेन प्रत्यक्षबाधः। यथा प्रबलप्रत्यक्षबाधितस्याक्षस्या-नन्तरं प्रवृत्तेन शब्दादिना न बाधस्तद्वत्। येन यस्य भ्रमत्वं ज्ञायते

**तत्तस्य बाधकम् । नच चन्द्रप्रादेशत्वादिप्रत्यक्षस्यागमादिना भ्रमत्वं ज्ञायते ।**

---

**आप्तवाक्यमूलेति** । एतच्चोपलक्षणं । विशेषदर्शनादिना शङ्किताप्रामाण्येन सर्पभ्रमेणावकाशे दत्ते एव शब्दः प्रवर्तते । नतु तेन तस्य बाधः । अत एव नायं सर्प इति वक्तुर्भ्रान्तं प्रति सम्यक् पश्येति वचनमित्यपि बोध्यम् ।

स्वतो दुर्बलस्यापि प्रबलावष्टंभेन प्रबलबाधकत्वमस्तीत्यत्र पूर्वतन्त्रदृष्टान्तमाह **श्रुति गौरवादिवेति** ।। नच मिथ्यात्वलिङ्गस्यापि श्रुतिगौरवमस्त्येवेति वाच्यम् । यूपादित्यश्रुतेरिव त्वदभिमत मिथ्यात्व श्रुतेरप्यमुख्यार्थत्वोपपत्तेः ।। **शिष्टाकोप इति** ।। ''शिष्टाकोपेऽ विरुद्धमिति चेत्'' ''न शास्त्रपरिमाणत्वादि''त्यत्र क्षुतआचामेदित्यादिस्मरणं वेदं कृत्वा वेदिं करोति इत्यादिश्रुतिप्रतिपन्नदार्शपौर्ण-मासिकादिपदार्थक्रमविरुद्धं प्रमाणमप्रमाणं वेति संशये विरोधाधिकरणन्यायेना-प्रमाणमिति प्राप्ते पदार्थगुणभूतक्रमविषयायाः श्रुतेराचमनादिपदार्थविषयिणी स्मृतिरेव बलीयसी, प्रमाणबलात् प्रमेयबलस्य प्रबलत्वात् । प्रमाणयोः स्वरूपतो विरोधाभावेन प्रमेयविरोधाधीनतया तदवगत्यर्थं प्रमेयविरोधालोचनया प्रमेयस्वरूपेऽवगम्यमाने तदैव तदीयबलाबलस्यापि स्फुरणेन तस्य प्रथमोपस्थितत्वादिति सिद्धान्त इत्युच्यत इत्यर्थः ।। **अन्यत्रापीति** ।। बलवदाश्रयरहितस्थलेऽपि स्मृत्या श्रुतिर्बाध्यत इत्यर्थः ।। **एकाकारमिति** ।। विरुद्धाप्रकारमित्यर्थः ।। **दोषज्ञानेनेति** ।। दोषजन्यत्व-ज्ञानेनेत्यर्थः । **प्रागेव तत्रेति** । यद्यपि परीक्षितप्रत्यक्षस्य तदानीमतीतत्वेन नाप्रामाण्यज्ञापकत्वं । तथापि तज्जन्यस्मृतेरेवाप्रामाण्यज्ञापकत्वम् । नच सुषिरप्रत्यक्षेऽप्रामाण्यशङ्कां विना स्मृतिरेव न स्यादिति वाच्यम् । पूर्वोत्पन्नस्मृत्याऽ प्रामाण्यशङ्काकलंकितस्यैव सुषिरप्रत्यक्षस्योत्पत्तेरिति । ननु तदभावावगाहित्वाविशेषात् कथं न शब्दस्य बाधकत्वमित्यत आह **येन हीति** ।। शब्दप्रवृत्तेः पूर्वमेव तस्य दूरादिदोषजन्यत्वनिश्चयेन भ्रमत्वनिश्चयादिति भावः ।

❖❖❖

**ದೂರಸ್ಥಸ್ಯ 'ಅಯಂ ಸರ್ಪಃ' ಇತ್ಯಾದ್ಯಪಿ ಪ್ರತ್ಯಕ್ಷಂ ನ ಶಬ್ದಮಾತ್ರೇಣ ಬಾಧ್ಯಂ। ಕಿಂತು 'ನಾಯಂ ಸರ್ಪಃ' ಇತ್ಯಾಪ್ತವಾಕ್ಯಮೂಲ ಪರೀಕ್ಷಿತ ಪ್ರತ್ಯಕ್ಷ ಗೌರವಾದೇವ। ರಾಜಗೌರವಾದಿವ ರಾಜಭೃತ್ಯೇನಾಮಾತ್ಯಃ ಶ್ರುತಿಗೌರವಾದಿವ ವಾ ಶ್ರುತ್ಯನುಸಾರಿಪ್ರಕರಣಾದಿನಾ ಲಿಂಗಾದಿಕಮ್।**

ಅದ್ವೈತಿ ಹೇಳುತ್ತಾನೆ— 'ದೂರದಿಂದ ನೋಡಿದಾಗ 'ಇದು ಸರ್ಪ' ಎಂದು ಪ್ರತ್ಯಕ್ಷಭ್ರಾಂತಿ ಬಂದರೆ 'ಇದು ಸರ್ಪವಲ್ಲ' ಎಂದು ಆಪ್ತವಾಕ್ಯದಿಂದ ಬಾಧ್ಯವಾಗುವುದು ಕಂಡಿದೆ'. ಆದರೆ ಇದು ಸರಿಯಲ್ಲ.

ಆಪ್ತನು ಪ್ರತ್ಯಕ್ಷದಿಂದ ತಿಳಿದೇ ಆ ಮಾತನ್ನು ಹೇಳಿರುತ್ತಾನೆ. ಅವನ ಮಾತಿಗೆ ಮೂಲವಾದ ಅವನ ಪ್ರತ್ಯಕ್ಷದ ಮೇಲಿನ ವಿಶ್ವಾಸದಿಂದ ಅವನ ಮಾತಿನಲ್ಲಿ ವಿಶ್ವಾಸ ಬಂದಿರುವುದರಿಂದ ತಾನೆ ಇನ್ನೊಮ್ಮೆ ಸರಿಯಾಗಿ ನೋಡಿದ್ದರಿಂದ ಅವನ ಮಾತು ಭ್ರಾಂತಿಗೆ ಬಾಧಕವಾಯಿತು. ಕೇವಲ ಅವನ ಮಾತೇ ಸ್ವತಃ ಬಾಧಕವಾಗುವುದಿಲ್ಲ. ಆದರಿಂದಲೇ ಭ್ರಾಂತನು ಆಪ್ತನನ್ನು ಕೇಳುತ್ತಾನೆ, 'ಹೀಗೆ ಸುಮ್ಮನೆ ಹೇಳುತ್ತಿರುವೆಯ? ಅಥವಾ, ಸರಿಯಾಗಿ ನೋಡಿ ಹೇಳುತ್ತಿರುವೆಯ?' ಎಂದು. ಮತ್ತು ಆಪ್ತನೇ ಭ್ರಾಂತನಿಗೆ ಹೇಳುವುದೂ ಉಂಟು, 'ನೀನೇ ಸರಿಯಾಗಿ ನೋಡು' ಎಂದು. ಇದು ಹೇಗೆಂದರೆ, ರಾಜಭೃತ್ಯನು ಅಮಾತ್ಯನ ಮಾತಿಗೆ ವಿಧೇಯವಾಗಿ ವರ್ತಿಸುವುದು ಅಮಾತ್ಯನಿಗೆ ರಾಜನ ಬಲವಿರುವುದರಿಂದ ಹೊರತು ಕೇವಲ ಅಮಾತ್ಯನ ಬಲದಿಂದಲ್ಲ. ಪ್ರಬಲವಾದ ಲಿಂಗವನ್ನು ದುರ್ಬಲವಾದ ಪ್ರಕರಣವು ಕೆಲವೊಮ್ಮೆ ಬಾಧಿಸುವುದು ಪ್ರಕರಣಕ್ಕೆ ಲಿಂಗಕ್ಕಿಂತ ಹೆಚ್ಚು ಪ್ರಬಲವಾದ ಶ್ರುತಿಯ ಬೆಂಬಲವಿರುವುದರಿಂದ.

'ಮಿಥ್ಯಾತ್ವಲಿಂಗಕ್ಕೂ ಕೂಡ ಮಿಥ್ಯಾತ್ವಶ್ರುತಿಯ ಬೆಂಬಲವಿರುವುದರಿಂದ ಅದು ಸತ್ವಪ್ರತ್ಯಕ್ಷಕ್ಕೆ ಬಾಧಕವಾಗಬಹುದು' ಎನ್ನಬಾರದು. ಸ್ವತಃ ಮಿಥ್ಯಾತ್ವ ಶ್ರುತಿಗೇ ಬಲವಿಲ್ಲ. ಯಜಮಾನ ಪ್ರಸ್ತರವಾಕ್ಯದಂತೆ ಅದೇ ಪ್ರತ್ಯಕ್ಷ ವಿರೋಧದಿಂದ ಅಮುಖ್ಯಾರ್ಥವಾಗಬಹುದು.

ಲಿಂಗಶಬ್ದಗಳು ಪ್ರಬಲ ಪ್ರತ್ಯಕ್ಷದ ಬೆಂಬಲದಿಂದ ಪ್ರತ್ಯಕ್ಷಕ್ಕೆ ಬಾಧಕವಾಗಬಹುದೆಂದು ಇಲ್ಲಿ ಹೇಳಿದ್ದು ಉಪಲಕ್ಷಣ. ವಿಶೇಷ ದರ್ಶನಾದಿಗಳಿಂದ ಸರ್ಪಭ್ರಮಪ್ರಾಮಾಣ್ಯದಲ್ಲಿ ಸಂದೇಹವಿರುವಾಗ ಸರ್ಪಭ್ರಮವೇ ಶಬ್ದ ಪ್ರವೃತ್ತಿಗೆ ಅವಕಾಶ ಕೊಡುತ್ತದೆ ಹೊರತು ಶಬ್ದದಿಂದ ಪ್ರತ್ಯಕ್ಷ ಭ್ರಮವು ಬಾಧಿತವಾಗುವುದಿಲ್ಲ. ಆದರಿಂದಲೇ 'ಇದು ಸರ್ಪವಲ್ಲ' ಎಂದು ಒಬ್ಬನು ಹೇಳಿ, ಒಡನೆ, 'ನೀನೇ ಸರಿಯಾಗಿ ನೋಡು, ಅದು ಸರ್ಪವಲ್ಲ ಎಂದು ನಿನಗೇ ತಿಳಿಯುತ್ತದೆ' ಎಂದು ಹೇಳುತ್ತಾನೆ.

**ಉಕ್ತಂ ಹಿ**

**''ದುರ್ಬಲಸ್ಯ ಪ್ರಮಾಣಸ್ಯ ಬಲವಾನಾಶ್ರಯೋ ಯದಾ।**

**ತದಾಪಿ ವಿಪರೀತತ್ವಂ ಶಿಷ್ಟಾಕೋಪೇ ಯಥೋದಿತಮ್'' ಇತಿ।**

ಹೀಗೆ ಹಿಂದಿನವರು ಹೇಳಿದ್ದಾರೆ— 'ಶಿಷ್ಟಾಕೋಪಾಧಿಕರಣದಲ್ಲಿ ಹೇಳಿದಂತೆ ದುರ್ಬಲವಾದ ಪ್ರಮಾಣಕ್ಕೆ ಪ್ರಬಲಪ್ರಮಾಣದ ಆಶ್ರಯ ದೊರೆತಾಗ ಪ್ರಾಬಲ್ಯ ದೌರ್ಬಲ್ಯಗಳು ವ್ಯತ್ಯಾಸ ಹೊಂದುತ್ತವೆ. ದುರ್ಬಲವು ಪ್ರಬಲವಾಗುತ್ತದೆ. ಪ್ರಬಲವು ದುರ್ಬಲವಾಗುತ್ತದೆ' ಎಂದು.

ಶಿಷ್ಟಾಕೋಪಾಧಿಕರಣ ಹೀಗಿದೆ—

'ಶಿಷ್ಟಾಕೋಪೇಽವಿರುದ್ಧಮಿತಿ ಚೇತ್ ನ। ಶಾಸ್ತ್ರಪರಿಮಾಣತ್ವಾತ್' -(ಜೈ.ಸೂ.1.3.5,6)

'ಶಿಷ್ಟ ಅಕೋಪೇ' ಶ್ರುತ್ಯುಕ್ತ ಕ್ರಮಕ್ಕೆ ಹಾನಿ ಬಾರದಿದ್ದರೆ ಮಾತ್ರ ಸ್ಮೃತ್ಯುಕ್ತ ಕ್ರಮವು ಅವಿರುದ್ಧವಾಗಿ ಗ್ರಾಹ್ಯವಾದೀತು. ಏಕೆಂದರೆ ಪದಾರ್ಥಕ್ರಮದ ಪರಿಜ್ಞಾನವು ಶ್ರುತಿ ಪ್ರಮಾಣದಿಂದ ತಿಳಿದು ಬರುವಂಥದ್ದು. ಎಂದು ಪೂರ್ವಪಕ್ಷಸೂತ್ರದ ಅರ್ಥ.

ಈ ಅಧಿಕರಣವು ಪದಾರ್ಥ ಪ್ರಾಬಲ್ಯವನ್ನು ಹೇಳುತ್ತದೆ. ಪದಾರ್ಥವೆಂದರೆ ಯಜ್ಞದಲ್ಲಿ ಅನುಷ್ಠಾನ ಮಾಡಬಹುದಾದ ಕರ್ಮ. ಪದಾರ್ಥವನ್ನು ಅನುಷ್ಠಾನ ಮಾಡುವ ಕ್ರಮವು ಪದಾರ್ಥದ ಧರ್ಮ. ಪದಾರ್ಥ ಮತ್ತು ಪದಾರ್ಥಧರ್ಮಗಳಲ್ಲಿ ಧರ್ಮಿಯಾದ ಪದಾರ್ಥವು ಪ್ರಬಲ.

'ಕ್ಷುತ ಆಚಾಮೇತ್ ಆಚಾಂತೇನ ಕರ್ತವ್ಯಂ' ಎಂದು ಸ್ಮೃತಿಯು 'ಸೀನು ಬಂದಾಗ ಆಚಮನ ಮಾಡಬೇಕು. ಆಚಮನ ಮಾಡಿ ಯಜ್ಞಕರ್ಮ ಅನುಷ್ಠಾನ ಮಾಡಬೇಕು' ಎಂದು ಹೇಳುತ್ತದೆ. ಯಾಗಗಳಲ್ಲಿ 'ವೇದಂ ಕೃತ್ವಾ ವೇದಿಂ ಕುರ್ಯಾತ್' 'ವೇದಿಯ ಮಾರ್ಜನಕ್ಕಾಗಿ ದರ್ಭಮುಷ್ಟಿಯನ್ನು ಕಟ್ಟಿದ ಬಳಿಕ ವೇದಿಯನ್ನು ಶುದ್ಧಮಾಡಬೇಕು' ಎಂದು ಶ್ರುತಿಯು ಹೇಳುತ್ತದೆ.

ಇಲ್ಲಿ ವೇದಕರಣಾನಂತರ್ಯವನ್ನು ವೇದಿಶುದ್ಧಿಗೆ ಶ್ರುತಿಯು ಹೇಳುತ್ತಿದೆ. ವಿರೋಧಾಧಿ ಕರಣ ನ್ಯಾಯದಿಂದ ಶ್ರುತಿಗಿಂತ ಸ್ಮೃತಿ ದುರ್ಬಲವಾದ್ದರಿಂದ ಶ್ರುತ್ಯುಕ್ತವಾದ ವೇದಕರಣ ವೇದಿಕರಣಕ್ರಮಕ್ಕೆ ವ್ಯತ್ಯಯ ಉಂಟಾಗುವಂತೆ ಮಧ್ಯದಲ್ಲಿ ಸ್ಮೃತ್ಯುಕ್ತ ಆಚಮನವನ್ನು ಮಾಡಬಾರದು ಎಂದು ಪೂರ್ವಪಕ್ಷ.

ವೇದಕರಣ ಮತ್ತು ವೇದಿಕರಣ ರೂಪ ಪದಾರ್ಥಗಳು ಧರ್ಮಿಗಳು. ಆನಂತರ್ಯ ರೂಪಕ್ರಮವು ಪದಾರ್ಥಗಳ ಧರ್ಮಗಳು. ಧರ್ಮಭೂತ ಕ್ರಮವನ್ನು ಹೇಳುವ ಶ್ರುತಿಗಿಂತ ಧರ್ಮಿಯಾದ ಪದಾರ್ಥಭೂತ ಆಚಮನವನ್ನು ಹೇಳುವ ಸ್ಮೃತಿಯು ಪ್ರಬಲವಾಗುತ್ತದೆ. ಯದ್ಯಪಿ ಪ್ರಮಾಣಗಳಲ್ಲಿ ಶ್ರುತಿ ಪ್ರಬಲ ಸ್ಮೃತಿ ದುರ್ಬಲ. ಆದರೆ ಪ್ರಮಾಣ ಬಲಕ್ಕಿಂತ ಪ್ರಮೇಯ ಬಲವೇ ಹೆಚ್ಚಿನದು. ಪ್ರಮಾಣಗಳಿಗೆ ಸ್ವರೂಪತಃ ವಿರೋಧವೆ ಇರುವುದಿಲ್ಲ. ಪ್ರಮೇಯ ವಿರೋಧ ಮೂಲಕವೆ ಪ್ರಮಾಣಗಳಿಗೆ ವಿರೋಧ. ಆದರಿಂದ ಪ್ರಮಾಣ ವಿರೋಧ ಪರಿಜ್ಞಾನಕ್ಕೆ ಪ್ರಮೇಯ ವಿರೋಧವನ್ನು ಮೊದಲಿಗೆ ವಿಚಾರ ಮಾಡಬೇಕಾಗುತ್ತದೆ. ಆಗಲೆ ಪ್ರಮೇಯಗಳ ಬಲಾಬಲಗಳು

ತಿಳಿದುಬರುತ್ತದೆ. ಆದರಿಂದ ಮೊದಲಿಗೆ ತಿಳಿಯುವ ಪ್ರಮೇಯ ಬಲವೆ ಪ್ರಮಾಣ ಬಲಕ್ಕಿಂತ ಪ್ರಬಲ. ಪ್ರಕೃತ ಶ್ರುತಿ ಸ್ಮೃತಿಗಳ ಪ್ರಮೇಯಗಳಲ್ಲಿ ಸ್ಮೃತಿಪ್ರಮೇಯವಾದ ಆಚಮನವು ಅನುಷ್ಠೇಯವಾದ ಪದಾರ್ಥರೂಪವಾದ್ದರಿಂದ ಶ್ರುತಿಪ್ರಮೇಯವಾದ ಪದಾರ್ಥಕ್ರಮಕ್ಕಿಂತ ಪ್ರಬಲವಾಗುತ್ತದೆ. ಪ್ರಬಲವಾದ ಪದಾರ್ಥವಿಷಯಕವಾದ್ದರಿಂದ ಸ್ವತಃ ದುರ್ಬಲವಾದ ಸ್ಮೃತಿಯೇ ಸ್ವತಃ ಪ್ರಬಲವಾದ ಶ್ರುತಿಗಿಂತ ಪ್ರಬಲವಾಗಿದೆ. ಆದರಿಂದ ಆಚಮನ ಮಾಡಬೇಕು ಎಂದು ಸಿದ್ಧಾಂತ.

**ನ ಹಿ ಪ್ರಧಾನಭೂತಾಚಮನಾದಿ ಪದಾರ್ಥ ವಿಷಯ ಸ್ಮೃತ್ಯಾ ಪದಾರ್ಥ ಧರ್ಮಭೂತ ಕ್ರಮ ವಿಷಯಾ ''ವೇದಂ ಕೃತ್ವಾ ವೇದಿಂ ಕರೋತಿ''ಇತಿ ಶ್ರುತಿರ್ಬಾಧಿತೇತಿ ಅನ್ಯತ್ರಾಪಿ ತಯಾ ಸಾ ಬಾಧ್ಯತೇ। ಅತ ಏವ 'ನಾಯಂ ಸರ್ಪಃ' ಇತ್ಯುಕ್ತೇ ಪ್ರತಿವದಂತಿ 'ಕಿಮೇವಂ ವದಸಿ ಕೇವಲಂ? ಅಪಿ ಪುನಃ ಪರಾಮೃಶ್ಯ ಪಶ್ಯಸೀ'ತಿ।**

ಪ್ರಬಲವಾದ ಆಶ್ರಯ ದೊರಕಿದಾಗ ಹೀಗೆ ದುರ್ಬಲವು ಪ್ರಬಲವನ್ನು ಬಾಧಿಸಿದರೂ ಪ್ರಬಲ ಆಶ್ರಯ ದೊರಕದಿದ್ದಾಗಲೂ ದುರ್ಬಲವೆ ಪ್ರಬಲವನ್ನು ಬಾಧಿಸುತ್ತದೆ ಎನ್ನಲಾಗದು. ಪ್ರಧಾನಭೂತ ಆಚಮನರೂಪ ಪದಾರ್ಥವಿಷಯಕವಾದ್ದರಿಂದ ಸ್ಮೃತಿಯು ಪದಾರ್ಥ ಧರ್ಮಭೂತಕ್ರಮವಿಷಯವಾದ 'ವೇದಂ ಕೃತ್ವಾ ವೇದಿಂ ಕರೋತಿ' ಎಂಬ ಶ್ರುತಿಯನ್ನು ಬಾಧಿಸಿದೆ ಎಂದಮಾತ್ರಕ್ಕೆ ಬೇರೆ ಕಡೆಯೂ ಸ್ಮೃತಿಯು ಶ್ರುತಿಯನ್ನು ಬಾಧಿಸುವುದಿಲ್ಲ ತಾನೆ? ಆದರಿಂದಲೆ 'ಇದು ಸರ್ಪವಲ್ಲ' ಎಂದು ಆಪ್ತನು ಹೇಳಿದಾಗ ಪ್ರತಿಯಾಗಿ ಹೇಳುತ್ತಾರೆ, 'ನೀನು ಕೇವಲ ಹೀಗೆ ಹೇಳುತ್ತಿರುವೆಯ? ಅಥವಾ ಪರೀಕ್ಷೆಮಾಡಿ ನೋಡಿರುವೆಯ?' ಎಂದು. ಆದರಿಂದ ಪ್ರತ್ಯಕ್ಷವು ಸ್ವತಃ ಪ್ರಬಲವಾಗಿದ್ದು ಲಿಂಗಾದಿಗಳನ್ನು ಬಾಧಿಸುತ್ತದೆ ಎಂಬ ನಿಯಮಕ್ಕೆ ಎಲ್ಲಿಯೂ ಭಂಗವಿಲ್ಲ.

**ನನು ತಥಾಪಿ 'ಪೀತಃ ಶಂಖಃ' 'ನೀಲಂ ನಭಃ' ಇತ್ಯಾದಿಪ್ರತ್ಯಕ್ಷಂ ಶ್ವೈತ್ಯನೀರೂಪತ್ವಾದ್ಯನುಮಿತ್ಯೈವ ಚಂದ್ರಪ್ರಾದೇಶತ್ವಪ್ರತ್ಯಕ್ಷಂ ಚಾಪ್ರತ್ಯಕ್ಷಮೂಲಶಬ್ದೇನೈವ ಬಾಧ್ಯಂ ದೃಷ್ಟಮಿತಿ ಚೇತ್ ಉಚ್ಯತೇ।**

'ಪ್ರತ್ಯಕ್ಷವೆ ಅನುಮಾನಾಗಮಗಳನ್ನು ಬಾಧಿಸುತ್ತಿರುವುದು ಎಲ್ಲಕಡೆ ಕಂಡಿದ್ದರೂ ಕೆಲವು ಕಡೆ ಪ್ರತ್ಯಕ್ಷವನ್ನೆ ಅನುಮಾನಾದಿಗಳು ಬಾಧಿಸುವುದೂ ಕಂಡಿದೆ. ಉದಾ: 'ಶಂಖವು ಹಳದಿಯಾಗಿದೆ' 'ಆಕಾಶವು ನೀಲವಾಗಿದೆ' ಇತ್ಯಾದಿ ಸ್ಥಳದಲ್ಲಿ 'ಶಂಖವು ಬಿಳಿ' 'ಆಕಾಶವು ನೀಲವಲ್ಲ' ಇತ್ಯಾದಿ ಅನುಮಾನಗಳಿಂದ ಪ್ರತ್ಯಕ್ಷವು ಬಾಧಿತವಾಗುತ್ತದೆ. ಚಂದ್ರನು ಚೋಟುಗಾತ್ರದವನೆಂದು ಪ್ರತ್ಯಕ್ಷವು ಪ್ರತ್ಯಕ್ಷಮೂಲಕವಲ್ಲದ ಶಬ್ದದಿಂದಲೆ ಬಾಧಿತವಾಗುತ್ತದೆ' ಎಂದು ಅದ್ವೈತಿ ಹೇಳುತ್ತಾನೆ.

**ದ್ವಿವಿಧಂ ಹಿ ಜ್ಞಾನಂ ಸಂದೇಹರೂಪಮೇಕಾಕಾರಂ ಚೇತಿ। ದ್ವಿತೀಯಮಪ್ಯ ಪ್ರಾಮಾಣ್ಯಧೀಕಲಂಕಿತಂ ತದಕಲಂಕಿತಂ ಚೇತಿ ದ್ವೇಧಾ। ಕಲಂಕಿತತ್ವಮಪಿ ದ್ವೇಧಾ।**

**ಬಾಧಕಾಭಿಮತ ಜ್ಞಾನೋದಯಾತ್ ಪ್ರಾಗೇವ ದೋಷಜ್ಞಾನೇನ ವಾ ಅರ್ಥಾಭಾವನಿಶ್ಚಯೇನ ವಾ ।**

ಇಲ್ಲಿ ನಾವು ಹೇಳುತ್ತೇವೆ— ಜ್ಞಾನವು ಎರಡು ಬಗೆ ಇರುತ್ತದೆ– ಸಂದೇಹರೂಪವೆಂದು ಮತ್ತು ವಿರುದ್ಧ ಪ್ರಕಾರಗಳಿಲ್ಲದ್ದೆಂದು. ಮೊದಲನೆಯದಾದ ಸಂದೇಹರೂಪ ಜ್ಞಾನವು ಪ್ರಸಿದ್ಧ. ಎರಡನೆಯದು ಒಂದು ಧರ್ಮಿಯಲ್ಲಿ ವಿರುದ್ಧ ನಾನಾ ಪ್ರಕಾರಗಳನ್ನುಳ್ಳದ್ದು. ಎರಡನೆಯದಾದ ವಿರುದ್ಧಾಕಾರ ಗಳಿಲ್ಲದ ಜ್ಞಾನವು ಕೂಡ ಅಪ್ರಾಮಾಣ್ಯಶಂಕಾಗ್ರಸ್ತವಾದುದು ಗ್ರಸ್ತವಾಗದಿರುವುದೆಂದು ಎರಡು ಬಗೆ. ಅಪ್ರಾಮಾಣ್ಯಗ್ರಸ್ತವಾದುದೂ ಎರಡು ಬಗೆ—ಜ್ಞಾನವು ಹುಟ್ಟುವ ಮೊದಲೇ 'ಇದು ದೋಷಜನ್ಯಜ್ಞಾನ'ವೆಂದು ಗೊತ್ತಿರುವುದರಿಂದ ಅಪ್ರಮಾಣವಾಗಿರಬಹುದೆಂದು ಶಂಕೆ ಇರುತ್ತದೆ. ಅಥವಾ ಈ ಜ್ಞಾನವು ಗ್ರಹಿಸುವ ವಿಷಯವು ವಾಸ್ತವದಲ್ಲಿಲ್ಲವೆಂದು ಮೊದಲೆ ತಿಳಿದಿರುತ್ತದೆ.' ಎಂದು.

**ತತ್ರಾದ್ಯಂ ಯಥಾ ಚಂದ್ರಪ್ರಾದೇಶತ್ವಗ್ರಾಹಿ । ಶೈಲಾಗ್ರಸ್ಥ ತರುಪರಿಮಾಣಾದಿ ಜ್ಞಾನೇ ದೂರಾದೇರ್ದೋಷತ್ವ ನಿಶ್ಚಯಾತ್ ।**

ಇವುಗಳಲ್ಲಿ ಮೊದಲನೆಯದು ಹೀಗೆ— ಚಂದ್ರನು ಚೋಟುಗಾತ್ರದವನಾಗಿ ಕಂಡಾಗ ಹಾಗೆ ಕಂಡಿದ್ದು ದೂರದೇಶಸ್ಥತ್ವ ದೋಷದಿಂದ ಎಂದು ನಿಶ್ಚಯವಿರುತ್ತದೆ. ಏಕೆಂದರೆ, ಬೆಟ್ಟದ ತುದಿಯಲ್ಲಿ ಮರಗಳು ಸಣ್ಣಗೆ ಕಾಣುವುದು ದೂರದೇಶದಿಂದ ಎಂದು ಕಂಡಿದೆ.

**ದ್ವಿತೀಯಂ ಯಥಾ ಸವಿತೃ ಶಂಖಾದೌ ಸುಷಿರ ಪೀತತ್ವಾದಿಗ್ರಾಹಿ । ಪ್ರಾಗೇವ ತತ್ರ ಪರೀಕ್ಷಿತ ಪ್ರತ್ಯಕ್ಷೇಣ ಸುಷಿರಾದ್ಯಭಾವ ನಿಶ್ಚಯಾತ್ ।**

ಎರಡನೆಯ ಬಗೆ— ಸೂರ್ಯನಲ್ಲಿ ಛಿದ್ರವಿರುವಂತೆ ಕಾಣುವುದು, ಶಂಖವು ಹಳದಿಯಾಗಿ ಕಾಣುವುದು. ಇಲ್ಲಿ ಜ್ಞಾನ ಹುಟ್ಟುವ ಮೊದಲೇ ಪರೀಕ್ಷಿತ ಪ್ರತ್ಯಕ್ಷದಿಂದ ಈ ಜ್ಞಾನವು ಗ್ರಹಿಸುವ ವಿಷಯವು ವಾಸ್ತವದಲ್ಲಿಲ್ಲ ಎಂದು ತಿಳಿದಿರುತ್ತದೆ. ಅಂದರೆ ದೂರದೋಷದಿಂದ ಸೂರ್ಯನಲ್ಲಿ ಛಿದ್ರಕಾಣುವುದು ಮತ್ತು ಕಾಮಾಲೆದೋಷದಿಂದ ಶಂಖ ಹಳದಿಯಾಗಿ ಕಾಣುವುದು ಎಂದೂ ಯಥಾರ್ಥವಲ್ಲ ಎಂದು ದೋಷಜನ್ಯತ್ವಜ್ಞಾನಸಹಕೃತವಾದ ವ್ಯಾಪ್ತಿ ವಿಷಯಕ ಸಾಕ್ಷಿಪ್ರತ್ಯಕ್ಷವು ಪರೀಕ್ಷಿತ ಪ್ರತ್ಯಕ್ಷ. ಆದರಿಂದ ಜ್ಞಾನ ಹುಟ್ಟುವ ಮೊದಲೆ ಆದರ ಅಪ್ರಾಮಾಣ್ಯ ನಿಶ್ಚಯವಾಗಿರುತ್ತದೆ. ಯದ್ಯಪಿ ದೋಷಜನ್ಯತ್ವಜ್ಞಾನಸಹಕೃತ ಸಾಕ್ಷಿರೂಪ ಪರೀಕ್ಷಿತ ಪ್ರತ್ಯಕ್ಷವು ಭ್ರಮೋತ್ಪತ್ತಿಕಾಲದಲ್ಲಿ ಅತೀತವಾಗಿರುವುದರಿಂದ ಅಪ್ರಾಮಾಣ್ಯಜ್ಞಾನಾವ್ಯವಹಿತ ಪೂರ್ವದಲ್ಲಿರುವುದಿಲ್ಲ. ಆದರೂ ಆ ಪರೀಕ್ಷಿತ ಪ್ರತ್ಯಕ್ಷ ಜನ್ಯಸ್ಮೃತಿಯಿಂದಲೇ ಅಪ್ರಾಮಾಣ್ಯಜ್ಞಾನ ಬರುತ್ತದೆ. ಯದ್ಯಪಿ ಭ್ರಮದಲ್ಲಿ ಅಪ್ರಾಮಾಣ್ಯ ಶಂಕೆ ಇಲ್ಲದೆ ಸ್ಮೃತಿಯೇ ಬರಲಾರದು. ಆದರೂ ಹಿಂದಿನ ಸ್ಮೃತಿಯಿಂದ ಬಂದ ಅಪ್ರಾಮಾಣ್ಯ ಶಂಕಾಪೂರ್ವಕವಾಗಿಯೇ ಕಲಂಕಿತವಾಗಿಯೇ ಭ್ರಮ ಉತ್ಪನ್ನವಾಗುತ್ತದೆ. ಅಪ್ರಾಮಾಣ್ಯ ಶಂಕೆ ಇರುವುದರಿಂದ ಸ್ಮೃತಿ ಬರುತ್ತದೆ.

**ಏವಂಚ ಚಂದ್ರಪ್ರಾದೇಶತ್ವಾದಿ ಪ್ರತ್ಯಕ್ಷೇಣ ಪ್ರಾಗೇವ ಜ್ಞಾತದೂರಾದಿದೋಷೇಣ ಅಪ್ರಮಾಣತ್ವೇನ ಜ್ಞಾತೇನ ಸಂದೇಹವತ್ ಸ್ವಾರ್ಥ ಪರಿಚ್ಛೇದ ಪರಾಙ್ಮುಖೇನ ನಿಃಶಂಕಪ್ರವೃತ್ತ್ಯಜನಕೇನಾವಕಾಶೇ ದತ್ತೇ ಪಶ್ಚಾಚ್ಛಬ್ದಾದಿ ಪ್ರವರ್ತತೇ ನ ತು ತೇನ ಪ್ರತ್ಯಕ್ಷಬಾಧಃ । ಯಥಾ ಪ್ರಬಲಪ್ರತ್ಯಕ್ಷ ಬಾಧಿತಸ್ಯಾಕ್ಷ್ಯಾನಂತರಂ ಪ್ರವೃತ್ತೇನ ಶಬ್ದಾದಿನಾ ನ ಬಾಧಸ್ತದ್ವತ್ ।**

ಚಂದ್ರನು ಚೋಟಿನಷ್ಟು ಗಾತ್ರದವನೆಂದು ಮುಂತಾಗಿ ಪ್ರತ್ಯಕ್ಷ ಭ್ರಮವು ಮೊದಲೇ ದೂರಾದಿ ದೋಷಜನ್ಯವಾದ್ದರಿಂದ ಅಪ್ರಮಾಣವೆಂದು ಸಾಕ್ಷಿಯಿಂದ ತಿಳಿದಿರುವುದರಿಂದ ಅದು ನಿಶ್ಚಯರೂಪವಾದರೂ ಸಂದೇಹದಂತೆಯೇ ಸ್ವಾರ್ಥ ನಿಶ್ಚಯಕ್ಕೆ ವಿಮುಖವಾಗಿದೆ. ನಿಃಶಂಕ ಪ್ರವೃತ್ತಿಗೆ ಅಸಾಧಕವಾಗಿದೆ. ಅದರಿಂದ ಬಾಧಕವಾದ ಅನುಮಾನಾಗಮಗಳಿಗೆ ವಿರೋಧವಾಗಿ ಪ್ರವೃತ್ತಿ ಮಾಡಲು ಅವಕಾಶ ನೀಡುತ್ತದೆ ಹೊರತು ಬಾಧಕಜ್ಞಾನವು ಪ್ರತ್ಯಕ್ಷವನ್ನು ಬಾಧಿಸುವುದಿಲ್ಲ. ಮೊದಲೇ ಪ್ರಬಲ ವಿರೋಧಿ ಪ್ರತ್ಯಕ್ಷದಿಂದ ಬಾಧಿತವಾಗಿರುವ ಭ್ರಮವನ್ನು ಅನಂತರ ಬರುವ ವಿರೋಧಿ ಶಬ್ದಾದಿಗಳು ಹೇಗೆ ಬಾಧಿಸುವುದಿಲ್ಲವೋ ಹಾಗೆ.

**ಯೇನ ಯಸ್ಯ ಭ್ರಮತ್ವಂ ಜ್ಞಾಯತೇ ತತ್ ತಸ್ಯ ಬಾಧಕಮ್ । ನಚ ಚಂದ್ರಪ್ರಾದೇಶತ್ವಾದಿ ಪ್ರತ್ಯಕ್ಷಸ್ಯಾಗಮಾದಿನಾ ಭ್ರಮತ್ವಂ ಜ್ಞಾಯತೇ ।**

'ಭ್ರಮವಿಷಯಾಭಾವಗ್ರಾಹಕವಾದ ಪ್ರತ್ಯಕ್ಷವು ಹೇಗೆ ಭ್ರಮಕ್ಕೆ ಬಾಧಕವೋ ಹಾಗೇ ಭ್ರಮ ವಿಷಯಾಭಾವ ಗ್ರಾಹಕವಾದ ಶಬ್ದಾದಿಗಳೂ ಬಾಧಕವೆ ಆಗಬೇಕು. ವಿಷಯಾಭಾವಗ್ರಾಹಕತ್ವವು ಎರಡರಲ್ಲಿಯೂ ಸಮಾನವೆ ತಾನೆ?' ಎನ್ನಬಾರದು. ವಿಷಯಾಭಾವಗ್ರಾಹಕತ್ವವೇ ಬಾಧಕತ್ವವಲ್ಲ. ಭ್ರಮತ್ವ ಜ್ಞಾಪಕತ್ವವೇ ಬಾಧಕತ್ವ. ಪ್ರತ್ಯಕ್ಷವೆ ಪ್ರತ್ಯಕ್ಷಭ್ರಮಕ್ಕೆ ಭ್ರಮತ್ವಜ್ಞಾನ ಜನಕ. ಶಬ್ದಾದಿಗಳಿಂದ ಪ್ರತ್ಯಕ್ಷಕ್ಕೆ ಭ್ರಮತ್ವ ಸಿದ್ಧವಾಗುವುದಿಲ್ಲ. ಪ್ರತ್ಯಕ್ಷದಿಂದಲೇ ಅದು ಸಿದ್ಧವಾಗಿರುತ್ತದೆ. ಅದರಿಂದ ಅವು ಬಾಧಕವಲ್ಲ. ಬಾಧಕದಂತೆ ವ್ಯವಹಾರ ಮಾತ್ರ.



**अकलंकितं स्वार्थपरिच्छेदेऽभिनिविष्टं निःशङ्कप्रवृत्तिजनन-योग्यम् । यथा 'अग्निरुष्ण एव', 'प्रस्तरो यजमानो नैव', 'घटस्सन्नेव' इत्यादि । नह्यत्र प्रागेव दूरादिदोषधीर्वाऽर्थाभावनिश्चयो वाऽस्ति । यदिच प्रत्यक्षे क्लृप्तदूरादिदोषाभावेऽप्यन्यः कल्प्येत तर्हि श्रुतावपि शब्दे क्लृप्तविप्रलंभाद्यभावेऽप्यन्यः कल्प्येत । नचाविद्यकतैव दोषः मेयाविद्यकत्वस्याद्याप्यासद्धेः । मानाविद्यकत्वस्य तु श्रुतावपि**

सत्त्वात्। नाप्यनादिभेदभ्रमवासना दोषः, श्रौतज्ञानस्यापि प्रकृतिप्रत्ययादिभेदवासनाजन्यत्वात् । भेदधियोऽद्यापि भ्रांतित्वासिद्धेश्च । इदं चाकलंकितं प्रत्यक्षं साक्षिरूपं चेन्न केनापि बाध्यं, न कस्याप्यवकाशदम् । बाह्यं तु प्रबलप्रत्यक्षेण बाध्यं, नत्वन्येन बाध्यमन्यस्यावकाशदं वा । एवश्चाकाशे समीपे नीरूपत्वनिश्चयाद्दूरे तद्धीर्दूरदोषजन्येति प्रागेव निश्चिता । नतु नीरूपत्वानुमितिबाध्या ।

केचित्तु– ''आकाशो नीलिमोदेति'' इति श्रुतेर्नभो नीलमेव । समीपे तु भूसंनिकर्षस्य प्रतिबन्धकत्वान्नैल्यानुपलम्भ इत्याहुः । अन्ये तु ''नैल्यधीः साक्षिप्रत्यक्षबाधिता । अचाक्षुषपिशाचान्योन्याभावस्य 'स्तम्भः पिशाचो न भवति' इति चक्षुषेव साक्ष्ययोग्यरूपाभावस्यापि नीरूपत्वविशेषावकाशत्वग्राहिणा साक्षिणा ग्रहणात् । परमतेऽपि ह्याकाशं साक्षिवेद्यं । निमीलितनेत्रस्य 'नीलं नभः' इति धीश्च साक्षिरूपेत्याहुः ।

---

तृतीयमुदाहरति **अकलङ्कितमिति** । **श्रुतावपि सत्त्वादिति** । अभ्युपेत्य चेदमुदितम् । वस्तुतस्तु मानाविषयकत्वमप्यसिद्धमिति ध्येयम् । ननु बाधाबाधाभ्यां दोषतदभावकल्पना । नच श्रौतज्ञानस्य बाधोऽस्तीत्यत आह **भेदधिय इति** ।। तथाच कल्पकाभावात् नात्र दोषकल्पनेति भावः । न केवलमाकाशस्य साक्षिवेद्यत्वं मयोपेयते, किन्तु परेणापीत्याह **परमतेऽपीति** ।। नन्वन्योन्याभावप्रत्यक्षे प्रतियोगियोग्यत्वस्यातन्त्रत्वेऽपि संसर्गाभावप्रत्यक्षे तद्योग्यत्वं तन्त्रमिति यो मन्यते तं प्रत्याह **निमीलितनेत्रस्येति** ।। तथाच नीलरूपस्य साक्षिवेद्यत्वेन साक्षिणा निरुक्ताकाशत्वग्रहणे न काचिदनुपपत्तिरिति भावः ।



ಅಕಲಂಕಿತಂ ಸ್ವಾರ್ಥಪರಿಚ್ಛೇದೇ ಅಭಿನಿವಿಷ್ಟಂ ನಿಃಶಂಕಪ್ರವೃತ್ತಿಜನನಯೋಗ್ಯಮ್ ।

**ಯಥಾ 'ಅಗ್ನಿರುಷ್ಣ ಏವ', 'ಪ್ರಸ್ತರೋ ಯಜಮಾನೋ ನೈವ', ಘಟಸ್ಸನ್ನೇವ' ಇತ್ಯಾದಿ। ನಹ್ಯತ್ರ ಪ್ರಾಗೇವ ದೂರಾದಿದೋಷಧೀರ್ವಾ ಅರ್ಥಾಭಾವನಿಶ್ಚಯೋ ವಾಽಸ್ತಿ। ಯದಿಚ ಪ್ರತ್ಯಕ್ಷೇ ಕ್ಲೃಪ್ತದೂರಾದಿದೋಷಾಭಾವೇಽಪಿ ಅನ್ಯಃ ಕಲ್ಪ್ಯೇತ ತರ್ಹಿ ಶ್ರುತಾವಪಿ ಶಬ್ದೇ ಕ್ಲಪ್ತವಿಪ್ರಲಂಭಾದ್ಯಭಾವೇಽಪಿ ಅನ್ಯಃ ಕಲ್ಪ್ಯೇತ।**

'ಅಕಲಂಕಿತ' ಅಂದರೆ ಅಪ್ರಾಮಾಣ್ಯಶಂಕಾಗ್ರಸ್ತವಾಗದಿದ್ದ ಜ್ಞಾನವು ತನ್ನ ವಿಷಯವನ್ನು ಸಿದ್ಧಿಮಾಡಿಕೊಡುವುದರಲ್ಲಿ ದೃಢವಾಗಿ ಪ್ರವೃತ್ತಿ ಮಾಡುತ್ತದೆ. ನಿಃಶಂಕ ಪ್ರವೃತ್ತಿ ಉಂಟುಮಾಡುವಲ್ಲಿ ಸಮರ್ಥವಾಗುತ್ತದೆ. ಅಗ್ನಿಯು ಉಷ್ಣವೆ, ಪ್ರಸ್ತರವು ಸರ್ವಥ ಯಜಮಾನಾಭಿನ್ನವಲ್ಲ. ಘಟವು ಸತ್ಯವೇ ಇತ್ಯಾದಿಯಾಗಿ ವಿಷಯಗಳನ್ನು ಸಿದ್ಧಿಮಾಡಿಕೊಡುತ್ತದೆ. ಏಕೆಂದರೆ ಈ ರೀತಿಯ ಜ್ಞಾನವು ಹುಟ್ಟುವಾಗ ಮೊದಲೇ ದೂರಾದಿ ದೋಷ ಬುದ್ಧಿಯಾಗಲಿ ವಿಷಯವು ವಾಸ್ತವದಲ್ಲಿಲ್ಲ ಎಂಬ ನಿಶ್ಚಯವಾಗಲಿ ಇರುವುದಿಲ್ಲ.

'ಪ್ರತ್ಯಕ್ಷದಲ್ಲಿ ಕ್ಲಪ್ತವಾದ ದೂರಾದಿ ದೋಷವಿಲ್ಲದಿದ್ದರೂ ಬೇರೆ ಒಂದು ದೋಷವಿರುತ್ತದೆ ಎಂದು ಕಲ್ಪನೆ ಮಾಡುವೆವು ಎನ್ನುವುದಾದರೆ ಶ್ರುತಿಯಲ್ಲಿಯೂ ಆಗಮದಲ್ಲಿ ಕ್ಲೃಪ್ತವಾದ ವಂಚನಾದಿ ದೋಷವಿಲ್ಲದಿದ್ದರೂ ಬೇರೆ ದೋಷವಿರಬಹುದೆಂದು ಕಲ್ಪನೆ ಮಾಡಬಹುದಾದೀತು

**ನಚಾವಿದ್ಯಕತ್ವೈವ ದೋಷಃ। ಮೇಯಾವಿದ್ಯಕತ್ವಸ್ಯಾದ್ಯಾಪ್ಯಸಿದ್ಧೇಃ। ಮಾನಾವಿದ್ಯಕತ್ವಸ್ಯ ತು ಶ್ರುತಾವಪಿ ಸತ್ತ್ವಾತ್। ನಾಪ್ಯನಾದಿ ಭೇದಭ್ರಮವಾಸನಾ ದೋಷಃ, ಶ್ರೌತಜ್ಞಾನಸ್ಯಾಪಿ ಪ್ರಕೃತಿಪ್ರತ್ಯಯಾದಿ ಭೇದವಾಸನಾ ಜನ್ಯತ್ವಾತ್। ಭೇದಧಿಯೋಽದ್ಯಾಪಿ ಭ್ರಾಂತಿತ್ವಾಸಿದ್ಧೇಶ್ಚ।**

ಅವಿದ್ಯಕತ್ವವೇ ಕ್ಲೃಪ್ತವಾದ ದೋಷ. ಅದು ಪ್ರತ್ಯಕ್ಷದಲ್ಲಿದೆ ಎಂದರೆ, ಪ್ರತ್ಯಕ್ಷದ ವಿಷಯವು ಅವಿದ್ಯಾಕಲ್ಪಿತವೆಂದು ಇನ್ನೂ ಸಿದ್ಧವಾಗಿಲ್ಲ. ಅದರಿಂದ ಕ್ಲೃಪ್ತದೋಷವೆನಿಸುವುದಿಲ್ಲ. ಘಟಾದಿ ಪ್ರತ್ಯಕ್ಷವು ಅವಿದ್ಯಾಕಲ್ಪಿತ ಎನ್ನುತ್ತೇವೆ, ಎಂದರೆ ಅದು ಸರಿಯಲ್ಲ. ಪ್ರತ್ಯಕ್ಷವು ಅವಿದ್ಯಾಕಲ್ಪಿತ ಎನ್ನುವುದೂ ಇನ್ನೂ ಸಿದ್ಧವಾಗಿಲ್ಲ. ಸಿದ್ಧವೆಂದೊಪ್ಪಿದರೂ ಅದ್ವೈತ ಶ್ರುತಿಜನ್ಯಜ್ಞಾನವೂ ಹಾಗೇ ಅವಿದ್ಯಾಕಲ್ಪಿತ, ಬಾಧಿತವೆಂದಾದೀತು. 'ಅನಾದಿ ಭೇದಭ್ರಮವಾಸನಾ ಎಂಬುದೇ ದೋಷ'ವೆನ್ನುವುದಾದರೆ ಶ್ರುತಿಯಿಂದ ಬರುವ ಜ್ಞಾನದಲ್ಲಿಯೂ 'ಪ್ರಕೃತಿ ಬೇರೆ ಪ್ರತ್ಯಯ ಬೇರೆ' ಎಂದು ಮುಂತಾಗಿ ಭೇದವಾಸನಾ ಜನ್ಯತ್ವವು ಸಮಾನ. ಮತ್ತು ಭೇದಜ್ಞಾನವೆಲ್ಲವೂ ಭ್ರಮ ಎಂಬುದೂ ಕೂಡ ಇನ್ನೂ ಸಿದ್ಧವಾಗಿಲ್ಲ. ಸಿದ್ಧವಾಗಿದ್ದರೆ ಅದಕ್ಕೊಂದು ದೋಷವನ್ನು ಕಲ್ಪಿಸಬಹುದಾಗಿತ್ತು.

**ಇದಂ ಚಾಕಲಂಕಿತಂ ಪ್ರತ್ಯಕ್ಷಂ ಸಾಕ್ಷಿರೂಪಂ ಚೇನ್ನ ಕೇನಾಪಿ ಬಾಧ್ಯಂ। ನ ಕಸ್ಯಾಪ್ಯವಕಾಶದಮ್। ಬಾಹ್ಯಂ ತು ಪ್ರಬಲಪ್ರತ್ಯಕ್ಷೇಣ ಬಾಧ್ಯಂ। ನ ತ್ವನ್ಯೇನ**

**ಬಾಧ್ಯಮನ್ಯಸ್ಯಾವಕಾಶದಂ ವಾ। ಏವಂಚ ಆಕಾಶೇ ಸಮೀಪೇ ನೀರೂಪತ್ವನಿಶ್ಚಯಾತ್ ದೂರೇ ತದ್ಧೀರ್ದೂರದೋಷಜನ್ಯೇತಿ ಪ್ರಾಗೇವ ನಿಶ್ಚಿತಾ। ನತು ನೀರೂಪತ್ವಾನುಮಿತಿ ಬಾಧ್ಯಾ।**

ಅಪ್ರಾಮಾಣ್ಯ ಬುದ್ಧಿಯಿಂದ ಕಲಂಕಿತವಾಗದಿದ್ದ ಪ್ರತ್ಯಕ್ಷಜ್ಞಾನವು ಸಾಕ್ಷಿರೂಪವಾಗಿದ್ದರೆ ಅದು ಯಾವುದೇ ಬಾಧಕಜ್ಞಾನದಿಂದಲೂ ಬಾಧ್ಯವಾಗದು. ಯಾವ ವಿರೋಧಿಜ್ಞಾನಕ್ಕೂ ಪ್ರವೃತ್ತಿಗೆ ಅವಕಾಶ ನೀಡದು. ಬಾಹ್ಯಜ್ಞಾನವಾಗಿದ್ದರೆ ಪ್ರಬಲವಾದ ಪ್ರತ್ಯಕ್ಷದಿಂದ ಮಾತ್ರ ಬಾಧ್ಯವಾಗಬಹುದು. ಬೇರೆ ಯಾವ ವಿರೋಧಿಜ್ಞಾನದಿಂದಲೂ ಬಾಧ್ಯವಾಗದು. ಅದಕ್ಕೆ ಪ್ರವೃತ್ತಿ ಮಾಡಲು ಅವಕಾಶವನ್ನು ನೀಡದು. ಹೀಗಾಗಿ ಆಕಾಶದಲ್ಲಿ ಸಮೀಪದಿಂದ ನೋಡಿದಾಗ ರೂಪರಹಿತವೆಂದೇ ನಿಶ್ಚಯವಾಗುವುದರಿಂದ ದೂರದಿಂದ ನೋಡಿದಾಗ ನೀಲವಾಗಿ ಕಾಣುವುದು ದೂರದೋಷದಿಂದ ಎಂದು ಮೊದಲೇ ನಿಶ್ಚಿತವಾಗಿರುವುದರಿಂದ 'ಆಕಾಶವು ರೂಪರಹಿತ' ಎನ್ನುವ ಅನುಮಿತಿಯಿಂದ ಅದು ಬಾಧ್ಯವಾಗುವುದಿಲ್ಲ.

**ಕೇಚಿತ್ತು— 'ಆಕಾಶೋ ನೀಲಿಮೋದೇತಿ' ಇತಿ ಶ್ರುತೇರ್ನಭೋ ನೀಲಮೇವ। ಸಮೀಪೇ ತು ಭೂಸಂನಿಕರ್ಷಸ್ಯ ಪ್ರತಿಬಂಧಕತ್ವಾನ್ನೈಲ್ಯಾನುಪಲಂಭಃ ಇತ್ಯಾಹುಃ।**

ಕೆಲವರು ಹೇಳುತ್ತಾರೆ—

ಆಕಾಶೋ ನೀಲಿಮೋದೇತಿ ನ ಪ್ರದೇಶಃ ಕಥಂಚನ।
ಅಭಾವೋ ಹಿ ಪ್ರದೇಶಸ್ಯ ನ ಹ್ಯತ್ರಾಭಾವ ಇತ್ಯಪಿ ॥

–ನ್ಯಾಯವಿವರಣೋಕ್ತಪೈಂಗಿ ಶ್ರುತಿ (2.3.1)

'ನೀಲಾಕಾಶವು ಉತ್ಪನ್ನವಾಗುವುದು. ಆದರೆ ಪ್ರದೇಶರೂಪವಾದ ಅವ್ಯಾಕೃತಾಕಾಶವು ಸರ್ವಥಾ ಉತ್ಪನ್ನವಾಗದು. ಏಕೆಂದರೆ ಪ್ರದೇಶಕ್ಕೆ ಪ್ರಾಗಭಾವವೆಂಬುದಿಲ್ಲ. ಇಲ್ಲಿ ಈಗ ಪ್ರದೇಶವಿಲ್ಲ, ಅದರ ಪ್ರಾಗಭಾವವಿದೆ ಎಂದು ಕಾಣುವುದಿಲ್ಲ ತಾನೆ?' ಎಂದು ನ್ಯಾಯವಿವರಣೋಕ್ತ ಪೈಂಗಿಶ್ರುತಿಯು ಹೇಳುವಂತೆ ಭೂತಾಕಾಶವು ನೀಲವೆ. ಆದರೂ ಸಮೀಪದಲ್ಲಿ ಭೂಮಿಯ ಸಾಮೀಪ್ಯರೂಪದೋಷದಿಂದ ಪ್ರತಿಬದ್ಧವಾಗುವುದರಿಂದ ನೀಲವರ್ಣ ಕಾಣುವುದಿಲ್ಲ.' ಎಂದು. ಈ ಪಕ್ಷದಲ್ಲಿ 'ಆಕಾಶವು ನೀಲ' ಎನ್ನುವ ಪ್ರತ್ಯಕ್ಷವು ಯಥಾರ್ಥವೆ, ಬಾಧ್ಯವಲ್ಲ. ಅನುಮಾನದಿಂದ ಪ್ರತ್ಯಕ್ಷಕ್ಕೆ ಬಾಧ ಉಂಟೆನ್ನಲು ಇದು ಉದಾಹರಣವಾಗುವುದಿಲ್ಲ. ವಸ್ತುತಃ ನೀಲಾಕಾಶ ದಿವ್ಯದೃಷ್ಟಿಗೆ ಮಾತ್ರ ಗೋಚರ. ಆದರಿಂದ ಅದರ ಪ್ರತ್ಯಕ್ಷವೆ ಇಲ್ಲ ಎನ್ನಬೇಕಿತ್ತೆಂದು ಅಸ್ವಾರಸ್ಯವು 'ಕೇಚಿತ್ತೆ'ಂದು ಸೂಚಿತವಾಗಿದೆ.

**ಅನ್ಯೇ ತು ನೈಲ್ಯಧೀಃ ಸಾಕ್ಷಿಪ್ರತ್ಯಕ್ಷಬಾಧಿತಾ। ಅಚಾಕ್ಷುಷಪಿಶಾಚಾನ್ಯೋನ್ಯಾಭಾವಸ್ಯ 'ಸ್ತಂಭಃ ಪಿಶಾಚೋ ನ ಭವತಿ' ಇತಿ ಚಕ್ಷುಷೇವ ಸಾಕ್ಷ್ಯಯೋಗ್ಯರೂಪಾಭಾವಸ್ಯಾಪಿ ನೀರೂಪತ್ವ**

**ವಿಶೇಷಾವಕಾಶತ್ವಗ್ರಾಹಿಣಾ ಸಾಕ್ಷಿಣಾ ಗ್ರಹಣಾತ್। ಪರಮತೇಽಪಿ ಹ್ಯಾಕಾಶಂ ಸಾಕ್ಷಿವೇದ್ಯಂ। ನಿಮೀಲಿತನೇತ್ರಸ್ಯ 'ನೀಲಂ ನಭಃ' ಇತಿ ಧೀಶ್ಚ ಸಾಕ್ಷಿರೂಪೇತ್ಯಾಹುಃ।**

ಇನ್ನು ಕೆಲವರು ಹೇಳುತ್ತಾರೆ— ಆಕಾಶವು ನೀಲವರ್ಣದ್ದೆಂದು ಕಾಣುವುದು. ಸಾಕ್ಷಿಪ್ರತ್ಯಕ್ಷದಿಂದಲೇ ಬಾಧಿತ. ಅನುಮಾನದಿಂದ ಬಾಧಿತವಲ್ಲ. ಏಕೆಂದರೆ, 'ಕಂಬವು ಪಿಶಾಚಿಯಲ್ಲ' ಎಂದು ಕಣ್ಣಿಗೆ ಕಾಣದ ಪಿಶಾಚದ ಅನ್ಯೋನ್ಯಾಭಾವವು ಕಣ್ಣಿಗೆ ಕಾಣುವಂತೆ, ರೂಪರಹಿತ ವಿಭು ದ್ರವ್ಯ ವಿಶೇಷವಾದ ಅವ್ಯಾಕೃತಾಕಾಶವನ್ನು ಸಾಕ್ಷಿಯು ಕಾಣುವಾಗ, ಅದರಲ್ಲಿ ಸಾಕ್ಷಿಗೆ ಕಾಣದ ರೂಪದ ಅಭಾವವೂ ಕಾಣಬಹುದು. ಏಕೆಂದರೆ ರೂಪಾಭಾವವು ರೂಪವದನ್ಯೋನ್ಯಾಭಾವವೇ ತಾನೆ?

ಪ್ರತ್ಯಕ್ಷವಾಗಿ ನೀಲರೂಪವು ಕಾಣುತ್ತಿರುವಾಗ ಕಣ್ಣಿಂದಾಗಲಿ ಸಾಕ್ಷಿಯಿಂದಾಗಲಿ ಅದು ಬಾಧಿತವಾಗುವುದು ಹೇಗೆ?' ಎಂದರೆ, 'ಅನುಮಾನದಿಂದಾದರೂ ಬಾಧಿತವಾಗುವುದು ಹೇಗೆ? ಶುಕ್ತಿಯಲ್ಲಿ ರಜತಪ್ರತ್ಯಕ್ಷ ಕಾಣುವಾಗ ಅದು ಹೇಗೆ ಬಾಧ್ಯವಾಗುವುದು?' 'ಅಲ್ಲಿಯೂ ಯುಕ್ತಿಯೆ ಬಾಧಕ ಎನ್ನುತ್ತೇವೆ' ಎಂದರೆ ರಜತ ಪ್ರತ್ಯಕ್ಷವಾಗಿ ಕಾಣುತ್ತಿರುವಾಗ ಯುಕ್ತಿ ಹೇಗೆ ಪ್ರವೃತ್ತಿ ಮಾಡೀತು? ಯುಕ್ತಿಯು ಪ್ರಬಲ ಎನ್ನುವುದು ಇನ್ನೂ ಸಿದ್ಧವಾಗಿಲ್ಲ. ಸಾಕ್ಷಿಪ್ರತ್ಯಕ್ಷವು ಯಥಾರ್ಥವೆ ಎಂದು ನಿಯಮವಿದೆ. ಅದು ಪರೀಕ್ಷಿತವೂ ಆಗಿದೆ.

'ಆಕಾಶವು ಸಾಕ್ಷಿಗೆ ಅಯೋಗ್ಯ' ಎನ್ನಬಾರದು. ಅದ್ವೈತಿಯೂ ಆಕಾಶವನ್ನು ಸಾಕ್ಷಿವೇದ್ಯವೆಂದು ಒಪ್ಪಿದ್ದಾನೆ.

ಯದ್ಯಪಿ ಅನ್ಯೋನ್ಯಾಭಾವ ಪ್ರತ್ಯಕ್ಷಕ್ಕೆ ಪ್ರತಿಯೋಗಿಯೋಗ್ಯತ್ವ ಬೇಕಾಗಿಲ್ಲ. ಆದರೆ ಸಂಸರ್ಗಾಭಾವಕ್ಕೆ ಬೇಕು. ನೀಲರೂಪವು ಸಾಕ್ಷಿಗೆ ಅಯೋಗ್ಯವಾಗಿರುವಾಗ ನೀಲಾಭಾವವನ್ನು ಸಾಕ್ಷಿ ಹೇಗೆ ಗ್ರಹಿಸುವುದು? ಎಂಬ ಪ್ರಶ್ನೆ ಬರುತ್ತದೆ. ಆದರೆ ಆಕಾಶದಲ್ಲಿ ನೀಲರೂಪವೂ ಸಾಕ್ಷಿಯೋಗ್ಯವೆಂದು ಅದ್ವೈತಿಯೆ ಒಪ್ಪಿದ್ದಾನೆ. ಕಣ್ಣುಮುಚ್ಚಿದರೂ ಆಕಾಶವು ನೀಲವಾಗಿ ಕಾಣುವುದರಿಂದ ನೀಲವೂ ಸಾಕ್ಷಿಯೋಗ್ಯ.



**यद्वा अश्रावणे आकाशे श्रावणी शब्दाभावधीरिवाचाक्षुषेप्याकाशे रूपाभावधीर्वायाविव चाक्षुष्येव। दूरस्थस्य पुंसो यत्र नभःप्रदेशे नैल्यधीस्समीपस्थस्य तस्यैव तत्रैव चक्षुषैवानैल्यबुद्धेः। अन्यथाऽऽकाशस्य नीरूपत्वं न सिध्येत्। लिङ्गाभावात्। तत्पक्षे महत्त्वद्रव्यानारम्भकत्वादेरसिद्धेः। निस्स्पर्शत्वस्य तमसि व्यभिचारात् पृथिव्यादित्रयेतरत्वादेश्चाप्रयोजकत्वात्। एतैरेवाशब्दत्वस्याप्यापाताच्च। पञ्चीकरणेन रूपस्यापि सत्त्वेन बाधाच्च।**

यद्वा व्याप्तिप्रत्यक्षेण तन्मूलानुमित्या वा तद्बाधः । अनौष्ण्यहेतोस्तु न व्याप्तिः अप्रयोजकत्वात् । मिथ्यात्वहेतौ तु घटधीवत् व्याप्तिधीरपि स्वार्थसत्वग्राहितयाऽनुमितिप्रतिकूलैव, न तु तस्या मूलम् ।

अथवा नीरूपत्वानुमितिरुपजीव्यव्याप्तिप्रत्यक्षाद्यविरुद्धा धर्मिग्राहकाबाधिता च । मिथ्यात्वाद्यनुमितिस्तूपजीव्यव्याप्तिप्रत्यक्षादिविरुद्धा, धर्मिग्राहकबाधिता चेति वैषम्यम् । तस्मात्

स्वार्थनिश्चयरूपेण निश्चला ह्यपरोक्षधीः ।
विजातीयप्रमाणेन केवलेन न बाध्यते ।।

तदुक्तं—

''नहि दृष्टस्य वस्तुनो बलवद्दृष्टिं विनाऽन्यद्बाधकम्'' इति ।

उक्तश्च विवरणेऽपि

''यत्राविचारपुरस्सरमेव प्रत्यक्षावभासमप्यनुमानादिना बाधितमुच्छिन्नव्यवहारं भवति, तत्र तथा भवतु । यत्र पुनर्विचारपदवीमुपारूढयोर्ज्ञानयोर्बलाबलचिन्तया बाधनिश्चयस्तत्र नानुमानादिना प्रत्यक्षस्य मिथ्यात्वसिद्धिः'' इति ।।

---

**चाक्षुष्येवेति** । नतु साक्षिरूपा, चक्षुरन्वयव्यतिरेकानुविधानानुपपत्तेरिति भावः । युक्तिमुक्त्वानुभवमपि प्रमाणयति **दूरस्थस्येति** । **अन्यथेति** । अचाक्षुषत्व इत्यर्थः । **महत्त्वेति** । परममहत्वेत्यर्थः । **अशब्दत्वस्येति** । अशब्दगुणकत्वस्येत्यर्थः । **पञ्चीकरणेति** । यद्यपि वाचस्पतिना पञ्चीकरणं नाङ्गीकृतम् । तथापि सिद्धान्तिना तदङ्गीकारात् बाध इति भावः । ननु व्याप्तिप्रत्यक्षस्य समानप्रकारकत्वाभावात् सामान्यलक्षणानभ्युपगमेन भिन्नविषयत्वाच्च न व्याप्तिप्रत्यक्षस्य बाधकतेत्यत आह **तन्मूलानुमित्या वेति** ।

तर्कानुगृहीतव्याप्तिप्रत्यक्षमूलानुमित्या वेत्यर्थः । नन्वेवं वह्न्यौष्ण्यप्रत्यक्षमपि तदनौष्ण्यानुमानबाधितं स्यादित्यत आह **अनौष्ण्य-हेतोरिति ।।** तथाच तर्कानुगृहीतव्याप्तिप्रत्यक्षमूलकत्वाभावेन वह्न्यनौष्ण्यानुमानं तदौष्ण्यप्रत्यक्षबाधितमिति भावः । ननु तादृशव्याप्तिप्रत्यक्षमूल(क)त्वं मिथ्यात्वानुमितावप्यस्तीति तया प्रपञ्चसत्त्वग्राहिप्रत्यक्षस्य बाधः किं न स्यादित्यत आह **मिथ्यात्वहेतौ त्विति ।।** पूर्वदूषणसमुच्चयार्थस्तुशब्दः । **तस्या इति ।** मिथ्यात्वानुमितेरित्यर्थः । **निश्चलेति ।।** प्रबलेत्यर्थः ।। **विजातीयेति ।।** स्वातिरिक्तेत्यर्थः । परीक्षितप्रत्यक्षस्य लिङ्गाद्यबाध्यत्वे परसम्मतिमप्याह **उक्तं चेति ।।** अपरे तु गौरोऽहमिति प्रत्यक्षानन्तरं मम देह इति प्रत्यक्षदर्शनात् दूरे नभोनैल्यप्रत्यक्षानन्तरं निकटे रूपाभावप्रत्यक्षदर्शनात् चन्द्रादावुदयकाले अधिकपरिमाणदर्शनानन्तरं कालान्तरेऽन्यपरिमाणदर्शनात्, परस्परविरुद्धार्थावगाहि-तत्तत्प्रतीतिद्वयोपनयानन्तरं किमनयोः प्रमाणमित्यप्रामाण्यशङ्कानन्तरमेव मानान्तरप्रवृत्तिः । न तु तेन तद्बाध इत्याहुः ।



**ಯದ್ವಾ ಅಶ್ರಾವಣೇ ಆಕಾಶೇ ಶ್ರಾವಣೀ ಶಬ್ದಾಭಾವಧೀರಿವಾಚಾಕ್ಷುಷೇಪ್ಯಾಕಾಶೇ ರೂಪಾಭಾವಧೀರ್ವಾಯಾವಿವ ಚಾಕ್ಷುಷ್ಯೇವ । ದೂರಸ್ಥಸ್ಯ ಪುಂಸೋ ಯತ್ರ ನಭಃಪ್ರದೇಶೇ ನೈಲ್ಯಧೀಃ ಸಮೀಪಸ್ಥಸ್ಯ ತಸ್ಯೈವ ತತ್ರೈವ ಚಕ್ಷುಷೈವಾನೈಲ್ಯಬುದ್ಧೇಃ । ಅನ್ಯಥಾ ಆಕಾಶಸ್ಯ ನೀರೂಪತ್ವಂ ನ ಸಿಧ್ಯೇತ್ । ಲಿಂಗಾಭಾವಾತ್ ।**

ಅಥವಾ ಆಕಾಶವು ಶ್ರೋತ್ರಕ್ಕೆ ಯೋಗ್ಯವಲ್ಲದಿದ್ದರೂ ಆಕಾಶದಲ್ಲಿ ಶಬ್ದಾಭಾವವು ಶ್ರೋತ್ರದಿಂದ ಗೃಹೀತವಾಗುವಂತೆ ಆಕಾಶವು ಚಕ್ಷುಸ್ಸಿಗೆ ಯೋಗ್ಯವಲ್ಲದಿದ್ದರೂ ಆಕಾಶದಲ್ಲಿ ರೂಪಾಭಾವ ಬುದ್ಧಿಯು ಚಕ್ಷುಸ್ಸಿನಿಂದಲೇ ಬರಬಹುದು. ಚಕ್ಷುಸ್ಸಿಗೆ ಅಯೋಗ್ಯವಾದ ವಾಯುವಿನಲ್ಲಿ ಚಕ್ಷುಸ್ಸಿನಿಂದಲೇ ರೂಪಾಭಾವ ಬುದ್ಧಿ ಬರುವಂತೆ. ಹೀಗೆ ಹೇಳದಿದ್ದರೆ ಚಕ್ಷುಸ್ಸಿನ ಅನ್ವಯ ವ್ಯತಿರೇಕವು ರೂಪಾಭಾವ ಜ್ಞಾನಕ್ಕೆ ಹೇಗೆ ಕೂಡುತ್ತದೆ? ಮತ್ತು ದೂರದಿಂದ ನೋಡುವವನಿಗೆ ಯಾವ ಆಕಾಶ ಪ್ರದೇಶದಲ್ಲಿ ನೀಲರೂಪ ಕಾಣುವುದೋ ಅವನಿಗೇ ಸಮೀಪದಿಂದ ನೋಡಿದರೆ ನೀರೂಪತ್ವ ಕಾಣಿಸುತ್ತದೆ.

'ಕಣ್ಣಿಗೆ ಆಕಾಶದಲ್ಲಿ ರೂಪಾಭಾವವು ಅಯೋಗ್ಯವೆ' ಎನ್ನುತ್ತೇನೆ ಎಂದರೆ, ಆಕಾಶದಲ್ಲಿ ನೀರೂಪತ್ವ ಸಿದ್ಧಿಸುವುದು ಹೇಗೆ? ಅನುಮಾನದಿಂದ ಸಿದ್ಧಿಸಲು ಹೇತುವಿಲ್ಲ—

**ತತ್ಪಕ್ಷೇ ಮಹತ್ತ್ವದ್ರವ್ಯಾನಾರಂಭಕತ್ವಾದೇರಸಿದ್ಧೇಃ। ನಿಃಸ್ಪರ್ಶತ್ವಸ್ಯ ತಮಸಿ ವ್ಯಭಿಚಾರಾತ್। ಪೃಥಿವ್ಯಾದಿ ತ್ರಯೇತರತ್ವಾದೇಶ್ಚ ಅಪ್ರಯೋಜಕತ್ವಾತ್। ಏತೈರೇವ ಅಶಬ್ದತ್ವಸ್ಯಾಪ್ಯಾಪಾತಾಚ್ಚ। ಪಂಚೀಕರಣೇನ ರೂಪಸ್ಯಾಪಿ ಸತ್ತ್ವೇನ ಬಾಧಾಚ್ಚ।**

ಪರಮಮಹತ್ವ, ದ್ರವ್ಯಾನಾರಂಭಕತ್ವಾದಿಗಳನ್ನು ಹೇತುಮಾಡಿ ಆಕಾಶದಲ್ಲಿ ನೀರೂಪತ್ವವನ್ನು ಸಾಧನೆ ಮಾಡಲಾಗುವುದಿಲ್ಲ, ಏಕೆಂದರೆ ಅದ್ವೈತಿಪಕ್ಷದಲ್ಲಿ ಅವ್ಯಾಕೃತಾಕಾಶ ಬೇರೆ ಇಲ್ಲ, ಭೂತಾಕಾಶವನ್ನೇ ಪಕ್ಷ ಮಾಡಿದರೆ ಅದರಲ್ಲಿ ಪರಮಮಹತ್ವವಿಲ್ಲ. ಅದು ಬ್ರಹ್ಮಾಂಡದ ಆಕಾಶಾವರಣ ಪರ್ಯಂತ ಮಾತ್ರವಿರುತ್ತದೆ. 'ಆಕಾಶಾದ್ ವಾಯುಃ' ಎಂಬಂತೆ ವಾಯುರೂಪ ದ್ರವ್ಯಾರಂಭಕತ್ವವೆ ಆಕಾಶಕ್ಕಿದೆ. ದ್ರವ್ಯಾನಾರಂಭಕತ್ವವಿಲ್ಲ, ರೂಪವತ್ತಾದ ಘಟದಲ್ಲಿಯೂ ದ್ರವ್ಯಾನಾರಂಭಕತ್ವವಿರುವುದರಿಂದ ವ್ಯಭಿಚರಿತವೂ ಆಗಿದೆ.

ನಿಃಸ್ಪರ್ಶತ್ವವನ್ನು ಹೇತು ಮಾಡಿದರೂ ಅದು ತಮಸಿನಲ್ಲಿ ವ್ಯಭಿಚರಿತ. ನೀಲರೂಪವುಳ್ಳ ತಮಸ್ಸು ದ್ರವ್ಯ ಎಂದು ಭಾಮತೀಕಾರ ಹೇಳಿದ್ದಾನೆ.

'ಪೃಥಿವಿ ಅಪ್ ತೇಜರೂಪ ಮೂರು ದ್ರವ್ಯಗಳಿಂದ ಭಿನ್ನವಾದ್ದರಿಂದ ಆಕಾಶವು ರೂಪರಹಿತ' ಎಂದೂ ಸಾಧಿಸಲಾಗುವುದಿಲ್ಲ. ಹೇತು ಅಪ್ರಯೋಜಕವಾಗಿದೆ. ಅನುಕೂಲತರ್ಕವಿಲ್ಲ.

ಮತ್ತು ಈ ಪರಮಹತ್ತ್ವಾದಿ ಹೇತುಗಳಿಂದಲೇ ಆಕಾಶದಲ್ಲಿ ಶಬ್ದಗುಣಕತ್ವಾಭಾವವನ್ನೂ ಸಾಧಿಸಬಹುದು.

ಮತ್ತು ಪಂಚೀಕರಣಪಕ್ಷದಲ್ಲಿ ಪಂಚಭೂತಗಳಲ್ಲಿಯೂ ರೂಪವಿರುವುದರಿಂದ ರೂಪಾಭಾವ ಸಾಧನೆಯು ಬಾಧಿತವೂ ಆಗುವುದು. ಯದ್ಯಪಿ ಭಾಮತೀಕಾರನು ಪಂಚೀಕರಣವನ್ನು ಒಪ್ಪಿಲ್ಲ. ಆದರೂ ಸಿದ್ಧಾಂತಿ ಒಪ್ಪಿದ್ದಾನೆ. ಪಂಚೀಕರಣವೆಂದರೆ ಎಲ್ಲ ಪಂಚಭೂತಗಳಿಂದಲೂ ಅವುಗಳ ಅರ್ಧಾಂಶಗಳನ್ನು ತೆಗೆದು, ಅವೆಲ್ಲವನ್ನೂ ನಾಲ್ಕು ನಾಲ್ಕು ಭಾಗಗಳಾಗಿ ಮಾಡಿ, ಆ ಭಾಗಗಳನ್ನು ಇತರ ನಾಲ್ಕು ಭೂತಗಳ ಉಳಿದ ಅರ್ಧಾಂಶಗಳೊಂದಿಗೆ ಸೇರಿಸಿ, ಪಂಚಭೂತಗಳು ಪ್ರತಿಯೊಂದು ಪಂಚಭೂತಾತ್ಮಕವಾಗುವಂತೆ ಪರಸ್ಪರ ಮಿಶ್ರಣ ಮಾಡುವುದು. ತ್ರಿವೃತ್ಕರಣವೆಂದರೆ ಪೃಥಿವಿ ಅಪ್ ತೇಜ ಈ ಮೂರನ್ನು ಮಾತ್ರ ಮೂರು ಮೂರು ಭಾಗಗಳಾಗಿ ಮಾಡಿ ಎರಡೆರಡನ್ನು ತೆಗೆದು ಉಳಿದ ಇತರ ಎರಡು ಭೂತಗಳ ಎರಡು ಭಾಗಗಳಲ್ಲಿ ಸೇರಿಸುವುದು. ಆಗ ಪ್ರತಿಯೊಂದು ಭೂತವು 'ತ್ರಿವೃತ್' ಆಗುತ್ತದೆ. 'ಪಂಚೀಕೃತ ಆಕಾಶದಲ್ಲಿ ರೂಪವಿದ್ದರೆ ಕಾಣಿಸದಿರಲು ಕಾರಣವಿಲ್ಲ'ವೆಂದು ಪಂಚೀಕರಣವನ್ನೇ ಸಿದ್ಧಾಂತದಲ್ಲಿ ಕೆಲವರು ಒಪ್ಪುವುದಿಲ್ಲ. ಇನ್ನು ಕೆಲವರು, ರೂಪವು ಆಕಾಶದಲ್ಲಿದೆ, ಅನುದ್ಭೂತವಾಗಿದೆ, ಕಾಣುವುದಿಲ್ಲ ಎನ್ನುತ್ತಾರೆ.

**ಯದ್ವಾ ವ್ಯಾಪ್ತಿಪ್ರತ್ಯಕ್ಷೇಣ ತನ್ಮೂಲಾನುಮಿತ್ಯಾ ವಾ ತದ್‌ಬಾಧಃ। ಅನೌಷ್ಣ್ಯ ಹೇತೋಸ್ತು ನ ವ್ಯಾಪ್ತಿಃ। ಅಪ್ರಯೋಜಕತ್ವಾತ್। ಮಿಥ್ಯಾತ್ವಹೇತೌ ತು ಘಟಧೀವತ್ ವ್ಯಾಪ್ತಿಧೀರಪಿ ಸ್ವಾರ್ಥಸತ್ವಗ್ರಾಹಿತಯಾ ಅನುಮಿತಿಪ್ರತಿಕೂಲೈವ ನ ತು ತಸ್ಯಾ ಮೂಲಮ್।**

ಅಥವಾ 'ಆಕಾಶವು ನೀಲವಾಗಿದೆ' ಎಂಬ ಪ್ರತ್ಯಕ್ಷವನ್ನು ವಿಭುತ್ವ ಹೇತುಕ ಅನುಮಾನವು ಬಾಧಿಸಿದಂತೆ ಕಂಡರೂ ವಸ್ತುತಃ 'ವಿಭುವು ನೀರೂಪವೇ ಆಗಿರುತ್ತದೆ' ಎಂಬ ವ್ಯಾಪ್ತಿ ಪ್ರತ್ಯಕ್ಷದಿಂದ ಅಥವಾ ತನ್ಮೂಲ ಅನುಮಾನದಿಂದಲೇ ಅದು ಬಾಧಿತವಾಗಿರುತ್ತದೆ. ಕೇವಲ ಅನುಮಾನದಿಂದಲ್ಲ.

'ವ್ಯಾಪ್ತಿ ಪ್ರತ್ಯಕ್ಷಕ್ಕೂ ಆಕಾಶವು ನೀಲ ಎಂಬ ಅನುಮಿತಿಗೂ ಸಮಾನ ಪ್ರಕಾರತ್ವವಿಲ್ಲ. ಮತ್ತು ಸಾಮಾನ್ಯಲಕ್ಷಣ ಪ್ರತ್ಯಾಸತ್ತಿಯನ್ನು ಒಪ್ಪಿಲ್ಲವಾದರಿಂದ, ವ್ಯಾಪ್ತಿಪ್ರತ್ಯಕ್ಷ–ಆಕಾಶನೀರೂಪತ್ವಾನುಮಿತಿಗಳು ಭಿನ್ನವಿಷಯಕವಾಗಿರುವುದರಿಂದ ಅನುಮಾನವೇ ಪ್ರತ್ಯಕ್ಷವನ್ನು ಬಾಧಿಸುತ್ತದೆ ಎನ್ನಬೇಕು'—ಎನ್ನುತ್ತಾನೆ ಅದ್ವೈತಿ. ಅದು ಸರಿಯಾಗುವುದಿಲ್ಲ 'ಅನುಮಾನವೇ ಬಾಧಿಸುತ್ತದೆ' ಎಂದರೂ ಅದು ತರ್ಕಾನುಗ್ರಹೀತ ವ್ಯಾಪ್ತಿಪ್ರತ್ಯಕ್ಷ ಮೂಲಕವಾದ ಅನುಮಾನದಿಂದ ಬಾಧಿತವೆಂದೇ ಹೇಳಬೇಕು. ಕೇವಲ ಅನುಮಾನದಿಂದ ಬಾಧಿತವೆನ್ನಬಾರದು.

ಹೀಗಾಗಿ ಪ್ರತ್ಯಕ್ಷವು ಪ್ರಬಲವಾದ ಇನ್ನೊಂದು ಪ್ರತ್ಯಕ್ಷದಿಂದಲೆ ಬಾಧ್ಯ. ಇಲ್ಲವೆ, ಪ್ರತ್ಯಕ್ಷ ಮೂಲಕವಾದ ಅನುಮಾನಾದಿ ಪ್ರಮಾಣಾಂತರದಿಂದಲೇ ಬಾಧ್ಯ ಎಂಬ ನಿಯಮಕ್ಕೆ ಭಂಗವಿಲ್ಲ.

ಹಾಗಾದರೆ 'ವಹ್ನಿಯು ಅನುಷ್ಣವಾಗಿದೆ ಪದಾರ್ಥವಾದ್ದರಿಂದ' ಎಂಬ ವ್ಯಾಪ್ತಿಪ್ರತ್ಯಕ್ಷ ಮೂಲಕ ಅನುಮಾನದಿಂದ ವಹ್ನಿ ಉಷ್ಣವಾಗಿದೆ ಎಂಬ ಪ್ರತ್ಯಕ್ಷವು ಬಾಧಿತವಾಗಬಹುದೆಂದಾಯಿತು' ಎಂದರೆ, ತರ್ಕಾನುಗ್ರಹೀತ ವ್ಯಾಪ್ತಿಪ್ರತ್ಯಕ್ಷಮೂಲಕತ್ವವು ಅನುಮಾನಕ್ಕೆ ಇದ್ದರೆ ಇದನ್ನು ಒಪ್ಪುತ್ತೇವೆ. ವಸ್ತುತಃ ತರ್ಕಾನುಗ್ರಹೀತ ವ್ಯಾಪ್ತಿಪ್ರತ್ಯಕ್ಷ ಇಲ್ಲ, ಅಪ್ರಯೋಜಕವಾಗಿದೆ. ಅದರಿಂದ ಅನುಮಾನವು ಬಾಧಕವಲ್ಲ.

'ತರ್ಕಾನುಗ್ರಹೀತ ವ್ಯಾಪ್ತಿಪ್ರತ್ಯಕ್ಷಮೂಲಕತ್ವವು ನಮ್ಮ ಮಿಥ್ಯಾತ್ವಾನುಮಾನಕ್ಕೆ ಇರುವುದರಿಂದ ಪ್ರಪಂಚಸತ್ವಪ್ರತ್ಯಕ್ಷಕ್ಕೆ ಬಾಧಕವೇ ಆಗುತ್ತದೆ' ಎನ್ನುವುದೂ ಅಯುಕ್ತ. 'ವ್ಯಾಪ್ತಿ ಪ್ರತ್ಯಕ್ಷ ಮೂಲಕವಾಗಿದೆ ಮಿಥ್ಯಾತ್ವಾನುಮಾನ' ಎನ್ನುವುದೇ ಅಸಂಗತ. ವ್ಯಾಪ್ತಿಪ್ರತ್ಯಕ್ಷವು ಬಂದಿತೆಂದರೆ ಅದು ವ್ಯಾಪ್ತಿಯ ಸತ್ವವನ್ನು ಅವಶ್ಯವಿಷಯೀಕರಿಸಲೇಬೇಕು, ಘಟಪ್ರತ್ಯಕ್ಷವು ಘಟಸತ್ವವನ್ನು ಅವಶ್ಯ ಗ್ರಹಿಸುವಂತೆ. ಸತ್ವವನ್ನು ಗ್ರಹಿಸಿತೆಂದರೆ, ಸತ್ವಉಳ್ಳ ವ್ಯಾಪ್ತಿಯಲ್ಲಿಯೇ ಅದು ಮಿಥ್ಯಾತ್ವಾಭಾವವನ್ನು ಗ್ರಹಿಸುವುದರಿಂದ, ದೃಶ್ಯತ್ವ ಹೇತುವಿಗೆ ಅದರ ವ್ಯಾಪ್ತಿಯಲ್ಲಿಯೇ ವ್ಯಭಿಚಾರ ಬಂದಿತು. ಹೀಗೆ ವ್ಯಾಪ್ತಿ ಇಲ್ಲದಂತೆ ಮಾಡಿ ದೃಶ್ಯತ್ವಹೇತುವು ಮಿಥ್ಯಾತ್ವಾನುಮಿತಿಗೆ ಪ್ರತಿಕೂಲವೇ ಆಯಿತು.

**ಅಥವಾ ನೀರೂಪತ್ವಾನುಮಿತಿಃ ಉಪಜೀವ್ಯ ವ್ಯಾಪ್ತಿಪ್ರತ್ಯಕ್ಷಾದ್ಯವಿರುದ್ಧಾ ಧರ್ಮಿಗ್ರಾಹಕಾಬಾಧಿತಾ ಚ। ಮಿಥ್ಯಾತ್ವಾದ್ಯನುಮಿತಿಸ್ತು ಉಪಜೀವ್ಯವ್ಯಾಪ್ತಿಪ್ರತ್ಯಕ್ಷಾದಿ ವಿರುದ್ಧಾ ಧರ್ಮಿಗ್ರಾಹಕಬಾಧಿತಾ ಚೇತಿ ವೈಷಮ್ಯಮ್। ತಸ್ಮಾತ್**

**'ಸ್ವಾರ್ಥನಿಶ್ಚಯರೂಪೇಣ ನಿಶ್ಚಲಾ ಹ್ಯಪರೋಕ್ಷಧೀಃ।**
**ವಿಜಾತೀಯಪ್ರಮಾಣೇನ ಕೇವಲೇನ ನ ಬಾಧ್ಯತೇ'।**

ಅಥವಾ ಆಕಾಶ ನೀಲತ್ವಪ್ರತ್ಯಕ್ಷವು ನೀರೂಪತ್ವಾನುಮಾನದಿಂದ ಬಾಧಿತವೆಂದು ಒಪ್ಪಿದರೂ ಪ್ರಪಂಚ ಸತ್ವಪ್ರತ್ಯಕ್ಷವು ಮಿಥ್ಯಾತ್ವಾನುಮಿತಿಯಿಂದ ಬಾಧಿತವಾಗದು. ನೀರೂಪತ್ವಾನುಮಿತಿ–ಮಿಥ್ಯಾತ್ವಾನುಮಿತಿಗಳಲ್ಲಿ ಬಹಳ ವೈಲಕ್ಷಣ್ಯವಿದೆ. ನಿರೂಪತ್ವಾನುಮಿತಿಯು ಉಪಜೀವ್ಯವಾದ ವ್ಯಾಪ್ತಿಪ್ರತ್ಯಕ್ಷಾದಿಗಳಿಗೆ ವಿರುದ್ಧವಾಗಿರುವುದಿಲ್ಲ. ಧರ್ಮಿಯಾದ ಆಕಾಶವನ್ನು ಗ್ರಹಿಸುವ ಸಾಕ್ಷಿ ಪ್ರತ್ಯಕ್ಷಕ್ಕೂ ವಿರುದ್ಧವಾಗುವುದಿಲ್ಲ. ಆದರೆ ಮಿಥ್ಯಾತ್ವಾನುಮಿತಿಯು ಉಪಜೀವ್ಯ ವ್ಯಾಪ್ತಿಗ್ರಾಹಕವಾದ ಸಾಕ್ಷಿಪ್ರತ್ಯಕ್ಷದಿಂದಲೂ ವಿರುದ್ಧ. ಧರ್ಮಿಗ್ರಾಹಕವಾದ ಘಟಾದಿಸತ್ವಪ್ರತ್ಯಕ್ಷದಿಂದಲೂ ಬಾಧಿತವಾಗಿದೆ. ಅಂಥ ಮಿಥ್ಯಾತ್ವಾನುಮಿತಿಯು ಸತ್ವಪ್ರತ್ಯಕ್ಷಕ್ಕೆ ಬಾಧಕವಾಗಲಾರದು. ಆದರಿಂದ 'ಪ್ರತ್ಯಕ್ಷ ಜ್ಞಾನವು ತನ್ನ ವಿಷಯ ಸಿದ್ಧಿಮಾಡುವ ವಿಷಯದಲ್ಲಿ ನಿಶ್ಚಲವಾಗಿದೆ. ಪ್ರಬಲವಾಗಿದೆ. ಅಪ್ರಾಮಾಣ್ಯ ಶಂಕಾರಹಿತವಾಗಿದೆ. ಪ್ರತ್ಯಕ್ಷದ ಬೆಂಬಲವಿಲ್ಲದ ಕೇವಲ ವಿಜಾತೀಯ ಪ್ರಮಾಣದಿಂದ ಅದು ಬಾಧಿತವಾಗುವುದಿಲ್ಲ' ಎನ್ನುವುದು ಸತ್ಯ.

**ತದುಕ್ತಂ ''ನಹಿ ದೃಷ್ಟಸ್ಯ ವಸ್ತುನೋ ಬಲವದ್‌ದೃಷ್ಟಿಂ ವಿನಾ ಅನ್ಯದ್‌ಬಾಧಕಮ್'' ಇತಿ।**

**ಉಕ್ತಂ ಚ ವಿವರಣೇಽಪಿ—**

**''ಯತ್ರಾವಿಚಾರಪುರಸ್ಸರಮೇವ ಪ್ರತ್ಯಕ್ಷಾವಭಾಸಮಪ್ಯನುಮಾನಾದಿನಾ ಬಾಧಿತ ಮುಚ್ಛಿನ್ನವ್ಯವಹಾರಂ ಭವತಿ ತತ್ರ ತಥಾ ಭವತು। ಯತ್ರ ಪುನರ್ವಿಚಾರಪದವೀಮುಪಾರೂಢಯೋರ್ಜ್ಞಾನಯೋಃ ಬಲಾಬಲಚಿಂತಯಾ ಬಾಧನಿಶ್ಚಯಃ ತತ್ರ ನಾನುಮಾನಾದಿನಾ ಪ್ರತ್ಯಕ್ಷಸ್ಯ ಮಿಥ್ಯಾತ್ವಸಿದ್ಧಿಃ''ಇತಿ ॥**

ಶ್ರೀಮದಾಚಾರ್ಯರು ತತ್ತ್ವೋದ್ಯೋತದಲ್ಲಿ ಹೇಳಿದ್ದಾರೆ— 'ಪ್ರತ್ಯಕ್ಷ ದೃಷ್ಟವಾದ ವಸ್ತುವಿಗೆ ಪ್ರಬಲವಾದ ಇನ್ನೊಂದು ಪ್ರತ್ಯಕ್ಷ ಹೊರತು ಬೇರೆ ಬಾಧಕವಿರುವುದಿಲ್ಲ ಎಂದು.

ವಿವರಣಕಾರನೂ ಹೇಳಿದ್ದಾನೆ— 'ಎರಡು ಜ್ಞಾನಗಳಲ್ಲಿ ಪ್ರಾಬಲ್ಯ ದೌರ್ಬಲ್ಯ ವಿಚಾರ ಮಾಡದಿದ್ದ ಸ್ಥಳದಲ್ಲಿ ಜ್ಞಾನವು ಪ್ರತ್ಯಕ್ಷರೂಪವೇ ಆದರೂ ಅನುಮಾನಾದಿಗಳಿಂದ ಅದು ಬಾಧಿತವಾಗಿ ಅರ್ಥಕ್ರಿಯಾದಲ್ಲಿ ಪ್ರವೃತ್ತಿ ಮಾಡದಿರುತ್ತದೆ. ಅಂಥ ಪ್ರತ್ಯಕ್ಷ ಸ್ಥಳದಲ್ಲಿ ಜ್ಞಾನವು ಹಾಗೇ ಬಾಧಿತವಿರಬಹುದು. ಆದರೆ ಪ್ರತ್ಯಕ್ಷ ಅನುಮಿತಿ ಜ್ಞಾನಗಳೆರಡನ್ನೂ ಪರೀಕ್ಷೆಗೆ ಒಳಪಡಿಸಿ ಬಲಾಬಲವಿಚಾರದಿಂದ ಬಾಧ ನಿಶ್ಚಯ ಮಾಡುವ ಸ್ಥಳದಲ್ಲಿ ಅನುಮಾನಾಗಮಗಳಿಂದ ಪ್ರತ್ಯಕ್ಷಕ್ಕೆ ಬಾಧ್ಯತ್ವವು ಸಿದ್ಧಿಸಲಾರದು' ಎಂದು.

ಕೆಲವರು ಹೇಳುತ್ತಾರೆ— ''ನಾನು ಬಿಳಿಯ'' ಎಂಬ ಪ್ರತ್ಯಕ್ಷದೊಂದಿಗೇ 'ನನ್ನ ಮೈ' ಎಂದೂ ಪ್ರತ್ಯಕ್ಷ ಬರುವುದು ಕಂಡಿದೆ. ದೂರದಲ್ಲಿ ಆಕಾಶ ನೀಲವಾಗಿ ಕಂಡಬಳಿಕ ಸಮೀಪದಲ್ಲಿ ರೂಪವಿಲ್ಲದಿರುವುದೂ ಕಂಡುಬರುತ್ತದೆ. ಚಂದ್ರಸೂರ್ಯರು ಉದಯಕಾಲದಲ್ಲಿ ದೊಡ್ಡ

ಗಾತ್ರದವರಾಗಿ ಬಳಿಕ ಸಣ್ಣ ಗಾತ್ರದವರಾಗಿ ಕಂಡುಬರುತ್ತಾರೆ. ಇಲ್ಲಿ ಎಲ್ಲಕಡೆ ಪರಸ್ಪರ ವಿರುದ್ಧ ವಿಷಯಕ ಪ್ರತೀತಿಗಳೆರಡು ಉಂಟಾದ ಬಳಿಕ ಇವುಗಳೆರಡರಲ್ಲಿ ಯಾವುದು ಸರಿ? ಎಂದು ಅಪ್ರಾಮಾಣ್ಯಶಂಕೆಯೇ ಬರುತ್ತದೆ. ಒಂದು ಇನ್ನೊಂದನ್ನು ಬಾಧಿಸುವುದು ಕಾಣುವುದಿಲ್ಲ. ಶಂಕಾನಂತರದಲ್ಲಿ ಬೇರೆ ಪ್ರಮಾಣವು ಪ್ರವೃತ್ತವಾಗುತ್ತದೆ' ಎಂದು.



# ಪ್ರತ್ಯಕ್ಷಸ್ಯ ಭಾವಿ ಬಾಧಕ ಶಂಕಾಭಂಗಃ

नापि भाविबाधकशङ्कामात्रेणेति तृतीयः । उक्तरीत्या लिङ्गशब्दयोरबाधकत्वात् । अक्षस्य चाप्रमाणतया शङ्क्यमानत्वात् । सर्वविशेषाभावे च सामान्यस्याप्यभावेन बाधकशङ्काया अनुदयात् । किञ्च त्वन्मते जाग्रदादिज्ञानस्याप्रमाणत्वेन स्वप्नादेर्बाधासिद्धौ कथं तद्दृष्टान्तेनान्यत्र तच्छङ्का । तदुक्तं वार्तिके बौद्धं प्रति

प्रतियोगिनि दृष्टे च जाग्रज्ज्ञाने मृषा भवेत् ।
स्वप्नादिबुद्धिरस्माकं तव भेदोऽपि किंकृतः ।। इति ।

अपिच भ्रमकालीनापरोक्षबुद्ध्यविषयविशेषविषयैव धीर्बाधिका, नच तव विश्वबाधिका धीस्तद्विषया ।

किञ्च सप्रकारैव धीर्बाधिका । निर्विकल्पिकायाः सप्रकारकभ्रमाविरोधित्वात्, नच ते(तव) विश्वबाधिका धीः सप्रकारिका । किञ्च न तावत्सा सप्रकारा । नापि निष्प्रकारा शब्दजन्येति वक्ष्यते । नच त्वन्मते सा शब्दान्यजन्या । किञ्च बाधिकाधीर्भ्रमस्य तद्धेतोरज्ञानस्य तद्दोषस्याध्यस्तस्य द्रष्टुश्च न बाधिकेति न भ्रमादिबाधो युक्तः । किञ्च दोषजन्यमेव बाध्यं । नच साक्षिप्रत्यक्षं तज्जन्यम् । अद्वैतज्ञाने तु श्रुतितात्पर्यभ्रमो दोषः । किञ्च बाधकतुल्यमानसंवादि न बाध्यम् । द्वैतप्रत्यक्षं चाद्वैतश्रुतितुल्यद्वैतश्रुतिसंवादि । किञ्च बाधकधीबोध्यं न बाध्यं । भेदश्च बाधकधीबोध्यः । तया च स्वविषयस्य भेदाभिन्नतयौदासीन्येन वा ग्रहे बाधकत्वायोगेन भिन्नतयैव ग्राह्यत्वात् । तस्मान्न बाधशङ्का युक्ता ।

---

अक्षस्य चेति । भाविबाधकत्वेन शङ्क्यमानाक्षस्यापि भाविबाधक-

शङ्काग्रहग्रस्तत्वेन तस्याबाधकत्वादिति भावः ।। **सर्वविशेषाभावे चेति ।।** यद्यप्यर्थापत्त्यादेर्निरासो न कृतः । तथापि तस्य यथायथं लिङ्गादिष्वेवान्तर्भावं निश्चित्यैवमुक्तमिति ध्येयम् । **बाधकशङ्कायाअनुदयादिति ।** किञ्चित् प्रमाणं बाधकं भविष्यतीति सामान्यतोऽपि शङ्कानुदयादित्यर्थः । ननु भाविबाधकग्रस्ततयापि शङ्क्यमानस्याक्षस्य भाविबाधकस्य भेदप्रत्यक्षे औचित्यावर्जितशङ्काधायकत्वं भविष्यतीत्येतावताप्यप्रामाण्यशङ्काकलङ्कितत्वेन न प्रत्यक्षबाधकत्वमित्यस्वरसादाह **किञ्चेति ।** ज्ञानत्वस्य साधारणत्वाज्ज्ञानात् न कुत्राप्यप्रामाण्यशङ्केति भावः । **प्रतियोगिनीति ।** विरोधिनीत्यर्थः । **तवेति ।** ज्ञानमात्राप्रामाण्यस्वीकर्तुरित्यर्थः । ननु व्यावहारिकप्रमात्वाश्रयस्य तात्विकप्रमात्वाश्रयबाध्यत्वेऽपि स्वप्नादिबाधकत्वं भवत्येव । स्वप्नादिज्ञानविषयसत्ताविरोधिसत्ताघटितप्रमात्वाश्रयत्वात् । किञ्चिज्ज्ञानस्य विषयात्यन्तासत्वमिदानीं गृह्यते कस्यचित्त्वन्यदेति ज्ञानत्वाच्छङ्का स्यादेवेत्यत आह **अपि चेति । नचेति ।** विश्वबाधकत्वेन त्वदभिमतबुद्धेः निर्विशेषचिन्मात्रविषयकत्वादिति भावः । ननु विशिष्टस्योपहितस्य वा कल्पितत्वेन शुद्धचैतन्यस्य भ्रमकालीनापरोक्षबुद्ध्यविषयत्वमेवेत्यस्वरसादाह **किञ्चेति । निर्विकल्पिकाया इति ।** सप्रकारकत्वेनैव ज्ञानस्य विरोधित्वदर्शनादिति भावः । **नचेति ।** अन्यथा अखण्डार्थत्वहानेरिति भावः । ननु विश्वबाधकबुद्धिः सप्रकारैव । नचैवमखण्डार्थत्वहानिः । तद्भिन्नाप्रकारत्वेनैवाखण्डार्थत्वोपपत्तेरित्यत आह **किञ्च न तावदिति ।** तद्भिन्नाप्रकारत्वेऽप्यखण्डार्थत्वहानिः स्यादेव । अन्यथा प्रमेयत्वे प्रमेयत्वं भेदो भिन्न इत्यादेरखण्डार्थत्वप्रसङ्ग इति भावः । नन्वेवं तर्हि निष्प्रकारिकैव सा बाधिकास्तु । बाधकत्वे विरोधिविषयत्वस्यैव तन्त्रत्वादित्यत आह **नापीति ।।** सा विश्वबाधिका धीः । नन्वन्यत्र बाधकज्ञानस्य भ्रमाद्यबाधकत्वेऽपि विश्वबाधकबुद्धेर्विश्वान्तर्गतभ्रमादिबाधकत्वं स्यादेवेत्यत आह **किञ्च दोषजन्यमेवेति ।** नच बाध्यत्वे दोषजन्यत्वमप्रयोजकं किन्त्वसद्विषयकत्वमेव तत्र प्रयोजकमिति वाच्यम् । क्लृप्तदोषजन्यत्वनिश्चयं विना असद्विषयत्वनिश्चयस्यैवायोगात् । नच बाधेनैवासद्विषयत्वनिश्चयः । पूर्वज्ञानस्य क्लृप्तदोषजन्यत्वनिश्चयं विना बाधकत्वाभिमते बाधकत्वस्यैव निश्चेतुमशक्यत्वादिति । ननु

दोषजन्यत्वं न बाध्यत्वे तन्त्रम् । निर्दोषश्रुतिजन्याद्वैतज्ञानस्य त्वया बाध्यत्वाभ्युपगमादित्यत आह **अद्वैतज्ञानेत्विति ।। किञ्च बाधकेति ।** बाधकत्वाभिमतेत्यर्थः ।। **बाध धीबोध्यमिति ।।** बाधकज्ञानविदितमित्यर्थः ।। **तयेति ।।** बाधकधियेत्यर्थः ।। **भेदाभिन्नतयेति ।।** बाध्यत्वाभिमतेनाभिन्नतयेत्यर्थः । भेदपदं तु प्रकृताभिप्रायम् ।



**ನಾಪಿ ಭಾವಿಬಾಧಕಶಂಕಾಮಾತ್ರೇಣೇತಿ ತೃತೀಯಃ । ಉಕ್ತರೀತ್ಯಾ ಲಿಂಗಶಬ್ದ-ಯೋರಬಾಧಕತ್ವಾತ್ ಅಕ್ಷಸ್ಯಾಪ್ರಮಾಣತಯಾ ಶಂಕ್ಯಮಾನತ್ವಾತ್ ಸರ್ವವಿಶೇಷಾಭಾವೇ ಚ ಸಾಮಾನ್ಯಸ್ಯಾಪ್ಯಭಾವೇನ ಬಾಧಕಶಂಕಾಯಾ ಅನುದಯಾತ್ ।**

ಹಿಂದೆ 'ಪ್ರತ್ಯಕ್ಷಸ್ಯ ಜಾತ್ಯಾ ಉಪಕ್ರಮಾದಿ ನ್ಯಾಯೈಶ್ಚ ಪ್ರಾಬಲ್ಯಂ' ಎಂಬ ಪ್ರಕರಣದಲ್ಲಿ ಪ್ರತ್ಯಕ್ಷವು ಆತ್ಯಂತಿಕ ಅಬಾಧ್ಯತ್ವಗ್ರಾಹಿಯಾಗಲಾರದು, ತಾತ್ಕಾಲಿಕಾಬಾಧ್ಯತ್ವವು ಶುಕ್ತಿರಜತಕ್ಕೂ ಇರುವುದರಿಂದ ಪ್ರಪಂಚಕ್ಕೂ ಹಾಗೇ ತಾತ್ಕಾಲಿಕ ಅಬಾಧ್ಯತ್ವವನ್ನೇ ಪ್ರತ್ಯಕ್ಷವು ಗ್ರಹಿಸುತ್ತದೆ ಎಂದರೆ ಗ್ರಹಿಸಲಿ, ನಮಗೆ ಅದು ಒಪ್ಪಿಗೆಯೇ ಎಂದು ಅದ್ವೈತಿ ಹೇಳಿದ್ದಾನೆ. ಇದರ ಅಭಿಪ್ರಾಯವೇನು?

ಪ್ರತ್ಯಕ್ಷವು ಅಪ್ರಮಾಣವೆಂದೆ?

ಪ್ರಮಾಣವಾದರೂ ವರ್ತಮಾನ ಮಾತ್ರ ಗ್ರಾಹಿಯಾದ್ದರಿಂದ ತ್ರಿಕಾಲಾಬಾಧ್ಯತ್ವವನ್ನು ಪ್ರತ್ಯಕ್ಷವು ಗ್ರಹಿಸಲಾರದೆಂದೆ?

ಪ್ರತ್ಯಕ್ಷವು ಅಪ್ರಮಾಣ ಎನ್ನುವ ಪ್ರಥಮ ಪಕ್ಷದಲ್ಲಿ ಕೇಳುತ್ತೇವೆ—

ಪ್ರತ್ಯಕ್ಷಕ್ಕೆ ಸ್ವತಃ ಪ್ರಾಪ್ತವಾಗಿರುವ ತತ್ವಾವೇದಕತ್ವರೂಪ ಪ್ರಾಮಾಣ್ಯವನ್ನು ಏಕೆ ಬಿಡಬೇಕು?

ಅನುಮಾನ ವಿರೋಧವಿರುವುದರಿಂದಲೆ? ಆಗಮ ವಿರೋಧವಿರುವುದರಿಂದಲೆ? ಅಥವಾ ಭಾವಿಬಾಧಕ ಶಂಕಾಮಾತ್ರವಿರುವುದರಿಂದಲೆ?

ಎಂದು ಮೂರು ವಿಕಲ್ಪಮಾಡಿ ಎರಡನ್ನು ಇಷ್ಟರವರೆಗೆ ನಿರಾಸ ಮಾಡಿದ್ದಾಯಿತು. ಇದೀಗ ಮೂರನೆ ವಿಕಲ್ಪ, 'ಭಾವಿ ಬಾಧಕ ಶಂಕಾಮಾತ್ರದಿಂದ ಪ್ರತ್ಯಕ್ಷವು ಅಪ್ರಮಾಣ' ಎಂದು.

ಇದೂ ಸರಿಯಲ್ಲ. ಏಕೆಂದರೆ ಭಾವಿಬಾಧಕವು ಲಿಂಗವಿರಬಹುದು, ಶಬ್ದವಿರಬಹುದು ಅಥವಾ ಪ್ರತ್ಯಕ್ಷವಿರಬಹುದು. ಇನ್ನು ಬೇರೆ ಪ್ರಮಾಣವೆಂಬುದಿಲ್ಲ. ಈ ಮೂರರಲ್ಲಿ ಲಿಂಗ ಮತ್ತು ಶಬ್ದಗಳು ಪ್ರತ್ಯಕ್ಷಕ್ಕೆ ಬಾಧಕವಲ್ಲ ಎಂದು ಇಷ್ಟರವರೆಗೆ ಹೇಳಿದ್ದಾಯಿತು. 'ಪ್ರತ್ಯಕ್ಷವು ಪ್ರಮಾಣವೇ ಅಲ್ಲ. ಏಕೆಂದರೆ ಅದು ಭಾವಿಬಾಧಕ ಗ್ರಸ್ತವಾಗಿದೆ ಎಂದು ಅದ್ವೈತಿಯೇ ಹೇಳುತ್ತಿರುವುದರಿಂದ ಪ್ರತ್ಯಕ್ಷವೂ ಭಾವಿಬಾಧಕವಾಗಿರ ಲಾರದು. ಹೀಗಾಗಿ 'ಭಾವಿಬಾಧಕ ಒಂದು ಇರಬಹುದೆಂ'ದು

ಸಾಮಾನ್ಯವಾಗಿ ಶಂಕೆ ಮಾಡಲಾಗದು. ಪ್ರಮಾಣ ವಿಶೇಷಗಳು ಮೂರೇ. ಅರ್ಥಾಪತ್ತ್ಯಾದಿಗಳು ಮೂರರಲ್ಲೇ ಅಂತರ್ಭೂತವಾಗುವುವು. ಮೂರೂ ಬಾಧಕವಲ್ಲವೆಂದ ಮೇಲೆ ಇನ್ನು ಬೇರೆ ಪ್ರಮಾಣ ಸಾಮಾನ್ಯವೆಂಬುದು ಇರುವುದು ಶಕ್ಯವಿಲ್ಲ. ಅದರಿಂದ ಮುಂದೆ ಅದು ಭವಿಷ್ಯತ್‌ಕಾಲದಲ್ಲಿ ಪ್ರತ್ಯಕ್ಷಕ್ಕೆ ಬಾಧಕವಾಗಿ ಬಂದೀತೆಂದು ಶಂಕೆ ಮಾಡುವುದೇ ಸರಿಯಲ್ಲ.

**ಕಿಂಚ ತ್ವನ್ಮತೇ ಜಾಗ್ರದಾದಿ ಜ್ಞಾನಸ್ಯ ಅಪ್ರಮಾಣತ್ವೇನ ಸ್ವಪ್ನಾದೇಃ ಬಾಧಾಸಿದ್ಧೌ ಕಥಂ ತದ್‌ದೃಷ್ಟಾಂತೇನ ಅನ್ಯತ್ರ ತಚ್ಛಂಕಾ? ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ—**

**ಪ್ರತಿಯೋಗಿನಿ ದೃಷ್ಟೇ ಚ ಜಾಗ್ರಜ್ಞಾನೇ ಮೃಷಾ ಭವೇತ್ ।**
**ಸ್ವಪ್ನಾದಿ ಬುದ್ಧಿರಸ್ಮಾಕಂ ತವ ಭೇದೋऽಪಿ ಕಿಂಕೃತಃ ? ಇತಿ ।**

'ಭಾವಿಬಾಧಕಪ್ರತ್ಯಕ್ಷವೂ ಕೂಡ ಭಾವಿಬಾಧಕ ಶಂಕಾಗ್ರಸ್ತವೇ ಆದರೂ, ಅದೂ ಭೇದಪ್ರತ್ಯಕ್ಷದಲ್ಲಿ ಬಾಧಕವಾಗುವುದು ಉಚಿತವೇ ಎನ್ನುವ ಶಂಕಾಕಲಂಕಿತವಾದ್ದರಿಂದ ಪ್ರತ್ಯಕ್ಷಕ್ಕೆ ಬಾಧಕವಾದೀತು' ಎಂದು ಅದ್ವೈತಿ ಹೇಳಿದರೆ ಹೇಳುತ್ತಾರೆ—

ನಿನ್ನ ಮತದಲ್ಲಿ ಜಾಗರಜ್ಞಾನವೂ ಅಪ್ರಮಾಣ. ಅದರಿಂದ ಸ್ವಪ್ನಕ್ಕೆ ಬಾಧಕವಾಗಿ ಜಾಗರಜ್ಞಾನವನ್ನು ನೀನು ತೋರಿಸುವಂತಿಲ್ಲ. ಸ್ವಪ್ನಜ್ಞಾನ ಅಬಾಧಿತ. ಸ್ವಪ್ನಜ್ಞಾನದಲ್ಲಿ ಹೀಗೆ ಜ್ಞಾನತ್ವಕ್ಕೆ ಅಪ್ರಮಾಣಸಾಧಾರಣ್ಯಶಂಕಾ ಸಂಭವವಿಲ್ಲವೆಂದಮೇಲೆ ಜ್ಞಾನತ್ವೇನ ಜ್ಞಾನ ಸಾಮಾನ್ಯ ದಲ್ಲಿ ಸ್ವಪ್ನಜ್ಞಾನ ದೃಷ್ಟಾಂತದಿಂದ ಅಪ್ರಾಮಾಣ್ಯವನ್ನು ಶಂಕಿಸುವುದು ಹೇಗೆ ಸಾಧ್ಯ? ಭಟ್ಟವಾರ್ತಿಕದಲ್ಲಿ ಬೌದ್ಧನಿಗೆ ಹೀಗೆ ಹೇಳಿದ್ದಾರೆ—

'ಸ್ವಾಪ್ನಗಜ ಸತ್ವಜ್ಞಾನಕ್ಕೆ ವಿರೋಧಿಯಾದ ಜಾಗರ ಗಜಾಭಾವ ಜ್ಞಾನವು ಪ್ರಮಾಣವೆಂದು ನಮಗೆ ನಿಶ್ಚಿತವಾಗಿರುವುದರಿಂದ ನಾವು 'ಸ್ವಪ್ನಜ್ಞಾನವು ಜಾಗರಜ್ಞಾನದಿಂದ ಬಾಧಿತವಾಗಿ ಅಪ್ರಮಾಣವೇ ಆಗಿದೆ' ಎನ್ನುತ್ತೇವೆ. ನಿನ್ನ ಮತದಲ್ಲಿ ಜ್ಞಾನವು ಯಾವುದೂ ಪ್ರಮಾಣವಲ್ಲವೆಂದ ಮೇಲೆ 'ಜಾಗರಜ್ಞಾನ ಬಾಧಕ, ಸ್ವಪ್ನಜ್ಞಾನ ಬಾಧ್ಯ' ಎನ್ನುವ ಭೇದ ಹೇಗೆ ಸಿದ್ಧವಾದೀತು?' ಎಂದು. ಬೌದ್ಧನಂತೆಯೇ ನೀನೂ 'ಜ್ಞಾನವೆಲ್ಲವೂ ಅಪ್ರಮಾಣ' ಎನ್ನುವುದರಿಂದ, ಅವನಿಗೆ ವಾರ್ತಿಕದಲ್ಲಿ ಹೇಳಿದ ದೋಷವು ನಿನಗೂ ಸಮಾನ.

**ಅಪಿ ಚ ಭ್ರಮಕಾಲೀನ ಅಪರೋಕ್ಷ ಬುದ್ಧ್ಯವಿಷಯ ವಿಶೇಷ ವಿಷಯೈವ ಧೀಃ ಬಾಧಿಕಾ । ನ ಚ ತವ ವಿಷಯ ಬಾಧಿಕಾ ಧೀಃ ತದ್ ವಿಷಯಾ ।**

ಇಲ್ಲಿ ಅದ್ವೈತಿ ಹೇಳುತ್ತಾನೆ— 'ವ್ಯಾವಹಾರಿಕ ಪ್ರಾಮಾಣ್ಯಉಳ್ಳ ಜ್ಞಾನವು ತಾತ್ವಿಕ ಪ್ರಾಮಾಣ್ಯಉಳ್ಳ ಜ್ಞಾನದಿಂದ ಬಾಧ್ಯವಾದರೂ ಅದು ಸ್ವಪ್ನಾದಿಜ್ಞಾನಕ್ಕೆ ಬಾಧಕವಾಗಬಹುದು. ಸ್ವಾಪ್ನವಿಷಯಸತ್ತಾಕ್ಕೆ ವಿರೋಧಿಯಾದ ವ್ಯಾವಹಾರಿಕಸತ್ತಾಘಟಿತವಾದ ಪ್ರಾಮಾಣ್ಯವು ಜಾಗರಜ್ಞಾನದಲ್ಲಿ ಇರುವುದರಿಂದ ನಾವು ಹೀಗೆ ಹೇಳುತ್ತೇವೆ. ಕೆಲವು ಜ್ಞಾನಕ್ಕೆ ವಿಷಯವು

ಅತ್ಯಂತಾಸತ್ತೆಂದು ಈಗ, ಕೆಲವು ಜ್ಞಾನಕ್ಕೆ ಅದು ಮುಂದೆ, ತಿಳಿಯುತ್ತದೆ. ಜ್ಞಾನವೆಂದಮೇಲೆ ಅದರ ವಿಷಯ ಅತ್ಯಂತಾಸತ್ತಾಗಿರಲೇಬೇಕು' ಎಂದು. ಅದಕ್ಕೆ ಹೇಳುತ್ತಾರೆ—

ಭ್ರಮಕಾಲದ ಪ್ರತ್ಯಕ್ಷಜ್ಞಾನದಲ್ಲಿ ಕಾಣದಿರುವ ವಿಶೇಷ ವಿಷಯಉಳ್ಳ ಜ್ಞಾನವೇ ಭ್ರಮಕ್ಕೆ ಬಾಧಕವಾಗುವುದು. ಶುಕ್ತಿರಜತ ಭ್ರಮಕಾಲದಲ್ಲಿ ಕಾಣದಿರುವ ಶುಕ್ತಿತ್ವ 'ಇದು ಶುಕ್ತಿ ಹೊರತು ರಜತವಲ್ಲ' ಎಂದು ಬಾಧಕಜ್ಞಾನದಲ್ಲಿ ಕಾಣುತ್ತದೆ. ಆದರೆ ಅದ್ವೈತಿಯು ಹೇಳುವ ಪ್ರಪಂಚ ಭ್ರಮದಲ್ಲಿ 'ಸನ್‌ಘಟಃ' ಎಂದು ಸದಂಶದಲ್ಲಿ ಸತ್ಯವಾದ ಬ್ರಹ್ಮ ಕಾಣುತ್ತದೆ. ಅದೇ ಬ್ರಹ್ಮವು ಬಾಧಕವಾದ ಬ್ರಹ್ಮಾಪರೋಕ್ಷದಲ್ಲಿ ಕಾಣುತ್ತದೆ ಹೊರತು ಭ್ರಮದಲ್ಲಿ ಕಾಣದ ಯಾವ ಅಂಶವೂ ಬಾಧಕಜ್ಞಾನದಲ್ಲಿ ಕಾಣುವುದಿಲ್ಲ. ಅದರಿಂದ ಅದು ಬಾಧಕವಾಗಲಾರದು. ವಿಶ್ವಬಾಧಕವೆಂದು ಅದ್ವೈತಿ ಹೇಳುವ ಜ್ಞಾನವು ಕೇವಲ ನಿರ್ವಿಶೇಷ ಚಿನ್ಮಾತ್ರ ವಿಷಯಕವಾಗಿದೆ.

**ಕಿಂಚ ಸಪ್ರಕಾರೈವ ಧೀರ್ಬಾಧಿಕಾ । ನಿರ್ವಿಕಲ್ಪಿಕಾಯಾಃ ಸಪ್ರಕಾರಕ ಭ್ರಮಾವಿರೋಧಿತ್ವಾತ್ । ನ ಚ ತೇ ವಿಶ್ವಬಾಧಿಕಾ ಧೀಃ ಸಪ್ರಕಾರಿಕಾ ।**

'ವಿಶಿಷ್ಟವಾಗಲಿ ಉಪಹಿತವಾಗಲಿ ಕಲ್ಪಿತವಾಗಿರುವುದರಿಂದ ಭ್ರಮದಲ್ಲಿ ಕಾಣುತ್ತದೆ. ಶುದ್ಧಚೈತನ್ಯ ಕಾಣುವುದಿಲ್ಲ. ಭ್ರಮಕಾಲೀನ ಅಪರೋಕ್ಷ ಬುಧ್ಯವಿಷಯವಾದ ಶುದ್ಧಚೈತನ್ಯದ ನಿಷ್ಪ್ರಕಾರಕ ಜ್ಞಾನವೇ ಬಾಧಕ ಎನ್ನುತ್ತೇನೆ' ಎಂದು ಹೇಳಿದರೆ ಅದು ತಪ್ಪು. ಜ್ಞಾನವು ಸಪ್ರಕಾರಕವಾದರೆ ಮಾತ್ರ, ಭ್ರಮವಿರೋಧಿ ಪ್ರಕಾರ ಪ್ರಕಾರಕವಾದರೆ ಮಾತ್ರ, ಭ್ರಮಕ್ಕೆ ವಿರೋಧಿ ಯಾಗುವುದು ಕಂಡಿದೆ. ನಿರ್ವಿಕಲ್ಪಕ ಜ್ಞಾನ ಧರ್ಮಿಮಾತ್ರ ವಿಷಯಕವಾದ್ದರಿಂದ ಭ್ರಮಕ್ಕೆ ವಿರೋಧಿ ಯಲ್ಲ. ಆದರೆ ನೀನು ಹೇಳುವ ವಿಶ್ವಬಾಧಕಜ್ಞಾನವು ಸಪ್ರಕಾರಕವಲ್ಲ. ಸಪ್ರಕಾರಕವೆಂದು ಒಪ್ಪಿದರೆ ಅಖಂಡಾರ್ಥ ವಿಷಯಕತ್ವಕ್ಕೆ ಭಂಗ ಬರುತ್ತದೆ.

**ಕಿಂಚ ನ ತಾವತ್ ಸಾ ಸಪ್ರಕಾರಾ । ನಾಪಿ ನಿಷ್ಪ್ರಕಾರಾ ಶಬ್ದಜನ್ಯಾ ಇತಿ ವಕ್ಷ್ಯತೇ । ನ ಚ ತನ್ಮತೇ ಸಾ ಶಬ್ದಾನ್ಯಜನ್ಯಾ ।**

'ವಿಶ್ವಬಾಧಕಜ್ಞಾನವು ಸಪ್ರಕಾರವೆ. 'ಸಪ್ರಕಾರಕವೆಂದೊಪ್ಪಿದರೆ ಅಖಂಡಾರ್ಥತ್ವಕ್ಕೆ ಹಾನಿ' ಎನ್ನಲಾಗದು. ಅಖಂಡಾರ್ಥಕ್ಕಿಂತ ಭಿನ್ನವು ಪ್ರಕಾರವಾಗದಿದ್ದರೆ ಸಾಕು, ಅಖಂಡಾರ್ಥವಿಷಯಕ ವೆನಿಸುತ್ತದೆ' ಎಂದು ಹೇಳಿದರೆ, ಹೇಳುತ್ತೇವೆ, 'ಪ್ರಮೇಯತ್ವದಲ್ಲಿ ಪ್ರಮೇಯತ್ವವಿದೆ' 'ಭೇದವು ಭಿನ್ನವಾಗಿದೆ' ಇತ್ಯಾದಿ ಜ್ಞಾನದಲ್ಲಿಯೂ ಪ್ರಮೇಯತ್ವಭಿನ್ನಾಪ್ರಕಾರತ್ವ ಭೇದಭಿನ್ನಾಪ್ರಕಾರತ್ವ ಗಳಿರುವುದರಿಂದ ಅಖಂಡಾರ್ಥವಿಷಯತ್ವ ಪ್ರಸಂಗ ಬರುತ್ತದೆ.

'ಹಾಗಾದರೆ ನಿಷ್ಪ್ರಕಾರಕವು ಬಾಧಕವೆಂದಾಗಲಿ, ಬಾಧಕತ್ವಕ್ಕೆ ವಿರೋಧಿವಿಷಯಕತ್ವವು ಪ್ರಯೋಜಕ ಎನ್ನುತ್ತೇನೆ' ಎಂದರೆ, ಬಾಧಕ ಜ್ಞಾನವು ನಿಷ್ಪ್ರಕಾರವಾದರೆ ಶಬ್ದ ಜನ್ಯವಾಗಲು ಶಕ್ಯವಿಲ್ಲ. ಶಬ್ದದಿಂದ ಪದಾರ್ಥಸಂಸರ್ಗಪ್ರತಿಯೋಗಿತಾವಚ್ಛೇದಕ ಪ್ರಕಾರಕವಾದ ಶಾಬ್ದಬೋಧವೇ

ಬರುತ್ತದೆ. ನಿಷ್ಪ್ರಕಾರಕಜ್ಞಾನ ಬರುವುದಿಲ್ಲ ಎಂದು ನಾವು ಮುಂದೆ ಹೇಳುತ್ತೇವೆ. ಅದನ್ನು ಶಬ್ದಾನ್ಯಜನ್ಯವೆಂದು ನಿನ್ನ ಮತದಲ್ಲಿಯೇ ಒಪ್ಪಿಲ್ಲ. ಇಂಥ ಒಂದು ವಿಶ್ವಭ್ರಮಬಾಧಕವು ಮುಂದೆ ಎಂದಾದರೂ ಬಂದೀತೆಂದು ನೀನು ಹೇಗೆ ಶಂಕಿಸುವೆ?

**ಕಿಂಚ ಬಾಧಿಕಾ ಧೀಃ ಭ್ರಮಸ್ಯ, ತದ್ಧೇತೋರಜ್ಞಾನಸ್ಯ ತದ್ದೋಷಸ್ಯ ಅಧ್ಯಸ್ತಸ್ಯ ದ್ರಷ್ಟುಶ್ಚ ನ ಬಾಧಿಕಾ ಇತಿ ನ ಭ್ರಮಾದಿಬಾಧೋ ಯುಕ್ತಃ।**

ಬಾಧಕಜ್ಞಾನವು ಭ್ರಮಕ್ಕೂ ಅದಕ್ಕೆ ಹೇತುವಾದ ಅಜ್ಞಾನಕ್ಕೂ ಅದರ ದೋಷಕ್ಕೂ ಆರೋಪಿತಕ್ಕೂ ಅದನ್ನು ಕಲ್ಪಿಸುವವನಿಗೂ ಬಾಧಕವಾಗುವುದು ಅಸಂಭವ. ಅದರಿಂದ ಭ್ರಮಾದಿಗಳಿಗೆ ಬಾಧಕವೆಂದು ಶಂಕಿಸುವುದು ಅಯುಕ್ತ.

**ಕಿಂಚ ದೋಷಜನ್ಯಮೇವ ಬಾಧ್ಯಂ। ನ ಚ ಸಾಕ್ಷಿಪ್ರತ್ಯಕ್ಷಂ ತಜ್ಜನ್ಯಂ। ಅದ್ವೈತಜ್ಞಾನೇ ತು ಶ್ರುತಿತಾತ್ಪರ್ಯಭ್ರಮೋ ದೋಷಃ।**

'ಬಾಧಕಜ್ಞಾನ ಬೇರೆಡೆ ಭ್ರಮಾದಿ ಭಾದಕವಾಗದಿದ್ದರೂ ಪ್ರಕೃತ ವಿಶ್ವಬಾಧಕಜ್ಞಾನ ಭ್ರಮಾದಿ ಸರ್ವಬಾಧಕವೆ' ಎನ್ನಬೇಕು. ದೋಷಜನ್ಯಜ್ಞಾನವೇ ಬಾಧ್ಯವಾಗುವುದು. ಸತ್ಯವಿಷಯದಲ್ಲಿ ಸಾಕ್ಷಿಪ್ರತ್ಯಕ್ಷವು ದೋಷಜನ್ಯವಲ್ಲ. ಏಕೆಂದರೆ ಸಾಕ್ಷಿ ಅಜನ್ಯ ಬಾಧ್ಯವಾಗದು. ಯದ್ಯಪಿ ಅಜನ್ಯವಾದ ಶ್ರುತಿಯಿಂದ ಅದ್ವೈತಜ್ಞಾನ ಬರುತ್ತದೆ. ಆದರೆ ಅದು ಶ್ರುತಿತಾತ್ಪರ್ಯಭ್ರಮರೂಪ ದೋಷಜನ್ಯ. ಅದರಿಂದ ಬಾಧ್ಯವಾಗುವುದು.

'ಬಾಧ್ಯತ್ವಕ್ಕೆ ದೋಷಜನ್ಯತ್ವವು ಪ್ರಯೋಜಕವಲ್ಲ, ವಿಷಯ ಅಸತ್ತಾಗಿರುವುದೇ ಪ್ರಯೋಜಕ' ಎನ್ನಬಾರದು. ಕ್ಲಪ್ತದೋಷಜನ್ಯತ್ವ ನಿಶ್ಚಯವಿಲ್ಲದಿದ್ದರೆ 'ವಿಷಯ ಅಸತ್ತೆ'ಂಬ ನಿಶ್ಚಯವೇ ಉಂಟಾಗಲಾರದು. 'ಬಾಧದಿಂದಲೇ ವಿಷಯವು ಅಸತ್ತೆಂದು ನಿಶ್ಚಯವಾಗುತ್ತದೆ' ಎಂದೂ ಹೇಳಲಾಗದು. ಪೂರ್ವಜ್ಞಾನವು ಕ್ಲಪ್ತದೋಷಜನ್ಯವಾಗಿದೆ ಎನ್ನುವ ನಿಶ್ಚಯವಿಲ್ಲದೆ ಬಾಧಕಜ್ಞಾನವನ್ನು ಬಾಧಕವೆಂದು ನಿಶ್ಚಯಿಸುವುದೇ ಶಕ್ಯವಿಲ್ಲ.

'ದೋಷಜನ್ಯತ್ವವು ಬಾಧ್ಯತ್ವಕ್ಕೆ ಪ್ರಯೋಜಕವೆಂದು ನೀವು ಹೇಗೆ ನಿಶ್ಚಯಿಸಿದಿರಿ? ನಿರ್ದೋಷಶ್ರುತಿಜನ್ಯವಾದ ಅದ್ವೈತಜ್ಞಾನವನ್ನು ಬಾಧ್ಯವೆಂದು ನೀವೇ ಹೇಳುವಿರಿ!' ಎಂದರೆ, ಅದ್ವೈತಜ್ಞಾನ ಜನಕವಾದ ಶ್ರುತಿಯಲ್ಲಿ ದೋಷವಿಲ್ಲದಿದ್ದರೂ, ಜ್ಞಾತೃವಾದ ಅದ್ವೈತಿಯಲ್ಲಿ 'ಶ್ರುತಿಗೆ ಅದ್ವೈತದಲ್ಲಿಯೇ ತಾತ್ಪರ್ಯವಿದೆ' ಎನ್ನುವ ಭ್ರಮರೂಪ ದೋಷವಿದೆ, ಅದರಿಂದ ಅದ್ವೈತಜ್ಞಾನವು ದೋಷಜನ್ಯವೆಂದಿದ್ದೇವೆ. ಅದರಿಂದ ಬಾಧ್ಯತ್ವಕ್ಕೆ ದೋಷಜನ್ಯತ್ವವು ಪ್ರಯೋಜಕವೆ.

**ಕಿಂಚ ಬಾಧಕ ತುಲ್ಯಮಾನ ಸಂವಾದಿ ನ ಬಾಧ್ಯಂ। ದ್ವೈತಪ್ರತ್ಯಕ್ಷಂ ಚ ಅದ್ವೈತ ಶ್ರುತಿತುಲ್ಯ ದ್ವೈತಶ್ರುತಿ ಸಂವಾದಿ।**

ಮತ್ತು ಬಾಧಕತುಲ್ಯ ಪ್ರಮಾಣಕ್ಕೆ ಸಂವಾದಿಯಾದುದು ಬಾಧ್ಯವಾಗದು. ಬಾಧಕವೆಂದು ಅಭಿಮತವಾದ ಅದ್ವೈತಶ್ರುತಿಗೆ ತುಲ್ಯವಾದ ಪ್ರಮಾಣವು ದ್ವೈತಶ್ರುತಿ. ಅದಕ್ಕೆ ದ್ವೈತಪ್ರತ್ಯಕ್ಷವು ಸಂವಾದಿಯಾಗಿದೆ. ಅದರಿಂದ ಅದು ಬಾಧ್ಯವಾಗಲಾರದು. ದ್ವೈತ ಶ್ರುತಿಯು ಪ್ರತ್ಯಕ್ಷಸಿದ್ಧದ್ವೈತಾನುವಾದಕವೆನ್ನುವುದಾದರೆ ಅದ್ವೈತಶ್ರುತಿಯೂ ಅನುಮಾನಸಿದ್ಧವಾದ ದ್ವಿತೀಯಾಭಾವಾನುವಾದಕವೆನ್ನಲು ಬರುತ್ತದೆ.

**ಕಿಂಚ ಬಾಧಕ ಧೀಬೋಧ್ಯಂ ನ ಬಾಧ್ಯಂ, ಭೇದಶ್ಚ ಬಾಧಕಧೀಬೋಧ್ಯಃ। ತಯಾ ಚ ಸ್ವವಿಷಯಸ್ಯ ಭೇದಾಭಿನ್ನತಯಾ ಔದಾಸೀನ್ಯೇನ ವಾ ಗ್ರಹೇ ಬಾಧಕತ್ವಾಯೋಗೇನ ಭಿನ್ನತಯೈವ ಗ್ರಾಹ್ಯತ್ವಾತ್। ತಸ್ಮಾನ್ನ ಬಾಧಶಂಕಾ ಯುಕ್ತಾ।**

ಮತ್ತು ಬಾಧಕಜ್ಞಾನದಲ್ಲಿ ಗೋಚರವಾಗುವ ವಿಷಯವು ಬಾಧ್ಯವಾಗುವುದಿಲ್ಲ. ಉದಾ: ಅಧಿಷ್ಠಾನ. ಅಧಿಷ್ಠಾನದಂತೆಯೇ 'ನೇದಂ ರಜತಂ' ಎಂದು ಭೇದವೂ ಬಾಧಕಜ್ಞಾನದಲ್ಲಿ ಗೋಚರವಾಗುತ್ತದೆ. ಅದು ಬಾಧ್ಯವಾಗಲಾರದು. ಪ್ರಪಂಚಬಾಧಕಜ್ಞಾನದಲ್ಲಿ ಗೋಚರವಾಗುವ ಬ್ರಹ್ಮವಾಗಲಿ ಅಭೇದವಾಗಲಿ, ಬಾಧ್ಯವಾದ ಭೇದದಿಂದ ಅಭಿನ್ನವಾಗಿಯಾಗಲಿ, ಔದಾಸೀನ್ಯ ದಿಂದಾಗಲಿ, ಅಂದರೆ, ಭೇದವನ್ನಾಗಲಿ ಅಭೇದವನ್ನಾಗಲಿ ಗ್ರಹಿಸದೆ ಕೇವಲ ಬಾಧ್ಯವಾದ ಬ್ರಹ್ಮವಾಗಲಿ ಅಭೇದವಾಗಲಿ ಮಾತ್ರ ಕಾಣುತ್ತಿದ್ದರೆ, ಬಾಧಕಜ್ಞಾನವು ಬಾಧಕವೇ ಆಗಲಾರದು. ಅದರಿಂದ ಬ್ರಹ್ಮ ಮತ್ತು ಅಭೇದಗಳು ಬಾಧ್ಯವಾದ ಭೇದದಿಂದ ಭಿನ್ನವೆಂದೇ ಗೃಹೀತವಾಗಬೇಕು ಎಂದಮೇಲೆ ಭೇದವು ಬಾಧ್ಯವಾಗುವುದೆಂತು?

'ಇದಂ ರಜತಂ' ಎಂಬ ಭ್ರಮಕ್ಕೆ 'ಇಯಂ ಶುಕ್ತಿಃ' ಎಂದೇ ಬಾಧಕಜ್ಞಾನ. 'ನೇದಂ ರಜತಂ' ಎಂಬ ಜ್ಞಾನವು ಇಯಂ ಶುಕ್ತಿಃ' ಎಂಬ ಜ್ಞಾನದ ಫಲವಷ್ಟೆ. ಅದರಿಂದ ಅದು ಬಾಧಕವಲ್ಲ. ಬಾಧಕವಾದ 'ಇಯಂ ಶುಕ್ತಿಃ' ಎಂಬ ಜ್ಞಾನವು ಭೇದವನ್ನು ಗ್ರಹಿಸುತ್ತಿಲ್ಲ'–ಹೀಗೆ ಹೇಳುವುದು ಸರಿಯಲ್ಲ. 'ನೇದಂ ರಜತಂ' ಎಂಬ ಜ್ಞಾನವು ಅನುಮಿತಿ ರೂಪವಲ್ಲ. 'ಇಯಂ ಶುಕ್ತಿಃ' ಎಂಬ ಜ್ಞಾನದ ಬಲದಿಂದ ಅದು ಅನುಮಿತಿರೂಪವಾಗಿ ಬಂದಿದ್ದರೆ ಅದನ್ನು ಫಲವೆನ್ನಬಹುದಿತ್ತು. 'ಇಯಂ ಶುಕ್ತಿಃ' ಎಂಬ ಜ್ಞಾನವು ವಿಶೇಷ ದರ್ಶನ ಜನ್ಯವಾದ್ದರಿಂದ ಅವಧಾರಣಾತ್ಮಕವಾಗಿದ್ದು, 'ಶುಕ್ತಿರೇವ, ನ ರಜತಂ' ಎಂದು ಭೇದವಿಷಯಕವಾಗಿಯೇ ಬಂದಿರುತ್ತದೆ. ರಜತಸ್ಮೃತಿ ಉಳ್ಳವನಿಗೆ ಪ್ರತ್ಯಕ್ಷದಿಂದಲೇ 'ನೇದಂ ರಜತಂ' ಎಂಬ ಆಕಾರವಾಗಿಯೇ ಬಂದಿರುತ್ತದೆ. ಮತ್ತು ಅದ್ವೈತಿಯು ಅದ್ವೈತಶ್ರುತಿಗೆ ಅವಿರುದ್ಧವಾಗಿ ಪ್ರಮಾತ್ವೇನ ನಿಶ್ಚಿತವಾಗಿರುವ ನೇದಂ ರಜತಂ ಎಂಬ ಜ್ಞಾನವನ್ನೇ ಬಾಧಕವೆಂದು ಸ್ವೀಕರಿಸಬೇಕು ಹೊರತು 'ಇಯಂ ಶುಕ್ತಿ' ಎಂದಲ್ಲ. ಅದು ಅದ್ವೈತ ಶ್ರುತಿಗೆ ವಿರುದ್ಧವಾಗಿದ್ದು ಅಪ್ರಮಾತ್ವೇನ ನಿಶ್ಚಿತವಾಗಿರುವುದರಿಂದ ಬಾಧಕವಾಗಲು ಯೋಗ್ಯವಲ್ಲ.

'ವ್ಯಾವೃತ್ತಾಕಾರ ವಿಷಯತ್ವೇನ ಅಥವಾ ಅಸಾಧಾರಣಧರ್ಮವಿಷಯತ್ವೇನ ಬಾಧಕಜ್ಞಾನವು ಬಾಧಕವಾದೀತು, ಭೇದವಿಷಯತ್ವವು ಅನಾವಶ್ಯಕ'—ಎನ್ನುವುದೂ ಸರಿಯಲ್ಲ. ವ್ಯಾವೃತ್ತಾಕಾರ

ವಿಷಯತ್ವವೂ ಅಸಾಧಾರಣಧರ್ಮ ವಿಷಯತ್ವವೂ ಭೇದವಿಷಯತ್ವವಿಲ್ಲದೆ ಕೂಡುವುದೇ ಇಲ್ಲ. ಪ್ರಪಂಚಬಾಧಕವಾದ ಬ್ರಹ್ಮಜ್ಞಾನದಲ್ಲಿ ವ್ಯಾವೃತ್ತಾಕಾರ ಅಸಾಧಾರಣಧರ್ಮ ವಿಷಯತ್ವ ವಿರುವುದೂ ಇಲ್ಲ. ಹೀಗಾಗಿ ಭೇದವಿಷಯಕತ್ವವಿಲ್ಲದ ಬ್ರಹ್ಮಜ್ಞಾನವು ಬಾಧಕವಾಗದಿರುವುದರಿಂದ ಬೇರೆ ಬಾಧಕವಿಲ್ಲದಿರುವುದರಿಂದ ಪ್ರತ್ಯಕ್ಷದಲ್ಲಿ ಬಾಧ್ಯತ್ವವ್ಯಾಪಕ ನಿವೃತ್ತಿಯಿಂದ ವ್ಯಾಪ್ಯವಾದ ಬಾಧ್ಯತ್ವವು ನಿವೃತ್ತವಾಗುವ ಪ್ರಯುಕ್ತ ಭಾವಿಬಾಧಕಶಂಕೆಯು ಅಯುಕ್ತ.



कथंचेयं शङ्का? रूप्यादिबाधेऽपि बाधकशङ्कापातेनाबाधितबाधरूपकोट्यप्रसिद्धेः । बाधितबाधशङ्कायाश्चाबाध्यत्वाविरोधित्वात् । भाविबाधेऽपि बाधशङ्कापातेन स्वव्याघाताच्च ।

तदुक्तं वार्तिके बौद्धं प्रति—
दुष्टज्ञानगृहीतार्थप्रतिषेधोऽपि युज्यते ।
गृहीतमात्रबाधे तु स्वपक्षोऽपि न सिध्यति ।। इति ।

नच धीमात्रे न बाधशङ्का किन्तु साक्षात्कार इति युक्तम् । विशेषहेत्वभावात् । वृत्तिरूपाद्वैतसाक्षात्कारे तत्प्रसङ्गाच्च । नापि शब्दाजन्यसाक्षात्कारे तच्छङ्का । मुक्तस्वरूपानंदसाक्षात्कारे तत्प्रसङ्गात् । वेदान्तजन्यधी प्रामाण्यग्राहि साक्षिप्रत्यक्षमप्यतत्वावेदकमेव तत्वावेदकत्वेन गृह्णातीति शङ्कया तत्वज्ञानाय वेदान्तश्रवणादिस्वक्रियाविरोधाच्च । शङ्काग्राहि साक्षिप्रत्यक्षमपि अशङ्कामेव शङ्कात्वेन गृह्णातीति शङ्कया स्वव्याघाताच्च । नापि शब्दान्य जन्य साक्षात्कारे तच्छङ्का । 'दशमस्त्वमसी'ति शब्दाभासजन्य साक्षात्कारेऽपि बाधदर्शनेन विशेषहेत्वभावात् । विश्वान्यप्रत्यक्ष एव तच्छङ्केति सुवचत्वाच्च । अद्वैतश्रुत्यनुमानादि ग्राहि प्रत्यक्षमपि तात्विकीं व्यावहारिकीं वा 'अनेकमेव सद्वितीयमि'ति श्रुतिमेव व्यावहारिकेण प्रातिभासिकेन वा 'एकमेवाद्वितीयं ब्रह्म' इति श्रुतित्वेन गृह्णातीत्यादिशङ्कया मिथ्यात्वादि श्रुत्यादेरेवासिद्ध्यापत्तेश्च । शून्याद्वैतं

**तत्वमिति सद्वैतं तत्वमिति च श्रुतेरभावग्राहि प्रत्यक्षमपि तात्विक्यां व्यावहारिक्यां वा तस्यां श्रुतौ सत्यमेव व्यावहारिकं प्रातिभासिकं वा तदभावं गृह्णातीति शङ्कया शून्याद्वैतादि सिद्ध्यापत्तेश्च । नचात्माद्वैतश्रुति विरोधादुक्तशङ्कानुदयः, तस्या एव संदिह्यमानत्वात् । नच तत्वतो द्वैतश्रुत्या व्यवहार दशायामद्वैत श्रुतित्वेन गृहीतया मिथ्यात्वसिद्धिः । वह्नित्वेन ज्ञाताद्गुंजापुंजाद्दाहापत्तेः । भेदश्रुतित्वेन पूर्वपक्षिणा ज्ञातेनाद्वैतवाक्येन द्वैतसिद्ध्यापत्तेश्च । नचाद्वैतश्रुति तत्प्रामाण्यादेरप्यन्यत्र दृष्टस्तात्विकसत्व विरोधी तत्वावेदकेनैव बाधः शङ्क्यः, नतु स्वप्नादौ दृष्टः व्यावहारिकसत्वविरोधी अतत्वावेदकेन बाध' इति राजाज्ञास्ति ।**

---

किञ्च किंकोटिकेयं शङ्का, अबाधितबाधकोटिका वा बाधितबाधकोटिका वेति विकल्प्याद्यं निराह **रूप्यादिबाधेऽपीति** ।। द्वितीयं दूषयति **बाधितबाधेति** ।। **स्वव्याघाताच्चेति** ।। तथाच भाविबाधो न शङ्कार्ह इति भावः । **प्रतिषेधोऽपीत्यपिशब्द** एवार्थः ।। **नच धीमात्र इति** ।। अतो न स्वव्याघात इति भावः । ननु शब्दाजन्यसाक्षात्कारमात्रे न शङ्का । किन्तु यत्र शङ्का सा शब्दाजन्य एवेत्याशङ्क्याह **नापि शब्दान्यजन्येति** ।। **विशेषहेत्वभावादिति** । वृत्तिरूपाद्वैतसाक्षात्कारेऽपि तत्प्रसङ्ग इति भावः । नन्वद्वैत साक्षात्कारान्य जन्यसाक्षात्कारे तच्छङ्केत्यत आह **विश्वान्येति** । एवमुच्यमाने न केवलमिष्टहानिः किन्त्वनिष्टाप्तिरपीत्याह **शून्याद्वैतमिति** । **तस्या एवेति** । अद्वैतश्रुतेरेवेत्यर्थः । ननु ज्ञायमानकरणे यथाज्ञानमेव फलम् । वह्निस्तु न ज्ञायमानकरणमित्यत आह **भेदश्रुतित्वेनेति** । नन्वतत्वावेदकेन प्रत्यक्षादिना कथमद्वैतश्रुति तत्प्रामाण्यादि बाधशङ्का ? तस्य स्वाप्नादौ व्यावहारिकसत्व विरोधित्वेन दृष्टत्वेऽपि तात्विकसत्व विरोधित्वेनादृष्टत्वात् । कल्पनाया अपि दृष्टानुसारित्वादित्याशङ्क्य निराकरोति **नचेति** । नच राज्ञामाज्ञास्तीति संबन्धः । तथाच दृष्टानुसारितया बाधः

प्रत्यक्षादिनैव शङ्क्यः । नच प्रत्यक्षादिना शङ्क्यमानबाधस्य तात्विकसत्त्वाविरोधित्वात् अद्वैतश्रुतितत्प्रामाण्यादेस्तात्विकत्वे जगन्मिथ्यात्वमप्रत्यूहमिति वाच्यम् । प्रत्यक्षबाधितस्याद्वैतश्रुति तत्प्रामाण्यादेस्तात्विकत्वस्यैवायोगादिति भावः ।



**ಕಥಂ ಚೇಯಂ ಶಂಕಾ? ರೂಪ್ಯಾದಿಬಾಧೇಽಪಿ ಬಾಧಕ ಶಂಕಾಪಾತೇನ ಅಬಾಧಿತ ಬಾಧರೂಪ ಕೋಟ್ಯಪ್ರಸಿದ್ಧೇಃ । ಬಾಧಿತ ಬಾಧ ಶಂಕಾಯಾಶ್ಚ ಅಬಾಧ್ಯತ್ವವಿರೋಧಿತ್ವಾತ್ ।**

ಭಾವಿಬಾಧಕ ಶಂಕೆಯ ಆಕಾರ ಹೇಗೆ? 'ಪ್ರಪಂಚ ಸತ್ವಪ್ರತ್ಯಕ್ಷವು ಮುಂದೆ ಅಬಾಧಿತ ಬಾಧಕಬಾಧ್ಯವಾಗುವುದೆ, ಇಲ್ಲವೆ?' ಎಂದೆ? 'ಬಾಧಿತ ಬಾಧಕ ಬಾಧ್ಯವಾಗುವುದೆ, ಇಲ್ಲವೆ?' ಎಂದೆ?

'ಅಬಾಧಿತ ಬಾಧಕಬಾಧ್ಯವಾಗುವುದೆ, ಇಲ್ಲವೆ?' ಎಂಬ ಶಂಕೆ ಎನ್ನುವುದಾದರೆ, ಅಂಥ ಶಂಕೆ ಬರುವುದಾದರೂ ಹೇಗೆ? ಬರಬೇಕೆಂದರೆ ಉಭಯ ಕೋಟಿಗಳು ಪ್ರಸಿದ್ಧವಿರಬೇಕು. ಅಬಾಧಿತ ಬಾಧಕ ಬಾಧ್ಯತ್ವ ಎಂಬ ಕೋಟಿಯು ಎಲ್ಲಿಯೂ ಪ್ರಸಿದ್ಧವಿಲ್ಲ. 'ನೇದಂ ರೂಪ್ಯಂ' ಎಂಬ ಬಾಧಕವು ಅಬಾಧಿತ ಬಾಧಕವಲ್ಲ. ಅದ್ವೈತಪ್ರಮಾಣವಿರೋಧವು ಜಗತ್‌ಪ್ರತ್ಯಕ್ಷದಲ್ಲಿಯೂ ರೂಪ್ಯಾದಿ ಬಾಧದಲ್ಲಿಯೂ ಸಮಾನವೆ. ರೂಪ್ಯಾದಿ ಬಾಧಕ್ಕೆ ಅದ್ವೈತ ಶ್ರುತಿ ವಿರೋಧವಿಲ್ಲ ಎನ್ನಬಾರದು. 'ಇಯಂ ಶುಕ್ತಿಃ' ಎನ್ನುವ ರೂಪ್ಯಾದಿ ಬಾಧಕ್ಕೂ 'ಸನ್‌ಘಟಃ' ಎಂಬ ಜಗತ್ ಪ್ರತ್ಯಕ್ಷಕ್ಕೂ ಏನೂ ವ್ಯತ್ಯಾಸವಿಲ್ಲ.

'ಬಾಧಿತ ಬಾಧಕ ಬಾಧ್ಯವಾಗುವುದೆ, ಇಲ್ಲವೆ?' ಎಂದು ಸಂದೇಹಾಕಾರ, ಎನ್ನುವ ಎರಡನೇ ಪಕ್ಷದಲ್ಲಿ ಹೇಳುತ್ತೇವೆ— 'ಬಾಧಿತ ಬಾಧಕ ಬಾಧ್ಯತ್ವ ಶಂಕೆಯು ಅಬಾಧ್ಯತ್ವಕ್ಕೆ ವಿರೋಧಿಯಲ್ಲ. 'ಬಾಧಿತ ಬಾಧಕ ಬಾಧ್ಯವಾದ್ದರಿಂದ ಅಬಾಧ್ಯವಲ್ಲ' ಎನ್ನಲಾಗದು ತಾನೆ?

**ಭಾವಿ ಬಾಧೇಪಿ ಬಾಧಶಂಕಾಪಾತೇನ ಸ್ವವ್ಯಾಘಾತಾಚ್ಚ ।**

ಭಾವಿ ಬಾಧಕದಲ್ಲಿಯೂ ಬಾಧಕಶಂಕಾ ಬಂದೀತೆಂದು ಸ್ವವ್ಯಾಹತಿ ಉಂಟಾಗುವುದು. ಜಗತ್ ಸತ್ವಪ್ರತ್ಯಕ್ಷವು ಸತ್ವನಿಶ್ಚಾಯಕವಲ್ಲವೆಂದರೆ ಭಾವಿಬಾಧಕವೂ ಬಾಧನಿಶ್ಚಾಯಕವಲ್ಲ ಎಂದಾಗುವುದು.

'ಎಲ್ಲ ಜ್ಞಾನಗಳಲ್ಲಿಯೂ ಬಾಧಶಂಕೆ ಇರುತ್ತದೆ ಎಂದು ನಾನು ಹೇಳುತ್ತಿಲ್ಲ. ಸಮಬಲವಾದ ಪ್ರಮಾಣಾಂತರ ವಿರೋಧವಿರುವಲ್ಲಿ ಮಾತ್ರ ಭಾವಿಬಾಧಶಂಕೆ ಇರುತ್ತದೆ ಎನ್ನುತ್ತಿದ್ದೇನೆ. ಅದರಿಂದ ಸ್ವವ್ಯಾಹತಿಗೆ ಅವಕಾಶವಿಲ್ಲ' ಎಂದರೆ ಹೇಳುತ್ತೇವೆ— 'ಜಗತ್‌ಪ್ರತ್ಯಕ್ಷಕ್ಕೆ ಸಮಬಲ ಪ್ರಮಾಣ ವಿರೋಧವಿಲ್ಲ' ಎಂದು. ಶ್ರುತಿ ಇದೆ ಎನ್ನುವುದಾದರೆ ಆ ಶ್ರುತಿಯು ಸಮಬಲವಲ್ಲ. ಅದಕ್ಕೆ ಪ್ರತ್ಯಕ್ಷ

ವಿರೋಧವಿದೆ. ಹಾಗಿದ್ದರೂ ಪ್ರತ್ಯಕ್ಷಕ್ಕೆ ಸಮಬಲ ಪ್ರಮಾಣ ವಿರೋಧ ಶಂಕೆಯನ್ನು ಮಾಡುವುದಾದರೆ, ಆ ಪ್ರಮಾಣಕ್ಕೂ ಸಮಬಲ ಪ್ರಮಾಣ ವಿರೋಧ ಮುಂದೆ ಬಂದೀತೆಂದು ಶಂಕೆ ಇದ್ದೇ ಇರುತ್ತದೆ. ಸ್ವವ್ಯಾಹತಿ ತಪ್ಪಿದ್ದಲ್ಲ. ಸಮಬಲ ಪ್ರಮಾಣೋಪಸ್ಥಿತಿ ಸರ್ವತ್ರ ಸಂಭವವಿರುವುದರಿಂದ ಸರ್ವತ್ರ ಶಂಕೆ ಇದೆ ಎಂದೇ ಹೇಳಿದಂತಾಯಿತು.

**ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ —**

**ದುಷ್ಟಜ್ಞಾನಗೃಹೀತಾರ್ಥ ಪ್ರತಿಷೇಧೋऽಪಿ ಯುಜ್ಯತೇ ।**
**ಗೃಹೀತ ಮಾತ್ರ ಬಾಧೇ ತು ಸ್ವಪಕ್ಷೋऽಪಿ ನ ಸಿಧ್ಯತಿ ॥ ಇತಿ ।**

ಭಟ್ಟ ವಾರ್ತಿಕದಲ್ಲಿ ಬೌದ್ಧನಿಗೆ ಹೀಗೇ ದೋಷವನ್ನು ಹೇಳಿದ್ದಾರೆ— 'ನಮ್ಮ ಪಕ್ಷದಲ್ಲಿ ದುಷ್ಟಜ್ಞಾನದಿಂದ ಗೃಹೀತವಾದ ವಿಷಯಕ್ಕೆ ಬಾಧಕ ಪ್ರಮಾಜ್ಞಾನದಿಂದ ಬಾಧವೂ ಕೂಡುತ್ತದೆ. ಜ್ಞಾನವೆಲ್ಲವೂ ಭಾವಿಬಾಧಕದಿಂದ ಬಾಧ್ಯವೇ ಆಗುವುದೆನ್ನುವ ನಿನ್ನ ಪಕ್ಷದಲ್ಲಿ ನೀನು ಶಂಕಿಸುವ ಭಾವಿ ಬಾಧಕ್ಕೂ ಇನ್ನೊಂದು ಭಾವಿಬಾಧದಿಂದ ಬಾಧವಿರುವುದರಿಂದ ನಿನ್ನ ಪಕ್ಷವೂ ಅಬಾಧಿತವಾಗಿ ಸಿದ್ಧವಾಗುವುದಿಲ್ಲ. ಇದು ಸ್ವವ್ಯಾಹತ.'

**ನ ಚ ಧೀಮಾತ್ರೇ ನ ಬಾಧಶಂಕಾ ಕಿಂತು ಸಾಕ್ಷಾತ್ಕಾರೇ ಇತಿ ಯುಕ್ತಂ। ವಿಶೇಷಹೇತ್ವಭಾವಾತ್ । ವೃತ್ತಿರೂಪ-ಅದ್ವೈತ ಸಾಕ್ಷಾತ್ಕಾರೇ ತತ್ಪ್ರಸಂಗಾಚ್ಚ ।**

ಎಲ್ಲ ಜ್ಞಾನವೂ ಭಾವಿಬಾಧಕದಿಂದ ಬಾಧ್ಯವೆನ್ನುವುದಿಲ್ಲ. ಸಾಕ್ಷಾತ್ಕಾರ ರೂಪವಾದ ಎಲ್ಲ ಜ್ಞಾನವೂ ಭಾವಿಬಾಧಕ ಬಾಧ್ಯ ಎನ್ನುತ್ತೇನೆ, ಎಂದರೆ ಅದೂ ಸರಿಯಲ್ಲ. ಅದಕ್ಕೆ ವಿಶೇಷ ಹೇತುವಿಲ್ಲ. ಸಾಕ್ಷಾತ್ಕಾರ ಮಾತ್ರವೇಕೆ ಬಾಧ್ಯವಾಗಬೇಕು? ವಸ್ತುತಃ ನಿನ್ನ ಚರಮವೃತ್ತಿರೂಪ ಭಾವಿಬಾಧಕವೂ ಸಾಕ್ಷಾತ್ಕಾರರೂಪವಾದ್ದರಿಂದ ಅದೂ ಬಾಧ್ಯವಾದೀತೆಂದು ಅತಿಪ್ರಸಂಗವಿದೆ.

**ನಾಪಿ ಶಬ್ದಾಜನ್ಯ ಸಾಕ್ಷಾತ್ಕಾರೇ ತಚ್ಛಂಕಾ। ಮುಕ್ತಸ್ವರೂಪಾನಂದ ಸಾಕ್ಷಾತ್ಕಾರೇ ತತ್ಪ್ರಸಂಗಾತ್ । ವೇದಾಂತಜನ್ಯ ಧೀ ಪ್ರಾಮಾಣ್ಯಗ್ರಾಹಿ ಸಾಕ್ಷಿಪ್ರತ್ಯಕ್ಷಮಪಿ ಅತತ್ವಾವೇದಕಮೇವ ತತ್ವಾವೇದಕತ್ವೇನ ಗೃಹ್ಣಾತೀತಿ ಶಂಕಯಾ ತತ್ವಜ್ಞಾನಾಯ ವೇದಾಂತಶ್ರವಣಾದಿ ಸ್ವಕ್ರಿಯಾ ವಿರೋಧಾಚ್ಚ।**

'ಅದ್ವೈತ ಸಾಕ್ಷಾತ್ಕಾರವು ಉಪನಿಷತ್ಶಬ್ದ ಜನ್ಯ. ಅದರಲ್ಲಿ ಭಾವಿಬಾಧಕ ಶಂಕೆ ಇಲ್ಲ. ಅದಕ್ಕೆ ಬಾಧ್ಯತ್ವ ಪ್ರಸಂಗವಿಲ್ಲ. ಶಬ್ದಾಜನ್ಯ ಘಟಸತ್ವ ಸಾಕ್ಷಾತ್ಕಾರ ವಿಷಯದಲ್ಲಿಯೇ ಭಾವಿಬಾಧಕ ಶಂಕೆ'—ಎಂದರೆ, ಹೇಳುತ್ತೇವೆ, ಮುಕ್ತ ಸ್ವರೂಪಾನಂದ ಸಾಕ್ಷಾತ್ಕಾರವು ನಿತ್ಯವಾದ್ದರಿಂದ ಶಬ್ದಾಜನ್ಯವಾಗಿದೆ. ಅದು ಬಾಧ್ಯವೆನಿಸುವ ಪ್ರಸಂಗವಿದೆ. 'ಅದ್ವೈತಶ್ರುತ್ಯವಿರುದ್ಧವಾದ್ದರಿಂದ ಅದರಲ್ಲಿ ಬಾಧಶಂಕೆ ಇಲ್ಲ' ಎನ್ನಬಾರದು. ಮುಕ್ತಸ್ವರೂಪಾನಂದವು ಬ್ರಹ್ಮ ಭಿನ್ನವೆಂದು ಮುಂದೆ ಉಪಪಾದಿಸುವುದರಿಂದ ಅದು ಅದ್ವೈತ ಶ್ರುತಿಗೆ ವಿರುದ್ಧವೇ ಆಗಿದೆ. ವೇದಾಂತಜನ್ಯ

ಜ್ಞಾನಪ್ರಾಮಾಣ್ಯಗ್ರಾಹಿಯಾದ ಸಾಕ್ಷಿಪ್ರತ್ಯಕ್ಷವು ಶಬ್ದಾಜನ್ಯ ಸಾಕ್ಷಾತ್ಕಾರವಾಗಿದೆ. ಅದೂ ಬಾಧ್ಯವೆನಿಸುವ ಪ್ರಸಂಗವಿದೆ. ಅದರಿಂದ ಅತತ್ತ್ವಾವೇದಕವನ್ನೇ ತತ್ತ್ವಾವೇದಕವೆಂದು ಸಾಕ್ಷಿಪ್ರತ್ಯಕ್ಷವು ಗ್ರಹಿಸಿರಬಹುದೆಂದು ಶಂಕೆ ಬರಬಹುದು. ವೇದಾಂತ ವಾಕ್ಯದಲ್ಲಿ ತತ್ತ್ವಾವೇದಕತ್ವ ನಿಶ್ಚಯ ಬಾರದಿರುವುದರಿಂದ ವೇದಾಂತ ಶ್ರವಣಾದಿಗಳಲ್ಲಿ ನಿನಗೆ ಪ್ರವೃತ್ತಿ ಉಂಟಾಗಲಾರದು. ಸರ್ವತ್ರ ಶಂಕೆ ಇದೆ ಎನ್ನುವ ನೀನು ಇಲ್ಲಿ ಶಂಕೆ ಮಾಡದೆ ಪ್ರವೃತ್ತಿ ಮಾಡುತ್ತಿರುವೆ. ಅದರಿಂದ ಸ್ವಕ್ರಿಯಾವಿರೋಧ.

**ಶಂಕಾಗ್ರಾಹಿ ಸಾಕ್ಷಿಪ್ರತ್ಯಕ್ಷಮಪಿ ಅಶಂಕಾಮೇವ ಶಂಕಾತ್ವೇನ ಗೃಹ್ಣಾತೀತಿ ಶಂಕಯಾ ಸ್ವವ್ಯಾಘಾತಾಚ್ಚ ।**

'ಭಾವಿಬಾಧ ಶಂಕೆಯು ಸಾಕ್ಷಿಸಿದ್ಧವೇ ಆದರೂ, ಆ ಭಾವಿಬಾಧಶಂಕೆಯು 'ಶಂಕೆಯಲ್ಲದ್ದು ಶಂಕೆ ಎಂದೇ ಸಾಕ್ಷಿಯಿಂದ ಗೃಹೀತವಾಗಿದೆ' ಎಂಬ ಶಂಕೆಯಿಂದ ಸ್ವವ್ಯಾಹತ. ಅದರಿಂದ ಭಾವಿಬಾಧವು ಶಂಕಾರ್ಹವಲ್ಲ.

**ನಾಪಿ ಶಬ್ದಾನ್ಯಜನ್ಯ ಸಾಕ್ಷಾತ್ಕಾರೇ ತಚ್ಛಂಕಾ । 'ದಶಮಸ್ತ್ವಮಸಿ' ಇತಿ ಶಬ್ದಾಭಾಸಜನ್ಯ ಸಾಕ್ಷಾತ್ಕಾರೇಽಪಿ ಬಾಧದರ್ಶನೇನ ವಿಶೇಷಹೇತ್ವಭಾವಾತ್ । ವಿಶ್ವಾನ್ಯಪ್ರತ್ಯಕ್ಷ ಏವ ತಚ್ಛಂಕೇತಿ ಸುವಚತ್ವಾಚ್ಚ ।**

'ಉಪನಿಷತ್‌ಶಬ್ದಜನ್ಯವಾದ ಬ್ರಹ್ಮಸಾಕ್ಷಾತ್ಕಾರದಲ್ಲಿಯೂ ಸಾಕ್ಷಿಜ್ಞಾನದಲ್ಲಿಯೂ ಭಾವಿಬಾಧಶಂಕೆ ಇಲ್ಲದ್ದರಿಂದ 'ಶಬ್ದಾನ್ಯಜನ್ಯ ಸಾಕ್ಷಾತ್ಕಾರದಲ್ಲಿ ಮಾತ್ರ ಭಾವಿಬಾಧಶಂಕೆ' ಎನ್ನುತ್ತೇನೆ. ಸಾಕ್ಷಿಪ್ರತ್ಯಕ್ಷವು ಜನ್ಯವೇ ಅಲ್ಲ. ಅದರಿಂದ ಸ್ವವ್ಯಾಹತಿ ಇಲ್ಲ' ಎಂದು ಅದ್ವೈತಿ ಹೇಳುತ್ತಾನೆ. ವೇದಾಂತ ಜನ್ಯಜ್ಞಾನವು ಶಬ್ದಜನ್ಯಜ್ಞಾನ. ಅದರಲ್ಲಿ ಬಾಧಶಂಕೆಯಿಲ್ಲದೆ ಪ್ರವೃತ್ತಿ ಮಾಡುತ್ತೇನೆ. ಅದರಿಂದ ಸ್ವಕ್ರಿಯಾ ವಿರೋಧವಿಲ್ಲ. ಮುಕ್ತಸ್ವರೂಪಾನಂದಜ್ಞಾನವು ಶಬ್ದಾಜನ್ಯವಾದರೂ ನಿತ್ಯವಾದ್ದರಿಂದ ಶಬ್ದಾನ್ಯ ಜನ್ಯಜ್ಞಾನವಾಗಿರುವುದಿಲ್ಲ. ಅದರಲ್ಲಿ ಬಾಧಶಂಕೆ ಇಲ್ಲ. ಶಬ್ದಾನ್ಯಜನ್ಯ ವಾದ ಸತ್ತ್ವಪ್ರತ್ಯಕ್ಷದಲ್ಲಿ ಬಾಧಶಂಕೆ ಇದೆ' ಎನ್ನುತ್ತಾನೆ.

ನಾವು ಹೇಳುತ್ತೇವೆ. 'ದಶಮಸ್ತ್ವಮಸಿ' 'ನೀನು ಹತ್ತನೆಯವನು' ಎನ್ನುವ ಶಬ್ದದಿಂದ ನಾನು ಹತ್ತನೆಯವನು ಎಂದು ಭ್ರಮರೂಪ ಸಾಕ್ಷಾತ್ಕಾರವು ಬರುತ್ತದೆ ಎಂದು ಅದ್ವೈತಿಗಳಿಗೆ ಭ್ರಮೆ. ವಸ್ತುತಃ ತಾನು ಒಂಬತ್ತನೇಯವನು. ಆದರೂ ಹತ್ತನೆಯವನು ನೀನೆಂದು ಒಬ್ಬನು ಹೇಳಿದಾಗ ಹಾಗೆ ಭ್ರಮ ಬರುತ್ತದೆ ಎನ್ನುತ್ತಾರೆ. ಹೀಗೆ ಶಬ್ದಾಭಾಸರೂಪಶಬ್ದ ಜನ್ಯಸಾಕ್ಷಾತ್ಕಾರದಲ್ಲಿ ಬಾಧಶಂಕಾ ಬರುತ್ತಿರುವಾಗ ಶಬ್ದಾನ್ಯಜನ್ಯ ಸಾಕ್ಷಾತ್ಕಾರದಲ್ಲಿಯೇ ಬಾಧಶಂಕಾ, ಹೊರತು, ಶಬ್ದಜನ್ಯ ಸಾಕ್ಷಾತ್ಕಾರದಲ್ಲಿ ಬಾಧಶಂಕೆ ಇಲ್ಲ' ಎನ್ನಲು ವಿಶೇಷ ಕಾರಣವಿಲ್ಲ. ಆದರೂ ಅದ್ವೈತ ಸಾಕ್ಷಾತ್ಕಾರಾನ್ಯ ಶಬ್ದಾನ್ಯಜನ್ಯ ಸಾಕ್ಷಾತ್ಕಾರದಲ್ಲಿಯೇ ಬಾಧಶಂಕಾ ಎಂದು ನಿನಗೆ ಆಗ್ರಹವಿರುವುದಾದರೆ, ನಾವೂ

ಹೇಳುತ್ತೇವೆ, 'ವಿಶ್ವವಿಷಯಕ ಪ್ರತ್ಯಕ್ಷದಲ್ಲಿ ಬಾಧಶಂಕೆ ಇರುವುದಿಲ್ಲ. ವಿಶ್ವವಿಷಯಕ ಪ್ರತ್ಯಕ್ಷ ಭಿನ್ನ ಪ್ರತ್ಯಕ್ಷದಲ್ಲಿಯೇ ಭಾವಿ ಬಾಧಶಂಕಾ' ಎಂದು. 'ಹೀಗೆ ಹೇಳಲು ವಿಶೇಷ ಕಾರಣ ಬೇಕಾಗಿಲ್ಲ' ಎಂದು. ಹೀಗಾಗಿ ವೇದಾಂತಜನ್ಯ ಬ್ರಹ್ಮಸಾಕ್ಷಾತ್ಕಾರದಲ್ಲಿ ಬಾಧಶಂಕೆ ಬರುತ್ತದೆ, ವಿಶ್ವಪ್ರತ್ಯಕ್ಷದಲ್ಲಿ ಬಾಧಶಂಕೆ ಇಲ್ಲ.

**ಅದ್ವೈತ ಶ್ರುತ್ಯನುಮಾನಾದಿ ಗ್ರಾಹಿ ಪ್ರತ್ಯಕ್ಷಮಪಿ ತಾತ್ವಿಕೀಂ ವ್ಯಾವಹಾರಿಕೀಂ ವಾ 'ಅನೇಕಮೇವ ಸದ್ವಿತೀಯಂ' ಇತಿ ಶ್ರುತಿಮೇವ ವ್ಯಾವಹಾರಿಕೇಣ ಪ್ರಾತಿಭಾಸಿಕೇನ ವಾ 'ಏಕಮೇವಾದ್ವಿತೀಯಂ ಬ್ರಹ್ಮ' ಇತಿ ಶ್ರುತಿತ್ವೇನ ಗೃಹ್ಣಾತಿ ಇತ್ಯಾದಿ ಶಂಕಯಾ ಮಿಥ್ಯಾತ್ವಾದಿ ಶ್ರುತ್ಯಾದೇರೇವ ಅಸಿದ್ಧ್ಯಾಪತ್ತೇಶ್ಚ ।**

ಭಾವಿ ಬಾಧಕಶಂಕೆ ಇರುವುದರಿಂದ ಅಪ್ರಮಾಣವನ್ನೇ ಪ್ರಮಾಣತ್ವೇನ ಪ್ರತ್ಯಕ್ಷವು ಗ್ರಹಿಸುತ್ತದೆ ಎನ್ನುವಿಯಾದರೆ ಮಿಥ್ಯಾತ್ವಶ್ರುತಿಯೇ ನಿನಗೆ ಸಿದ್ಧವಾಗದೆ ಹೋಗುವುದು. ಅದ್ವೈತಶ್ರುತಿಅನುಮಾನ ಗ್ರಾಹಿಯಾದ ಶ್ರಾವಣಾದಿ ಪ್ರತ್ಯಕ್ಷವು ಭಾವಿಬಾಧಕಶಂಕಾಗ್ರಸ್ತ ವಾಗಿರುವುದರಿಂದ 'ಏಕಮೇವಾದ್ವಿತೀಯಂ' ಎನ್ನುವ ಶ್ರುತಿಯನ್ನೂ 'ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನವನ್ನೂ ಸಾಧಿಸುತ್ತದೆ ಎಂದು ನಿಶ್ಚಿತವಾಗಿ ಹೇಳಲು ಬರುವುದಿಲ್ಲ. ತಾತ್ವಿಕವಾಗಿ ಅಥವಾ ವ್ಯಾವಹಾರಿಕವಾಗಿ ಅದ್ವೈತಶ್ರುತಿಯು 'ಅನೇಕಮೇವ ಸದ್ವಿತೀಯಂ' ಎಂದೇ ಇರಬಹುದು. ಅದ್ವೈತಾನುಮಾನವೂ 'ಸತ್ಯಂ ದೃಶ್ಯತ್ವಾತ್' ಎಂದೇ ಇರಬಹುದು. ತಾತ್ವಿಕವಾದ ಅಥವಾ ವ್ಯಾವಹಾರಿಕವಾದ ಈ 'ಅನೇಕಮೇವ ಸದ್ವಿತೀಯಂ' ಎಂಬ ಶ್ರುತಿಯನ್ನೇ ವ್ಯಾವಹಾರಿಕವಾದ ಅಥವಾ ಪ್ರಾತಿಭಾಸಿಕವಾದ 'ಏಕಮೇವಾದ್ವಿತೀಯಂ' ಶ್ರುತಿತ್ವೇನ ಪ್ರತ್ಯಕ್ಷವು ಏಕೆ ತಪ್ಪಾಗಿ ಗ್ರಹಿಸಿರಬಾರದು? ತಾತ್ವಿಕವಾದ ಅಥವಾ ವ್ಯಾವಹಾರಿಕವಾದ 'ಸತ್ಯಂ ದೃಶ್ಯತ್ವಾತ್' ಎಂಬ ಅನುಮಾನವನ್ನೇ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕವಾದ 'ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನತ್ವೇನ ಪ್ರತ್ಯಕ್ಷವು ಏಕೆ ತಪ್ಪಾಗಿ ಗ್ರಹಿಸಿರಬಾರದು? ಇದು ತಪ್ಪುಗ್ರಹಿಕೆ ಎನ್ನುವುದು ಹೇಗೆ ಎಂದರೆ, 'ಈ ಶ್ರುತಿಯು 'ಏಕಮೇವಾದ್ವಿತೀಯಂ' ಎಂದಲ್ಲ. ಈ ಅನುಮಾನವೂ 'ಮಿಥ್ಯಾದೃಶ್ಯತ್ವಾತ್' ಎಂದಲ್ಲ. ಎಂದು ಮುಂದೆ ಬಾಧಕಜ್ಞಾನೋದಯವಾಗಬಹುದು, ಎಂದು ಭಾವಿಬಾಧಕ ಶಂಕೆಗೆ ಅವಕಾಶವಿದೆ ತಾನೆ? ಆದರಿಂದ ಶಬ್ದಾಜನ್ಯ ಜನ್ಯಜ್ಞಾನವೆಲ್ಲವೂ ಭಾವಿಬಾಧಕಶಂಕಾಗ್ರಸ್ತವಾಗಿರುತ್ತದೆ ಎಂದು ನಿಯಮ ವಿಟ್ಟುಕೊಳ್ಳಬಾರದು.

**'ಶೂನ್ಯಾದ್ವೈತಂ ತತ್ವಂ' 'ಸದ್ವೈತಂ ತತ್ವಂ' ಇತಿ ಚ ಶ್ರುತೇಃ ಅಭಾವಗ್ರಾಹಿ ಪ್ರತ್ಯಕ್ಷಮಪಿ ತಾತ್ವಿಕ್ಯಾಂ ವ್ಯಾವಹಾರಿಕ್ಯಾಂ ವಾ ತಸ್ಯಾಂ ಶ್ರುತೌ ಸತ್ಯಾಮೇವ ವ್ಯಾವಹಾರಿಕಂ ಪ್ರಾತಿಭಾಸಿಕಂ ವಾ ತದಭಾವಂ ಗೃಹ್ಣಾತಿ ಇತಿ ಶಂಕಯಾ ಶೂನ್ಯಾದ್ವೈತಾದಿ ಸಿದ್ಧ್ಯಾಪತ್ತೇಶ್ಚ ।**

'ಶೂನ್ಯಾದ್ವೈತವು ತತ್ವ' 'ಸದ್ವಿತೀಯವು ತತ್ವ' ಎಂದು ಶ್ರುತಿಯು ವಸ್ತುತಃ ಇಲ್ಲ. ಆದರೆ ಆ ಶ್ರುತಿಗಳ ಅಭಾವವನ್ನು ಗ್ರಹಿಸುವ ಪ್ರತ್ಯಕ್ಷವೂ ಕೂಡ ಭಾವಿಬಾಧಕ ಶಂಕೆಗೊಳಗಾದರೆ ಆ

ಶ್ರುತಿಗಳಿಲ್ಲ ಎನ್ನುವುದು ಸಿದ್ಧವಾಗದು. ಭಾವಿಬಾಧಕ ಶಂಕಾನಿಯಮವಿಟ್ಟುಕೊಳ್ಳುವ ಪಕ್ಷದಲ್ಲಿ ಬಾಧಕಜ್ಞಾನಶಂಕೆ ಮುಂದೆ ಹೀಗೆ ಹುಟ್ಟಿಕೊಳ್ಳಬಹುದು—

'ಶೂನ್ಯಾದ್ವೈತವು ತತ್ತ್ವ' 'ಸದ್ವೈತವು ತತ್ತ್ವ' ಎಂಬ ಶ್ರುತಿಗಳು ತಾತ್ತ್ವಿಕವಾಗಿ ಅಥವಾ ವ್ಯಾವಹಾರಿಕವಾಗಿಯೇ ಇರಬಹುದು. ವ್ಯಾವಹಾರಿಕ ಅಥವಾ ಪ್ರಾತಿಭಾಸಿಕವಾದ ಅವುಗಳ ಅಭಾವವನ್ನೇ ಪ್ರತ್ಯಕ್ಷವು ಗ್ರಹಿಸುತ್ತಿರಬಹುದು'

ಹೀಗೆ ಭಾವಿಬಾಧಕಶಂಕೆ ಇರುವುದರಿಂದ ಶೂನ್ಯಾದ್ವೈತ ಸದ್ವೈತ ಶ್ರುತಿಗಳ ಅಭಾವದಲ್ಲಿ ಶಂಕೆ ಇರುವುದರಿಂದ ಶೂನ್ಯಾದ್ವೈತ ಸದ್ವೈತ ಶ್ರುತಿಗಳ ಅಭಾವವು ಪ್ರತ್ಯಕ್ಷದಿಂದ ಸಿದ್ಧವಾಗದೆ ಹೋದೀತು. ಶೂನ್ಯಾದ್ವೈತ ಸದ್ವೈತಗಳೇ ವಾಸ್ತವ ವೆಂದಾದೀತು.

**ನ ಚ ಆತ್ಮಾದ್ವೈತ ಶ್ರುತಿವಿರೋಧಾತ್ ಉಕ್ತ ಶಂಕಾನುದಯಃ। ತಸ್ಯಾ ಏವ ಸಂದಿಹ್ಯಮಾನತ್ವಾತ್ ।**

ಆತ್ಮಾದ್ವೈತ ಶ್ರುತಿ ವಿರೋಧವಿರುವುದರಿಂದ ಅದಕ್ಕೆ ವಿರೋಧವಾಗಿ ಶೂನ್ಯಾದ್ವೈತ ಸದ್ವೈತ ಶ್ರುತಿಗಳೇ ವಾಸ್ತವವಿರಬಹುದೆಂಬ ಶಂಕೆ ಬರುವುದಿಲ್ಲ ಎಂದರೆ, ಹಾಗೆ ಹೇಳಲಾಗದು. ಆತ್ಮಾದ್ವೈತ ಶ್ರುತಿ ಇರುವುದೇ ಸಂದೇಹಗ್ರಸ್ತವಾಗಿದೆ ತಾನೆ? ಅದು ಸಂದೇಹರಹಿತವಾಗಿ ಪ್ರಮಾಣವೆನಿಸಿದರೆ ಅದರ ವಿರೋಧದಿಂದಾಗಿ ಶೂನ್ಯಾದ್ವೈತ ಸದ್ವೈತ ಶ್ರುತಿಗಳು ಸಿದ್ಧವಾಗದೆ ಹೋಗುವುದು. ಅವು ಸಿದ್ಧವಾಗದಿದ್ದರೆ ಆತ್ಮಾದ್ವೈತ ಶ್ರುತಿಯು ಸಂದೇಹ ರಹಿತವಾಗಿ ಪ್ರಮಾಣವೆನಿಸುವುದು. ಹೀಗೆ ಅನ್ಯೋನ್ಯಾಶ್ರಯ.

**ನ ಚ ತತ್ತ್ವತೋ ದ್ವೈತಶ್ರುತ್ಯಾ ವ್ಯವಹಾರದಶಾಯಾಂ ಅದ್ವೈತಶ್ರುತಿತ್ವೇನ ಗೃಹೀತಯಾ ಮಿಥ್ಯಾತ್ವಸಿದ್ಧಿಃ। ವಹ್ನಿತ್ವೇನ ಜ್ಞಾತಾತ್ ಗುಂಜಾಪುಂಜಾತ್ ದಾಹಾಪತ್ತೇಃ। ಭೇದಶ್ರುತಿತ್ವೇನ ಪೂರ್ವಪಕ್ಷಿಣಾ ಜ್ಞಾತೇನ ಅದ್ವೈತವಾಕ್ಯೇನ ದ್ವೈತಸಿದ್ಧ್ಯಾಪತ್ತೇಶ್ಚ।**

ಅದ್ವೈತ ಶ್ರುತಿಗ್ರಾಹಿ ಪ್ರತ್ಯಕ್ಷಕ್ಕೂ ಬಾಧಶಂಕಾ ಬರುವುದರಿಂದ ಅದ್ವೈತ ಶ್ರುತಿಯೇ ಸಿದ್ಧವಾಗದೆ ಹೋದೀತು, ಅದ್ವೈತಶ್ರುತಿ ಇಲ್ಲವಾದೀತು ಎಂದು ನೀವು ನಮಗೆ ಆಪಾದಿಸಿದರೆ ಇಷ್ಟಾಪತ್ತಿ. ಬ್ರಹ್ಮಾತಿರಿಕ್ತವೆಲ್ಲವೂ ಮಿಥ್ಯಾ ಎನ್ನುವ ನಮ್ಮ ಮತದಲ್ಲಿ ಬ್ರಹ್ಮಾತಿರಿಕ್ತವಾದ ಅದ್ವೈತ ಶ್ರುತಿಯೂ ಇಲ್ಲ. ಹಾಗಾದರೆ ಅದ್ವೈತಸಿದ್ಧಿ ಹೇಗೆ ಎಂದರೆ, ಅಸತ್ತು ಸಾಧಕವಾಗುವುದು. 'ಅದ್ವೈತ ಶ್ರುತಿ ಇದು' ಎಂದು ನಾವು ಗ್ರಹಿಸಿರುವ ಅಸತ್ತಾದ ನಿಮ್ಮ ದ್ವೈತಶ್ರುತಿಯಿಂದಲೇ ನಮಗೆ ಅದ್ವೈತಸಿದ್ಧಿಯಾಗುವುದು'.

ಹೀಗೆ ಅದ್ವೈತಿ ಹೇಳಿದರೆ ನಾವು ಹೇಳಬೇಕು— ವಹ್ನಿ ಇಲ್ಲದಿದ್ದರೂ ವಹ್ನಿ ಎಂದು ಗ್ರಹಿಸಿದ ಗುಂಜೆಗಳ ರಾಶಿಯಿಂದಲೇ ದಾಹ ಉಂಟಾದೀತು. ಮತ್ತು ನಾವೂ ನಿಮ್ಮಂತೆಯೆ ಹೇಳುತ್ತೇವೆ— 'ವಸ್ತುತಃ ದ್ವೈತವಾಕ್ಯವಿಲ್ಲ, ಎಲ್ಲವೂ ಅದ್ವೈತ ವಾಕ್ಯವೆ' ಎಂದು ನೀನು ಹೇಳಿದರೆ ನಮಗೆ

ಇಷ್ಟಾಪತ್ತಿ. ನಿನ್ನ ಅದ್ವೈತವಾಕ್ಯವನ್ನೇ ನಿನ್ನ ಪೂರ್ವಪಕ್ಷಿ ದ್ವೈತವಾಕ್ಯವೆಂದು ಗ್ರಹಿಸಿರುತ್ತಾನೆ. ಅದರಿಂದಲೇ ನಮಗೆ ದ್ವೈತಸಿದ್ಧಿ' ಎಂದು.

**ನ ಚ —'ಅದ್ವೈತಶ್ರುತಿ ತತ್ಪ್ರಾಮಾಣ್ಯಾದೇರಪಿ ಅನ್ಯತ್ರಾದೃಷ್ಟಃ ತಾತ್ವಿಕಸತ್ವ ವಿರೋಧೀ ತತ್ವಾವೇದಕೇನೈವ ಬಾಧಃ ಶಂಕ್ಯಃ, ನತು ಸ್ವಪ್ನಾದೌ ದೃಷ್ಟಃ ವ್ಯಾವಹಾರಿಕ ಸತ್ವವಿರೋಧೀ ಅತತ್ವಾವೇದಕೇನ ಬಾಧಃ'— ಇತಿ ರಾಜಾಜ್ಞಾಸ್ತಿ ।**

'ಅದ್ವೈತ ಶ್ರುತಿ ತತ್ ಪ್ರಾಮಾಣ್ಯಾದಿಗಳಿಗೆ ಬಾಧ ಶಂಕೆ ಇಲ್ಲ. ಏಕೆಂದರೆ ಅದ್ವೈತಶ್ರುತಿಯು ತತ್ವಾವೇದಕ. ಅದಕ್ಕೆ ಬಾಧವನ್ನು ತತ್ವಾವೇದಕದಿಂದಲೇ ಹೇಳಬೇಕಾಗುತ್ತದೆ. ಅಂಥ ತತ್ವಾವೇದಕವು ಬೇರೆ ಇಲ್ಲ' — ಹೀಗೆ ಅದ್ವೈತಿ ಹೇಳಿದರೆ ನಾವು ಹೇಳುತ್ತೇವೆ—

'ತತ್ವಾವೇದಕವು ಬೇರೆ ಇಲ್ಲದಿದ್ದರೆ ಚಿಂತೆ ಇಲ್ಲ. ಅತತ್ವಾವೇದಕದಿಂದಲೇ ಬಾಧಶಂಕೆಯನ್ನು ಹೇಳುತ್ತೇವೆ. ಸ್ವಪ್ನಾದಿಗಳಲ್ಲಿ ವ್ಯಾವಹಾರಿಕದಿಂದ ಬಾಧವೇ ಕಂಡಿದೆ. ಹೊರತು ನೀನು ಹೇಳುವಂತೆ ತತ್ವಾವೇದಕದಿಂದಲೆ ಬಾಧ ಎನ್ನುವುದು ಬೇರೆ ಎಲ್ಲಿಯೂ ಕಂಡಿಲ್ಲ. 'ಅದ್ವೈತ ಶ್ರುತಿಗೆ, ಬೇರೆಲ್ಲಿಯೂ ಕಂಡಿರದ, ತಾತ್ವಿಕ ಸತ್ವವಿರೋಧಿಯಾದ ತತ್ವಾವೇದಕ ಪ್ರಮಾಣ ಬಾಧವನ್ನೇ ಶಂಕಿಸಬೇಕು, ಹೊರತು ಬೇರೆ ಕಡೆ ಕಂಡಿರುವ ವ್ಯಾವಹಾರಿಕ ಸತ್ವವಿರೋಧಿಯಾದ ಅತತ್ವಾವೇದಕ ಪ್ರಮಾಣಬಾಧ ಶಂಕಾ ಮಾಡಕೂಡದು' ಎಂದು ರಾಜಾಜ್ಞೆ ಏನಿಲ್ಲ. ಅದರಿಂದ ವ್ಯಾವಹಾರಿಕ ಸತ್ವವಿರೋಧಿ ಅತತ್ವಾವೇದಕಪ್ರಮಾಣಬಾಧವನ್ನೇ ನಾವು ಅದ್ವೈತಶ್ರುತಿಗೆ ಶಂಕಿಸುತ್ತೇವೆ. ಹೀಗಾಗಿ, ಅದ್ವೈತಶ್ರುತಿಗೆ ನೀನು ಅಂಗೀಕರಿಸಿರುವ ವ್ಯಾವಹಾರಿಕ ಸತ್ವವೂ ಇಲ್ಲವಾಯಿತು, ಪ್ರಾತಿಭಾಸಿಕವೆಂದಾಯಿತು. ನನಗೆ ಇಷ್ಟ ಸಿದ್ಧಿಯಾಯಿತು.



अप्रातिभासिकत्वधीस्तु तात्विकत्वधीरिव युक्ता ।

नचैवं ब्रह्मतत्व ज्ञानात्तन्निवृत्ति श्रुतिविरोधः । अत्राप्यनिवृत्ति श्रुतिरेव निवृत्तिश्रुतितया गृहीतेति शङ्कोदयात् । किञ्चापरीक्षिते रूप्यादिप्रत्यक्षे दोषबाधयोर्दर्शनेन परीक्षिते जगत्प्रत्यक्षेपि तदाशङ्कायां लिङ्गशब्दाभासयोः तद्दर्शनेन अद्वैतलिङ्गशब्दयोरपि तच्छङ्का, बाधिते अक्षलिङ्गाद्याभासेऽपि भ्रमबाधितप्रमादृष्टान्तेनाबाधशङ्कापि स्यादिति प्रमाणतदाभास व्यवस्था न स्यात् । तदुक्तं—

निर्दोषानुमायास्सदोषत्वं, सदोषानुमाया
निर्दोषत्वमित्यव्यवस्था ।। इति ।

श्रुतिर्नित्यत्वान्निर्दोषेति चेन्न, त्वन्मते श्रुतिनित्यताया आकल्पं स्थितिमात्ररूपत्वेन आकाशादिवत्प्रतिकल्पं तस्या उत्पत्तेः । तस्याः प्रमाकरणत्वेऽपि मम द्वैत इव ब्रह्ममीमांसायां प्रत्यधिकरणं पूर्वपक्ष्यभिमतार्थ इव च तवाद्वैते तात्पर्यधीः भ्रम इति शङ्कया तज्जन्याद्वैतधियः प्रमात्वासिद्धेश्च । उपक्रमोपसंहार तदैकरूप्य ग्राहि प्रत्यक्षेऽप्युक्तन्यायेन शङ्कोदयेन तदैकरूप्यासिद्धेश्च । किञ्च

प्रत्यक्षे क्लृप्तदोषाणामभावोऽत्र विनिश्चितः ।
अन्यस्य कल्पना नित्ये वेदेऽपि न निवार्यते ।।

स्वाप्नप्रत्यक्षेऽपि तदा दूराद्यभावनिश्चयोऽस्तीति चेन्न । स्वाप्ने शून्यमेव तत्वमिति वेदेऽपि तदा भ्रान्त्याद्यभाव निश्चयस्य सत्वात् । स्वप्नवैषम्यानुभवस्तूभयत्र समः ।

किञ्च न तावत्साक्षिणि बाधशङ्का । तस्य नित्यानुभवरूपतया वेद इव तात्पर्यभ्रान्तेरप्ययोगेन वेदादप्यनाशङ्कितदोषत्वात् । प्रमाणाजन्यत्वमात्रेण तदप्रामाण्ये गुणाजन्यत्वमात्रेण वेदस्याप्यप्रामाण्यापातात् । नापि बाह्यप्रत्यक्षे । तत्रापि निःशङ्कं साक्षिग्राह्य सुखादिपर्यन्त परीक्षया तन्निरासात् । उक्तं हि

''न परीक्षानवस्था स्यात्साक्षिसिद्धे त्वसंशयाद्''इति ।
''नहि बाधः क्वचिद्दृष्टो दुःखाद्यनुभवस्य तु''इति च ।

---

नन्वद्वैतश्रुत्यादेरतत्वावेदकेन प्रत्यक्षादिना बाधे शुक्तिरूप्यादिवत् प्रातिभासिकत्वापत्त्या तत्र तद्वैलक्षण्यधीर्न युक्तेत्यत आह **अप्रातिभासिकत्वधीरिति** । **नचैवमिति** । द्वैतस्य पारमार्थिकत्वे इत्यर्थः । **किञ्चेति** । तथाच विशेषादर्शनसहितस्यैव साधारणधर्मस्य संशायकत्वं, न तु साधारणधर्ममात्रस्येति

भावः । ननु मन्मते वेदस्योत्पत्तिमत्त्वेऽपि शुकबालादिवाक्यवदर्थज्ञानादि पूर्वकत्वाभावेन निर्दोषत्वं किं न स्यादित्यत अह **तस्या इति** । उपक्रमादिसल्लिङ्गैरेव तात्पर्यज्ञानमभ्रमः स्यादित्यत आह **उपक्रमेति** । **स्वाप्रप्रत्यक्षेपीति** । तथाच क्लृप्तदोषाभावनिश्चयमात्रं नाबाध्यत्वप्रयोजकमिति भावः । **गुणाजन्यत्वेति** । तथाच सहचारमात्रप्रवृत्तस्यास्य साधर्म्यसमत्वादिति भावः । **नापि बाह्यप्रत्यक्ष इति** । अत्रापि बाधशङ्केत्यनुषज्यते । **तन्निरासादिति** । बाधशङ्कानिरासादित्यर्थः । ननु परीक्षया तन्निरासे तत्रापि बाधशङ्कानिरासार्थं परीक्षान्तरापेक्षायामनवस्थेत्यत आह **उक्तं हीति** । **साक्षिसिद्धे त्विति** । साक्षिणः स्वप्रकाशत्वेन स्वप्रामाण्यस्य स्वेनैव निश्चयादिति भावः ।



**ಅಪ್ರಾತಿಭಾಸಿಕತ್ವಧೀಸ್ತು ತಾತ್ವಿಕತ್ವಧೀರಿವ ಯುಕ್ತಾ ।**

ಬ್ರಹ್ಮವ್ಯತಿರಿಕ್ತವೆಲ್ಲವೂ ಅತಾತ್ವಿಕವಾದರೂ ಅದ್ವೈತ ಶ್ರುತಿ ಮಾತ್ರ ತತ್ವಾವೇದಕವಾದ್ದರಿಂದ ತಾತ್ವಿಕವೆಂದೇ ನೀನು ಹೇಳುವಿ. ಏಕೆಂದರೆ ಬಾಧ ವಿಲಂಬವಿದೆ! ಆದರಿಂದ ನಾವೂ ಕೂಡ, ವ್ಯಾವಹಾರಿಕ ಸತ್ವವಿರೋಧಿಯಾದ ಅತತ್ವಾವೇದಕ ಪ್ರತ್ಯಕ್ಷ ಆಗಮಗಳಿಂದ ಅದ್ವೈತ ಶ್ರುತಿಗೆ ಬಾಧಶಂಕೆ ಮಾಡಿದಾಗ ಆದಕ್ಕೆ ಶುಕ್ತಿರೂಪ್ಯದಂತೆ ಪ್ರಾತಿಭಾಸಿಕತ್ವ ಬಂದರೂ, ಬಾಧವಿಲಂಬ ವಿರುವುದರಿಂದ ಅಪ್ರಾತಿಭಾಸಿಕತ್ವ ಬುದ್ಧಿಯು ಯುಕ್ತವೇ ಎನ್ನುತ್ತೇವೆ.

**ನ ಚೈವಂ ಬ್ರಹ್ಮತತ್ವಜ್ಞಾನಾತ್ ತನ್ನಿವೃತ್ತಿ ಶ್ರುತಿವಿರೋಧಃ। ಅತ್ರಾಪಿ ಅನಿವೃತ್ತಿ ಶ್ರುತಿರೇವ ನಿವೃತ್ತಿ ಶ್ರುತಿತಯಾ ಗೃಹೀತೇತಿ ಶಂಕೋದಯಾತ್ ।**

'ಶ್ರುತ್ಯಾದಿಗಳು ಪ್ರಾತಿಭಾಸಿಕವೇ ಆದರೂ ಅವುಗಳಲ್ಲಿ ಅಪ್ರಾತಿಭಾಸಿಕತ್ವ ಬುದ್ಧಿಯು ಅತಾತ್ವಿಕದಲ್ಲಿ ತಾತ್ವಿಕತ್ವ ಬುದ್ಧಿಯಂತೆ ಯುಕ್ತ' ಎನ್ನುವುದು ಸರಿಯಲ್ಲ, ಶ್ರುತ್ಯಾದಿಗಳು ಪ್ರಾತಿಭಾಸಿಕವಲ್ಲ. ಪ್ರಾತಿಭಾಸಿಕವೆಂದರೆ, 'ತರತಿ ಶೋಕಂ ಆತ್ಮವಿತ್' ಇತ್ಯಾದಿ ಶ್ರುತಿಯು 'ಬ್ರಹ್ಮತತ್ವಜ್ಞಾನದಿಂದ ಬ್ರಹ್ಮವ್ಯತಿರಿಕ್ತವೆಲ್ಲವೂ ನಿವೃತ್ತಿ ಹೊಂದುತ್ತದೆ' ಎನ್ನುವುದು ಕೂಡಲಾರದು. ಬ್ರಹ್ಮವ್ಯತಿರಿಕ್ತವೆಲ್ಲವೂ ಪ್ರಾತಿಭಾಸಿಕವಾದರೆ ಬ್ರಹ್ಮಜ್ಞಾನದಿಂದ ನಿವೃತ್ತಿ ಕೂಡಲಾರದು'—ಹೀಗೆ ಅದ್ವೈತಿ ಹೇಳಿದರೆ ನಾವು ಹೇಳುವೆವು—'ತರತಿ' ಶ್ರುತಿಯ ವಿಷಯದಲ್ಲಿಯೂ 'ಇದು ಅನಿವೃತ್ತಿಯನ್ನು ಹೇಳುವ ಶ್ರುತಿಯೇ. 'ನಿವೃತ್ತಿಯನ್ನು ಹೇಳುತ್ತದೆ' ಎಂದು ತಪ್ಪಾಗಿ ತಿಳಿಯುತ್ತಿದ್ದೇವೆ' ಎಂದು ಶಂಕೆ ಇರುವುದರಿಂದ ಅದು ಪ್ರಮಾಣವಲ್ಲ. ಅದರ ವಿರೋಧದಿಂದೇನೂ ತೊಂದರೆ ಇಲ್ಲ.

**ಕಿಂಚ ಅಪರೀಕ್ಷಿತೇ ರೂಪ್ಯಾದಿ ಪ್ರತ್ಯಕ್ಷೇ ದೋಷ ಬಾಧಯೋಃ ದರ್ಶನೇನ ಪರೀಕ್ಷಿತೇ ಜಗತ್ಪ್ರತ್ಯಕ್ಷೇಽಪಿ ತದಾಶಂಕಾಯಾಂ ಲಿಂಗಶಬ್ದಾಭಾಸಯೋಃ ತದ್ದರ್ಶನೇನ ಅದ್ವೈತ ಲಿಂಗಶಬ್ದಯೋರಪಿ ತಚ್ಛಂಕಾ, ಬಾಧಿತೇ ಅಕ್ಷಲಿಂಗಾದ್ಯಾಭಾಸೇಽಪಿ ಭ್ರಮಬಾಧಿತ ಪ್ರಮಾ ದೃಷ್ಟಾಂತೇನ ಅಬಾಧಶಂಕಾಪಿ ಸ್ಯಾತ್ ಇತಿ ಪ್ರಮಾಣ ತದಾಭಾಸ ವ್ಯವಸ್ಥಾ ನ ಸ್ಯಾತ್। ತದುಕ್ತಂ—**

**'ನಿರ್ದೋಷಾನುಮಾಯಾಃ ಸದೋಷತ್ವಂ, ಸದೋಷಾನುಮಾಯಾಃ ನಿರ್ದೋಷತ್ವಂ ಇತ್ಯವ್ಯವಸ್ಥಾ' ಇತಿ ।**

ಅಪರೀಕ್ಷಿತವಾದ ರೂಪ್ಯಾದಿ ಪ್ರತ್ಯಕ್ಷದಲ್ಲಿ ದೋಷವೂ ಬಾಧವೂ ಕಂಡಿದೆ ಎಂದ ಮಾತ್ರಕ್ಕೆ ಪರೀಕ್ಷಿತವಾದ ಜಗತ್ಪ್ರತ್ಯಕ್ಷದಲ್ಲಿಯೂ ದೋಷಬಾಧ ಶಂಕಾ ಮಾಡುವುದಾದರೆ ದುಷ್ಟ ಅನುಮಾನಾಗಮಗಳಲ್ಲಿ ದೋಷಬಾಧಗಳು ಕಂಡಿವೆ ಎಂಬ ಕಾರಣಕ್ಕೇ ಅದ್ವೈತಾನುಮಾನು ಗಳಲ್ಲಿಯೂ ದೋಷಬಾಧಶಂಕಾ ಮಾಡಬೇಕಾದೀತು. ಬಾಧಿತವಾದ ಪ್ರತ್ಯಕ್ಷಾನುಮಾನಾದಿ ಗಳಲ್ಲಿಯೂ ಕೂಡ, ಭ್ರಮಬಾಧಿತವೆಂದು ತಪ್ಪಾಗಿ ತಿಳಿದ ಪ್ರಮಾದೃಷ್ಟಾಂತದಿಂದ, 'ವಸ್ತುತಃ ಅಬಾಧ್ಯವೇ' ಇರಬಹುದೆಂದು ಶಂಕಾ ಮಾಡಬೇಕಾದೀತು. 'ಇದು ಪ್ರಮಾಣ ಇದು ಅಪ್ರಮಾಣ' ಎನ್ನುವ ವ್ಯವಸ್ಥೆ ಇಲ್ಲವಾದೀತು. ಪ್ರಮಾಣಲಕ್ಷಣದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ—

'ನಿರ್ದೋಷಾನುಮಾನವು ಸದೋಷವೆಂದೂ ಸದೋಷವು ನಿರ್ದೋಷವೆಂದೂ ಆದೀತು. ನಿರ್ದೋಷ ಸದೋಷ ವ್ಯವಸ್ಥೆಯೇ ಇಲ್ಲವಾದೀತು' ಎಂದು.

**ಶ್ರುತಿರ್ನಿತ್ಯತ್ವಾನ್ನಿರ್ದೋಷೇತಿ ಚೇನ್ನ। ತ್ವನ್ಮತೇ ಶ್ರುತಿನಿತ್ಯತಾಯಾ ಆಕಲ್ಪಂ ಸ್ಥಿತಿಮಾತ್ರರೂಪತ್ವೇನ ಆಕಾಶಾದಿವತ್ ಪ್ರತಿಕಲ್ಪಂ ತಸ್ಯಾ ಉತ್ಪತ್ತೇಃ। ತಸ್ಯಾಃ ಪ್ರಮಾಕರಣತ್ವೇಽಪಿ ಮಮ ದ್ವೈತ ಇವ, ಬ್ರಹ್ಮಮೀಮಾಂಸಾಯಾಂ ಪ್ರತ್ಯಧಿಕರಣಂ ಪೂರ್ವಪಕ್ಷ್ಯಭಿಮತಾರ್ಥ ಇವ ಚ, ತವ ಅದ್ವೈತೇ ತಾತ್ಪರ್ಯಧೀಃ ಭ್ರಮ ಇತಿ ಶಂಕಯಾ ತಜ್ಜನ್ಯ ಅದ್ವೈತಧಿಯಃ ಪ್ರಮಾತ್ವಾಸಿದ್ಧೇಶ್ಚ।**

'ಶ್ರುತಿಯು ನಿತ್ಯವಾದ್ದರಿಂದ ದೋಷವಿರುವುದಿಲ್ಲ' ಎಂದರೆ, ನಿನ್ನ ಮತದಲ್ಲಿ ನಿತ್ಯವೆಂದರೆ ಆಕಾಶಾದಿಗಳಂತೇ ಕೇವಲ ಕಲ್ಪಾಂತದವರೆಗೆ ಇದೆ ಎಂದರ್ಥ, ಹೊರತು ಪ್ರತಿಕಲ್ಪದಲ್ಲಿ ಅದಕ್ಕೆ ಉತ್ಪತ್ತಿ ಇದ್ದೇ ಇದೆ. ಅದರಿಂದ ನಿರ್ದೋಷವೆನ್ನಲಾಗದು. ಅರ್ಥಜ್ಞಾನ ಪೂರ್ವಕಕೃತವಲ್ಲದ್ದರಿಂದ ಶುಕವಾಕ್ಯದಂತೆ ಶ್ರುತಿಯು ಪ್ರಮಾಕರಣವೇ ಆದರೂ, ನಿನ್ನ ಪ್ರಕಾರ ನನಗೆ ದ್ವೈತದಲ್ಲಿ ಶ್ರುತಿಗೆ ತಾತ್ಪರ್ಯಭ್ರಮವಿರುವಂತೆ, ಮತ್ತು ಬ್ರಹ್ಮಮೀಮಾಂಸೆಯಲ್ಲಿ ಪ್ರತಿ ಅಧಿಕರಣದಲ್ಲಿ ಪೂರ್ವಪಕ್ಷಿಗೆ ಅವನು ಹೇಳುವ ಅರ್ಥದಲ್ಲಿ ಶ್ರುತಿತಾತ್ಪರ್ಯ ಭ್ರಮವಿರುವಂತೆ ನಿನಗೂ ಅದ್ವೈತದಲ್ಲಿ ಶ್ರುತಿತಾತ್ಪರ್ಯಜ್ಞಾನವು ಭ್ರಮವೇ ಏಕೆ ಇರಲಾರದು ಎಂಬ ಶಂಕೆ ಬರುವುದರಿಂದ, ಅದ್ವೈತ ಶ್ರುತಿಜನ್ಯ ಅದ್ವೈತಜ್ಞಾನವು ಪ್ರಮಾ ಎಂದು ಸಿದ್ಧವಾಗಲಾರದು.

**ಉಪಕ್ರಮೋಪಸಂಹಾರ ತದೈಕರೂಪ್ಯಗ್ರಾಹಿ ಪ್ರತ್ಯಕ್ಷೇಽಪ್ಯುಕ್ತನ್ಯಾಯೇನ ಶಂಕೋದಯೇನ ತದೈಕರೂಪ್ಯಾಸಿದ್ಧೇಶ್ಚ । ಕಿಂಚ—**

**ಪ್ರತ್ಯಕ್ಷೇ ಕ್ಲೃಪ್ತದೋಷಾಣಾಂ ಅಭಾವೋಽತ್ರ ವಿನಿಶ್ಚಿತಃ ।**
**ಅನ್ಯಸ್ಯ ಕಲ್ಪನಾ ನಿತ್ಯೇ ವೇದೇಽಪಿ ನ ನಿವಾರ್ಯತೇ ॥**

**ಸ್ವಾಪ್ನಪ್ರತ್ಯಕ್ಷೇಽಪಿ ತದಾ ದೂರಾದ್ಯಭಾವ ನಿಶ್ಚಯೋಽಸ್ತೀತಿ ಚೇನ್ನ । ಸ್ವಾಪ್ನೇ ಶೂನ್ಯಮೇವ ತತ್ತ್ವಮಿತಿ ವೇದೇಽಪಿ ತದಾ ಭ್ರಾಂತ್ಯಾದ್ಯಭಾವ ನಿಶ್ಚಯಸ್ಯ ಸತ್ತ್ವಾತ್ । ಸ್ವಪ್ನವೈಷಮ್ಯಾನುಭವಸ್ತು ಉಭಯತ್ರ ಸಮಃ ।**

ಉಪಕ್ರಮಾದಿ ಲಿಂಗಗಳಿಂದಲೇ ತಾತ್ಪರ್ಯವನ್ನು ತಿಳಿದರೆ ಭ್ರಮವಿರುವುದಿಲ್ಲ ಎಂದರೆ, ಉಪಕ್ರಮ ಉಪಸಂಹಾರಗಳನ್ನೂ ಅವುಗಳ ಏಕರೂಪತೆಯನ್ನೂ ಗ್ರಹಿಸುವ ಪ್ರತ್ಯಕ್ಷದ ವಿಷಯದಲ್ಲಿಯೂ ಹಿಂದೆ ಹೇಳಿದಂತೆ ಶಂಕೆ ಬರಬಹುದಾದ್ದರಿಂದ ಉಪಕ್ರಮೋಪಸಂಹಾರಗಳ ಏಕರೂಪತೆಯೂ ಸಿದ್ಧವಾಗದು.

ಮತ್ತು, ಪ್ರತ್ಯಕ್ಷದಲ್ಲಿ ಕ್ಲೃಪ್ತವಾದ ದೋಷಗಳು ಸತ್ವಪ್ರತ್ಯಕ್ಷದಲ್ಲಿ ಇಲ್ಲ ಎನ್ನುವುದು ನಿಶ್ಚಿತವಾಗಿದೆ. ಅಕ್ಲೃಪ್ತವಾದ ಬೇರೇ ದೋಷವೇನಾದರೂ ಇರಬಹುದೆಂದು ಕಲ್ಪನೆ ವೇದದಲ್ಲಿಯೂ ಬರಬಹುದು. ಅದು ಅನಿವಾರ್ಯ.

'ಸ್ವಾಪ್ನಪ್ರತ್ಯಕ್ಷದಲ್ಲಿಯೂ ಸ್ವಪ್ನಕಾಲದಲ್ಲಿ ದೂರಾದಿ ದೋಷಾಭಾವವು ನಿಶ್ಚಿತವಾಗಿದೆ. ಆದರೂ ಆ ಪ್ರತ್ಯಕ್ಷದಿಂದ ನಿಮಗೆ ವಿಷಯ ಸಿದ್ಧಿಯಾಗುವುದಿಲ್ಲ. ಅದು ಭ್ರಮವೇ' ಎಂದರೆ, ನಿನಗೂ ಸ್ವಪ್ನಕಾಲದಲ್ಲಿ 'ಶೂನ್ಯವೇ ತತ್ತ್ವ' ಎಂದು ವೇದ ಹೇಳುತ್ತದೆ. ಅದರಲ್ಲಿ ತಾತ್ಪರ್ಯ ಭ್ರಮಾದಿ ದೋಷವಿಲ್ಲವೆಂದೂ ನಿಶ್ಚಿತವಾಗಿರುತ್ತದೆ. ಆದರೆ ಅದರಿಂದ ನಿನಗೆ ಶೂನ್ಯತತ್ತ್ವ ಸಿದ್ಧಿಯಾಗುತ್ತಿಲ್ಲ, ಅದು ಭ್ರಮೆ.

'ಅದ್ವೈತಶ್ರುತಿಯಲ್ಲಿ ಸ್ವಾಪ್ನಶೂನ್ಯಪ್ರತಿಪಾದಕ ವೇದದ ಸಾಮ್ಯವಿಲ್ಲ. ವೈಧರ್ಮ್ಯವೇ ಇದೆ' ಎಂದರೆ ಸನ್‌ಘಟಃ ಎಂಬ ಸತ್ವಪ್ರತ್ಯಕ್ಷದಲ್ಲಿಯೂ ಸ್ವಾಪ್ನಪ್ರತ್ಯಕ್ಷದ ಸಾಮ್ಯವಿಲ್ಲ, ವೈಧರ್ಮ್ಯವೇ ಇದೆ ಎನ್ನುವುದು ಸಮಾನ.

**ಕಿಂಚ ನ ತಾವತ್ ಸಾಕ್ಷಿಣಿ ಬಾಧಶಂಕಾ । ತಸ್ಯ ನಿತ್ಯಾನುಭವರೂಪತಯಾ ವೇದ ಇವ ತಾತ್ಪರ್ಯಭ್ರಾಂತೇರಪ್ಯಯೋಗೇನ ವೇದಾದಪಿ ಅನಾಶಂಕಿತದೋಷತ್ವಾತ್ । ಪ್ರಮಾಣಾ ಜನ್ಯತ್ವಮಾತ್ರೇಣ ತದಪ್ರಾಮಾಣ್ಯೇ ಗುಣಾಜನ್ಯತ್ವಮಾತ್ರೇಣ ವೇದಸ್ಯಾಪಿ ಅಪ್ರಾಮಾಣ್ಯಾಪಾತಾತ್ ।**

ಭಾವಿಬಾಧಕ ಶಂಕೆಗೆ ಬಾಧಕತ್ವವನ್ನು ಒಪ್ಪಿದರೂ ಸಾಕ್ಷಿಜನ್ಯಜ್ಞಾನದಲ್ಲಿ ಭಾವಿಬಾಧಕಶಂಕೆಗೆ

ಅವಕಾಶವಿಲ್ಲ. ಸಾಕ್ಷಿಯು ನಿತ್ಯಾನುಭವ ರೂಪವಾಗಿದೆ. 'ನಿತ್ಯಾನುಭವರೂಪವಾದ ಶುದ್ಧಚೈತನ್ಯವು ನನ್ನ ಮತದಲ್ಲಿ ಸಾಕ್ಷಿಯಲ್ಲ. ದೋಷಜನ್ಯ ಅವಿದ್ಯಾವೃತ್ತ್ಯವಚ್ಛಿನ್ನ ಚೈತನ್ಯವೇ ಸಾಕ್ಷಿ ಎನ್ನುತ್ತೇನೆ'—ಎನ್ನುತ್ತಾನೆ ಸಿದ್ಧಿಕಾರ. ಆದರೆ, ಸುಷುಪ್ತಿಯಲ್ಲಿ ದೋಷಜನ್ಯಜ್ಞಾನವಿಲ್ಲ. ಶುದ್ಧ ಚೈತನ್ಯವೆ ಸಾಕ್ಷಿ ಎನ್ನುತ್ತಾನೆ. 'ಸುಷುಪ್ತಿಯಲ್ಲಿ ಮಾತ್ರ ಶುದ್ಧ ಚೈತನ್ಯವು ಸಾಕ್ಷಿ' ಎಂದರೆ ಜಾಗರದಲ್ಲಿ ಅದ್ವೈತಶ್ರುತಿಜನ್ಯಜ್ಞಾನತತ್ಪ್ರಾಮಾಣ್ಯ ಜ್ಞಾನವೂ ದೋಷಜನ್ಯಸಾಕ್ಷಿವೇದ್ಯವೆಂದಾಗುವುದರಿಂದ ಅದು ಬಾಧಿತ, ಅಪ್ರಮಾಣ. ಅದ್ವೈತಕ್ಕೆ ಪ್ರಮಾಣವಿಲ್ಲ ಎಂದಾಗುವುದು. ವೇದದಂತೆ ಸಾಕ್ಷಿಯಲ್ಲಿ ತಾತ್ಪರ್ಯಭ್ರಮರೂಪ ದೋಷಶಂಕೆಗೂ ಅವಕಾಶವಿಲ್ಲ. ಆದರಿಂದ ವೇದಕ್ಕಿಂತಲೂ ಸಾಕ್ಷಿಯು ಹೆಚ್ಚು ವಿಶ್ವಸನೀಯ.

ಸಾಕ್ಷಿಯು ಪ್ರಮಾಣಜನ್ಯವಾಗದಿರುವುದರಿಂದ ಅಪ್ರಾಮಾಣ್ಯಕಾರಣವಾದ ಬಾಧಕ ಶಂಕಾಕ್ಕೆ ಅವಕಾಶವಿದೆ ಎಂದರೆ ವೇದದಲ್ಲಿಯೂ ಆಪ್ತೋಕ್ತತ್ವರೂಪಗುಣಜನ್ಯತ್ವವಿಲ್ಲದಿರುವುದರಿಂದ ಅಪ್ರಾಮಾಣ್ಯಕಾರಣವಾದ ಬಾಧಕಶಂಕಾಕ್ಕೆ ಅವಕಾಶವಿದೆ. ಹೀಗಾಗಿ ಇದು ಸಹಚಾರ ಮಾತ್ರದಿಂದ ಪ್ರವೃತ್ತವಾದ್ದರಿಂದ ಸಾಧರ್ಮ್ಯಸಮ ಎಂಬ ಜಾತ್ಯುತ್ತರವಾಗಿದೆ.

**ನಾಪಿ ಬಾಹ್ಯಪ್ರತ್ಯಕ್ಷೇ । ತತ್ರಾಪಿ ನಿಃ ಶಂಕಂ ಸಾಕ್ಷಿಗ್ರಾಹ್ಯಸುಖಾದಿಪರ್ಯಂತ ಪರೀಕ್ಷಯಾ ತನ್ನಿರಾಸಾತ್ । ಉಕ್ತಂ ಹಿ—**

**'ನ ಪರೀಕ್ಷಾನವಸ್ಥಾ ಸ್ಯಾತ್ ಸಾಕ್ಷಿಸಿದ್ಧೇ ತ್ವ ಸಂಶಯಾತ್' ಇತಿ ।**

**'ನಹಿ ಬಾಧಃ ಕ್ವಚಿದ್ ದೃಷ್ಟೋ ದುಃಖಾದ್ಯನುಭವಸ್ಯ'ತು ಇತಿ ಚ ।**

ಬಾಹ್ಯಪ್ರತ್ಯಕ್ಷದಲ್ಲಿಯೂ ಬಾಧಶಂಕೆಗೆ ಅವಕಾಶವಿಲ್ಲ. ಶಂಕೆಗೇ ಅವಕಾಶವಿಲ್ಲದಂತೆ ಸಾಕ್ಷಿಗ್ರಾಹ್ಯವಾದ ಸುಖಾದಿಪರ್ಯಂತ ಪರೀಕ್ಷಾ ಮಾಡಿದಾಗ ಬಾಧಶಂಕಾ ಪರಿಹಾರವಾಗುತ್ತದೆ.

'ಸುಖಾದಿ ಪರ್ಯಂತ ಪರೀಕ್ಷಾ' ಎಂದರೆ 'ಇಲ್ಲಿ ನೀರಿದೆ' ಎಂದು ಒಬ್ಬನು ಹೇಳಿದ್ದನ್ನು ಕೇಳಿ ಹೋಗಿ ಕುಡಿದು ಸುಖಪಡುತ್ತಾನೆ. ಅವನು ನುಡಿದ ಶಬ್ದದಲ್ಲಿ ದೋಷವಿಲ್ಲ. ಆದರಿಂದ ಬಂದ ಜ್ಞಾನವೂ ದೋಷಜನ್ಯವಲ್ಲ ಎಂದು ನಿಶ್ಚಯ ಮಾಡಿಕೊಳ್ಳುತ್ತಾನೆ. ಈ ಪರೀಕ್ಷೆಯಿಂದ ಭಾವಿಬಾಧಕ ಶಂಕಾ ನಿರಾಸವಾಗುತ್ತದೆ.

ಆದರೂ ಪರೀಕ್ಷೆಯಿಂದ ಬಾಧಶಂಕಾ ಪರಿಹಾರವೆಂದರೆ ಆ ಪರೀಕ್ಷೆಯಲ್ಲಿಯೂ ಬಾಧಶಂಕಾನಿರಾಸಕ್ಕಾಗಿ ಇನ್ನೊಂದು ಪರೀಕ್ಷೆ, ಆ ಪರೀಕ್ಷೆಗೂ ಮತ್ತೊಂದು ಪರೀಕ್ಷೆ ಎಂದು ಅನವಸ್ಥೆ ಬರುತ್ತದೆ ಎಂದರೆ,

ಉಭಯಲಿಂಗಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ—

'ಪರೀಕ್ಷೆಗೂ ಪರೀಕ್ಷೆ ಬೇಕೆಂದು ಅನವಸ್ಥೆ ಇಲ್ಲ. ಸಾಕ್ಷಿಯು ಸ್ವಪ್ರಕಾಶವಾದ್ದರಿಂದ ತನ್ನ ಪ್ರಾಮಾಣ್ಯವನ್ನು ತಾನೇ ನಿಶ್ಚಯಿಸುತ್ತದೆ' ಎಂದಿದ್ದಾರೆ.

ಪೃಥಗಧಿಕರಣಾನುವ್ಯಾಖ್ಯಾನದಲ್ಲಿಯೂ ಹೇಳಿದ್ದಾರೆ—

'ದುಃಖಾದಿಗಳ ಸಾಕ್ಷ್ಯನುಭವದಲ್ಲಿ ಎಲ್ಲಿಯೂ ಬಾಧಬರುವುದು ಕಂಡಿಲ್ಲ'.



ननु स्वाप्नजलप्रत्यक्षेऽपि स्वाप्नावगाहनपान तज्जन्यसुख पर्यन्ता परीक्षास्तीति चेन्न । स्वाप्नस्य 'शून्यमेव तत्वमि'ति वेदस्याप्यपौरुषेय त्वज्ञान षड्विध तात्पर्यलिङ्ग ज्ञानानुग्राहक तर्कानुसंधान ब्रह्माद्वैतश्रुति प्रतियोगिक प्राबल्यनिर्णय स्वाप्न शून्यसाक्षात्कार तज्जन्यशून्यभावापत्तिरूपमोक्ष पर्यन्ता परीक्षास्तीति फलपर्यन्ताद्वैत श्रुतावप्यनाश्वासापातात् । स्वाप्नवैषम्यानुभवेनाश्वासस्तूभयत्र सम इत्युक्तम् । अन्यथा परस्यापि प्रातिभासिकवैलक्षण्यं न सिध्येत् ।

एवञ्च—

स्वाप्नाद्विशेषस्यासिद्धौ प्रपञ्चस्याद्वयश्रुतिः ।
स्यात्फलेन सह स्वाप्नी सिद्धौ शङ्काक्षजे कुतः ।।

नहि प्रत्यक्षशब्दत्वकृतं वैषम्यमीक्ष्यते ।
बाधाबाधकृतस्त्वेव विशेषः संप्रदृश्यते ।।

तस्मात्त्वयाप्यौत्सर्गिकस्य प्रामाण्यस्य बलवद्बाधकदर्शनैकापोद्यत्वेन सप्तमरसशङ्कातुल्येन शङ्कामात्रेणानपवादात् स्वव्याघातादिना शङ्कानुदयाच्च श्रुतेः प्रामाण्यनिश्चय इति वाच्यम् ।

उक्तं हि खण्डने—

अत्यन्तासत्यपि ज्ञानमर्थे शब्दः करोति हि ।
अबाधात्तु प्रमामत्र स्वतःप्रामाण्यनिश्चलाम् ।। इति ।

(ए)तत्प्रत्यक्षेऽपि तुल्यम् । उक्तं हि सुरेश्वरेणापि

अतोऽवबोधकत्वेन दुष्टकारणवर्जनात् ।

अबाधाच्च प्रमाणत्वं वस्तुन्यक्षादिवच्छ्रुतेः ।। इति ।

तस्मात्—

अहेतुकार्यशङ्केव स्वक्रियादिविरोधतः ।
भाविबाधकशङ्का न युक्ताध्यक्षे श्रुताविव ।।

उक्तं ह्युदयनेन—

''तदेव ह्याशङ्क्येत यस्मिन्नाशङ्क्यमाने स्वक्रियाव्याघातो न भवती''ति ।

उक्तञ्च वार्तिके वौद्धं प्रति—

इह जन्मनि केषांचिन्न तावदुपलभ्यते ।
योग्यवस्थागतानां तु न विद्मः किं भविष्यति ।। इति ।

नहि संभवति शब्दानुमानाभासयोः रूप्यादिधीप्रामाण्यग्राहिप्रत्यक्षस्य च बाधं, पदार्थत्वस्य च मिथ्यात्वव्यभिचारं, स्वैरिण्याश्चानियमं पश्यन्नपि परीक्षितत्वाद्वेदांततदनुकूलानुमानयोः वेदांतधीप्रामाण्यग्राहिप्रत्यक्षस्य चाबाधं, दृश्यत्वस्य च मिथ्यात्वाव्यभिचारं, स्वमातुश्च नियमं निश्चिनोति, जगत्प्रत्यक्षस्य तु परीक्षितस्याप्यपरीक्षितरूप्यादिप्रत्यक्षदृष्टान्तमात्रेणाबाधं न निश्चिनोतीति । परीक्षितप्रत्यक्षेऽप्यनाश्वासे हि नैकापि व्यवस्था सिध्येत् । तदवसानत्वात्सर्वस्य । नहि श्रुतेऽनुमिते वा दृष्ट इवाश्वासः ।

किञ्चैवं 'न हिंस्याद्'इत्यस्याग्नीषोमीये व्यभिचारदर्शनेनान्यत्रापि तदाशङ्क्येतेत्युत्सर्गापवादन्यायो भज्येत ।

उक्तं हि—

उत्सर्गतोऽपि यत्प्राप्तमपवादविवर्जितम् ।
व्यभिचार्यपवादेन मानमेव भविष्यति ।। इति ।

एवञ्च—

बाधाभावोऽत्र निर्णीतः शशशृंगाद्यभाववत् ।
अन्यथा शशशृंगादिरपि शङ्क्येत बाधवत् ।।

तस्मात्प्रामाण्यस्योत्पत्तौ ज्ञप्तौ च स्वतस्त्वादिह चोत्पत्तिस्वतस्त्वापवादस्य दोषस्य ज्ञप्तिस्वतस्त्वापवादस्य बाधकस्य चादर्शनात् निर्मूलशंकायाश्च स्वक्रियाविरोधादिनानुत्थानात्सुस्थं प्रत्यक्षप्रामाण्यम् ।

किञ्च 'नेदं रूप्यम्'इति प्रत्यक्षप्रामाण्यमावश्यकम्, अन्यथा 'इदं रूप्यम्'इत्यस्याप्रामाण्यं न स्यादिति वृद्धिमिच्छतो मूलहान्यापत्तेः । तथाच तत्तुल्ययोगक्षेमं 'सन्घटः' इत्यादिप्रत्यक्षं कथं न प्रमाणम् । किञ्च सौषुप्तिकानंदानुभवस्याप्रामाण्ये कथमात्मन आनन्दरूपता तात्त्विकी । आनन्दश्रुतेरनुभूतातात्त्विकानन्दानुवादित्वोपपत्तेः । किञ्च "स्मृतिः प्रत्यक्षम्" इत्यादिश्रुत्या "प्रत्यक्षमनुमानं च शास्त्रं च विविधागमाः" इति मनुस्मृत्या च सिद्धं तत्प्रामाण्यम् । नच सकृत्प्रयुक्तस्य प्रमाणशब्दस्य श्रुतौ तत्वावेदकत्वमर्थः प्रत्यक्षेऽतत्वावेदकत्वमिति युक्तम् ।।

---

**ननु स्वाप्रेति** । तथाच न सुखपर्यन्तपरीक्षयापि तन्निरास इति भावः । **अन्यथेति** । स्वाप्रवैषम्यानङ्गीकार इत्यर्थः । **सिद्धाविति** । स्वाप्राद्विशेष सिद्धावित्यर्थः । **प्रत्यक्षशब्दत्वकृतमिति** । प्रत्यक्षत्वशब्दत्वकृतमित्यर्थः । **त्वयेति** । अद्वैतश्रुतेः प्रामाण्यस्थापनार्थं प्रवृत्तेनेत्यर्थः । **प्रमामिति** । शब्दः करोतीत्यनुषङ्गः । **अहेतुकार्येति** । अहेतुक कार्येत्यर्थः । **उपलभ्यत इति** । बाध इति शेषः । **योग्यवस्थेति** । योगित्वावस्थेत्यर्थः । उक्तमर्थमनिष्टोपदर्शनेन द्रढयति **नहि संभवतीति** । **तदवसानत्वादिति** । परीक्षावसानत्वादित्यर्थः । सर्वस्य

व्यवस्थामात्रस्य । **दृष्ट इति** । परीक्षितप्रत्यक्षविषय इत्यर्थः । **किञ्चैवमिति** । कचिद्वाधदर्शनमात्रेण सर्वत्र तच्छङ्कायामित्यर्थः । **व्यभिचार्यपवादेनेति** । अपवादेन व्यभिचारीत्यन्वयः । नन्वस्मन्मते श्रुत्यैवात्मनः आनन्दत्वसिद्धिरित्यत आह **आनन्दश्रुतेरिति** ।



**ನನು ಸ್ವಾಪ್ನ ಜಲಪ್ರತ್ಯಕ್ಷೇಪಿ ಸ್ವಾಪ್ನಾವಗಾಹನ ಪಾನ ತಜ್ಜನ್ಯ ಸುಖಪರ್ಯಂತಾ ಪರೀಕ್ಷಾऽಸ್ತೀತಿ ಚೇನ್ನ। ಸ್ವಾಪ್ನಸ್ಯ 'ಶೂನ್ಯಮೇವ ತತ್ವಂ' ಇತಿ ವೇದಸ್ಯಾಪಿ ಅಪೌರುಷೇಯತ್ವ ಜ್ಞಾನ–ಷಡ್ವಿಧತಾತ್ಪರ್ಯಲಿಂಗಜ್ಞಾನ–ಅನುಗ್ರಾಹಕ ತರ್ಕಾನುಸಂಧಾನ ಬ್ರಹ್ಮಾದ್ವೈತ ಶ್ರುತಿ ಪ್ರತಿಯೋಗಿಕ ಪ್ರಾಬಲ್ಯನಿರ್ಣಯ–ಸ್ವಾಪ್ನಶೂನ್ಯ ಸಾಕ್ಷಾತ್ಕಾರ ತಜ್ಜನ್ಯ ಶೂನ್ಯ ಭಾವಾಪತ್ತಿರೂಪ ಮೋಕ್ಷಪರ್ಯಂತಾ ಪರೀಕ್ಷಾ ಅಸ್ತೀತಿ ಫಲಪರ್ಯಂತಾದ್ವೈತ ಶ್ರುತಾವಪಿ ಅನಾಶ್ವಾಸಾಪಾತಾತ್। ಸ್ವಾಪ್ನವೈಷಮ್ಯಾನುಭವೇನ ಆಶ್ವಾಸಸ್ತು ಉಭಯತ್ರ ಸಮ ಇತ್ಯುಕ್ತಂ। ಅನ್ಯಥಾ ಪರಸ್ಯಾಪಿ ಪ್ರಾತಿಭಾಸಿಕ ವೈಲಕ್ಷಣ್ಯಂ ನ ಸಿಧ್ಯೇತ್।**

'ಸ್ವಾಪ್ನಜಲಪ್ರತ್ಯಕ್ಷದಲ್ಲಿಯೂ ಕೂಡ ಸ್ವಾಪ್ನವಾದ ಜಲಾವಗಾಹನ ಪಾನ, ತಜ್ಜನ್ಯವಾದ ಸ್ವಾಪ್ನಸುಖಪರ್ಯಂತವಾಗಿ ಪರೀಕ್ಷೆ ಇದೆ. ಆದರಿಂದ ಬಾಹ್ಯಪ್ರತ್ಯಕ್ಷದಲ್ಲಿ ಸುಖಪರ್ಯಂತ ಪರೀಕ್ಷೆಯಿಂದಲೂ ಬಾಧಶಂಕಾನಿರಾಸವಾಗದು' ಎಂದರೆ ಹೇಳುತ್ತೇವೆ— ಸ್ವಾಪ್ನ ಪ್ರತ್ಯಕ್ಷ ದೃಷ್ಟಾಂತದಿಂದ ಬಾಹ್ಯಪ್ರತ್ಯಕ್ಷವೂ ಕೂಡ ಬಾಧಶಂಕಾ ಯೋಗ್ಯವೆ ಎಂದರೆ ಸ್ವಾಪ್ನ ಶೂನ್ಯಾದ್ವೈತ ಶ್ರುತಿ ದೃಷ್ಟಾಂತದಿಂದ ಬಾಹ್ಯ ಆತ್ಮಾದ್ವೈತ ಶ್ರುತಿಯೂ ಬಾಧಶಂಕಾಯೋಗ್ಯವೆನಿಸೀತು. 'ಶೂನ್ಯವೇ ತತ್ವ' ಎನ್ನುವ ಸ್ವಾಪ್ನವೇದದಲ್ಲಿಯೂ ಕೂಡ ಸ್ವಾಪ್ನವಾದ ಅಪೌರುಷೇಯತ್ವ ಜ್ಞಾನದಿಂದಾರಂಭಿಸಿ ಸ್ವಾಪ್ನವಾದ ಷಡ್ವಿಧ ತಾತ್ಪರ್ಯ ಲಿಂಗಜ್ಞಾನ–ಅನುಗ್ರಾಹಕ ತರ್ಕಾನುಸಂಧಾನ–ಆತ್ಮಾದ್ವೈತ ಶ್ರುತಿಗಿಂತ ಅಧಿಕ ಪ್ರಾಬಲ್ಯನಿರ್ಣಯ–ಶೂನ್ಯಸಾಕ್ಷಾತ್ಕಾರ–ತಜ್ಜನ್ಯ ಶೂನ್ಯಭಾವ ಪ್ರಾಪ್ತಿರೂಪ ಮೋಕ್ಷಫಲದವರೆಗಿನ ಎಲ್ಲ ಪರೀಕ್ಷೆಗಳಿಂದ ಸ್ವಾಪ್ನ ಶ್ರುತಿಯಲ್ಲಿ ಪ್ರಾಮಾಣ್ಯ ನಿಶ್ಚಯವಾಗುತ್ತದೆ. ಆದರೆ ಎಚ್ಚೆತ್ತಾಗ ಬಾಧ ಉಂಟಾಗುತ್ತದೆ. ಹಾಗೇ ಬಾಹ್ಯ ಬ್ರಹ್ಮಾದ್ವೈತ ಶ್ರುತಿಯಲ್ಲಿಯೂ ಫಲಪರ್ಯಂತ ಪರೀಕ್ಷೆ ಇದ್ದರೂ ಬಾಧ ಉಂಟಾದೀತು. ಬಾಧಶಂಕಾನರ್ಹತ್ವ ವಿಷಯದಲ್ಲಿ ಅನಾಶ್ವಾಸ ಉಂಟಾದೀತು ಎಂಬುದು ಅದ್ವೈತ ಶ್ರುತಿಯಲ್ಲಿಯೂ ಸಮಾನ. ಸ್ವಾಪ್ನವು ಬಾಧಿತ ವಾಗುತ್ತದೆ, ಬಾಹ್ಯವು ಬಾಧಿತವಾಗುವುದಿಲ್ಲ ಎಂಬ ವೈಷಮ್ಯವು ಅದ್ವೈತಶ್ರುತಿಗೂ ಜಗತ್ಪ್ರತ್ಯಕ್ಷಕ್ಕೂ ಸಮಾನ. ಇದನ್ನು ಒಪ್ಪದಿದ್ದರೆ ಅದ್ವೈತಿಯೂ ಜಗತ್ತಿಗೆ ಪ್ರಾತಿಭಾಸಿಕ ವೈಲಕ್ಷಣ್ಯವನ್ನು ಒಪ್ಪಿರುವುದು ಕೂಡಲಾರದು.

**ಏವಂಚ—**

ಸ್ವಾಪ್ನಾದ್ ವಿಶೇಷಸ್ಯಾಸಿದ್ಧೌ ಪ್ರಪಂಚಸ್ಯಾದ್ವಯಶ್ರುತಿಃ ।
ಸ್ಯಾತ್ ಫಲೇನ ಸಹ ಸ್ವಾಪ್ನೀ ಸಿದ್ಧೌ ಶಂಕಾಽಕ್ಷಜೇ ಕುತಃ ॥

ನಹಿ ಪ್ರತ್ಯಕ್ಷ ಶಬ್ದತ್ವಕೃತಂ ವೈಷಮ್ಯಮೀಕ್ಷ್ಯತೇ ।
ಬಾಧಾಬಾಧಕೃತಸ್ತ್ವೇವ ವಿಶೇಷಃ ಸಂಪ್ರದೃಶ್ಯತೇ ॥

ಪ್ರಪಂಚಕ್ಕೆ ಸ್ವಪ್ನದಿಂದ ವೈಲಕ್ಷಣ್ಯಸಿದ್ಧವಿಲ್ಲವೆಂದರೆ ಅದ್ವೈತಶ್ರುತಿಗೂ ಕೂಡ ಫಲಪರ್ಯಂತ ಪರೀಕ್ಷೆಯು ಸ್ವಾಪ್ನಶೂನ್ಯಶ್ರುತಿಗೆ ಸಮಾನವೆ ಆದೀತು. ಪ್ರಪಂಚಕ್ಕೆ ಸ್ವಾಪ್ನದಿಂದ ವೈಲಕ್ಷಣ್ಯಸಿದ್ಧವಿದೆ ಎಂದರೆ ಬಾಹ್ಯಪ್ರತ್ಯಕ್ಷಕ್ಕೆ ಸ್ವಾಪ್ನ ಪ್ರತ್ಯಕ್ಷದಂತೆಯೇ ಬಾಧವಿದ್ದೀತೆಂದು ಶಂಕೆ ಹೇಗೆ ಕೂಡುತ್ತದೆ?

'ಜಗತ್‌ಪ್ರತ್ಯಕ್ಷವು ಪ್ರತ್ಯಕ್ಷವಾದ್ದರಿಂದ ಬಾಧಶಂಕೆಗೆ ಯೋಗ್ಯ. ಅದ್ವೈತ ಶ್ರುತಿಯು ಶ್ರುತಿಯಾದ್ದರಿಂದ ಬಾಧಶಂಕಾನರ್ಹ' ಎಂದು ಪ್ರತ್ಯಕ್ಷತ್ವ ಶ್ರುತಿತ್ವ ಪ್ರಯುಕ್ತವಾಗಿ ಬಾಧಯೋಗ್ಯತ್ವ ಅಯೋಗ್ಯತ್ವಗಳೆಂಬ ವೈಲಕ್ಷಣ್ಯ ಕಾಣುವುದಿಲ್ಲ. ಬಾಧಅಬಾಧ ಪ್ರಯುಕ್ತವಾಗಿಯೇ ಶಂಕಾರ್ಹತ್ವ ಅನರ್ಹತ್ವ ವೈಲಕ್ಷಣ್ಯವು ಕಾಣುತ್ತದೆ.

**ತಸ್ಮಾತ್ ತ್ವಯಾಪಿ ಔತ್ಸರ್ಗಿಕಸ್ಯ ಪ್ರಾಮಾಣ್ಯಸ್ಯ ಬಲವದ್ ಬಾಧಕದರ್ಶನೈಕಾಪೋದ್ಯತ್ವೇನ ಸಪ್ತಮರಸ ಶಂಕಾತುಲ್ಯೇನ ಶಂಕಾಮಾತ್ರೇಣಾನಪವಾದಾತ್ ಸ್ವವ್ಯಾಘಾತಾದಿನಾ ಶಂಕಾನುದಯಾಚ್ಚ ಶ್ರುತೇಃ ಪ್ರಾಮಾಣ್ಯನಿಶ್ಚಯ ಇತಿ ವಾಚ್ಯಂ ।**

ಅದರಿಂದ ಔತ್ಸರ್ಗಿಕವಾಗಿ ಪ್ರಾಪ್ತವಾಗುವ ಪ್ರಾಮಾಣ್ಯವು ಬಲವತ್ತಾದ ಬಾಧಕ ಮಾತ್ರದಿಂದಲೇ ಇಲ್ಲವಾಗುವುದರಿಂದ 'ಆರೂ ರಸಗಳಿಲ್ಲದಿದ್ದರೇನಾಯಿತು? ಏಳನೆ ರಸವಿರಬಹುದೆಂ'ದು ಶಂಕಿಸುವಂತೆ, ಅಪರೀಕ್ಷಿತವಾದ ಶಬ್ದದಲ್ಲಿ ಕಾಣುವ ಶಂಕೆ ಯಾವುದೂ ಇಲ್ಲದಿದ್ದರೂ 'ಪರೀಕ್ಷಿತಶಬ್ದದಲ್ಲಿರಬಹುದಾದ ಬೇರೇ ಬಾಧಶಂಕೆ' ಇರಬಹುದೆಂದು ಶಂಕಿಸಿದ ಮಾತ್ರಕ್ಕೆ ಪ್ರಾಮಾಣ್ಯವಿಲ್ಲವಾಗುವುದಿಲ್ಲ. ಶಂಕಾಮಾಡಿದರೆ ಆ ಶಂಕೆಯಲ್ಲಿಯೂ ಪುನಃ ಶಂಕೆ ಬರಬಹುದೆಂದು ಸ್ವವ್ಯಾಘಾತವೂ ಬರುತ್ತದೆ. ಅದರಿಂದ ಅದ್ವೈತಶ್ರುತಿಗೆ ಪ್ರಾಮಾಣ್ಯನಿಶ್ಚಯ ಮಾಡುವುದೇ ಯುಕ್ತ ಎಂದು ನೀನೂ ಕೂಡ ಹೇಳಬೇಕು.

ಉಕ್ತಂ ಹಿ ಖಂಡನೇ—

ಅತ್ಯಂತಾಸತ್ಯಪಿ ಜ್ಞಾನಮರ್ಥೇ ಶಬ್ದಃ ಕರೋತಿ ಹಿ ।
ಅಬಾಧಾತ್ತು ಪ್ರಮಾಮತ್ರ ಸ್ವತಃಪ್ರಾಮಾಣ್ಯನಿಶ್ಚಲಾಂ ॥ ಇತಿ ।

ತತ್ ಪ್ರತ್ಯಕ್ಷೇಽಪಿ ತುಲ್ಯಂ । ಉಕ್ತಂ ಹಿ ಸುರೇಶ್ವರೇಣಾಪಿ —

ಅತೋಽವಬೋಧಕತ್ವೇನ ದುಷ್ಟಕಾರಣವರ್ಜನಾತ್ ।
ಅಬಾಧಾತ್ತು ಪ್ರಮಾಣತ್ವಂ ವಸ್ತುನ್ಯಕ್ಷಾದಿವತ್ ಶ್ರುತೇಃ ॥ ಇತಿ ।

ಖಂಡನಗ್ರಂಥದಲ್ಲಿ ಬಾಧಾಭಾವವೇ ಪ್ರಾಮಾಣ್ಯಪ್ರಯೋಜಕವೆಂದು ಹೇಳಿದೆ—

'ಅತ್ಯಂತ ಅಸತ್ತಾದ ವಿಷಯದಲ್ಲಿಯೂ ಶಬ್ದವು ಜ್ಞಾನವನ್ನು ಉಂಟುಮಾಡುತ್ತದೆ. ಆದರೆ ಬಾಧಕವಿಲ್ಲದಿದ್ದರೆ ಪ್ರಕೃತವಿಷಯದಲ್ಲಿ ಸ್ವತಃಪ್ರಾಪ್ತವಾದ ಪ್ರಾಮಾಣ್ಯದಿಂದ ನಿಶ್ಚಿತ ಪ್ರಾಮಾಣ್ಯವುಳ್ಳ ಜ್ಞಾನವನ್ನೇ ಶಬ್ದವು ಉಂಟುಮಾಡುತ್ತದೆ' ಎಂದು.

'ಔತ್ಸರ್ಗಿಕವಾಗಿ ಪ್ರಾಪ್ತವಾಗುವ ಪ್ರಾಮಾಣ್ಯವು ಬಲವತ್ತಾದ ಬಾಧಕವಿದ್ದರೆ ಮಾತ್ರ ಇಲ್ಲವಾಗುವುದರಿಂದ, ಪ್ರಕೃತದ ಶಬ್ದದಲ್ಲಿ ಪ್ರಬಲ ಬಾಧಕವಿಲ್ಲದಿರುವುದರಿಂದ ಪ್ರಾಮಾಣ್ಯವು ನಿಶ್ಚಿತವಾಗುತ್ತದೆ'—ಹೀಗೆನ್ನುವುದು ಶಬ್ದದಂತೇ ಪ್ರತ್ಯಕ್ಷದಲ್ಲಿಯೂ ಸಮಾನವೆ. ಸುರೇಶ್ವರ ವಾರ್ತಿಕದಲ್ಲಿಯೂ ಇದು ಉಕ್ತವಾಗಿದೆ—'ಶಬ್ದವು ಬೋಧಕವಾಗಿಇದೆ, ದುಷ್ಟಕಾರಣವೂ ಇಲ್ಲ ಎಂದರೆ ಬಾಧಕವಿಲ್ಲದಿರುವುದರಿಂದ ವಸ್ತುಸತ್ವವಿಷಯದಲ್ಲಿ ಪ್ರತ್ಯಕ್ಷಾದಿಗಳಂತೆ ಶ್ರುತಿಯೂ ಪ್ರಮಾಣವೇ ಆಗುತ್ತದೆ' ಎಂದು. ಹೀಗೆ 'ಶ್ರುತಿಯು ಅಬಾಧಿತವಾಗಿದ್ದರೆ ಪ್ರಮಾಣ'ವೆನ್ನುವಲ್ಲಿ ಪ್ರತ್ಯಕ್ಷಾದಿಗಳನ್ನು ದೃಷ್ಟಾಂತವಾಗಿ ಕೊಡುತ್ತಾನೆ ವಾರ್ತಿಕಕಾರ! ಪ್ರತ್ಯಕ್ಷವು ಅಪ್ರಮಾಣವೆನ್ನುತ್ತಾನೆ ಸಿದ್ಧಿಕಾರ!

**ತಸ್ಮಾತ್ —**

**ಅಹೇತು ಕಾರ್ಯ ಶಂಕೇವ ಸ್ವಕ್ರಿಯಾದಿವಿರೋಧತಃ ।**
**ಭಾವಿಬಾಧಕ ಶಂಕಾ ನ ಯುಕ್ತಾಽಧ್ಯಕ್ಷೇ ಶ್ರುತಾವಿವ ॥**

**ಉಕ್ತಂ ಹ್ಯುದಯನೇನ—**

**ತದೇವ ಹ್ಯಾಶಂಕ್ಯೇತ ಯಸ್ಮಿನ್ನಾಶಂಕ್ಯಮಾನೇ ।**
**ಸ್ವಕ್ರಿಯಾ ವ್ಯಾಘಾತೋ ನ ಭವತೀತಿ ॥**

**ಉಕ್ತಂ ಚ ವಾರ್ತಿಕೇ ಬೌದ್ಧಂ ಪ್ರತಿ—**

**ಇಹ ಜನ್ಮನಿ ಕೇಷಾಂ ಚಿನ್ನ ತಾವದುಪಲಭ್ಯತೇ ।**
**ಯೋಗ್ಯವಸ್ಥಾಗತಾನಾಂ ತು ನ ವಿದ್ಮಃ ಕಿಂ ಭವಿಷ್ಯತೀತಿ ॥**

ಆದರಿಂದ ಹೇತು ಇಲ್ಲದಿದ್ದರೂ ಕಾರ್ಯವಾದೀತೆಂದು ಶಂಕೆಯಂತೆಯೇ ಇದು ಭಾವಿಬಾಧಕಶಂಕೆ. ಏಕೆಂದರೆ ಸ್ವಕ್ರಿಯಾ ವಿರೋಧ ಬರುವುದರಿಂದ ಶ್ರುತಿಯಲ್ಲಿ ಹೇಗೋ ಹಾಗೆ ಪ್ರತ್ಯಕ್ಷದಲ್ಲಿಯೂ ಭಾವಿಬಾಧಕ ಶಂಕೆ ಯುಕ್ತವಲ್ಲ. ಉದಯನನೂ ಹೇಳಿದ್ದಾನೆ—

'ಯಾವುದನ್ನು ಆಶಂಕಿಸುವಾಗ ಸ್ವಕ್ರಿಯಾವಿರೋಧ ಬರುವುದಿಲ್ಲವೋ ಅದನ್ನು ಆಶಂಕಿಸುವುದು ಯುಕ್ತ'.

ಭಟ್ಟವಾರ್ತಿಕದಲ್ಲಿಯೂ ಬೌದ್ಧನಿಗೆ ಹೀಗೆ ಹೇಳಿದ್ದಾರೆ—

'ಈ ಜನ್ಮದಲ್ಲಿ ಯಾರಿಗೂ ಪ್ರಪಂಚ ಸತ್ಯತ್ವಕ್ಕೆ ಬಾಧ ಬಂದಿದ್ದು ಕಂಡಿಲ್ಲ. ಇನ್ನು ಯೋಗಿತ್ವಾವಸ್ಥೆ ಬಂದಾಗ ಬಾಧ ಬರುವುದೆ ಇಲ್ಲವೆ ಎಂದು ನಮಗಂತೂ ತಿಳಿಯದು!'

**ನಹಿ ಸಂಭವತಿ—**

**'ಶಬ್ದಾನುಮಾನಾಭಾಸಯೋಃ ರೂಪ್ಯಾದಿ ಧೀಪ್ರಾಮಾಣ್ಯಗ್ರಾಹಿ ಪ್ರತ್ಯಕ್ಷಸ್ಯ ಚ ಬಾಧಂ, ಪದಾರ್ಥತ್ವಸ್ಯ ಚ ಮಿಥ್ಯಾತ್ವವ್ಯಭಿಚಾರಂ, ಸ್ವೈರಿಣ್ಯಾಶ್ಚ ಅನಿಯಮಂ ಪಶ್ಯನ್ನಪಿ, ಪರೀಕ್ಷಿತತ್ವಾತ್ ವೇದಾಂತ ತದನುಕೂಲಾನುಮಾನಯೋಃ ವೇದಾಂತ ಧೀಪ್ರಾಮಾಣ್ಯ ಗ್ರಾಹಿಪ್ರತ್ಯಕ್ಷಸ್ಯ ಚ ಅಬಾಧಂ ದೃಶ್ಯತ್ವಸ್ಯ ಚ ಮಿಥ್ಯಾತ್ವಾವ್ಯಭಿಚಾರಂ, ಸ್ವಮಾತುಶ್ಚ ನಿಯಮಂ ನಿಶ್ಚಿನೋತಿ, ಜಗತ್‌ಪ್ರತ್ಯಕ್ಷಸ್ಯ ತು ಪರೀಕ್ಷಿತಸ್ಯಾಪಿ ಅಪರೀಕ್ಷಿತ ರೂಪ್ಯಾದಿಪ್ರತ್ಯಕ್ಷ ದೃಷ್ಟಾಂತ ಮಾತ್ರೇಣ ಅಬಾಧಂ ನ ನಿಶ್ಚಿನೋತಿ'—ಇತಿ ।**

ದೋಷದುಷ್ಟವಾದ ಶಬ್ದಾನುಮಾನಗಳಿಗೂ, ರೂಪ್ಯಾದಿ ಭ್ರಮದಲ್ಲಿ ಪ್ರಾಮಾಣ್ಯಗ್ರಹಣ ಮಾಡುವ ಭ್ರಾಂತ್ಯಾತ್ಮಕಪ್ರತ್ಯಕ್ಷಕ್ಕೂ ಬಾಧವಿರುತ್ತದೆ ಎಂಬುದನ್ನು ಕಾಣುತ್ತಿದ್ದರೂ, ಪರೀಕ್ಷಿತವಾದ್ದರಿಂದ ವೇದಾಂತ ಮತ್ತು ತದನುಕೂಲವಾದ ಅನುಮಾನಗಳಿಗೆ ಬಾಧವಿಲ್ಲವೆಂದೇ ನಿಶ್ಚಯಿಸುತ್ತಾನೆ, ಅದ್ವೈತಿ. ಪದಾರ್ಥತ್ವಕ್ಕೆ ಮಿಥ್ಯಾತ್ವ ವ್ಯಭಿಚಾರವನ್ನು ಕಂಡರೂ ದೃಶ್ಯತ್ವಕ್ಕೆ ಮಿಥ್ಯಾತ್ವ ವ್ಯಾಪ್ತಿಯನ್ನೇ ನಿಶ್ಚಯಿಸುತ್ತಾನೆ. ವ್ಯಭಿಚಾರಿಣಿಸ್ತ್ರೀಗೆ ಪಾತಿವ್ರತ್ಯ ನಿಯಮವಿಲ್ಲ ಎಂದು ಕಾಣುತ್ತಿದ್ದರೂ ತನ್ನ ಮಾತೆಗೆ ಪಾತಿವ್ರತ್ಯನಿಯಮವಿದೆ ಎಂದೇ ನಿಶ್ಚಯಿಸುತ್ತಾನೆ. ಆದರೆ, ಆ ಅದ್ವೈತಿಯೇ ಜಗತ್ ಪ್ರತ್ಯಕ್ಷವು ಪರೀಕ್ಷಿತವಾಗಿದ್ದರೂ ಅಪರೀಕ್ಷಿತ ರೂಪ್ಯಾದಿ ಪ್ರತ್ಯಕ್ಷ ದೃಷ್ಟಾಂತ ಮಾತ್ರದಿಂದಲೇ ಅದಕ್ಕೆ ಬಾಧಶಂಕೆಯನ್ನು ಮಾಡುತ್ತಲೇ ಇರುತ್ತಾನೆ, ಅಬಾಧಿತತ್ವವನ್ನು ನಿಶ್ಚಯಿಸುವುದಿಲ್ಲ, ಎನ್ನುವುದು ಅಸಂಭವ.

**ಪರೀಕ್ಷಿತ ಪ್ರತ್ಯಕ್ಷೇಽಪಿ ಅನಾಶ್ವಾಸೇ ಹಿ ನೈಕಾಪಿ ವ್ಯವಸ್ಥಾ ಸಿಧ್ಯೇತ್, ತದವಸಾನತ್ವಾತ್ ಸರ್ವಸ್ಯ । ನ ಹಿ ಶ್ರುತೇಽನುಮಿತೇ ವಾ ದೃಷ್ಟ ಇವಾಶ್ವಾಸಃ ।**

ಪರೀಕ್ಷಿತ ಪ್ರತ್ಯಕ್ಷದಲ್ಲಿಯೂ ಅವಿಶ್ವಾಸ ಮಾಡಿದರೆ, ಅಪರೀಕ್ಷಿತ ದುಷ್ಟ ಅನುಮಾನ ಆಗಮ ದೃಷ್ಟಾಂತ ಮಾತ್ರದಿಂದ ಪರೀಕ್ಷಿತವಾದ ವೇದಾಂತ ತದನುಕೂಲ ಆಗಮಾದಿಗಳಲ್ಲಿಯೂ ಅಬಾಧ ನಿಶ್ಚಯ ಮಾಡದಿದ್ದರೆ ಯಾವೊಂದು ನಿಯಮವೂ ಸಿದ್ಧವಾಗದೆ ಹೋದೀತು. ಎಲ್ಲ ವ್ಯವಸ್ಥೆಯೂ ಪರೀಕ್ಷೆಯನ್ನು ಅವಲಂಬಿಸಿದೆ. ಪರೀಕ್ಷೆ ಇಲ್ಲದ ಕೇವಲ ಶ್ರುತವಾದ್ದರಲ್ಲಾಗಲಿ ಅನುಮಿತ ವಾದುದರಲ್ಲಾಗಲಿ, ಪರೀಕ್ಷಿತ ಪ್ರತ್ಯಕ್ಷದಿಂದ ದೃಷ್ಟವಾದ್ದರಲ್ಲಿರುವಂತೆ ವಿಶ್ವಾಸವಿರುವುದಿಲ್ಲ ತಾನೆ?

**ಕಿಂ ಚೈವಂ ನ ಹಿಂಸ್ಯಾದಿತ್ಯಸ್ಯ ಅಗ್ನೀಷೋಮೀಯೇ ವ್ಯಭಿಚಾರದರ್ಶನೇನ ಅನ್ಯತ್ರಾಪಿ ತದಾಶಂಕ್ಯೇತ ಇತಿ ಉತ್ಸರ್ಗಾಪವಾದನ್ಯಾಯೋ ಭಜ್ಯೇತ ।**

ಪ್ರಾಣಹಿಂಸೆ ಮಾಡಬಾರದೆನ್ನುವ ನಿಯಮವು ಅಗ್ನೀಷೋಮೀಯ ಪ್ರಾಣಬಲಿಯಲ್ಲಿ

ವ್ಯಭಿಚರಿತವಾಗುವುದು ಕಂಡುಬಂದ ಮಾತ್ರಕಕ್ಕೆ ಯಾಗೇತರ ಬ್ರಾಹ್ಮಣಾದಿ ಹಿಂಸೆಯಲ್ಲಿಯೂ ಅದಕ್ಕೆ ವ್ಯಭಿಚಾರಶಂಕೆ ಮಾಡಬಹುದೆಂದಾಗುವುದು. ಹೀಗಾಗಿ 'ಉತ್ಸರ್ಗ-ಅಪವಾದ' ಸಾಮಾನ್ಯ ನಿಯಮ ಮತ್ತು ವಿಶೇಷಪ್ರಸಂಗ ಎನ್ನುವ ವಿವೇಕವನ್ನೇ ಕೈಬಿಡಬೇಕೆಂದಾದೀತು.

**ಉಕ್ತಂ ಹಿ—**

**ಉತ್ಸರ್ಗತೋಽಪಿ ಯತ್ ಪ್ರಾಪ್ತಂ ಅಪವಾದವಿವರ್ಜಿತಂ ।**
**ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥ ಇತಿ ।**

'ಸಾಮಾನ್ಯವಾಗಿ ಮಾತ್ರವೆ ಅನ್ವಯಿಸುವ ನಿಯಮವು 'ಅಪವಾದೇನ ವ್ಯಭಿಚಾರಿ' ಕೆಲವು ಕಡೆ ಬಾಧಕವಿರುವಲ್ಲಿ ಅನ್ವಯಿಸದಿದ್ದರೂ, ಬಾಧಕವಿಲ್ಲದಲ್ಲಿ ಎಲ್ಲಕಡೆ ಅನ್ವಯಿಸಿಯೇ ತೀರುವುದು' ಎಂದು ಸಂಧ್ಯಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**ಏವಂಚ —**

**ಬಾಧಾಭಾವೋಽತ್ರ ನಿರ್ಣೀತಃ ಶಶಶೃಂಗಾದ್ಯಭಾವವತ್ ।**
**ಅನ್ಯಥಾ ಶಶಶೃಂಗಾದಿರಪಿ ಶಂಕ್ಯೇತ ಬಾಧವತ್ ।**

**ತಸ್ಮಾತ್ ಪ್ರಾಮಾಣ್ಯಸ್ಯ ಉತ್ಪತ್ತೌ ಜ್ಞಪ್ತೌ ಚ ಸ್ವತಸ್ತ್ವಾತ್ ಇಹಚ ಉತ್ಪತ್ತಿ ಸ್ವತಸ್ತ್ವಾಪವಾದಸ್ಯ ದೋಷಸ್ಯ, ಜ್ಞಪ್ತಿ ಸ್ವತಸ್ತ್ವಾಪವಾದಸ್ಯ ಬಾಧಕಸ್ಯಚ ಅದರ್ಶನಾತ್, ನಿರ್ಮೂಲಶಂಕಾಯಾಶ್ಚ ಸ್ವಕ್ರಿಯಾ ವಿರೋಧಾದಿನಾ ಅನುತ್ಥಾನಾತ್ ಸುಸ್ಥಂ ಪ್ರತ್ಯಕ್ಷ ಪ್ರಾಮಾಣ್ಯಂ ।**

ಹೀಗಾಗಿ ಬಾಧಾಭಾವವು ಪ್ರತ್ಯಕ್ಷದಲ್ಲಿ ಪರೀಕ್ಷೆಯಿಂದ ನಿರ್ಣೀತವಾಗಿದೆ. ಶಶವಿಷಾಣಾದ್ಯಭಾವದಂತೆ. ಅದರಲ್ಲಿ ವಿಶ್ವಾಸವಿಲ್ಲ ಎಂದರೆ ಭಾವಿಬಾಧದಂತೆ ಶಶವಿಷಾಣವೂ ಇದ್ದೀತು ಎಂದು ಶಂಕಿಸಬಹುದೆಂದಾದೀತು.

ಅದರಿಂದ ಪ್ರಾಮಾಣ್ಯಕ್ಕೆ ಉತ್ಪತ್ತಿ ಜ್ಞಪ್ತಿಗಳೆರಡರಲ್ಲಿಯೂ ಸ್ವತಸ್ತ್ವವಿರುವುದರಿಂದ ಪ್ರಕೃತ ಪ್ರತ್ಯಕ್ಷ ಪ್ರಾಮಾಣ್ಯದಲ್ಲಿ ಉತ್ಪತ್ತಿಸ್ವತಸ್ತ್ವಕ್ಕೆ ಅಪವಾದವಾದ ದೋಷವೂ ಇಲ್ಲ, ಜ್ಞಪ್ತಿ ಸ್ವತಸ್ತ್ವಾಪವಾದವಾದ ಬಾಧಕವೂ ಕಂಡಿಲ್ಲವೆಂದಮೇಲೆ ನಿರ್ಮೂಲವಾಗಿ ಬಾಧಶಂಕೆ ಮಾಡುವುದು ಯುಕ್ತವಲ್ಲ. ಶಂಕೆ ಮಾಡಿದರೆ ಸ್ವಕ್ರಿಯಾವಿರೋಧ ದೋಷ ಬರುತ್ತದೆ. ಅದರಿಂದ ಶಂಕೆಯೇ ಬರುವುದಿಲ್ಲ. ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಸುಸ್ಥಿರವಾಗಿದೆ.

**ಕಿಂಚ ನೇದಂ ರೂಪ್ಯಮಿತಿ ಪ್ರತ್ಯಕ್ಷಪ್ರಾಮಾಣ್ಯಂ ಆವಶ್ಯಕಂ, ಅನ್ಯಥಾ ಇದಂ ರೂಪ್ಯಂ ಇತ್ಯಸ್ಯ ಅಪ್ರಾಮಾಣ್ಯಂ ನ ಸ್ಯಾತ್ ಇತಿ ವೃದ್ಧಿಮಿಚ್ಛತೋ ಮೂಲಹಾನ್ಯಾಪತ್ತೇಃ । ತಥಾಚ ತತ್ತುಲ್ಯ ಯೋಗಕ್ಷೇಮಂ 'ಸನ್ ಘಟಃ' ಇತ್ಯಾದಿಪ್ರತ್ಯಕ್ಷಂ ಕಥಂ ನ ಪ್ರಮಾಣಂ ?**

'ಇದು ರೂಪ್ಯವಲ್ಲ' ಎಂಬ ಪ್ರತ್ಯಕ್ಷರೂಪವಾದ ಬಾಧಜ್ಞಾನವನ್ನು ಪ್ರಮಾಣವೆಂದು ಅದ್ವೈತಿಯು ಒಪ್ಪಲೇಬೇಕು. ಅದು ಅಪ್ರಮಾಣವಾದರೆ 'ಇದಂ ರಜತಂ' ಎಂಬ ಪ್ರತ್ಯಕ್ಷಭ್ರಮವು ಬಾಧಿತವಾಗದು, ಅಪ್ರಮಾಣವಾಗದು. ಅದನ್ನು ಬಾಧಿತ, ಅಪ್ರಮಾಣವೆಂದಿಟ್ಟುಕೊಂಡೇ, 'ಮೂಲ' ದೃಷ್ಟಾಂತವಾಗಿಟ್ಟುಕೊಂಡೇ 'ಘಟವು ಸತ್ಯ' ಎಂದು ಮುಂತಾದ ಎಲ್ಲ ಜಗತ್‌ಪ್ರತ್ಯಕ್ಷವನ್ನು ಬಾಧಿತ ಅಪ್ರಮಾಣವೆಂದು ಸಾಧಿಸಲು ಹೊರಟಿದ್ದಾನೆ, ಅದ್ವೈತಿ. ಈಗ 'ಇದು ರಜತವಲ್ಲ' ಎಂಬ ಬಾಧವನ್ನು ಕೂಡ ಬಾಧಿತವೇ ಎಂದರೆ, ಶುಕ್ತಿರಜತ ಮಿಥ್ಯಾ ಆಗದು, ಜಗನ್ಮಿಥ್ಯಾತ್ವವು ಬಡ್ಡಿಹಣ. ಬಡ್ಡಿಹಣ ಸಂಪಾದನೆಗೆಂದು ಹೊರಟವನು ತನ್ನ ಮೂಲಧನವನ್ನೇ ತಾನು ನಾಶ ಮಾಡಿಕೊಂಡಂತಾಯಿತು. ಇದು ಶೋಚನೀಯ. ಅದರಿಂದ 'ಇದು ರಜತವಲ್ಲ' ಎನ್ನುವ ಪ್ರತ್ಯಕ್ಷವನ್ನು ಅಬಾಧಿತವೆಂದು ಒಪ್ಪಲೇಬೇಕು. ಆಗ 'ಇಯಂ ಶುಕ್ತಿಃ' ಎಂಬುದೇ ರೂಪ್ಯಬಾಧಕ ಎಂದು ಅದ್ವೈತಿ ಹೇಳುವುದರಿಂದ ಅದು ಅದ್ವೈತಶ್ರುತಿಗೆ ಅನನುಗುಣವಾಗಿದ್ದು 'ಸನ್‌ಘಟಃ' ಎಂಬ ಪ್ರತ್ಯಕ್ಷಕ್ಕೆ ಸಮಾನಯೋಗಕ್ಷೇಮ ಉಳ್ಳದ್ದಾಗಿದೆ. ಆ ಶುಕ್ತಿಸತ್ವ ಪ್ರತ್ಯಕ್ಷದಂತೇ ಘಟಸತ್ವ ಪ್ರತ್ಯಕ್ಷವೂ ಅಬಾಧಿತ ಎಂದು ಒಪ್ಪಲೇಬೇಕಾಗುತ್ತದೆ. ಏಕೆಂದರೆ ಎರಡಕ್ಕೂ ಯೋಗ-ಕ್ಷೇಮಗಳು ಸಮಾನ. ಅದರಿಂದ ಪ್ರಪಂಚಸತ್ವ ಪ್ರತ್ಯಕ್ಷವು ಪ್ರಮಾಣವೆಂದೇ ಒಪ್ಪಬೇಕು.

**ಕಿಂಚ ಸೌಷುಪ್ತಿಕಾನಂದಾನುಭವಸ್ಯ ಅಪ್ರಾಮಾಣ್ಯೇ ಕಥಮಾತ್ಮನ ಆನಂದರೂಪತಾ ತಾತ್ವಿಕೀ? ಆನಂದಶ್ರುತೇಃ ಅನುಭೂತ ಅತಾತ್ವಿಕ ಆನಂದಾನುವಾದಿತ್ವೋಪಪತ್ತೇಃ ।**

ಸುಷುಪ್ತಿಯಲ್ಲಿ ಆನಂದದ ಅನುಭವವಿರುವುದರಿಂದ ಆತ್ಮನು ತಾತ್ವಿಕವಾಗಿ ಆನಂದಸ್ವರೂಪನೆಂದು ಸಿದ್ಧವಾಗುತ್ತಾನೆ. ಈ ಆನಂದ ಪ್ರತ್ಯಕ್ಷಾನುಭವವೂ ಬಾಧಶಂಕೆಯಿಂದ ಅಪ್ರಮಾಣವಾಗಿದ್ದು ಅತಾತ್ವಿಕಾನಂದ ಗ್ರಾಹಕವೆಂದಾದರೆ ಆತ್ಮನಿಗೆ ಆನಂದರೂಪತ್ವವು ಸಿದ್ಧವಾಗದು. 'ವಿಜ್ಞಾನಮಾನಂದಂ ಬ್ರಹ್ಮ' ಎಂದು ಶ್ರುತಿಯಿಂದಲೇ ಆತ್ಮನಿಗೆ ಆನಂದರೂಪತ್ವ ಸಿದ್ಧವಾಗುವುದು ಎಂದರೆ ಅದು ಪ್ರತ್ಯಕ್ಷಸಿದ್ಧವಾದ ಅತಾತ್ವಿಕಾನಂದವನ್ನು ಅನುವಾದಿಸುತ್ತದೆ ಎಂದಾಗುವುದರಿಂದ ತಾತ್ವಿಕಾನಂದ ಸಿದ್ಧವಾಗದು.

**ಕಿಂಚ 'ಸ್ಮೃತಿಃ ಪ್ರತ್ಯಕ್ಷಂ' ಇತ್ಯಾದಿ ಶ್ರುತ್ಯಾ, 'ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಾಃ' ಇತಿ ಮನುಸ್ಮೃತ್ಯಾ ಚ ಸಿದ್ಧಂ ತತ್‌ಪ್ರಮಾಣ್ಯಂ । ನಚ ಸಕೃತ್ ಪ್ರಯುಕ್ತಸ್ಯ 'ಪ್ರಮಾಣ' ಶಬ್ದಸ್ಯ ಶ್ರುತೌ ತತ್ವಾವೇದಕತ್ವಮರ್ಥಃ ಪ್ರತ್ಯಕ್ಷೇ ಅತತ್ವಾವೇದಕತ್ವಮಿತಿ ಯುಕ್ತಂ ॥**

**ಸ್ಮೃತಿಃ ಪ್ರತ್ಯಕ್ಷಮೈತಿಹ್ಯಂ ಅನುಮಾನಶ್ಚತುಷ್ಟಯಂ ।**
**ಪ್ರಮಾಣಮಿತಿ ವಿಜ್ಞೇಯಂ ಧರ್ಮಾದ್ಯರ್ಥೇ ಬಭೂಷುಭಿಃ ॥**

ಸ್ಮೃತಿಯು ಕೇವಲ ಪ್ರಮಾಣ. ಪ್ರತ್ಯಕ್ಷ, 'ಐತಿಹ್ಯ' ಶಬ್ದೋಕ್ತವಾದ ಪೌರುಷೇಯ

ಅಪೌರುಷೇಯ ಸಕಲ ಆಗಮ ಮತ್ತು ಅನುಮಾನ ಹೀಗೆ ನಾಲ್ಕು ಪ್ರಮಾಣಗಳೆಂದು ಪ್ರಮಾಣಲಕ್ಷಣಗ್ರಂಥದಲ್ಲಿ ಉದಾಹೃತವಾದ ಈ ಶ್ರುತಿಯೂ ಪ್ರತ್ಯಕ್ಷವನ್ನು ವೇದಾದಿ ಆಗಮಗಳಂತೆಯೆ ಪ್ರಮಾಣವೆಂದಿದೆ.

**ಪ್ರತ್ಯಕ್ಷಮನುಮಾನಂ ಚ ಶಾಸ್ತ್ರಂ ಚ ವಿವಿಧಾಗಮಂ ।**
**ತ್ರಯಂ ಸುವಿದಿತಂ ಕಾರ್ಯಂ ಧರ್ಮಶುದ್ಧಿಮಭೀಪ್ಸತಾ ॥**

ಪ್ರತ್ಯಕ್ಷವನ್ನೂ ಅನುಮಾನವನ್ನೂ ವಿವಿಧ ಆಗಮರೂಪವಾದ ಶಾಸ್ತ್ರವನ್ನೂ ಮೂರನ್ನೂ ಚೆನ್ನಾಗಿ ತಿಳಿಯಬೇಕು. ಆಗಲೆ ಧರ್ಮಜ್ಞಾನದಲ್ಲಿ ಶುದ್ಧಿ ಉಂಟಾಗುತ್ತದೆ. ಎಂದು ಮನುಸ್ಮೃತಿಯಲ್ಲಿಯೂ ಪ್ರತ್ಯಕ್ಷವು ಪ್ರಮಾಣ ಎನ್ನಲಾಗಿದೆ.

'ಪ್ರಮಾಣಮಿತಿ ವಿಜ್ಞೇಯಂ' ಎಂದು ಒಂದುಬಾರಿ ಹೇಳಿದ 'ಪ್ರಮಾಣ' ಶಬ್ದಕ್ಕೆ 'ಶ್ರುತಿಯು ತತ್ತ್ವಾವೇದಕ ಪ್ರಮಾಣ, ಪ್ರತ್ಯಕ್ಷವು ಅತತ್ತ್ವಾವೇದಕ ಪ್ರಮಾಣ' ಎಂದು ಬೇರೆಬೇರೆ ಅರ್ಥವನ್ನು ಹೇಳುವುದು ಸರಿಯಲ್ಲ.



# ಪ್ರತ್ಯಕ್ಷಸ್ಯ ಪಾರಮಾರ್ಥಿಕಸತ್ತ್ವಗ್ರಾಹಿತ್ವಂ

नापि प्रत्यक्षं कालत्रयाबाध्यत्वग्रहाक्षममिति द्वितीयः । तद्धि न कालत्रयेऽपि सत्त्वम् । मन्मतेऽप्यनित्यप्रपञ्चे तदभावात् । किन्तु कालत्रयवृत्तियदसत्त्वं तदभावः । स च कदाचित्सत्त्वे गृहीतेऽपि गृहीत एवेति प्रतिपन्नोपाधौ सत्त्वग्राहिणा प्रत्यक्षेण तदुपाधौ त्रैकालिकनिषेधप्रतियोगित्वरूपमिथ्यात्वाभावसिद्धिः ।

''स्वकाले ह्यस्तितां गृह्णन् साक्षात्कारस्त्रिकालगम् ।

प्रतिषेधं निरुन्धानो गृह्णात्येवात्यबाध्यताम्'' ।

वेदेऽपि हि विषयस्याबाध्यत्वे ज्ञानप्रामाण्यमेव तन्त्रं । न तु शब्दत्वं वा वर्तमानकालाद्यनवच्छेदेन स्वविषयसत्त्वग्राहित्वं वा सर्वकालादिसंबन्धित्वेन स्वविषयसत्त्वग्राहित्वं वा (भाविबाधाभावग्राहित्वं वा) तन्त्रम् । उक्तप्रकारत्रय युक्तानाप्तवाक्य विषयस्यात्यन्ताबाध्यत्वापातात् । तच्च तत्त्वावेदनरूपं प्रामाण्यं श्रौतज्ञानस्येवाक्षजज्ञानस्यापि ज्ञानग्राहिणा साक्षिणा गृह्यते, प्रामाण्यस्य स्वतस्त्वात् । नच रूप्यादिज्ञानेष्विव बाधो वा दोषो वा निश्चितः, येन तदपोद्येत । तदुक्तम्

यदि स्वतस्त्वं प्रामाण्ये विश्वसत्ता कथं न ते ।
प्रामाण्यस्य च मर्यादा कालतो व्याहता भवेद् ।। इति ।

---

**तद्धीति ।** कालत्रयाबाध्यत्वरूपसत्त्वमित्यर्थः । **मन्मतेऽपीति ।** तथाचैवंविधसत्त्वस्य प्रत्यक्षायोग्यत्वेऽपि नास्माकं किञ्चिदनिष्टमिति भावः । **सचेति ।** कालमात्रसंबन्धित्वाभावरूपसामान्याभावस्य यत्किंचिद्विशेषरूपत्वादिति भावः । उक्तमर्थं संगृह्णाति **स्वकाले** **हीति ।** ननु प्रत्यक्षस्य

कालत्रयवृत्त्यसत्त्वाभावरूपसत्त्वग्राहकत्वेऽपि शुक्तिरूप्यस्येव घटादिप्रपञ्चस्यापि सत्त्वं न सेत्स्यतीत्याशङ्क्य शुक्तिरूप्यप्रत्यक्षस्येव प्रामाण्यापवादकदोषाद्यभावेन ज्ञानप्रामाण्यादेवार्थस्य वास्तवसत्त्वसिद्धिः । अन्यथा वेदेऽप्यर्थसिद्धिर्न स्यादित्यभिप्रेत्याह **वेदेऽपीत्यादिना तदपोद्येतेत्यन्तेन । उक्तप्रकारत्रयेति ।** यद्यपि प्रकारचतुष्टयमुक्तम् । तथाप्याद्यस्य(?) दूषणं स्फुटमित्युपेक्ष्य तथोक्तमिति ध्येयम् । **निश्चित इति ।** यद्यपि बाधादिसंशयः संभवति । तथापि न स प्रामाण्यापवादकः, अतिप्रसंजकत्वादित्युक्तमिति भावः । मर्यादा सत्त्वम् । **कालत इति ।** व्यवहारदशायामित्यर्थः ।



**ನಾಪಿ ಪ್ರತ್ಯಕ್ಷಂ ಕಾಲತ್ರಯಾಬಾಧ್ಯತ್ವ ಗ್ರಹಾಕ್ಷಮಂ ಇತಿ ದ್ವಿತೀಯಃ। ತದ್ಧಿ ನ ಕಾಲತ್ರಯೇऽಪಿ ಸತ್ತ್ವಂ। ಮನ್ಮತೇऽಪಿ ಅನಿತ್ಯಪ್ರಪಂಚೇ ತದಭಾವಾತ್। ಕಿಂತು ಕಾಲತ್ರಯವೃತ್ತಿ ಯತ್ ಅಸತ್ತ್ವಂ, ತದಭಾವಃ। ಸ ಚ ಕದಾಚಿತ್ ಸತ್ತ್ವೇ ಗೃಹೀತೇऽಪಿ ಗೃಹೀತ ಏವೇತಿ, ಪ್ರತಿಪನ್ನೋಪಾಧೌ ಸತ್ತ್ವಗ್ರಾಹಿಣಾ ಪ್ರತ್ಯಕ್ಷೇಣ ತದುಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವಾಭಾವಸಿದ್ಧಿಃ।**

**ಸ್ವಕಾಲೇ ಹ್ಯಸ್ತಿತಾಂ ಗೃಹ್ಣನ್ ಸಾಕ್ಷಾತ್ಕಾರಸ್ತ್ರಿಕಾಲಗಂ ।**
**ಪ್ರತಿಷೇಧಂ ನಿರುಂಧಾನೋ ಗೃಹ್ಣಾತ್ಯೇವಾತ್ಯಬಾಧ್ಯತಾಂ ।**

ಪ್ರತ್ಯಕ್ಷವು ಪ್ರಮಾಣವೇ ಅಲ್ಲ ಎಂದಭಿಪ್ರಾಯವೆ? ಅಥವಾ ಪ್ರಮಾಣವೇ ಆದರೂ ಕಾಲತ್ರಯದಲ್ಲಿ ಪ್ರಪಂಚಸತ್ವವು ಅಬಾಧ್ಯವೆಂದು ಗ್ರಹಿಸುವ ಸಾಮರ್ಥ್ಯವು ಪ್ರತ್ಯಕ್ಷಕ್ಕೆ ಇಲ್ಲವೆಂದಭಿಪ್ರಾಯವೆ? ಎಂದು ವಿಕಲ್ಪಮಾಡಿ ಪ್ರಮಾಣವೇ ಅಲ್ಲ ಎನ್ನುವ ಪ್ರಥಮಪಕ್ಷವನ್ನು ಇಷ್ಟರವರೆಗೆ ನಿರಾಕರಿಸಿದ್ದಾಯಿತು. ಇನ್ನು ಕಾಲತ್ರಯಾಬಾಧ್ಯತ್ವ ಗ್ರಹಣಸಾಮರ್ಥ್ಯವು ಪ್ರತ್ಯಕ್ಷಕ್ಕೆ ಇಲ್ಲ ಎನ್ನುವ ದ್ವಿತೀಯಪಕ್ಷವೂ ಯುಕ್ತವಲ್ಲ ಎಂದು ಸಾಧನೆ ಮಾಡುತ್ತೇವೆ.

ಸತ್ವವು ಪ್ರಪಂಚದಲ್ಲಿ ಇಲ್ಲ, ಅದು ಪ್ರತ್ಯಕ್ಷ ಸಿದ್ಧವಲ್ಲ ಎನ್ನುವ ಅದ್ವೈತಿಯು ಮೊದಲಿಗೆ ಸತ್ವವೆಂದರೇನು ಎಂದು ಹೇಳಬೇಕು. 'ಕಾಲತ್ರಯದಲ್ಲಿಯೂ ಸತ್ತಾಗಿರುವುದೇ ಸತ್ವ' ಎಂದರೆ ಅದನ್ನು ನಾವು ಪ್ರಪಂಚದಲ್ಲಿ ಇದೆ ಎನ್ನುತ್ತಿಲ್ಲ. ಅನಿತ್ಯವಾದ ಘಟಪಟಾದಿ ಪ್ರಪಂಚವು ಕಾಲತ್ರಯದಲ್ಲಿ ಸತ್ತಾಗಿದೆ ಎನ್ನಲಾಗದು. 'ಕಾಲತ್ರಯದಲ್ಲಿಯೂ ಸತ್' ಎನ್ನುವ ಸತ್ವವೂ ಅನಿತ್ಯಪ್ರಪಂಚದಲ್ಲಿಲ್ಲ. 'ಕಾಲತ್ರಯದಲ್ಲಿಯೂ ಇಲ್ಲ' 'ಅಸತ್' ಎನ್ನುವ ಅಸತ್ವವು ಪ್ರಪಂಚದಲ್ಲಿಲ್ಲವಾದ್ದರಿಂದ ಇಂಥ ಅಸತ್ವಾಭಾವರೂಪವಾದ ಸತ್ವವು ಪ್ರಪಂಚದಲ್ಲಿ ಇದೆ

ಎನ್ನುತ್ತಿದ್ದೇವೆ. ಪ್ರಪಂಚವು ಯಾವುದಾದರೊಂದು ಕಾಲದಲ್ಲಿ ಸತ್ತಾಗಿದ್ದರೂ ಕೂಡ ಕಾಲತ್ರಯದಲ್ಲಿ ಅಸತ್ ಎನ್ನಲಾಗುವುದಿಲ್ಲ. ಅಸತ್ತ್ವಾಭಾವ ರೂಪವಾದ ಸತ್ತ್ವವು ಇದೆ ಎನ್ನಲು ಸಾಧ್ಯವಿದೆ. ಯಾವುದಾದರೊಂದು ಕಾಲದಲ್ಲಿ ಪ್ರಪಂಚ ಸತ್ತಾಗಿರುವುದು ಪ್ರತ್ಯಕ್ಷ ಸಿದ್ಧವೇ ಇದೆ. ಪ್ರತ್ಯಕ್ಷವು ಪ್ರಪಂಚವನ್ನು ಯಾವುದಾದರೊಂದು ಕಾಲದಲ್ಲಿ ಸತ್ತಾಗಿದೆ ಎಂದು ಗ್ರಹಿಸುವಾಗ 'ಕಾಲತ್ರಯದಲ್ಲಿಯೂ ಅಸತ್' ಎನ್ನುವ ಅಸತ್ತ್ವವು ಪ್ರಪಂಚದಲ್ಲಿಲ್ಲವೆಂದೇ ಗ್ರಹಿಸುತ್ತದೆ. ಅಸತ್ತ್ವಾಭಾವರೂಪವಾದ ಸತ್ತ್ವವು ಪ್ರತ್ಯಕ್ಷದಿಂದ ಗೃಹೀತವಾಗಿರುತ್ತದೆ. ಅದನ್ನು ಗ್ರಹಿಸುವ ಸಾಮರ್ಥ್ಯವು ಪ್ರತ್ಯಕ್ಷಕ್ಕೆ ಇಲ್ಲ ಎನ್ನಲಾಗದು. ಏಕೆಂದರೆ ಸಾಮಾನ್ಯಾಭಾವಸತ್ತ್ವವು ಯತ್‌ಕಿಂಚಿದ್ ವಿಶೇಷ ಸತ್ತ್ವರೂಪವಾದ್ದರಿಂದ ಪ್ರತಿಪನ್ನವಾದ ಉಪಾಧಿಯಲ್ಲಿ ಒಂದು ವಸ್ತುವಿಗೆ ಯತ್‌ಕಿಂಚಿತ್ ಸತ್ತ್ವವಿದೆ ಎಂದು ಗ್ರಹಿಸುವ ಪ್ರತ್ಯಕ್ಷವು ಆ ಉಪಾಧಿಯಲ್ಲಿ ಆ ವಸ್ತುವಿಗೆ ತ್ರೈಕಾಲಿಕ ಸಾಮಾನ್ಯ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವವಿಲ್ಲ ಎಂದೇ ಗ್ರಹಿಸುತ್ತದೆ. ಅದರಿಂದ ಮಿಥ್ಯಾತ್ವಾಭಾವವು ಸಿದ್ಧಿಸುತ್ತದೆ. ಇದನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು—

'ಸಾಕ್ಷಾತ್ಕಾರವು ವಸ್ತುವಿಗೆ ಅದು ಇರುವ ಕಾಲದಲ್ಲಿ ಸತ್ತ್ವವನ್ನು ಗ್ರಹಿಸುವಾಗ 'ಮೂರು ಕಾಲದಲ್ಲಿಯೂ ಇಲ್ಲ' ಎನ್ನುವ ನಿಷೇಧವನ್ನು ಸಹಿಸುವುದಿಲ್ಲ ವಿರೋಧಿಸುತ್ತದೆ. ತ್ರಿಕಾಲಾಬಾಧ್ಯತ್ವ ರೂಪ ಅತ್ಯಬಾಧ್ಯತ್ವವನ್ನೇ ಗ್ರಹಿಸುತ್ತದೆ' ಎಂದು.

**ವೇದೇऽಪಿ ವಿಷಯಸ್ಯ ಅಬಾಧ್ಯತ್ವೇ ಜ್ಞಾನ ಪ್ರಾಮಾಣ್ಯಮೇವ ತಂತ್ರಂ। ನ ತು ಶಬ್ದತ್ವಂ ವಾ, ವರ್ತಮಾನ ಕಾಲಾದ್ಯನವಚ್ಛೇದೇನ ಸ್ವವಿಷಯಸತ್ತ್ವಗ್ರಾಹಿತ್ವಂ ವಾ, ಸರ್ವಕಾಲಾದಿ ಸಂಬಂಧಿತ್ವೇನ ಸ್ವವಿಷಯ ಸತ್ತ್ವಗ್ರಾಹಿತ್ವಂ ವಾ ಭಾವಿಬಾಧಾಭಾವ ಗ್ರಾಹಿತ್ವಂ ವಾ ತಂತ್ರಂ। ಉಕ್ತಪ್ರಕಾರ ತ್ರಯ ಯುಕ್ತ ಅನಾಪ್ತವಾಕ್ಯವಿಷಯಸ್ಯ ಅತ್ಯಂತಾಬಾಧ್ಯತ್ವಾಪಾತಾತ್। ತಚ್ಚ ತತ್ತ್ವಾವೇದನರೂಪಂ ಪ್ರಾಮಾಣ್ಯಂ ಶ್ರೌತಜ್ಞಾನಸ್ಯೇವ ಅಕ್ಷಜಜ್ಞಾನಸ್ಯಾಪಿ ಜ್ಞಾನಗ್ರಾಹಿಣಾ ಸಾಕ್ಷಿಣಾ ಗೃಹ್ಯತೇ। ಪ್ರಾಮಾಣ್ಯಸ್ಯ ಸ್ವತಸ್ತ್ವಾತ್।**

'ಪ್ರತ್ಯಕ್ಷವು ಕಾಲತ್ರಯ ವೃತ್ತಿ ಅಸತ್ತ್ವಾಭಾವರೂಪ ಸತ್ತ್ವಗ್ರಾಹಕವೇ ಆದರೂ ಶುಕ್ತಿರೂಪ್ಯದಂತೆಯೆ ಘಟಾದಿಪ್ರಪಂಚಕ್ಕೂ ಸತ್ತ್ವವು ಸಿದ್ಧವಾಗಲಾರದು' ಎಂದರೆ, ಶುಕ್ತಿರೂಪ್ಯ ಭ್ರಮದಲ್ಲಿ ಪ್ರಾಮಾಣ್ಯಾಪವಾದಕವಾದ ದೋಷವಿರುವಂತೆ ಪ್ರಪಂಚ ಸತ್ತ್ವಪ್ರತ್ಯಕ್ಷದಲ್ಲಿ ದೋಷವಿಲ್ಲ. ಪ್ರಾಮಾಣ್ಯಾಪವಾದಕ ದೋಷವಿಲ್ಲದಿರುವುದರಿಂದಲೆ ಜ್ಞಾನಪ್ರಾಮಾಣ್ಯವಿರುತ್ತದೆ. ಅದರಿಂದ ಪ್ರಪಂಚ ಸತ್ತ್ವರೂಪವಿಷಯಕ್ಕೆ ವಾಸ್ತವ ಸತ್ತ್ವವು ಪ್ರತ್ಯಕ್ಷದಿಂದ ಸಿದ್ಧವಾಗುತ್ತದೆ. ವೇದದಲ್ಲಿಯೂ ವಿಷಯವು ಸತ್ಯವೆನ್ನುವಲ್ಲಿ ಜ್ಞಾನಪ್ರಾಮಾಣ್ಯವೇ ನಿರ್ಣಾಯಕವಾಗುತ್ತದೆ ಹೊರತು (1)ಶಬ್ದತ್ವವು ನಿರ್ಣಾಯಕವಲ್ಲ (2) ಅಥವಾ ವರ್ತಮಾನಕಾಲ ಭೂತಕಾಲಾದಿಗಳಲ್ಲಿ ಇದೆ ಎನ್ನದೆ, ಕೇವಲ 'ಇದೆ' ಎಂದೇ ವಿಷಯವನ್ನು ಜ್ಞಾನವು ಗ್ರಹಿಸುವುದೂ ನಿರ್ಣಾಯಕವಲ್ಲ ಅಥವಾ (3)ಸರ್ವಕಾಲಗಳಲ್ಲಿ ವಸ್ತು ಇದೆ ಎಂದು ತನ್ನ ವಿಷಯವನ್ನು ಜ್ಞಾನವು ಗ್ರಹಿಸುವುದೇ

ವಿಷಯಸತ್ವನಿರ್ಣಾಯಕವಲ್ಲ. ಅಥವಾ (4) ಭಾವಿಬಾಧಕವಿಲ್ಲ ಎಂದು ಜ್ಞಾನವು ಗ್ರಹಿಸುವುದೂ ವಿಷಯಸತ್ವಕ್ಕೆ ನಿರ್ಣಾಯಕವಲ್ಲ.

ಏಕೆಂದರೆ (1) 'ಶೂನ್ಯಮೇವ ತತ್ವಂ' ಎಂಬ ಅನಾಪ್ತವಾಕ್ಯದಲ್ಲಿಯೂ ಶಬ್ದತ್ವವಿದೆ. ಆದರೆ ವಿಷಯವಾದ ಶೂನ್ಯವು ಬಾಧ್ಯವೆ, ಹೊರತು ಅಬಾಧ್ಯವಲ್ಲ. (2)ವರ್ತಮಾನಾದಿ ಕಾಲಸಂಬಂಧ ವನ್ನು ಬಿಟ್ಟು ಕೇವಲ ವಸ್ತುವು 'ಇದೆ' ಎಂದೇ ವಿಷಯವನ್ನು ಅದು ಬೋಧಿಸಬಹುದು. ಅಷ್ಟರಿಂದಲೆ ಶೂನ್ಯವು ಸತ್ತೆಂದು ಸಿದ್ಧಿಸುವುದಿಲ್ಲ. (3)'ಸರ್ವಕಾಲದಲ್ಲಿ ಇದೆ' ಎಂದೂ ಆ ವಾಕ್ಯವು ಬೋಧಿಸುತ್ತಿರಬಹುದು. ಆದರೂ ಶೂನ್ಯವು ಸತ್ತೆನಿಸುವುದಿಲ್ಲ; (4) ಬಾವಿಬಾಧಾಭಾವವನ್ನು ಶಬ್ದವು ಗ್ರಹಿಸುವುದೇ ಇಲ್ಲ. ಅದು ಪದಾರ್ಥವೂ ಅಲ್ಲ, ವಾಕ್ಯಾರ್ಥವೂ ಅಲ್ಲ. ಆದರಿಂದ ಅದ್ವೈತಿಗೆ ಅದು ಸಮ್ಮತವಲ್ಲ ಎನ್ನುವುದು ಸ್ಫುಟವೇ ಇದೆ.

ಇಲ್ಲಿ 'ಭಾವಿಬಾಧಾಭಾವಗ್ರಾಹಿತ್ವಂ ವಾ' ಎಂಬ ಅಂಶವು ಮೂಲದಲ್ಲಿ ಕಾಣುವುದಿಲ್ಲ. ಸೇರಿಸಬೇಕು. 'ಪ್ರಕಾರ ಚತುಷ್ಟಯಮುಕ್ತಂ' ಎಂಬ ಆಮೋದಾನುಸಾರ ಇದು ಆವಶ್ಯಕ.

ವೇದಪ್ರಾಮಾಣ್ಯವು ತತ್ವಾವೇದಕತ್ವರೂಪವೆಂದೇ ಹೇಳಬೇಕು. ಅದು ಶ್ರುತಿಜನ್ಯಜ್ಞಾನದಲ್ಲಿ ಹೇಗೋ ಹಾಗೇ ಇಂದ್ರಿಯಜನ್ಯಜ್ಞಾನದಲ್ಲಿಯೂ ಜ್ಞಾನಗ್ರಾಹಕವಾದ ಸಾಕ್ಷಿಯಿಂದ ಗ್ರಹಿಸಲ್ಪಡು ತ್ತದೆ. ಏಕೆಂದರೆ ಪ್ರಾಮಾಣ್ಯವು ಸ್ವತೋಗ್ರಾಹ್ಯವಾಗಿದೆ.

ಇಲ್ಲಿ ಮೂಲದಲ್ಲಿ 'ಉಕ್ತಪ್ರಕಾರತ್ರಯ ಯುಕ್ತ ಅನಾಪ್ತವಾಕ್ಯ ವಿಷಯಸ್ಯ' ಎಂದು ಪಾಠ ಕಾಣುತ್ತದೆ. ಪ್ರಕಾರತ್ರಯವನ್ನು 'ಅನಾಪ್ತ ವಾಕ್ಯದಲ್ಲಿದೆ' ಎಂದುದು, ಹೇಗೆ ಎಂದರೆ ನಾಲ್ಕನೇ ಪ್ರಕಾರವಾದ ಭಾವಿಬಾಧಾಭಾವವು ವೇದದಲ್ಲಿಯೂ ಶಬ್ದದಿಂದ ಉಕ್ತವಾಗಿ ಇರಲು ಸಾಧ್ಯವಿಲ್ಲವಾದ್ದರಿಂದ ವಿಷಯಸತ್ವನಿರ್ಣಾಯಕವೆಂದು ಅದ್ವೈತಿಗೂ ಸಮ್ಮತವಲ್ಲ ಎಂಬ ಅಭಿಪ್ರಾಯದಿಂದ.

ಇಲ್ಲಿ ಆಮೋದದಲ್ಲಿ 'ತಥಾಪ್ಯಾದ್ಯಸ್ಯದೂಷಣಂ ಸ್ಫುಟಂ' ಎಂಬಲ್ಲಿ 'ತಥಾಪ್ಯಂತ್ಯಸ್ಯ ದೂಷಣಂ ಸ್ಫುಟಂ' ಎಂದು ಪಾಠವಿಟ್ಟುಕೊಳ್ಳಬೇಕು. ತರಂಗಿಣಿಯಲ್ಲಿ ಅದು ಅಂತ್ಯದ್ದೆಂದು ಉಕ್ತವಾಗಿದೆ—

'ಚತುರ್ಥಸ್ತು ವೇದೇಽಪ್ಯಸಂಭವೀ, ಅಪದಾರ್ಥತಯಾಽವಾಕ್ಯಾರ್ಥತಯಾ ಚ ಭಾವಿ ಬಾಧಾಭಾವಸ್ಯ ಶ್ರೌತ ಜ್ಞಾನಾವಿಷಯತ್ವಾತ್।'

'ಅಂತ್ಯಸ್ಯ ದೂಷಣಂ ಸ್ಫುಟಂ' ಎಂಬುದು ಹೇಗೆ? ಎಂದು ಕೂಡ ಇಲ್ಲಿ ಸ್ಫುಟವೇ ಇದೆ.

**ನಚ ರೂಪ್ಯಾದಿ ಜ್ಞಾನೇಷ್ವಿವ ಬಾಧೋ ವಾ ದೋಷೋ ವಾ ನಿಶ್ಚಿತಃ। ಯೇನ ತದಪೋದ್ಯೇತ। ತದುಕ್ತಂ—**

**'ಯದಿ ಸ್ವತಸ್ತ್ವಂ ಪ್ರಾಮಾಣ್ಯೇ ವಿಶ್ವಸತ್ತಾ ಕಥಂ ನ ತೇ ?**
**ಪ್ರಾಮಾಣ್ಯಸ್ಯ ಚ ಮರ್ಯಾದಾ ಕಾಲತೋ ವ್ಯಾಹತಾ ಭವೇತ್' ಇತಿ ।**

ಶುಕ್ತಿರೂಪ್ಯಾದಿಸತ್ವಜ್ಞಾನದಲ್ಲಿರುವಂತೆ ಪ್ರಪಂಚಸತ್ವಗ್ರಾಹಿ ಪ್ರತ್ಯಕ್ಷದಲ್ಲಿ ಬಾಧವಾಗಲಿ ದೋಷವಾಗಲಿ ನಿಶ್ಚಿತವಾಗಿಲ್ಲ. 'ಸಂದಿಗ್ಧವಾಗಿ ಇದೆ' ಎಂದರೆ ಅದು ಸಾಕ್ಷಿಜ್ಞಾನಕ್ಕೆ ಪ್ರತಿಬಂಧಕವಾಗುವುದಿಲ್ಲ. ಹೀಗಾಗಿ ಸ್ವತಃಪ್ರಾಮಾಣ್ಯಕ್ಕೆ ಅಪವಾದವಿಲ್ಲ. ಭಾವಿಬಾಧಶಂಕೆ ಪ್ರತಿಬಂಧಕವೇ ಆಗುತ್ತದೆ ಎಂದರೆ ಅತಿಪ್ರಸಕ್ತಿ ಎಂದು ಹಿಂದೆ ಹೇಳಿದ್ದೇವೆ. ಅಪವಾದವಿರುತ್ತಿದ್ದರೆ ಮಾತ್ರ ಅದರಿಂದ ಪ್ರತಿಬದ್ಧವಾಗುವ ಸಾಕ್ಷಿಯಿಂದ ಪ್ರಾಮಾಣ್ಯವು ಗೃಹೀತವಾಗದೆ ಹೋಗುತ್ತಿತ್ತು. 'ತದಪೋದ್ಯೇತ'.

'ಭಾವಿ ಬಾಧಕದಿಂದ ಅಂದರೆ ಚರಮವೃತ್ತಿಯಿಂದ ಪ್ರತ್ಯಕ್ಷಪ್ರಾಮಾಣ್ಯವು ಬಾಧಿತವಾಗುವುದು' ಎಂದರೆ, ಚರಮವೃತ್ತಿ ಬಂದ ಕಾಲದಲ್ಲಿ ಮಾತ್ರ ಸಾಕ್ಷಿಯು ಅದರಿಂದ ಪ್ರತಿಬದ್ಧವಾದೀತು. ಚರಮವೃತ್ತಿ ಬರುವುದಕ್ಕೆ ಮೊದಲು ಪ್ರತಿಬಂಧಕವಿಲ್ಲದಿರುವುದರಿಂದ ಸಾಕ್ಷಿಯು ನಿರಾತಂಕವಾಗಿ ಪ್ರಾಮಾಣ್ಯವನ್ನು ಗ್ರಹಿಸಿರುತ್ತದೆ. ಹೀಗಾಗಿ ಭಾವಿಬಾಧದಿಂದ ಏನೂ ಫಲವಿಲ್ಲ.

'ಸಾಕ್ಷಿಪ್ರತ್ಯಕ್ಷವು ಈಗ ತತ್ಕಾಲದಲ್ಲಿ ಪ್ರಮಾಣವಾದರೂ ಚರಮವೃತ್ತಿ ಬಂದಾಗ ಅದರಿಂದ ಅದು ಬಾಧಿತವಾಗುತ್ತದೆ. ಅದು ಆಗ ಪ್ರಮಾಣವಾಗಿರುವುದಿಲ್ಲ' ಎಂದು ಅದ್ವೈತಿ ಹೇಳಿದರೆ 'ಜ್ಞಾನ ಪ್ರಾಮಾಣ್ಯವು ಕೆಲಕಾಲವಿರುತ್ತದೆ. ಬಳಿಕ ಅದು ಇರುವುದಿಲ್ಲ' ಎನ್ನುವುದೇ ವ್ಯಾಹತ. ಪ್ರಮಾಣವು ಸರ್ವಕಾಲದಲ್ಲಿ ಪ್ರಮಾಣವೆ. ಅಪ್ರಮಾಣವು ಸರ್ವಕಾಲದಲ್ಲಿ ಅಪ್ರಮಾಣವೆ ಎಂದು ನಿಯಮ ಸರ್ವಸಮ್ಮತ. ಹೀಗಾಗಿ ಕೆಲಕಾಲವಾದರೂ ಪ್ರಾಮಾಣ್ಯವಿರುತ್ತದೆ ಎಂದರೆ ಸರ್ವಕಾಲದಲ್ಲಿಯೂ ಅದು ಇರಲೇಬೇಕು. ಹೀಗಾಗಿ ಪ್ರಪಂಚ ಸತ್ಯವೆಂದೇ ಒಪ್ಪಬೇಕು.

ತ್ರೈಕಾಲಿಕ ಸತ್ತಾನಿಷೇಧ ರೂಪವಾದ ಬಾಧವು ಮುಂದೆ ಬರಲು ಶಕ್ಯವಿಲ್ಲ. ಇದನ್ನು ಶ್ರೀಮದಾಚಾರ್ಯರು ಸಂಧ್ಯಾಧಿಕರಣ ಅನುವ್ಯಾಖ್ಯಾನ (ಶ್ಲೋ.56)ದಲ್ಲಿ ಹೇಳಿದ್ದಾರೆ—

'ಜ್ಞಾನ ಪ್ರಾಮಾಣ್ಯವು ನಿನ್ನಮತದಲ್ಲಿಯೂ ಸ್ವತಃ ಎನ್ನುವುದಾದರೆ ಪ್ರಪಂಚ ಸತ್ಯತ್ವವನ್ನು ನೀನೇಕೆ ಒಪ್ಪಬಾರದು? ಪ್ರಾಮಾಣ್ಯವು ತತ್ಕಾಲದಲ್ಲಿ ಮಾತ್ರವಿರುತ್ತದೆ, ಕಾಲಾಂತರದಲ್ಲಿ ಇರುವುದಿಲ್ಲ, ಕಾಲಸೀಮಿತ, ಎನ್ನುವುದು ವ್ಯಾಹತವಾಗುತ್ತದೆ ಎಂದು'.



इयांस्तु भेदः ''तत्सत्यम्'' इत्यादिश्रुत्या ब्रह्मणो वर्तमा(नकालाद्य)नादिकालाद्यनवच्छेदेन सत्ता गृहीतेति तत्र सा तदनवच्छिन्ना, प्रत्यक्षेण तु घटादेस्तदवच्छिन्ना सा गृहीतेति तत्र सा

**तदवच्छिन्नेति । यद्देशकालप्रकारा(द्य)वच्छेदेन तु यस्य येन सत्ता गृहीता तदवच्छेदेन तस्याबाध्यत्वं प्रामाण्यप्रयुक्तम् उभयसाधारणमिति प्रमाणेन प्रत्यक्षेण नित्यत्वाद्यसिद्धावपि स्वोपाधौ त्रैकालिकनिषेधाप्रतियोगित्वरूपमात्यन्तिकाबाध्यत्वं सिध्यत्येव ।**

---

**तत्सत्यमित्यादीति ।** यद्यपि ऐतदात्म्यमिदं सर्वं तत्सत्यमितिश्रुतेः एतदात्मजन्यं एतन्नियम्यं वैतत्स्वामिकं वेदं यस्मात् तत् तस्मादिति हेतूपन्यासपूर्वकं सत्यमिति सर्वस्य जगतः सत्यत्वविधायित्वं प्रतीयत इति प्रत्यक्षवत् जगत्सत्यत्वेऽपीयं श्रुतिः प्रमाणीकर्तुं शक्यते । तथापि परर्रीत्यैवमुक्तमिति ध्येयम् । **तदवच्छिन्नेति ।** वर्तमानकालाद्यवच्छिन्नेत्यर्थः । ननु प्रत्यक्षेण घटादिप्रपञ्चस्य कालान्तरे सत्वाग्रहेण ब्रह्मवत्तस्य कथमात्यन्तिकाबाध्यत्वरूपसत्यत्वसिद्धिरित्यत आह **यद्देशकालेति ।** तथाच प्रत्यक्षादिप्रमाणेन कालान्तरे सत्त्वाग्रहेण नित्यत्वासिद्धावपि उक्तरीत्या सत्वसिद्धिरविकलेति भावः । **उभयसाधारणमिति ।** ब्रह्मघटादिसाधारणमित्यर्थः । प्रत्यक्षेणेत्यस्यानन्तरं घटादेरिति शेषः । ननु प्रत्यक्षेणात्यन्तिकाबाध्यत्वं न सिध्यति । कालान्तरे देशान्तरे च वाधावतारसंभवादित्याशङ्क्य बाधकं विकल्प्य निराकरोति **कालान्तरादिस्थमपीति ।**



**ಇಯಾಂಸ್ತು ಭೇದಃ । 'ತತ್ ಸತ್ಯಂ' ಇತ್ಯಾದಿಶ್ರುತ್ಯಾ ಬ್ರಹ್ಮಣೋ ವರ್ತಮಾನಾದಿ ಕಾಲಾದ್ಯನವಚ್ಛೇದೇನ ಸತ್ತಾ ಗೃಹೀತೇತಿ ತತ್ರ ಸಾ ತದನವಚ್ಛಿನ್ನಾ । ಪ್ರತ್ಯಕ್ಷೇಣ ತು ಘಟಾದೇಃ ತದವಚ್ಛಿನ್ನಾ ಸಾ ಗೃಹೀತೇತಿ ತತ್ರ ಸಾ ತದವಚ್ಛಿನ್ನೇತಿ ।**

'ಐತದಾತ್ಮ್ಯಂ' 'ಹರಿಯ ಅಧೀನವಿದು ಪ್ರಪಂಚ, ಹರಿಯಿಂದ ಜನ್ಯ, ಹರಿನಿಯಮ್ಯ ಹರಿಸ್ವಾಮಿಕವಿದು ಎಲ್ಲವೂ' ಎಂದು ಹೇಳಿ ಉಪನಿಷತ್ತು 'ತತ್ ಸತ್ಯಂ' ಎನ್ನುತ್ತದೆ. 'ತತ್' ಆ ಕಾರಣದಿಂದ 'ಸತ್ಯಂ' ಸತ್ಯವಾಗಿದೆ, ಎನ್ನುತ್ತಿದೆ. ಹೀಗೆ ಪ್ರತ್ಯಕ್ಷದಂತೆ ಈ ಶ್ರುತಿಯೂ ಜಗತ್ ಸತ್ಯತ್ವಕ್ಕೆ ಪ್ರಮಾಣ. ಆದರೂ ಅದ್ವೈತ ರೀತಿಯಿಂದ ಹೇಳಬೇಕೆಂದರೆ, 'ತತ್' ಆ ಬ್ರಹ್ಮವು 'ಸತ್ಯಂ' ಸತ್ಯ

ಎಂದು ಈ ಶ್ರುತಿಯು ಹೇಳುತ್ತದೆ. 'ಈಗ ಸತ್ಯ, ಹಿಂದೆ ಸತ್ಯ, ಅಥವಾ ಮುಂದೆ ಎಂದಾದರೂ ಸತ್ಯವಾಗಿರುತ್ತದೆ' ಎಂದು ಯಾವ ಕಾಲವನ್ನೂ ವಿಶೇಷವಾಗಿ ನಿರ್ದೇಶ ಮಾಡದೆ ಕೇವಲ 'ಸತ್ಯ' ಎಂದು ಮಾತ್ರ ಹೇಳುತ್ತದೆ, ಆದರೆ ಪ್ರತ್ಯಕ್ಷವು ಪ್ರಪಂಚ ಸತ್ಯತ್ವವನ್ನು ಗ್ರಹಣ ಮಾಡುವಾಗ 'ಈಗ ಸತ್ಯವಾಗಿದೆ' ಎಂದು ಗ್ರಹಿಸುತ್ತದೆ. ಪ್ರತ್ಯಕ್ಷ ಶ್ರುತಿಗಳಲ್ಲಿ ಇಷ್ಟೇ ಭೇದ. ಶ್ರುತಿಯು ಬ್ರಹ್ಮ ಸತ್ಯತ್ವವನ್ನು ಯಾವುದೇ ಕಾಲಕ್ಕೆ ಸೀಮಿತವಾಗಿದೆ ಎನ್ನುವುದಿಲ್ಲ. ಅದು ಕಾಲದಿಂದ ಸೀಮಿತವಲ್ಲ. ಪ್ರತ್ಯಕ್ಷವು ಘಟಾದಿ ಸತ್ವವನ್ನು ವರ್ತಮಾನ ಕಾಲಕ್ಕೆ ಸೀಮಿತಗೊಳಿಸುತ್ತದೆ.

**ಯದ್ದೇಶಕಾಲಪ್ರಕಾರಾವಚ್ಛೇದೇನ ತು ಯಸ್ಯ ಯೇನ ಸತ್ತಾ ಗೃಹೀತಾ ತದವಚ್ಛೇದೇನ ತಸ್ಯಾಬಾಧ್ಯತ್ವಂ ಪ್ರಾಮಾಣ್ಯಪ್ರಯುಕ್ತಂ ಉಭಯಸಾಧಾರಣಂ ಇತಿ ಪ್ರಮಾಣೇನ ಪ್ರತ್ಯಕ್ಷೇಣ ನಿತ್ಯತ್ವಾದ್ಯಸಿದ್ಧಾವಪಿ ಸ್ವೋಪಾಧೌ ತ್ರೈಕಾಲಿಕನಿಷೇಧಾಪ್ರತಿಯೋಗಿತ್ವರೂಪಮಾತ್ಯನ್ತಿಕಾಬಾಧ್ಯತ್ವಂ ಸಿಧ್ಯತ್ಯೇವ ।**

ಹೀಗೆ ಶ್ರುತಿ–ಪ್ರತ್ಯಕ್ಷಗಳು ತಿಳಿಸುವ ಸತ್ಯತ್ವಗಳಲ್ಲಿ ಅಸೀಮಿತ–ಸೀಮಿತ ಎಂದು ವೈಲಕ್ಷಣ್ಯವಿದ್ದರೂ ಯಾವ ದೇಶ ಕಾಲಗಳಲ್ಲಿ ಯಾವ ಪ್ರಕಾರದಿಂದ ವಸ್ತುವಿನಲ್ಲಿ ಸತ್ಯತ್ವವನ್ನು ಪ್ರಮಾಣವು ತಿಳಿಸುವುದೋ ಆ ದೇಶಕಾಲ ಪ್ರಕಾರಗಳಲ್ಲಿ ಆ ವಸ್ತುವಿನಲ್ಲಿ ಸತ್ಯತ್ವವು ಆ ಪ್ರಮಾಣದ ಪ್ರಾಮಾಣ್ಯ ಪ್ರಯುಕ್ತವಾಗಿ ಅಬಾಧ್ಯವೇ ಆಗಿರುತ್ತದೆ. ಇದು ಶ್ರುತಿ ಪ್ರತ್ಯಕ್ಷಗಳೆರಡರಲ್ಲಿಯೂ ಸಮಾನವೆ. ಹೀಗಾಗಿ ಸತ್ವಗ್ರಾಹಕವಾದ ಪ್ರಮಾಣದಿಂದ ನಿತ್ಯತ್ವ ಅನಿತ್ಯತ್ವಗಳು ಸಿದ್ಧವಾಗದಿದ್ದರೂ ಸ್ವೋಪಾಧಿಯಲ್ಲಿ ತ್ರೈಕಾಲಿಕ ನಿಷೇಧ ಅಪ್ರತಿಯೋಗಿತ್ವರೂಪ ಆತ್ಯಂತಿಕ ಅಬಾಧ್ಯತ್ವವು ಅವಶ್ಯ ಸಿದ್ಧವಾಗುವುದು.



**कालान्तरादिस्थमपि हि बाधकं किं यत्कालाद्यवच्छेदेनानेन स्वार्थो गृहीतस्तदवच्छेदेनैव तन्निषेधति अन्यावच्छेदेन वा? आद्ये कथमस्य प्रामाण्यम्? अन्त्ये त्वनित्यत्वादिकमेव स्यान्नतु मिथ्यात्वम्। किञ्चानागतकालग्राही साक्षी स्वविषयस्य गगनादेः साक्षात्स्वाविषयस्य घटादेरपि निर्दोषतद्धीप्रामाण्यग्रहणद्वारा भाविबाधाभावं गृह्णात्येव। नहि विषयाबाधमनन्तर्भाव्य प्रामण्यग्रहणं नाम। त्यक्तव्यं च परेणैव प्रत्यक्षस्य वर्तमानमात्रग्राहित्वम्, अन्यथा रूप्यादेः प्रतिपन्नोपाधौ त्रैकालिकनिषेधप्रतियोगित्वरूपं मिथ्यात्वं प्रत्यक्षं न स्यात्। किञ्च—**

प्रातिभासिकवैधर्म्यं तव येन प्रसिध्यति ।
घटादेः परमार्थत्वं मम तेनैव सेत्स्यति ।।

अस्ति हि त्वन्मतेऽपि घटादेर्व्यावहारिकसत्त्वाय तज्ज्ञाने रूप्यादिधीतो विशेषः । तथा च तेनैव विशेषेण तात्विकत्वसिद्धिः । किञ्च

यद्यक्षसिद्धं विश्वस्य सत्यत्वं नैव तात्त्विकम् ।
तर्ह्यक्षसिद्धं रूप्यादिमिथ्यात्वं तात्त्विकं कथम् ।।

नहि घटस्सन् रूप्यं मिथ्येति प्रत्यक्षयोर्मात्रयापि विशेषोऽनुभूयते । रूप्यमिथ्यात्वस्य कालान्तरबाध्यत्वे च रूप्यं तात्त्विकं स्यात् ।

किञ्च—

पारमार्थिकसत्यत्वं न चेत्प्रत्यक्षगोचरः ।
तन्निषेधश्रुतीनां स्यादप्रसक्तनिषेधता ।।

किञ्च—

अतत्त्वं तात्त्विकत्वेन प्रपञ्चं नावभासयेत् ।
अक्षं यदि तदा तस्यातत्त्वावेदकता कथम् ।।

नहि व्यावहारिकं तथैव गृह्णत् अतत्वावेदकं भवति । किन्तु पारमार्थिकत्वेन । अनुभूयते च जगति लौकिकानां पारमार्थिकत्वधीः । तस्मात्प्रत्यक्षस्य प्रतिपन्नोपाधौ त्रैकालिकनिषेध प्रतियोगित्वरूप मिथ्यात्वाभाव ग्राहित्वात्तद्बाधिता दृश्यत्वादयः ।

---

**अनेनेति** । प्रत्यक्षेणेत्यर्थः । **कथमस्येति** । तदभाववति तद्वत्त्वग्राहकत्वादिति

भावः । अभ्युपेत्य विकल्प्य दूषितम् । वस्तुतस्तु साक्षिविरोधाद्बाधावतार एवासंभवीत्याह **किञ्चेति** । साक्षादित्येतत् गृह्णात्येवेत्यनेन संबध्यते । **नहीति** । प्रामाण्यस्य विषयाबाधघटितमूर्तित्वादिति भावः । नामेत्यनन्तरमस्तीति शेषः ।। **प्रत्यक्षं न स्यादिति** ।। नेदंरजतमितिबाधानन्तरं मिथ्यैव रजतमभादिति मिथ्यात्वप्रत्यक्षस्यानुभवसिद्धत्वादिति भावः । ननु मिथ्यात्वं न प्रत्यक्षं किन्तु ख्यातिबाधान्यथानुपपत्तिगम्यमिति वदन्तं प्रत्याह **किञ्चेति** । नन्वस्तु विश्वसत्यत्वं किन्तु तत्कल्पितमेव, नतु तात्त्विकमित्यत आह **किञ्चेति** । उपसंहरति **तस्मादिति** । **तद्बाधिता इति** ।। प्रत्यक्षबाधिता इत्यर्थः ।



**ಕಾಲಾಂತರಾದಿಸ್ಥಮಪಿ ಹಿ ಬಾಧಕಂ ಕಿಂ ಯತ್ಕಾಲಾದ್ಯವಚ್ಛೇದೇನಾನೇನ ಸ್ವಾರ್ಥೋ ಗೃಹೀತಸ್ತದವಚ್ಛೇದೇನೈವ ತನ್ನಿಷೇಧತಿ ಅನ್ಯಾವಚ್ಛೇದೇನ ವಾ? ಆದ್ಯೇ ಕಥಮಸ್ಯ ಪ್ರಾಮಾಣ್ಯಮ್? ಅಂತ್ಯೇ ತ್ವನಿತ್ಯತ್ವಾದಿಕಮೇವ ಸ್ಯಾನ್ನತು ಮಿಥ್ಯಾತ್ವಂ।**

ಏಕೆಂದರೆ ಕಾಲಾಂತರದಲ್ಲಿ ಬರುವ ಭಾವಿಬಾಧವು ಈ ಪ್ರಮಾಣವು ಯಾವಕಾಲದಲ್ಲಿ ವಸ್ತುವಿನ ಅಸ್ತಿತ್ವವನ್ನು ಗ್ರಹಿಸಿದೆಯೋ ಅದೇ ಕಾಲದಲ್ಲಿ ವಸ್ತುವಿನ ಅಸ್ತಿತ್ವವನ್ನು ನಿಷೇಧಿಸುತ್ತಿದ್ದರೆ ಈ ಪ್ರಮಾಣವು ಹೇಗೆ ಪ್ರಮಾಣವೆನಿಸೀತು? ಅದು ತದಭಾವವತಿ ತದ್ವತ್ವಗ್ರಾಹಕವಾಗಿದೆ ತಾನೆ? ಬೇರೆ ಕಾಲದಲ್ಲಿ ಆ ವಸ್ತುವಿನ ಅಸ್ತಿತ್ವವನ್ನು ನಿಷೇಧಿಸುವುದಾದರೆ ವಸ್ತು ಅನಿತ್ಯವೆಂದಾದೀತು. ಈಗ ಇದೆ ಬೇರೆ ಕಾಲದಲ್ಲಿ ಇಲ್ಲ ಎಂದರೆ ಅದು ಅನಿತ್ಯವೆ. ಹೀಗೆ ಆ ಪ್ರಮಾಣವು ಅನಿತ್ಯತ್ವವನ್ನೇ ತಿಳಿಸೀತು ಹೊರತು ಸಾರ್ವಕಾಲಿಕ ನಿಷೇಧರೂಪ ಮಿಥ್ಯಾತ್ವವನ್ನು ತಿಳಿಸಲಾರದು.

**ಕಿಂಚಾನಾಗತ ಕಾಲಗ್ರಾಹೀ ಸಾಕ್ಷೀ ಸ್ವವಿಷಯಸ್ಯ ಗಗನಾದೇಃ ಸಾಕ್ಷಾತ್ ಸ್ವವಿಷಯಸ್ಯ ಘಟಾದೇರಪಿ ನಿರ್ದೋಷತದ್ಧೀಪ್ರಾಮಾಣ್ಯಗ್ರಹಣದ್ವಾರಾ ಭಾವಿಬಾಧಾಭಾವಂ ಗೃಹ್ಣಾತ್ಯೇವ। ನಹಿ ವಿಷಯಾಬಾಧಮನಂತರ್ಭಾವ್ಯ ಪ್ರಾಮಣ್ಯಗ್ರಹಣಂ ನಾಮ।**

ಭವಿಷ್ಯತ್‌ಕಾಲವನ್ನು ಗ್ರಹಿಸುವ ಸಾಕ್ಷಿಯು ತನಗೆ ವಿಷಯವಾಗಿರುವ ಅವ್ಯಾಕೃತಾಕಾಶ ಕಾಲಾದಿಗಳಿಗೆ ಭಾವಿಬಾಧಕವಿಲ್ಲವೆಂದು ತಾನೇ ನೇರವಾಗಿ ತಿಳಿಸುತ್ತದೆ. ತನಗೆ ವಿಷಯವಾಗದಿರುವ ಘಟಾದಿಗೂ ಕೂಡ ಅದನ್ನು ಗ್ರಹಿಸುವ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವ ಮೂಲಕ ಭಾವಿಬಾಧಕವಿಲ್ಲವೆಂದು ಅವಶ್ಯ ತಿಳಿಸುತ್ತದೆ. ಏಕೆಂದರೆ ವಿಷಯಕ್ಕೆ ಬಾಧವಿಲ್ಲ ಎನ್ನದೆ ಜ್ಞಾನಕ್ಕೆ ಪ್ರಾಮಾಣ್ಯವನ್ನು ತಿಳಿಸುವುದು ಎಲ್ಲಿಯೂ ಇಲ್ಲ, ತಾನೆ?

**ತ್ಯಕ್ತವ್ಯಂ ಚ ಪರೇಣೈವ ಪ್ರತ್ಯಕ್ಷಸ್ಯ ವರ್ತಮಾನಮಾತ್ರಗ್ರಾಹಿತ್ವಂ, ಅನ್ಯಥಾ**

**ರೂಪ್ಯಾದೇಃ ಪ್ರತಿಪನ್ನೋಪಾಧೌ ತ್ರೈಕಾಲಿಕನಿಷೇಧಪ್ರತಿಯೋಗಿತ್ವರೂಪಂ ಮಿಥ್ಯಾತ್ವಂ ಪ್ರತ್ಯಕ್ಷಂ ನ ಸ್ಯಾತ್ ।**

ಪ್ರತ್ಯಕ್ಷವು ವರ್ತಮಾನ ಮಾತ್ರ ಗ್ರಾಹಿ ಎಂಬುದನ್ನು ಅದ್ವೈತಿಯೇ ಪರಿತ್ಯಾಗ ಮಾಡಬೇಕು. ಇಲ್ಲದಿದ್ದರೆ ರೂಪ್ಯಾದಿಗಳಿಗೆ ಪ್ರತಿಪನ್ನೋಪಾಧಿಯಲ್ಲಿ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವರೂಪ ಮಿಥ್ಯಾತ್ವವನ್ನು ವರ್ತಮಾನ ಮಾತ್ರ ಗ್ರಾಹಿಯಾದ ಪ್ರತ್ಯಕ್ಷವು ಗ್ರಹಿಸಲಾರದು. 'ನೇದಂ ರಜತಂ' ಎಂದು ಬಾಧಾನಂತರದಲ್ಲಿ ಮಿಥ್ಯೈವ ರಜತಂ ಪ್ರತ್ಯಭಾತ್ ಎಂದು ಮಿಥ್ಯಾತ್ವಪ್ರತ್ಯಕ್ಷವು ಅನುಭವ ಸಿದ್ಧವಾಗಿದೆ.

'ಮಿಥ್ಯಾತ್ವವು ಪ್ರತ್ಯಕ್ಷಗ್ರಾಹ್ಯವೆಂದು ನಾನು ಒಪ್ಪುವುದಿಲ್ಲ. 'ಅಸಚ್ಚೇನ್ನ ಪ್ರತೀಯೇತ । ಸಚ್ಚೇನ್ನ ಬಾಧ್ಯೇತ । ಬಾಧ್ಯತೇ ಪ್ರತಿಯತೇ ಚೇದಂ । ಅತಃ ಸದಸದ್‌ವಿಲಕ್ಷಣಂ, ಮಿಥ್ಯಾ' ಎಂದು ಖ್ಯಾತಿ-ಬಾಧ ಅನ್ಯಥಾನುಪಪತ್ತಿಯಿಂದಲೇ ಮಿಥ್ಯಾತ್ವಸಿದ್ಧಿ ಎನ್ನುತ್ತೇನೆ' ಎಂದು ಅದ್ವೈತಿ ಹೇಳಿದರೆ ಹೇಳುತ್ತಾರೆ—

**ಕಿಂಚ—**

**ಪ್ರಾತಿಭಾಸಿಕ ವೈಧರ್ಮ್ಯಂ ತವ ಯೇನ ಪ್ರಸಿಧ್ಯತಿ ।**
**ಘಟಾದೇಃ ಪರಮಾರ್ಥತ್ವಂ ಮಮ ತೇನೈವ ಸೇತ್ಸ್ಯತಿ ॥**

**ಅಸ್ತಿಹಿ ತ್ವನ್ಮತೇಽಪಿ ಘಟಾದೇರ್ವ್ಯಾವಹಾರಿಕ ಸತ್ತ್ವಾಯ ತಜ್ಞಾನೇ ರೂಪ್ಯಾದಿ ಧೀತೋ ವಿಶೇಷಃ । ತಥಾ ಚ ತೇನೈವ ವಿಶೇಷೇಣ ತಾತ್ವಿಕತ್ವಸಿದ್ಧಿಃ ।**

'ಘಟಾದಿ ವ್ಯಾವಹಾರಿಕ ಪ್ರಪಂಚದಲ್ಲಿ ಪ್ರಾತಿಭಾಸಿಕ ಶುಕ್ತಿರೂಪ್ಯಾದಿಗಳಿಗಿಂತ ವೈಲಕ್ಷಣ್ಯವು ನಿನಗೆ ಯಾವ ಪ್ರಮಾಣದಿಂದ ಸಿದ್ಧವಾಗುವುದೋ ಅದೇ ಪ್ರಮಾಣದಿಂದ ನನಗೆ ಘಟಾದಿ ಪ್ರಪಂಚದಲ್ಲಿ ಪಾರಮಾರ್ಥಿಕತ್ವವು ಸಿದ್ಧಿಸುವುದು'

ನಿನ್ನ ಮತದಲ್ಲಿಯೂ ಘಟಾದಿಗೆ ವ್ಯಾವಹಾರಿಕತ್ವ ಸಿದ್ಧವಾಗಬೇಕಾದರೆ ಅದರ ಜ್ಞಾನದಲ್ಲಿ ಶುಕ್ತಿರೂಪ್ಯಾದಿ ಪ್ರಾತಿಭಾಸಿಕ ಜ್ಞಾನಕ್ಕಿಂತ ವೈಲಕ್ಷಣ್ಯಕ್ಕೆ ವಿಶೇಷ ಕಾರಣವಿದೆ. ಅದು ಅರ್ಥಕ್ರಿಯಾಕಾರಿತ್ವ. ಆ ಕಾರಣದಿಂದಲೆ ಘಟಾದಿಗೆ ನನ್ನ ಮತದಲ್ಲಿ ಪಾರಮಾರ್ಥಿಕತ್ವವು ಸಿದ್ಧವಾಗುತ್ತದೆ.

**ಕಿಂಚ—**

**ಯದ್ವಕ್ಷಸಿದ್ಧಂ ವಿಶ್ವಸ್ಯ ಸತ್ಯತ್ವಂ ನೈವ ತಾತ್ತ್ವಿಕಂ ।**
**ತರ್ಹ್ಯಕ್ಷಸಿದ್ಧಂ ರೂಪ್ಯಾದಿ ಮಿಥ್ಯಾತ್ವಂ ತಾತ್ತ್ವಿಕಂ ಕಥಂ ॥**

ಪ್ರತ್ಯಕ್ಷಸಿದ್ಧವಾದ ಪ್ರಪಂಚ ಸತ್ಯತ್ವವು ತಾತ್ವಿಕವಲ್ಲ, ಕಲ್ಪಿತ, ಎಂದರೆ ಪ್ರತ್ಯಕ್ಷಸಿದ್ಧವಾದ ಶುಕ್ತಿರೂಪ್ಯ ಮಿಥ್ಯಾತ್ವವೂ ಹೇಗೆ ತಾತ್ವಿಕವಾಗುವುದು?

**'ನಹಿ ಘಟಃ ಸನ್' 'ರೂಪ್ಯಂ ಮಿಥ್ಯಾ' ಇತಿ ಪ್ರತ್ಯಕ್ಷಯೋಃ ಮಾತ್ರಯಾಽಪಿ ವಿಶೇಷಃ ಅನುಭೂಯತೇ। ರೂಪ್ಯ ಮಿಥ್ಯಾತ್ವಸ್ಯ ಕಾಲಾಂತರ ಬಾಧ್ಯತ್ವೇ ಚ ರೂಪ್ಯಂ ತಾತ್ತ್ವಿಕಂ ಸ್ಯಾತ್ ।**

'ಘಟವು ಸತ್ಯ', 'ರೂಪ್ಯವು ಮಿಥ್ಯಾ' ಎಂಬ ಎರಡು ಪ್ರತ್ಯಕ್ಷಗಳಿಗೆ ಸ್ವಲ್ಪವೂ ವೈಲಕ್ಷಣ್ಯ ಅನುಭವದಲ್ಲಿ ಕಂಡಿಲ್ಲ. ರೂಪ್ಯ ಮಿಥ್ಯಾತ್ವವು ಕಾಲಾಂತರದಲ್ಲಿ ಬಾಧಿತವಾಗುವುದಾದರೆ ರೂಪ್ಯವು ತಾತ್ವಿಕವೆಂದಾದೀತು.

**ಕಿಂಚ—**

**ಪಾರಮಾರ್ಥಿಕ ಸತ್ಯತ್ವಂ ನ ಚೇತ್ ಪ್ರತ್ಯಕ್ಷ ಗೋಚರಃ ।**
**ತನ್ನಿಷೇಧ ಶ್ರುತೀನಾಂ ಸ್ಯಾದ್ ಅಪ್ರಸಕ್ತ ನಿಷೇಧತಾ ॥**

**ಕಿಂಚ—**

**ಅತತ್ತ್ವಂ ತಾತ್ತ್ವಿಕತ್ವೇನ ಪ್ರಪಂಚಂ ನಾವಭಾಸಯೇತ್ ।**
**ಅಕ್ಷಂ ಯದಿ ತದಾ ತಸ್ಯಾತತ್ತ್ವಾವೇದಕತಾ ಕಥಂ ?**

**ನಹಿ ವ್ಯಾವಹಾರಿಕಂ ತಥೈವ ಗೃಹ್ಣತ್ ಅತತ್ತ್ವಾವೇದಕಂ ಭವತಿ। ಕಿಂತು ಪಾರಮಾರ್ಥಿಕತ್ವೇನ। ಅನುಭೂಯತೇ ಚ ಜಗತಿ ಲೌಕಿಕಾನಾಂ ಪಾರಮಾರ್ಥಿಕತ್ವಧೀಃ। ತಸ್ಮಾತ್ ಪ್ರತ್ಯಕ್ಷಸ್ಯ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವಾಭಾವ ಗ್ರಾಹಿತ್ವಾತ್ ತದ್‌ಬಾಧಿತಾ ದೃಶ್ಯತ್ವಾದಯಃ ॥**

ಪಾರಮಾರ್ಥಿಕ ಸತ್ಯತ್ವವು ಪ್ರತ್ಯಕ್ಷ ಗೋಚರವಲ್ಲದಿದ್ದರೆ ಅದನ್ನು ಶ್ರುತಿಗಳು ನಿಷೇಧಿಸುವುದು ಅಪ್ರಸಕ್ತ ನಿಷೇಧವಾಗುವುದು. 'ವಿಶ್ವ ಸತ್ಯತ್ವವು ಪ್ರತ್ಯಕ್ಷಗೋಚರವೇ ಇರಲಿ, ಆದರೆ ಅದು ಕಲ್ಪಿತವೇ ಹೊರತು ತಾತ್ವಿಕವಲ್ಲ ಎನ್ನುತ್ತೇನೆ' ಎಂದರೆ 'ಕಲ್ಪಿತವಾದ ಸತ್ಯತ್ವ' ಎಂದರೆ ವ್ಯಾವಹಾರಿಕತ್ವವೆ. ವ್ಯಾವಹಾರಿಕವಾದ ಪ್ರಪಂಚವನ್ನು ವ್ಯಾವಹಾರಿಕವೆಂದೇ ಪ್ರತ್ಯಕ್ಷವು ಗ್ರಹಿಸಿದರೆ ಅದು ಅತತ್ತ್ವಾವೇದಕವೆನಿಸಲಾರದು. ಆದಕ್ಕೆ ಪ್ರತ್ಯಕ್ಷವು ವ್ಯಾವಹಾರಿಕವಾದ ಪ್ರಪಂಚವನ್ನು ಪಾರಮಾರ್ಥಿಕವೆಂದೇ ಗ್ರಹಿಸಬೇಕು ಮತ್ತು ಲೌಕಿಕರಿಗೆ ಘಟಾದಿ ವಿಷಯದಲ್ಲಿ ಅದು ಪಾರಮಾರ್ಥಿಕ ಎಂದೇ ಬುದ್ಧಿ ಬರುವುದೂ ಅನುಭವದಲ್ಲಿ ಕಾಣುತ್ತಿದೆ. ಆದರಿಂದ ಪ್ರತ್ಯಕ್ಷವು ಘಟಾದಿಗಳಿಗೆ ಪ್ರತಿಪನ್ನೋಪಾಧಿಯಲ್ಲಿ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವಿಲ್ಲ ಮಿಥ್ಯಾತ್ವವಿಲ್ಲ ಎಂದೇ ಗ್ರಹಿಸುವುದರಿಂದ 'ವಿಶ್ವಂ ಮಿಥ್ಯಾ ದೃಶ್ಯತ್ವಾತ್' ಇತ್ಯಾದಿ ಅನುಮಾನಗಳು ಪ್ರತ್ಯಕ್ಷ ಬಾಧಿತವಾಗಿವೆ.



## ವಿಶ್ವಮಿಥ್ಯಾತ್ವಸ್ಯ ಅನುಮಾನಬಾಧಃ

**अनुमानबाधिताश्च दृश्यत्वादयः । तथाहि ब्रह्मप्रमान्येन वा वेदान्ततात्पर्यप्रमाजन्यज्ञानान्येन वा मोक्षहेतुज्ञानान्येन वा अबाध्यत्वे सति असत्त्वानधिकरणत्वे सति ब्रह्मान्यद्धिमतं वा, सद्वा, पारमार्थिकसद्वा । प्रातिभासिकत्वानधिकरणत्वे सत्यसत्त्वानधि-करणत्वात्, अनिषेध्यत्वेन प्रमां प्रति साक्षाद्विषयत्वात्, अनिषेध्यत्वेनेश्वरं प्रति साक्षादपरोक्षत्वात्, सप्रकारकाबाध्यार्थ-क्रियाकारित्वात्, आरोपितमिथ्यात्वकत्वात्, कल्पकरहितत्वाच्च, आत्मवत् ।**

---

**ब्रह्मप्रमेति ।** ब्रह्मावृत्त्यप्रकारिकेत्यर्थः । वेदान्ततात्पर्यभ्रमजन्यज्ञानान्य-ब्रह्मज्ञानबाध्यत्वाभ्युपगमात् प्रपञ्चस्य तत्राश्रयविशेषणासिद्धिः स्यात् अत उक्तं **वेदान्ततात्पर्यप्रमेति ।** असति व्यभिचारवारणायाह **अनिषेध्यत्वेनेति ।** अनिषेध्यत्वप्रकारकप्रमां प्रतीत्यर्थः । व्यवसायद्वारा साक्षिविषये प्रातिभासिके व्यभिचारवारणायाह **साक्षादिति ।** ईश्वरस्याभ्रान्तत्वेऽपि भ्रान्तिज्ञत्वात् प्रातिभासिके व्यभिचारवारणायाह **साक्षादिति ।** धर्माधर्मादौ अस्मदाद्यपरोक्षमादाय भागासिद्धिं शुक्तिरूप्यादौ व्यभिचारं च वारयितुमाह **ईश्वरं प्रतीति । सप्रकारकेति ।** सप्रकारकेणाबाध्या या अर्थक्रिया तत्कारित्वादित्यर्थः । एतद्विशेषणप्रयोजनं चानुपदमेव वक्ष्यति ।

❖❖❖

ಅನುಮಾನಬಾಧಿತಾಶ್ಚ ದೃಶ್ಯತ್ವಾದಯಃ । ತಥಾಹಿ—

(1) ಬ್ರಹ್ಮಪ್ರಮಾನ್ಯೇನ ಅಬಾಧ್ಯತ್ವೇ ಸತಿ ಅಸತ್ತ್ವಾನಧಿಕರಣತ್ವೇ ಸತಿ ಬ್ರಹ್ಮಾನ್ಯದ್, ವಿಮತಂ ವಾ ಸದ್ವಾ ಪಾರಮಾರ್ಥಿಕಸದ್ವಾ । ಪ್ರಾತಿಭಾಸಿಕತ್ವಾನಧಿಕರಣತ್ವೇ ಸತಿ ಅಸತ್ತ್ವಾ ನಧಿಕರಣತ್ವಾತ್, ಆತ್ಮವತ್ ।

ದೃಶ್ಯತ್ವ ಮುಂತಾದ ಮಿಥ್ಯಾತ್ವಹೇತುಗಳು ಅನುಮಾನಪ್ರಮಾಣದಿಂದ ಬಾಧಿತವಾಗಿವೆ. ಅನುಮಾನಗಳು ಹೀಗೆ—

ಬ್ರಹ್ಮಪ್ರಮಾನ್ಯದಿಂದ ಅಬಾಧ್ಯವಾಗಿದ್ದು ಅಸತ್ವಾನಧಿಕರಣವಾಗಿದ್ದು ಬ್ರಹ್ಮನಿಗಿಂತ ಭಿನ್ನವಾದುದು ಅಥವಾ ವಿಮತವು ಸತ್ತಾಗಿದೆ ಅಥವಾ ಪಾರಮಾರ್ಥಿಕಸತ್ತಾಗಿದೆ. ಪ್ರಾತಿಭಾಸಿಕತ್ವಾನಧಿಕರಣವಾಗಿದ್ದು, ಅಸತ್ವಾನಧಿಕರಣವಾಗಿರುವುದರಿಂದ ಆತ್ಮನಂತೆ.

**(2) ವೇದಾಂತ ತಾತ್ಪರ್ಯ ಪ್ರಮಾಜನ್ಯಜ್ಞಾನಾನ್ಯೇನ ಅಬಾಧ್ಯತ್ವೇ ಸತಿ ಅಸತ್ವಾನಧಿ ಕರಣತ್ವೇ ಸತಿ ಬ್ರಹ್ಮಾನ್ಯದ್, ವಿಮತಂ ವಾ ಸದ್ವಾ ಪಾರಮಾರ್ಥಿಕಸದ್ವಾ। ಪ್ರಾತಿಭಾಸಿಕತ್ವಾನಧಿಕರಣತ್ವೇ ಸತ್ ಅಸತ್ವಾನಧಿಕರಣತ್ವಾತ್ ಆತ್ಮವತ್ ।**

ವೇದಾಂತ ತಾತ್ಪರ್ಯ ಪ್ರಮಾಜನ್ಯಜ್ಞಾನಾನ್ಯ ಜ್ಞಾನದಿಂದ ಅಬಾಧ್ಯವಾಗಿದ್ದು ಅಸತ್ವಾನಧಿ ಕರಣವಾಗಿದ್ದು ಬ್ರಹ್ಮನಿಗಿಂತ ಭಿನ್ನವಾದುದು ಅಥವಾ ವಿಮತವು ಸತ್ತಾಗಿದೆ ಅಥವಾ ಪಾರಮಾರ್ಥಿಕ ಸತ್ತಾಗಿದೆ. ಪ್ರಾತಿಭಾಸಿಕತ್ವಾನಧಿಕರಣವಾಗಿದ್ದು ಅಸತ್ವಾನಧಿಕರಣವಾದ್ದರಿಂದ ಆತ್ಮನಂತೆ.

**(3) ಮೋಕ್ಷಹೇತು ಜ್ಞಾನಾನ್ಯಜ್ಞಾನೇನ ಅಬಾಧ್ಯತ್ವೇ ಸತಿ ಅಸತ್ವಾನಧಿಕರಣತ್ವೇ ಸತಿ ಬ್ರಹ್ಮಾನ್ಯದ್, ವಿಮತಂ ವಾ ಸದ್ವಾ ಪಾರಮಾರ್ಥಿಕಸದ್ವಾ ಪ್ರಾತಿಭಾಸಿಕತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವಾತ್ ಆತ್ಮವತ್ ।**

ಮೋಕ್ಷಹೇತು ಜ್ಞಾನಾನ್ಯ ಜ್ಞಾನದಿಂದ ಅಬಾಧ್ಯವಾಗಿದ್ದು ಅಸತ್ವಾನಧಿಕರಣವಾಗಿದ್ದು ಬ್ರಹ್ಮನಿಗಿಂತ ಭಿನ್ನವಾದುದು ಅಥವಾ ವಿಮತವು ಸತ್ತಾಗಿದೆ ಅಥವಾ ಪಾರಮಾರ್ಥಿಕಸತ್ತಾಗಿದೆ. ಪ್ರಾತಿಭಾಸಿಕತ್ವಾನಧಿಕರಣವಾಗಿದ್ದು ಅಸತ್ವಾನಧಿಕರಣವಾದ್ದರಿಂದ ಆತ್ಮನಂತೆ.

ಈ ಮೂರೂ ಅನುಮಾನಗಳನ್ನು ಇನ್ನೂ ಬೇರೆ ಐದು ಹೇತುಗಳಿಂದಲೂ ಸಾಧನ ಮಾಡಬಹುದು—

**(1) ಅನಿಷೇಧ್ಯತ್ವೇನ ಪ್ರಮಾಂ ಪ್ರತಿ ಸಾಕ್ಷಾತ್ ವಿಷಯತ್ವಾತ್ ।**

**(2) ಅನಿಷೇಧ್ಯತ್ವೇನ ಈಶ್ವರಂ ಪ್ರತಿ ಸಾಕ್ಷಾದಪರೋಕ್ಷತ್ವಾತ್ ।**

**(3) ಸಪ್ರಕಾರಕಾಬಾಧ್ಯ – ಅರ್ಥಕ್ರಿಯಕಾರಿತ್ವಾತ್ ।**

**(4) ಆರೋಪಿತ ಮಿಥ್ಯಾತ್ವಕತ್ವಾತ್ ।**

**(5) ಕಲ್ಪಕ ರಹಿತತ್ವಾತ್ ।**

(1) ಪ್ರಪಂಚವು ಅನಿಷೇಧ್ಯತ್ವಪ್ರಕಾರಕ ಪ್ರಮಾದಲ್ಲಿ ಸಾಕ್ಷಾದ್ ವಿಷಯವಾದ್ದರಿಂದ

(2) ಈಶ್ವರನಿಗೆ ಅನಿಷೇಧ್ಯವಾಗಿ ಸಾಕ್ಷಾತ್ತಾಗಿ ಅಪರೋಕ್ಷಗೋಚರವಾದ್ದರಿಂದ

(3) ಸಪ್ರಕಾರಕಜ್ಞಾನದಿಂದ ಅಬಾಧ್ಯವಾದ ಅರ್ಥಕ್ರಿಯೆಯನ್ನು ಮಾಡುವುದರಿಂದ

(4) ಅದರಲ್ಲಿ ಮಿಥ್ಯಾತ್ವವು ಆರೋಪಿತವಾಗಿರುವುದರಿಂದ

(5) ಅದು ಕಲ್ಪಕ ರಹಿತವಾಗಿರುವುದರಿಂದ

ಈ ಎಲ್ಲ ಹೇತುಗಳಿಗೂ ಆತ್ಮನೇ ದೃಷ್ಟಾಂತ.



प्रातिभासिकस्य(रूप्यादेः) वाधकं हि ज्ञानं ब्रह्मप्रमान्यत् वेदान्ततात्पर्यप्रमाजन्यज्ञानान्यत्, मोक्षहेतुज्ञानान्यच्चेति तस्यापक्षत्वाय पक्षे सतीत्यन्तं वैकल्पिकमाद्यं विशेषणत्रयम् । तत्रापि ब्रह्म वृत्तिव्याप्यमिति मतेनाऽऽद्यं विशेषणं, ब्रह्म वृत्तिव्याप्यमपि नेति मतेन तु द्वितीयतृतीये । तत्रापि शाब्दप्रमां प्रति तात्पर्यप्रमा हेतुरिति मतेन द्वितीयम् । अन्योन्याश्रयान्न हेतुरिति मतेन तृतीयम् ।

यद्वा एतद्विशेषणस्थाने स्वबाधकाभिमताबाध्यदोष-जन्यज्ञानाविषयत्वे सतीति वा, स्वबाधकाभिमताबाध्यबाधाविषयत्वे सतीति वा, समानाधिकरणकर्मप्रागभावसमानकालीनज्ञानाबाध्यत्वे सतीति वा विशेषणं देयम् । प्रातिभासिकविषयकज्ञानहेतुर्दोषः तद्बाधश्च न प्रातिभासिकबाधकबाध्यौ । तथा चरमसाक्षात्कारानन्तरं समानाधिकरणकर्मान्तरानुदय इव शुक्तिसाक्षात्कारानन्तरं तदनुदया-भावात् प्रातिभासिकं समानाधिकरणकर्मप्रागभावसमानकालीनज्ञान-बाध्यमिति तद्व्यवच्छेदः ।

व्यावहारिकसत्त्वं सत्त्वेन व्यवहारमात्रमिति मतानुसारेणाद्यं साध्यम् । अर्थगतं मायिकं सत्त्वमिति मतानुसारेण द्वितीयम् ।

---

शिष्यानुजिघृक्षया स्वयमेव पक्षविशेषणस्य प्रयोजनमाह **प्रातिभासिकस्येत्यादिना** । **वैकल्पिकमिति** । तथाच नान्यतमवैयर्थ्यमिति भावः ।

**तत्रापीति ।** विशेषणत्रयेऽपीत्यर्थः । **अन्योन्याश्रयादिति ।** शब्दात्संसर्गोपस्थितौ तत्र तात्पर्यप्रमा, तस्यां च सत्यां शब्दात्तदुपस्थितिरिति ।

**एतद्विशेषणस्थान इति ।** ब्रह्मप्रमान्येत्याद्युक्तविशेषणत्रयस्थान इत्यर्थः । **समानाधिकरणेति ।** बाधसमानाधिकरणेत्यर्थः । ननु परेणापि प्रपञ्चे व्यावहारिकसत्त्वाङ्गीकारात् सिद्धसाधनमित्यत आह **व्यावहारिकेति ।।**



**ಪ್ರಾತಿಭಾಸಿಕಸ್ಯ ರೂಪ್ಯಾದೇಃ ಬಾಧಕಂ ಹಿ ಜ್ಞಾನಂ ಬ್ರಹ್ಮಪ್ರಮಾನ್ಯತ್, ವೇದಾಂತ ತಾತ್ಪರ್ಯ ಪ್ರಮಾ ಜನ್ಯ ಜ್ಞಾನಾನ್ಯತ್, ಮೋಕ್ಷಹೇತು ಜ್ಞಾನಾನ್ಯಚ್ಚ ಇತಿ ತಸ್ಯ ಅಪಕ್ಷತ್ವಾಯ ಪಕ್ಷೇ ಸತೀತ್ಯಂತಂ ವೈಕಲ್ಪಿಕಂ ಆದ್ಯಂ ವಿಶೇಷಣತ್ರಯಂ ।**

ಪ್ರಾತಿಭಾಸಿಕ ರೂಪ್ಯಾದಿಗಳಿಗೆ ಬಾಧಕವಾದ 'ನೇದಂ ರಜತಂ' ಎಂಬ ಜ್ಞಾನವು ಬ್ರಹ್ಮ ಪ್ರಮಾಕ್ಕಿಂತ ಅನ್ಯವಾಗಿದೆ. ವೇದಾಂತ ತಾತ್ಪರ್ಯಪ್ರಮಾದಿಂದ ಜನ್ಯವಾದ ಬ್ರಹ್ಮಜ್ಞಾನಕ್ಕಿಂತ ಅನ್ಯವಾಗಿದೆ. ಮೋಕ್ಷಹೇತುವಾದ ಬ್ರಹ್ಮಜ್ಞಾನಕ್ಕಿಂತ ಅನ್ಯವಾಗಿದೆ. ಪ್ರಾತಿಭಾಸಿಕ ರೂಪ್ಯಾದಿಯು ಇಂಥ ನೇದಂ ರಜತಂ ಎಂಬ ಜ್ಞಾನದಿಂದ ಬಾಧ್ಯವೇ ಆಗಿದೆ. ಆದರಿಂದ 'ಅಬಾಧ್ಯತ್ವೆ ಸತಿ' ಎಂದು ಪಕ್ಷದಲ್ಲಿ ವಿಶೇಷಣ ಹಾಕಿದರೆ ಪ್ರಾತಿಭಾಸಿಕ ರೂಪ್ಯಾದಿಗಳನ್ನು ಪಕ್ಷದಿಂದ ಬಹಿಷ್ಕರಿಸಿದಂತಾಗುತ್ತದೆ. ಕೇವಲ ಅಬಾಧ್ಯತ್ವೇ ಸತಿ ಎಂದು ಮಾತ್ರ ವಿಶೇಷಣವನ್ನು ಹಾಕಿದರೆ ಪಕ್ಷವಾದ ಘಟಾದಿ ಪ್ರಪಂಚದಲ್ಲಿ ಬ್ರಹ್ಮಜ್ಞಾನ ಬಾಧ್ಯತ್ವವೇ ಇರುವುದರಿಂದ, ಅಬಾಧ್ಯತ್ವವು ಬಾರದಿರುವುದರಿಂದ ಪಕ್ಷದಲ್ಲಿ ವಿಶೇಷಣಾಸಿದ್ಧಿ ದೋಷ ಬರುತ್ತದೆ.

**ತತ್ರಾಪಿ ಬ್ರಹ್ಮ ವೃತ್ತಿವ್ಯಾಪ್ಯಮಿತಿ ಮತೇನ ಆದ್ಯಂ ವಿಶೇಷಣಂ। ಬ್ರಹ್ಮ ವೃತ್ತಿವ್ಯಾಪ್ಯಮಪಿ ನೇತಿ ಮತೇನ ತು ದ್ವಿತೀಯ ತೃತೀಯೇ। ತತ್ರಾಪಿ ಶಾಬ್ದಪ್ರಮಾಂ ಪ್ರತಿ ತಾತ್ಪರ್ಯಪ್ರಮಾ ಹೇತುರಿತಿ ಮತೇನ ದ್ವಿತೀಯಂ। ಅನ್ಯೋನ್ಯಾಶ್ರಯಾನ್ನ ಹೇತುರಿತಿ ಮತೇನ ತೃತೀಯಂ।**

ಬ್ರಹ್ಮ ವೃತ್ತಿವ್ಯಾಪ್ಯವೆನ್ನುವ ಮತದಲ್ಲಿ 'ಬ್ರಹ್ಮಪ್ರಮಾನ್ಯೇನ ಅಬಾಧ್ಯ' ಎಂದು ಮೊದಲನೆ ವಿಶೇಷಣ.

ಬ್ರಹ್ಮನಲ್ಲಿ ಇಲ್ಲದ್ದು ಪ್ರಕಾರವಾಗಿ ಕಾಣದಿರುವ ಪ್ರಮೆಯಿಂದ ಬಾಧ್ಯ, ಅನ್ಯವಾದ ಜ್ಞಾನದಿಂದ ಅಬಾಧ್ಯ ಎಂದರ್ಥ. ಬ್ರಹ್ಮನಲ್ಲಿರುವ ಧರ್ಮವು ಪ್ರಕಾರವಾಗಿ ಕಾಣಬೇಕು ಎಂದರೆ ಬ್ರಹ್ಮನಿರ್ಧರ್ಮಕವಾದ್ದರಿಂದ ಅಂಥ ಪ್ರಮೆ ಬ್ರಹ್ಮನ ವಿಷಯದಲ್ಲಿ ಬರಲಾರದು. ಪ್ರಮೆಯು ಬ್ರಹ್ಮಪ್ರಮೆ ಎನಿಸಲಾರದು. ಬ್ರಹ್ಮಪ್ರಮೆಯು ನಿಷ್ಪ್ರಕಾರಕ. ಆದರಲ್ಲಿ ಯಾವ ಧರ್ಮವೂ

ಪ್ರಕಾರವಾಗಿ ಕಾಣದಿರುವುದರಿಂದ 'ಬಹ್ಮನಲ್ಲಿಲ್ಲದ ಧರ್ಮವು ಪ್ರಕಾರವಾಗಿ ಕಾಣದಿರುವ ಪ್ರಮೆ'ಯು ಈ ಬ್ರಹ್ಮಪ್ರಮೆಯಾಗುತ್ತದೆ.

ಬ್ರಹ್ಮವು ವೃತ್ತಿವ್ಯಾಪ್ಯವಲ್ಲ, ಫಲವ್ಯಾಪ್ಯವೂ ಅಲ್ಲ, ಕೇವಲ ಸ್ವಪ್ರಕಾಶ ಎನ್ನುವ ಮತದಲ್ಲಿ ಬ್ರಹ್ಮಪ್ರಮಾ ಎಂಬುದೇ ಇಲ್ಲ. ಆದರಿಂದ ವೇದಾಂತ ತಾತ್ಪರ್ಯಪ್ರಮಾಜನ್ಯಜ್ಞಾನವನ್ನು ಅಥವಾ ಮೋಕ್ಷಹೇತುಜ್ಞಾನವನ್ನು ಇಟ್ಟುಕೊಂಡು, ಆದರಿಂದ ಅಬಾಧ್ಯವಾದುದು ಘಟಾದಿಪ್ರಪಂಚ ವಾದ್ದರಿಂದ ಎರಡನೆ ಮೂರನೇ ವಿಶೇಷಣಗಳಿಂದ ಯುಕ್ತವಾಗಿ ಪಕ್ಷವಾಗಬಹುದು.

ಶಾಬ್ದಪ್ರಮೆಗೆ ತಾತ್ಪರ್ಯಪ್ರಮೆಯು ಹೇತು ಎನ್ನುವ ಮತದಲ್ಲಿ ವೇದಾಂತ ತಾತ್ಪರ್ಯಜ್ಞಾನಜನ್ಯಜ್ಞಾನಾಬಾಧ್ಯತ್ವವು ಎರಡನೇ ವಿಶೇಷಣ. 'ಸಂಸರ್ಗವಿಷಯದಲ್ಲಿ ಶಾಬ್ದಪ್ರಮಾ ಬಂದರೆ ಆದರಲ್ಲಿ ತಾತ್ಪರ್ಯಜ್ಞಾನ. ಆದರಲ್ಲಿ ತಾತ್ಪರ್ಯಜ್ಞಾನ ಬಂದರೆ ಆ ವಿಷಯದಲ್ಲಿ ಶಾಬ್ದಪ್ರಮಾ' ಬರುತ್ತದೆ ಎಂದು ಅನ್ಯೋನ್ಯಾಶ್ರಯ ಬರುವುದರಿಂದ ಶಾಬ್ದಪ್ರಮೆಯು ತಾತ್ಪರ್ಯಪ್ರಮಾ ಜನ್ಯವಾಗದೆನ್ನುವವರ ಮತದಲ್ಲಿ ಬೇರೆಯೆ ವಿಶೇಷಣ ಬೇಕು. ಮೋಕ್ಷಹೇತು ಜ್ಞಾನಕ್ಕಿಂತ ಅನ್ಯವಾದ ಜ್ಞಾನದಿಂದ ಪ್ರಪಂಚವು ಬಾಧ್ಯವಾಗದು, ಅಬಾಧ್ಯವೇ ಆಗುವುದು. ಆದರಿಂದ ಮೋಕ್ಷಹೇತುಜ್ಞಾನಾನ್ಯ ಜ್ಞಾನದಿಂದ ಅಬಾಧ್ಯವೆಂದು ಮೂರನೆ ವಿಶೇಷಣ ನೀಡಿದ್ದಾರೆ.

**ಯದ್ವಾ ಏತದ್ ವಿಶೇಷಣಸ್ಥಾನೇ ಸ್ವಬಾಧಕಾಭಿಮತ ಅಬಾಧ್ಯ ದೋಷಜನ್ಯಜ್ಞಾನಾವಿಷಯತ್ವೇ ಸತೀತಿ ವಾ ವಿಶೇಷಣಂ ದೇಯಂ ।**

ಅಥವಾ ಈ ಮೂರು ವಿಶೇಷಣಗಳ ಸ್ಥಾನದಲ್ಲಿ ಬೇರೆಯೇ ವಿಶೇಷಣಗಳನ್ನು ಹಾಕಬಹುದು. ಅದ್ವೈತಮತದಲ್ಲಿ ಪ್ರಪಂಚಬಾಧಕವಾದ ಜ್ಞಾನವು ಪ್ರಪಂಚಭ್ರಮವನ್ನು ಮಾತ್ರವಲ್ಲದೆ ಆ ಭ್ರಮಕ್ಕೆ ಕಾರಣವಾದ ಅಜ್ಞಾನರೂಪ ದೋಷವನ್ನೂ ಬಾಧಿಸುತ್ತದೆ. 'ಸ್ವಬಾಧಕ' ಅಂದರೆ ಪ್ರಪಂಚಬಾಧಕವೆಂದು ಅಭಿಮತವಾದ ಚರಮವೃತ್ತಿ. ಆದರಿಂದ ಬಾಧ್ಯವೇ ಆದ ಅಜ್ಞಾನವೆಂಬ ದೋಷದಿಂದ ಜನ್ಯವಾದ ಭ್ರಮಕ್ಕೆ ಪ್ರಪಂಚವು ವಿಷಯವಾಗಿದೆ. ಸ್ವಬಾಧಕಾಭಿಮತ ಜ್ಞಾನಾಬಾಧ್ಯವಾದ ದೋಷದಿಂದ ಜನ್ಯವಾದ ಜ್ಞಾನಕ್ಕೆ ವಿಷಯವಾಗಿಲ್ಲ. ಆದರಿಂದ 'ಸ್ವಬಾಧಕಾಭಿಮತ ಜ್ಞಾನಾಬಾಧ್ಯ ದೋಷಜನ್ಯ ಜ್ಞಾನಾವಿಷಯತ್ವೇ ಸತಿ' ಎಂಬ ವಿಶೇಷಣವನ್ನು ಹಾಕುತ್ತೇವೆ. ಅದು ಪಕ್ಷವಾದ ಪ್ರಪಂಚದಲ್ಲಿ ಬರುತ್ತದೆ.

**ಸ್ವಬಾಧಕಾಭಿಮತಾಬಾಧ್ಯಬಾಧಾವಿಷಯತ್ವೇ ಸತೀತಿ ವಾ ವಿಶೇಷಣಂ ದೇಯಂ ।**

'ಸ್ವಬಾಧಕಾಭಿಮತ' ಅಂದರೆ, ಪ್ರಪಂಚಬಾಧಕಾಭಿಮತವಾದ, ಚರಮವೃತ್ತಿಯಿಂದ ಪ್ರಪಂಚಭ್ರಮವು ಬಾಧಿತವಾಗುವುದರಿಂದ ಸ್ವಬಾಧಕಾಭಿಮತಾಬಾಧ್ಯಬಾಧಕ್ಕೆ ಪ್ರಪಂಚವು ವಿಷಯವಾಗುವುದಿಲ್ಲ. ಆದರಿಂದ 'ಸ್ವಬಾಧಕಾಭಿಮತಾಬಾಧ್ಯಬಾಧಾವಿಷಯತ್ವೇತಿ ಸತಿ' ಎಂದೂ ವಿಶೇಷಣವನ್ನು ಹಾಕಬಹುದು.

**ಸಮಾನಾಧಿಕರಣ ಕರ್ಮಪ್ರಾಗಭಾವ ಸಮಾನಕಾಲೀನ ಜ್ಞಾನಾಬಾಧ್ಯತ್ವೇ ಸತೀತಿ ವಾ ವಿಶೇಷಣಂ ದೇಯಂ ।**

ಅಥವಾ ಮೂರನೆ ವಿಶೇಷಣ—'ಅಯಂ ಘಟಃ' ಇತ್ಯಾದಿ ಜ್ಞಾನವೆಲ್ಲವೂ ಬಾಧಸಮಾನಾಧಿಕರಣವಾದ ಕರ್ಮದ ಪ್ರಾಗಭಾವಸಮಾನಕಾಲೀನವೆ. ಏಕೆಂದರೆ ಪ್ರಪಂಚಬಾಧಕವಾದ ಚರಮ ವೃತ್ತಿಯಿಂದ ಮಾತ್ರವೇ ಕರ್ಮಕ್ಷಯವಾಗುವುದು ಹೊರತು ಇನ್ನಾವ ಜ್ಞಾನದಿಂದಲೂ ಸರ್ವಕರ್ಮಕ್ಷಯವಿಲ್ಲ. ಶ್ರುತಿಯು ಹೇಳುತ್ತದೆ—

**ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ ।**

ಅದರಿಂದ ಬಾಧಕಜ್ಞಾನವು ಬಾಧಸಮಾನಾಧಿಕರಣ ಕರ್ಮ ಪ್ರಾಗಭಾವ ಸಮಾನಕಾಲೀನವಾಗುವುದೇ ಇಲ್ಲ. ಅಂದರೆ ಒಬ್ಬನಲ್ಲಿ ಬಾಧಕವಾದ ಬ್ರಹ್ಮಜ್ಞಾನ ಬಂದರೆ ಮುಂದೆ ಅವನಲ್ಲಿ ಯಾವುದೇ ಕರ್ಮ ಹುಟ್ಟುವುದಿಲ್ಲ. ಕರ್ಮಪ್ರಾಗಭಾವ ಅವನಲ್ಲಿರುವುದಿಲ್ಲ. ಕರ್ಮಪ್ರಾಗಭಾವ ಸಮಾನಕಾಲೀನವಾದ ಜ್ಞಾನವು 'ಸನ್ ಘಟಃ' ಎಂದು ಪ್ರಪಂಚ ಸತ್ಯತ್ವಗ್ರಾಹಿಜ್ಞಾನವೆ. ಅದರಿಂದ ಪ್ರಪಂಚವು ಬಾಧಿತವಾಗುವುದಿಲ್ಲ. ಅಂಥ ಜ್ಞಾನಾಬಾಧ್ಯತ್ವವು ಮೂರನೆ ವಿಶೇಷಣ.

**ಪ್ರಾತಿಭಾಸಿಕ ವಿಷಯಕ ಜ್ಞಾನಹೇತುಃ ದೋಷಃ ತದ್‌ಬಾಧಶ್ಚ ನ ಪ್ರಾತಿಭಾಸಿಕ ಬಾಧಕ ಬಾಧ್ಯೌ । ತಥಾ ಚರಮಸಾಕ್ಷಾತ್ಕಾರಾನಂತರಂ ಸಮಾನಾಧಿಕರಣ ಕರ್ಮಾಂತರಾನುದಯ ಇವ ಶುಕ್ತಿಸಾಕ್ಷಾತ್ಕಾರಾನಂತರಂ ತದನುದಯಾಭಾವಾತ್ ಪ್ರಾತಿಭಾಸಿಕಂ ಸಮಾನಾಧಿಕರಣಕರ್ಮ ಪ್ರಾಗಭಾವ ಸಮಾನ ಕಾಲೀನ ಜ್ಞಾನಬಾಧ್ಯಮಿತಿ ತದ್ ವ್ಯವಚ್ಛೇದಃ ।**

ಪಕ್ಷವಾದ ವ್ಯಾವಹಾರಿಕ ಪ್ರಪಂಚದಲ್ಲಿ ಈ ಮೂರು ವಿಶೇಷಣಗಳು ಬರುತ್ತವೆ ಹೊರತು ಪ್ರಾತಿಭಾಸಿಕರೂಪ್ಯಾದಿಗಳಲ್ಲಿ ಬರುವುದಿಲ್ಲ. ಪ್ರಾತಿಭಾಸಿಕವಿಷಯಕವಾದ ರೂಪ್ಯಾದಿ ಭ್ರಮಕ್ಕೆ ಹೇತುವಾದ ದೋಷವಾಗಲಿ ಆ ಭ್ರಮಕ್ಕೆ ಬರುವ ಬಾಧವಾಗಲಿ ಪ್ರಾತಿಭಾಸಿಕ ಶುಕ್ತಿ ರೂಪ್ಯಕ್ಕೆ ಬಾಧಕವಾದ 'ನೇದಂ ರಜತಂ' ಜ್ಞಾನದಿಂದ ಬಾಧಿತವಾಗುವುದಿಲ್ಲ.

ಚರಮಸಾಕ್ಷಾತ್ಕಾರಾನಂತರದಲ್ಲಿ ಅದಕ್ಕೆ ಸಮಾನಾಧಿಕರಣವಾದ ಕರ್ಮ ಹುಟ್ಟುವುದೇ ಇಲ್ಲ. ಆದರೆ ಶುಕ್ತಿಸಾಕ್ಷಾತ್ಕಾರಾನಂತರದಲ್ಲಿ ಅದಕ್ಕೆ ಸಮಾನಾಧಿಕರಣವಾಗಿ ಕರ್ಮ ಹುಟ್ಟುವುದಿಲ್ಲವೆಂದಿಲ್ಲ. ಹೀಗಾಗಿ ಪ್ರಾತಿಭಾಸಿಕವು ಸಮಾನಾಧಿಕರಣ ಕರ್ಮಪ್ರಾಗಭಾವ ಸಮಾನಕಾಲೀನವಾದ 'ನೇದಂ ರಜತಂ' ಎಂಬ ಜ್ಞಾನದಿಂದ ಬಾಧ್ಯವಾಗುತ್ತದೆ, ಅಬಾಧ್ಯವಾಗುವುದಿಲ್ಲ. ಆದರಿಂದ ಪ್ರಾತಿಭಾಸಿಕವು ಪಕ್ಷದಲ್ಲಿ ಸೇರುವುದಿಲ್ಲ. ಹೊರಗೇ ಉಳಿಯುತ್ತದೆ.

**ವ್ಯಾವಹಾರಿಕಸತ್ತ್ವಂ ಸತ್ತ್ವೇನ ವ್ಯವಹಾರಮಾತ್ರಮಿತಿ ಮತಾನುಸಾರೇಣ ಆದ್ಯಂ ಸಾಧ್ಯಂ । ಅರ್ಥಗತಂ ಮಾಯಿಕಂ ಸತ್ತ್ವಮಿತಿ ಮತಾನುಸಾರೇಣ ದ್ವಿತೀಯಂ ।**

ಘಟದಲ್ಲಿ ವ್ಯಾವಹಾರಿಕ ಸತ್ವವೆಂದರೆ ಸತ್ವೇನ ವ್ಯವಹಾರಮಾತ್ರವೇ ಹೊರತು ಅದರಲ್ಲಿ ಮಾಯಿಕವಾದ ಸತ್ವವೆಂಬುದು ಬೇರೆ ಇರುವುದಿಲ್ಲ ಎಂಬ ಮತದಲ್ಲಿ 'ಸದ್ವಾ' 'ಸತ್ತಾ ಇದೆ' ಎಂದು ವೈಕಲ್ಪಿಕವಾದ ಸಾಧ್ಯ. ಮಾಯಿಕ ಸತ್ವ ಬೇರೆ ಇದೆ ಎಂಬ ಮತದಲ್ಲಿ 'ಸತ್ತಾ ಇದೆ' ಎಂದರೆ ಸಿದ್ಧಸಾಧನವಾಗುವುದು. ಅದಕ್ಕೆ 'ಪಾರಮಾರ್ಥಿಕ ಸದ್ವಾ' 'ಪಾರಮಾರ್ಥಿಕಸತ್ತಾ ಇದೆ' ಎಂದು ಸಾಧ್ಯ. ಈ ಮತದಲ್ಲಿ ಮಾಯಿಕಸತ್ವವನ್ನು ಒಪ್ಪಿದರೂ ಪಾರಮಾರ್ಥಿಕಸತ್ವವನ್ನು ಒಪ್ಪಿಲ್ಲ. ಅದನ್ನು ಸಾಧಿಸುತ್ತೇವೆ.



**नच वादिनः पारमार्थिकत्वविशेषणं व्यर्थं व्यावर्त्याप्रसिद्धेरिति युक्तम् । सत्त्वेन धीमात्ररूपस्यापारमार्थिकसत्त्वस्य मन्मतेऽपि सत्त्वात् । अनिर्वाच्यलक्षणे सदसत्वानधिकरणत्वे सतीति विशेषणव्यावर्त्यस्य सदसत्त्वस्येव परप्रसिद्धत्वमात्रेण व्यावर्त्यत्वोपपत्तेश्च । परार्थानुमाने परं प्रति सिद्धसाधनोद्धारस्यापि मत्प्रयोजनत्वाच्च । जन्यकृत्यजन्यानीत्यत्र मीमांसकं प्रति जन्यत्वस्येवेहापि मां प्रति परमार्थत्वस्य प्रमेयत्वादिवदुपरंजकत्वेन विशेषणत्वोपपत्तेश्च । अन्यथा प्रपञ्चः परमार्थसद्विविक्त इति त्वदीयप्रयोगेऽपि परमार्थत्वविशेषणं मां प्रति व्यर्थं स्यात् ।**

**नचाद्यहेतौ वादिनं प्रति प्रातिभासिकत्वाप्रसिद्ध्या तदनधिकरणत्वाप्रसिद्धिः । मतद्वयेऽप्यप्रामाणिकस्यापि निषेधप्रतियोगित्वात् । आरोपितत्वेनोभयसंमतत्वरूपस्य वा प्रतिभासमात्रशरीरत्वरूपस्य वा तस्य प्रसिद्धेश्च । अन्यथा त्वन्मतेऽपि मिथ्यात्वानुमाने प्रातिभासिकान्यस्यैव पक्षीकर्तव्यत्वाद्दोषसाम्यम् ।**

---

**जन्यकृत्यजन्येति** ।। नच पक्षे उपरञ्जकविशेषणदानं संभवति, न तु साध्ये । व्यापकतावच्छेदकगौरवप्रसंगादिति वाच्यम् अन्योन्याभावघटित(गर्भ)व्याप्तौ अवच्छेदकस्य अधिकरणतावच्छेदककोटौ प्रवेशेन तद्गौरवस्याकिञ्चित्करत्वात् । अत

एव साध्ये न व्यर्थविशेषणता, बीजाभावादिति वदन्तीति भावः । **अन्यथेति ।** अन्यतरसिद्धव्यावृत्तिकस्य व्यर्थत्व इत्यर्थः । उभयसाधारणस्य अप्रसिद्धत्व इति वार्थः । **मतद्वयेऽपीति ।** निषेधज्ञाने प्रमाणतः प्रसिध्यपेक्षाया लाघवेन प्रतियोगिप्रसिद्धिमात्रस्यैवाङ्गत्वादिति भावः ।। **प्रतिभासमात्रशरीरत्वरूपस्येति ।।** आगन्तुकदोष प्रयुक्त भानकत्वस्येत्यर्थः ।। **अन्यथा त्वन्मतेऽपीति ।।** त्वन्मतसिद्धप्रातिस्विकप्रातिभासिकशब्दार्थस्वीकार इत्यर्थः ।।



**ನ ಚ ವಾದಿನಃ ಪಾರಮಾರ್ಥಿಕತ್ವ ವಿಶೇಷಣಂ ವ್ಯರ್ಥಂ ವ್ಯಾವರ್ತ್ಯಾಪ್ರಸಿದ್ಧೇಃ ಇತಿ ಯುಕ್ತಂ। ಸತ್ತ್ವೇನ ಧೀಮಾತ್ರರೂಪಸ್ಯ ಅಪಾರಮಾರ್ಥಿಕಸತ್ತ್ವಸ್ಯ ಮನ್ಮತೇಽಪಿ ಸತ್ತ್ವಾತ್ ।**

ಯದ್ಯಪಿ ಸಾಧ್ಯವಾದ ಪಾರಮಾರ್ಥಿಕಸತ್ತ್ವದಲ್ಲಿ ಪಾರಮಾರ್ಥಿಕತ್ವವಿಶೇಷಣವು ವಾದಿಯಾದ ದ್ವೈತಿಗೆ ವ್ಯರ್ಥ. ಸತ್ವವೆಂದರೆ ದ್ವೈತಿಗೆ ಪಾರಮಾರ್ಥಿಕ ಸತ್ವವೇ ಪ್ರಸಿದ್ಧ. ಸತ್‌ತ್ರೈವಿಧ್ಯವನ್ನು ದ್ವೈತಿ ಒಪ್ಪಿಲ್ಲ. ಪಾರಮಾರ್ಥಿಕತ್ವ ವಿಶೇಷಣದಿಂದ ವ್ಯಾವರ್ತ್ಯವಾಗಿರುವ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಸತ್ವವನ್ನು ಒಪ್ಪಿಲ್ಲ. ವ್ಯಾವರ್ತ್ಯವು ಅಪ್ರಸಿದ್ಧ. ಆದರೂ ಅಪಾರಮಾರ್ಥಿಕ ಸತ್ವವನ್ನು ಅಂದರೆ ಸತ್ವೇನ ಕೇವಲ ತೋರುವ ಸತ್ವಭ್ರಮವನ್ನು ನಾವೂ ಒಪ್ಪಿದ್ದೇವೆ. ಅದನ್ನು ಪಾರಮಾರ್ಥಿಕತ್ವ ವಿಶೇಷಣದಿಂದ ವ್ಯಾವೃತ್ತಿ ಮಾಡಬಹುದು.

**ಅನಿರ್ವಾಚ್ಯಲಕ್ಷಣೇ ಸದಸತ್ತ್ವಾನಧಿಕರಣತ್ವೇ ಸತೀತಿ ವಿಶೇಷಣ ವ್ಯಾವರ್ತ್ಯಸ್ಯ ಸದಸತ್ತ್ವಸ್ಯೇವ ಪರಪ್ರಸಿದ್ಧತ್ವಮಾತ್ರೇಣ ವ್ಯಾವರ್ತ್ಯತ್ವೋಪಪತ್ತೇಶ್ಚ।**

ಅದ್ವೈತಿಯೂ ಕೂಡ ಅನಿರ್ವಚನೀಯ ಲಕ್ಷಣದಲ್ಲಿ 'ಸದಸತ್ವಾನಧಿಕರಣತ್ವೇ ಸತಿ ಸತ್ವಾನಧಿ ಕರಣತ್ವೇ ಸತಿ ಅಸತ್ವಾನಧಿಕರಣತ್ವಂ' ಎಂದು ಅವ್ಯಾವರ್ತಕವಾದ ಸದಸತ್ವಾನಧಿಕರಣತ್ವ ವಿಶೇಷಣವನ್ನು ಹಾಕುತ್ತಾನೆ. ಅದಕ್ಕೆ ಅವನ ಮತದಲ್ಲಿಯೂ ವ್ಯಾವರ್ತ್ಯವು ಅಪ್ರಸಿದ್ಧ. ಅವನು ಸತ್ವ ಮತ್ತು ಅಸತ್ವ ಎಂದು ಎರಡು ಪ್ರಕಾರಗಳನ್ನು ಒಪ್ಪಿದರೂ ಮೂರನೆಯದಾಗಿ ಸದಸತ್ವ ಎಂಬ ಪ್ರಕಾರವನ್ನು ಒಪ್ಪಿಲ್ಲ. ಆದರೂ ಸದಸತ್ವಾನಧಿಕರಣತ್ವ ವಿಶೇಷಣ ವ್ಯರ್ಥವಲ್ಲ ಎನ್ನುತ್ತಾನೆ. ತನ್ನ ಮತದಲ್ಲಿ ಈ ವಿಶೇಷಣಕ್ಕೆ ವ್ಯಾವರ್ತ್ಯವಿಲ್ಲದಿದ್ದರೂ ಜೈನರು ಸ್ಯಾದ್ವಾದದ ಸಪ್ತಭಂಗಿಯಲ್ಲಿ 'ಸ್ಯಾದಸ್ತಿ ಚ ನಾಸ್ತಿ ಚ' ಎಂದು ಸದಸತ್ವ ಎಂಬ ಪ್ರಕಾರವನ್ನೂ ಒಪ್ಪಿದ್ದಾರೆ, ಅವರಿಗೆ ಈ ಸದಸತ್ವಕ್ಕೆ ವ್ಯಾವರ್ತಕವಾಗುವುದರಿಂದ ವಿಶೇಷಣ ವ್ಯರ್ಥವಲ್ಲ ಎಂದು ಅದ್ವೈತಿ ಹೇಳುತ್ತಾನೆ. ಹಾಗೇ ನಾವೂ ಕೂಡ ನಮ್ಮ ಮತದಲ್ಲಿ ಸತ್ವಕ್ಕೆ ಪಾರಮಾರ್ಥಿಕತ್ವ ವಿಶೇಷಣವು ಅವ್ಯಾವರ್ತಕವಾದರೂ ಅದ್ವೈತಮತದಲ್ಲಿ ವ್ಯಾವರ್ತಕವಾಗುವುದರಿಂದ ವ್ಯರ್ಥವಲ್ಲ ಎನ್ನುತ್ತೇವೆ.

**ಪರಾರ್ಥಾನುಮಾನೇ ಪರಂ ಪ್ರತಿ ಸಿದ್ಧಸಾಧನೋದ್ಧಾರಸ್ಯಾಪಿ ಮತ್ ಪ್ರಯೋಜನತ್ವಾಚ್ಚ ।**

ಪರಾರ್ಥಾನುಮಾನದಲ್ಲಿ ಪರನಿಗೆ ಸಿದ್ಧಸಾಧನ ವಾರಣೆಗಾಗಿ ವಿಶೇಷಣ ನೀಡುವುದರಿಂದ ನನಗೇ ಪ್ರಯೋಜನವಾಗುತ್ತದೆ. ಆದರಿಂದಲೂ ವ್ಯರ್ಥವಲ್ಲ. ಇದು ಪರಾರ್ಥಾನುಮಾನ. ಪರನಾದ ಅದ್ವೈತಿಗೆ ಪ್ರಪಂಚವನ್ನು 'ಸತ್' ಎಂದು ಸತ್ತಾಮಾತ್ರ ಸಾಧನೆ ಮಾಡಿದರೆ 'ನಾನು ವ್ಯಾವಹಾರಿಕ ಸತ್ತಾವನ್ನು ಒಪ್ಪಿದ್ದೇನೆ. ಆದರಿಂದ ಸಿದ್ಧಸಾಧನ' ಎನ್ನುತ್ತಾನೆ. ಈ ದೋಷವನ್ನು ನಮ್ಮ ಅನುಮಾನದಲ್ಲಿ ನಾವು ಪರಿಹಾರ ಮಾಡಬೇಕು. ಅದಕ್ಕೆ ವಿಶೇಷಣ ನೀಡುವುದು ಸಾರ್ಥಕವಾಗುತ್ತದೆ.

**'ಜನ್ಯಕೃತ್ಯಜನ್ಯಾನಿ' ಇತ್ಯತ್ರ ಮೀಮಾಂಸಕಂ ಪ್ರತಿ ಜನ್ಯತ್ವಸ್ಯೇವ ಇಹಾಪಿ ಮಾಂ ಪ್ರತಿ ಪರಮಾರ್ಥತ್ವಸ್ಯ ಪ್ರಮೇಯತ್ವಾದಿವತ್ ಉಪರಂಜಕತ್ವೇನ ವಿಶೇಷಣತ್ವೋಪ ಪತ್ತೇಶ್ಚ ।**

'ಜನ್ಯಕೃತ್ಯಜನ್ಯಾನಿ ಜನ್ಯಾನಿ ಸಕರ್ತೃಕಾಣಿ' 'ಜನ್ಯಕೃತಿಯಿಂದ ಅಜನ್ಯವಾದ ಜನ್ಯವಸ್ತುಗಳು ಕರ್ತೃಜನ್ಯವಾಗಿವೆ' ಎಂಬ ತಾರ್ಕಿಕರ ಅನುಮಾನದಲ್ಲಿ ಮೀಮಾಂಸಕನಿಗೆ 'ಜನ್ಯಕೃತ್ಯಜನ್ಯ' ಎಂದು ಪಕ್ಷವಿಶೇಷಣವು ವ್ಯರ್ಥ. ಅಜನ್ಯಕೃತಿ ಉಳ್ಳ ಈಶ್ವರನನ್ನು ಅವನು ಒಪ್ಪಿಲ್ಲ. ಅದರಿಂದ ವ್ಯಾವರ್ತ್ಯವಿಲ್ಲ. ಆದರೂ ಅವನಿಗೆ 'ಜನ್ಯಕೃತ್ಯಜನ್ಯ ಜನ್ಯವು ಸಕರ್ತೃಕ' ಎಂಬ ಅನುಮಿತಿ ಬರಬೇಕಾಗಿದೆ. 'ಪ್ರಮೇಯವಹ್ನಿಮಾನ್' ಎಂದು ಅನುಮಿತಿಯ ಉದ್ದೇಶ್ಯವಿರುವಾಗ ಪ್ರಮೇಯತ್ವ ವಿಶೇಷಣವು ಸಾಧ್ಯದಲ್ಲಿ ಉಪರಂಜಕವಾಗಿ ಅಂಗೀಕೃತವಾಗಿದೆ.

ವಿಶೇಷಣಮಪಿ ದ್ವಿವಿಧಂ ವ್ಯಾವರ್ತಕಂ ಉಪರಂಜಕಂ ಚೇತಿ ।
ತತ್ರಾವ್ಯಾವರ್ತಕಂ ವಿಶೇಷಣ ಮುಪರಂಜಕಮಿತ್ಯುಚ್ಯತೇ ॥

ಎಂದು ಅವ್ಯಾವರ್ತಕ ವಿಶೇಷಣವನ್ನು ಉಪರಂಜಕವೆಂದು ಅದ್ವೈತಿ ಸ್ವೀಕರಿಸಿದ್ದಾನೆ. ಹಾಗೇ ಸತ್ತಾಕ್ಕೆ ಅವ್ಯಾವರ್ತಕ ವಿಶೇಷಣವಾಗಿರುವ ಪಾರಮಾರ್ಥಿಕತ್ವವನ್ನು ಉಪರಂಜಕವೆಂದು ಸ್ವೀಕರಿಸಲಡ್ಡಿಯಿಲ್ಲ.

ಯದ್ಯಪಿ ಜನ್ಯಕೃತ್ಯಜನ್ಯತ್ವದಂತೆ ಪಕ್ಷದಲ್ಲಿ ಉಪರಂಜಕ ವಿಶೇಷಣ ಅನುಮತವಾದರೂ, ಸಾಧ್ಯದಲ್ಲಿ ಅನುಮತವಲ್ಲ. ಏಕೆಂದರೆ ಸಾಧ್ಯದಲ್ಲಿ ಈ ವಿಶೇಷಣ ಸೇರಿದರೆ ಸಾಧ್ಯತಾವಚ್ಛೇದಕ ಗುರುವಾಗುತ್ತದೆ. ವ್ಯಾಪಕತಾವಚ್ಛೇದಕವು ಗುರುವಾದರೆ ತದವಚ್ಛೇದೇನ ವ್ಯಾಪಕತ್ವವು ಇರುವುದಿಲ್ಲ ಎಂಬ ಆಕ್ಷೇಪ ಬರಬಹುದು. ಆದರೆ ಸಾಧ್ಯವದನ್ಯಾವೃತ್ತಿತ್ವರೂಪವಾದ ಅನ್ಯೋನ್ಯಾಭಾವ ಗರ್ಭ ವ್ಯಾಪ್ತಿಯಲ್ಲಿ 'ಸಾಧ್ಯವದನ್ಯ' ರೂಪ ಅಧಿಕರಣದಲ್ಲಿ ಹೇತುವಿಗೆ ಅವೃತ್ತಿತ್ವವನ್ನು ಹೇಳುವಾಗ ಸಾಧ್ಯತಾವಚ್ಛೇದಕವು ಅಧಿಕರಣತಾವಚ್ಛೇದಕ ಕೋಟಿಯಲ್ಲಿ ಇರುವುದರಿಂದ ಉಪರಂಜಕ

ವಿಶೇಷಣವು ಸಾಧ್ಯತಾವಚ್ಛೇದಕದಲ್ಲಿ ಅಂತರ್ಭೂತವಾದರೆ ಗೌರವ ಉಂಟಾಗುವುದಿಲ್ಲ. ಈ ಅಭಿಪ್ರಾಯದಿಂದಲೇ 'ಸಾಧ್ಯದಲ್ಲಿ ವ್ಯರ್ಥ ವಿಶೇಷಣತ್ವವು ದೋಷವಲ್ಲ, ದೋಷವೆನ್ನಲು ದೂಷಕತಾಬೀಜವೇನಿಲ್ಲ' ಎಂದು ಹೇಳುತ್ತಾರೆ.

**ಅನ್ಯಥಾ ಪ್ರಪಂಚಃ ಪರಮಾರ್ಥಸದ್‌ವಿವಿಕ್ತಃ ಇತಿ ತ್ವದೀಯ ಪ್ರಯೋಗೇಽಪಿ ಪರಮಾರ್ಥತ್ವ ವಿಶೇಷಣಂ ಮಾಂ ಪ್ರತಿ ವ್ಯರ್ಥಂ ಸ್ಯಾತ್ ।**

'ಅನ್ಯಥಾ' ವಾದಿಪ್ರತಿವಾದಿಗಳಲ್ಲಿ ಯಾರಾದರೊಬ್ಬರಿಗೆ ಸಾಧ್ಯವಿಶೇಷಣವು ಅವ್ಯಾವರ್ತಕವೆನಿಸಿದಾಗ ವ್ಯರ್ಥವಿಶೇಷಣತ್ವವು ದೋಷವೇ ಎನ್ನುವುದಾದರೆ, ಪ್ರಪಂಚದಲ್ಲಿ ಸದ್‌ವಿವಿಕ್ತತ್ವರೂಪ ಮಿಥ್ಯಾತ್ವವನ್ನು ಸಾಧಿಸಲು ಅದ್ವೈತಿಯು 'ಪ್ರಪಂಚಃ ಪರಮಾರ್ಥಸದ್ವಿವಿಕ್ತಃ' ಎಂದು ಪ್ರಯೋಗ ಮಾಡುವಾಗ ಅವನಿಗೇ 'ಪರಮಾರ್ಥ' ವಿಶೇಷಣ ವ್ಯರ್ಥವಾಗುವುದರಿಂದ ದೋಷ ಬಂದೀತು. ಉಭಯವಾದಿಗಳಿಗೂ ವಿಶೇಷಣಕ್ಕೆ ಪ್ರಯೋಜನ ಬಂದಿರಬೇಕು ಹೊರತು ಒಂದು ಪ್ರಯೋಜನವು ಉಭಯವಾದಿಗಳಿಗೆ ಸಮ್ಮತವಾಗಿರಬೇಕಿಲ್ಲ.

**ನ ಚ ಆದ್ಯಹೇತೌ ವಾದಿನಂ ಪ್ರತಿ ಪ್ರಾತಿಭಾಸಿಕತ್ವಾಪ್ರಸಿದ್ಧ್ಯಾ ತದನಧಿಕರಣತ್ವಾಪ್ರಸಿದ್ಧಿಃ । ಮತದ್ವಯೇಽಪಿ ಅಪ್ರಾಮಾಣಿಕಸ್ಯಾಪಿ ನಿಷೇಧ ಪ್ರತಿಯೋಗಿತ್ವಾತ್ ।**

'ಪ್ರಾತಿಭಾಸಿಕತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವಾತ್' ಎಂಬ ಮೊದಲನೇ ಹೇತುವಿನಲ್ಲಿ ಪ್ರಾತಿಭಾಸಿಕತ್ವವು ವಾದಿಯಾದ ದ್ವೈತಿಗೆ ಅಪ್ರಸಿದ್ಧವಾದ್ದರಿಂದ ತದನಧಿಕರಣತ್ವವೂ ಅವನಿಗೆ ಅಪ್ರಸಿದ್ಧ' ಎನ್ನಬಾರದು. ಉಭಯಮತದಲ್ಲಿಯು ಅಪ್ರಾಮಾಣಿಕವು ನಿಷೇಧಕ್ಕೆ ಪ್ರತಿಯೋಗಿಯಾಗಬಹುದು. ಪ್ರತಿಯೋಗಿಯು ಪ್ರಮಾಣದಿಂದಲೇ ಪ್ರಸಿದ್ಧವಾಗಬೇಕೆಂದಿಲ್ಲ. ಲಾಘವದಿಂದ ಪ್ರಸಿದ್ಧಿ ಮಾತ್ರ ಸಾಕು ಎಂದು ಅಂಗೀಕರಿಸಿದ್ದಾರೆ. ಅದರಿಂದ ಅಪ್ರಸಿದ್ಧಿ ದೋಷವನ್ನು ಹೇಳಬಾರದು.

**ಆರೋಪಿತತ್ವೇನ ಉಭಯ ಸಂಮತತ್ವರೂಪಸ್ಯ ವಾ ಪ್ರತಿಭಾಸಮಾತ್ರ ಶರೀರತ್ವರೂಪಸ್ಯ ವಾ ತಸ್ಯ ಪ್ರಸಿದ್ಧೇಶ್ಚ ।**

'ಪ್ರಾತಿಭಾಸಿಕ' ಎಂದರೆ, 'ಆರೋಪಿತವೆಂದು ಉಭಯ ಸಮ್ಮತವಾದುದು' ಎಂದರ್ಥ. ಶುಕ್ತಿರೂಪ್ಯಾದಿ ಪ್ರಾತಿಭಾಸಿಕವು ಉಭಯ ಮತದಲ್ಲಿಯೂ ಆರೋಪಿತವೆಂದೇ ಸಮ್ಮತವಾಗಿದೆ. ಅದರಿಂದ ಪ್ರಸಿದ್ಧವೆ, ಹೊರತು ಅಪ್ರಸಿದ್ಧವಲ್ಲ. ಅಥವಾ 'ಪ್ರತಿಭಾಸ ಮಾತ್ರ ಶರೀರ' ಅಂದರೆ ಜ್ಞಾನಾತ್ಮಕ ಎಂದರ್ಥವಲ್ಲ. ವಿಷಯವಾದ ವಸ್ತು ಇಲ್ಲದೆ ಆಗಂತುಕ ದೋಷಪ್ರಯುಕ್ತವಾಗಿ ಕೇವಲ ಪ್ರತಿಭಾಸ ಮಾತ್ರವೇ ಇದೆ ಎಂದರ್ಥ. ಇದು ಉಭಯಸಮ್ಮತ. ಅದರಿಂದ ಅಪ್ರಸಿದ್ಧಿ ಇಲ್ಲ.

**ಅನ್ಯಥಾ ತ್ವನ್ಮತೇಽಪಿ ಮಿಥ್ಯಾತ್ವಾನುಮಾನೇ ಪ್ರಾತಿಭಾಸಿಕಾನ್ಯಸ್ಯೈವ ಪಕ್ಷೀಕರ್ತವ್ಯತ್ವಾತ್ ದೋಷಸಾಮ್ಯಂ ।**

ಹೀಗೆ ಅಪ್ರಸಿದ್ಧಿದೋಷ ಪರಿಹಾರವನ್ನು ಮಾಡಿಕೊಳ್ಳದಿದ್ದರೆ ನಿನ್ನ ಮತದಲ್ಲಿಯೂ ಮಿಥ್ಯಾತ್ವಾನುಮಾನದಲ್ಲಿ ಪ್ರಾತಿಭಾಸಿಕಾನ್ಯವನ್ನೆ ಪಕ್ಷಮಾಡಿಕೊಳ್ಳಬೇಕಾಗಿರುವುದರಿಂದ, ಅಪ್ರಸಿದ್ಧಿ ದೋಷ ನಿನಗೆ ಬರುವುದರಿಂದ, ಇಬ್ಬರಿಗೂ ದೋಷ ಸಮಾನವೆಂದಾದೀತು.



नचाद्यहेतौ प्रातिभासिकत्वविशेषणस्याऽसिद्धिवारकत्वं दोषः । ''शरीराजन्यत्वात्'' ''अनभ्यासदशायां सांशयिकत्वात्'' । ''विमतं सौरभविशेषवद्धूमरहितं चन्दनप्रभववह्निरहितत्वात्'' । ''विमतं निर्धूमं आर्द्रेन्धनप्रभववह्निरहितत्वात्'' इत्यादावसिद्धिवारकविशेषणस्यापि स्वीकारात् ।

किञ्चानधिकरणत्वस्य दृष्टांतेऽप्यभावेन प्रातिभासिकत्वस्य चक्षुस्तैजसत्वानुमाने ''रूपादीनां मध्ये'' इत्यस्येव व्याप्तिग्रहौपयिकत्वाद् व्यभिचारवारकेऽपि तदौपयिकत्वस्यैव तन्त्रत्वान्न दोषः ।

यत्किञ्चिदनधिकरणत्वस्य प्रातीतिकेऽपि सत्त्वाव्यभिचारवारकमेवेदं विशेषणमिति केचित् ।

नच व्यावहारिकसत्वेनाप्याद्यहेतोरुपपत्त्याऽप्रयोजकता । ब्रह्मण्यसत्प्रातिभासिकव्यावृत्तिरूपहेतुं प्रति व्यावर्तकतया प्रयोजकत्वेन क्लृप्तपरमार्थसत्त्वत्यागस्य विश्वमिथ्यात्वसिद्धिं विनाऽयोगेनान्योन्याश्रयात् । अन्यथातिप्रसङ्गात् ।

नच ब्रह्मणि ज्ञानत्वानन्दत्वादिरूपब्रह्मत्वमेव तत्प्रयोजकम् । अपृथिवीव्यावृत्तिं प्रति पृथिवीत्वस्येवासद्व्यावृत्तिं प्रति तद्विरुद्धसत्त्वस्यैव प्रयोजकत्वेन क्लृप्तत्वात् । अन्यथा सत्यज्ञानादिवाक्ये ज्ञानपदेनैवानृतव्यावृत्तिसिद्धौ सत्यपदवैयर्थ्यं स्यात् । प्रपञ्चेऽसत्प्रातीतिकव्यावृत्तौ सत्यामपि ब्रह्मत्वाभावाच्च ।

**नचाद्यहेताविति ।।** प्रातिभासिकत्वेत्युपलक्षणम् । असत्त्वेत्यपि द्रष्टव्यम् । **असिद्धिवारकेति ।** तथाच यथायोग्यं हेतुद्वये तत्तद्विशिष्टाभावसंपादकत्वेन विपक्षवाधकस्फोरकत्वेन वाऽवैयर्थ्यमिति भावः । **चक्षुस्तैजसत्वानुमान इति ।** चक्षुस्तैजसं रूपादीनां मध्ये रूपस्यैवाभिव्यञ्जकत्वादालोकवदित्यनुमान इत्यर्थः । केचिदित्यस्वरसोद्भावनम् । तद्बीजं तु अविशेषितानधिकरणत्वस्य सामान्याभावोपस्थापकत्वेन व्यभिचाराप्रसक्तेरिति । **ब्रह्मणीति ।** ''क्लृप्तकल्प्यविरोधे हि लघुः क्लृप्तपरिग्रह'' इति न्यायेन व्यावहारिकसत्त्वान्तराकल्पनादिति भावः ।। **अन्यथेति ।।** कल्पनागौरवस्यादोषत्वे धूमेन वह्न्यन्तरस्यापि सिद्धिप्रसङ्गादित्यर्थः ।। **पृथिवीत्वस्येति ।।** धर्मान्तरस्यापि व्यावृत्तिप्रतियोगिनिष्ठान्योन्याभावप्रतियोगितावच्छेदकोपजीवनेनैव व्यावर्तकत्वादिति भावः । **सत्यपदवैयर्थ्यमिति ।** इदमुपलक्षणम् । शुक्तित्वादिवत् असत्येव ज्ञानानन्दत्वादि स्यादिति शङ्कायां सत्त्वं विनानृतव्यावृत्त्यसिद्धिरिति बोध्यम् । न्यूनवृत्तित्वादपि न तस्य प्रयोजकतेत्याह **प्रपञ्च इति ।** नच तत्रान्यदेव व्यावृत्तिप्रयोजकम् । अनुगते संभवत्यननुगतस्याकल्पनादिति भावः ।।



**ನಚಾದ್ಯಹೇತೌ ಪ್ರಾತಿಭಾಸಿಕತ್ವ ವಿಶೇಷಣಸ್ಯ ಅಸಿದ್ಧಿವಾರಕತ್ವಂ ದೋಷಃ। 'ಶರೀರಾಜನ್ಯತ್ವಾತ್' 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' 'ವಿಮತಂ ಸೌರಭ ವಿಶೇಷವದ್ಧೂಮ ರಹಿತಂ ಚಂದನಪ್ರಭವವಹ್ನಿರಹಿತತ್ವಾತ್' 'ವಿಮತಂ ನಿರ್ಧೂಮಂ ಆರ್ದ್ರೇಂಧನ ಪ್ರಭವ ವಹ್ನಿರಹಿತತ್ವಾತ್' ಇತ್ಯಾದೌ ಅಸಿದ್ಧಿವಾರಕ ವಿಶೇಷಣಸ್ಯಾಪಿ ಸ್ವೀಕಾರಾತ್ ।**

'ಪ್ರಾತಿಭಾಸಿಕತ್ವಾನಧಿಕರಣತ್ವೇ ಅಸತ್ವಾನಧಿಕರಣತ್ವಾತ್' ಎಂಬ ಮೊದಲನೇ ಹೇತುವಿನಲ್ಲಿ ಪ್ರಾತಿಭಾಸಿಕತ್ವವಿಶೇಷಣವೂ ಅಸತ್ವವಿಶೇಷಣವೂ ವ್ಯಭಿಚಾರವಾರಕ ವಿಶೇಷಣವಾಗದೆ ಅಸಿದ್ಧಿವಾರಕವಾಗಿರುವುದು ದೋಷ'—ಎಂದು ಹೇಳಬಾರದು. ಹೇತುವಿನಲ್ಲಿ ಅಸಿದ್ಧಿವಾರಕ ವಿಶೇಷಣವನ್ನು ಕೊಡುವುದು ಎಲ್ಲಕಡೆ ಕಂಡಿದೆ. ಉದಾ: ಕ್ಷಿತ್ಯಂಕುರಾದಿಕಂ ನ ಸಕರ್ತೃಕಂ ಶರೀರಾಜನ್ಯತ್ವಾತ್ ಎಂಬಲ್ಲಿ 'ಅಜನ್ಯತ್ವಾತ್' ಎಂದು ಮಾತ್ರ ಹೇಳಿದರೆ ಅಸಿದ್ಧಿ. ಅದರ ವಾರಣೆಗೆ 'ಶರೀರ' ಎಂದು ವಿಶೇಷಣ. 'ಅನಭ್ಯಾಸದಶಾಯಾಂ ಸಾಂಶಯಿಕತ್ವಾತ್' ಎಂಬ ಹೇತುವಿನಲ್ಲಿ 'ಅನಭ್ಯಾಸದಶಾಯಾಂ' ಎಂಬ ಅಂಶ, 'ವಿಮತಂ ಸೌರಭ ವಿಶೇಷವದ್‌ಧೂಮರಹಿತಂ

ಚಂದನಪ್ರಭವ ವಹ್ನಿರಹಿತತ್ವಾತ್' ಎಂಬಲ್ಲಿ 'ಚಂದನಪ್ರಭವ' ಎಂದು ವಿಶೇಷಣ. 'ಚಕ್ಷುಃ ತೈಜಸಂ ರೂಪಾದೀನಾಂ ಮಧ್ಯೇ ರೂಪಸ್ಯೈವ ಅಭಿವ್ಯಂಜಕತ್ವಾತ್ ಆಲೋಕವತ್' ಎಂಬಲ್ಲಿ 'ರೂಪಾದೀನಾಂ ಮಧ್ಯೇ' ಎಂಬ ಅಂಶ. 'ವಿಮತಂ ನಿರ್ಧೂಮಂ ಆರ್ದ್ರೇಂಧನ ಪ್ರಭವ ವಹ್ನಿ ರಹಿತತ್ವಾತ್' ಎಂಬಲ್ಲಿ 'ಆರ್ದ್ರೇಂಧನ ಪ್ರಭವ' ಎಂದು ವಿಶೇಷಣ. ಇವೆಲ್ಲವೂ ಅಸಿದ್ಧಿವಾರಣೆಗಾಗಿ ಹೇತುವಿನಲ್ಲಿ ಸೇರಿಸಿದವುಗಳು. ಆದರೂ ಶಾಸ್ತ್ರಕಾರರು ದೋಷವಲ್ಲವೆಂದು ಸ್ವೀಕರಿಸಿದ್ದಾರೆ.

**ಕಿಂಚ ಅನಧಿಕರಣತ್ವಸ್ಯ ದೃಷ್ಟಾಂತೇऽಪ್ಯಭಾವೇನ ಪ್ರಾತಿಭಾಸಿಕತ್ವಸ್ಯ ಚಕ್ಷುಸ್ತೈಜ-ಸತ್ವಾನುಮಾನೇ 'ರೂಪಾದೀನಾಂ ಮಧ್ಯೇ' ಇತ್ಯಸ್ಯೇವ ವ್ಯಾಪ್ತಿಗ್ರಹೌಪಯಿಕತ್ವಾತ್, ವ್ಯಭಿಚಾರವಾರಕೇऽಪಿ ತದೌಪಯಿಕತ್ವಸ್ಯೈವ ತಂತ್ರತ್ವಾತ್ ನ ದೋಷಃ ।**

ಅನಧಿಕರಣತ್ವವನ್ನು ಮಾತ್ರ ಹೇತು ಮಾಡಿದರೆ,

'ಪ್ರಾತಿಭಾಸಿಕತ್ವಾನಧಿಕರಣತ್ವೇಸತಿ ಅಸತ್ವಾನಧಿಕರಣತ್ವಾತ್ ಆತ್ಮವತ್'

ಎಂದು ಆತ್ಮನು ದೃಷ್ಟಾಂತವಾದ್ದರಿಂದ ಆತ್ಮನಲ್ಲಿ ಯಾವುದಾದರೂ ಧರ್ಮವಿರುವುದರಿಂದ ತದಧಿ ಕರಣತ್ವವಿರುವಾಗ ಅನಧಿಕರಣತ್ವ ಬರುವುದಿಲ್ಲ ಎಂದು ದೃಷ್ಟಾಂತದಲ್ಲಿ ಸಾಧನ ವೈಕಲ್ಯವಿದೆ. ಪಕ್ಷದಲ್ಲಿ ಅಸಿದ್ಧಿಯೂ ಇದೆ. ಅನಧಿಕರಣತ್ವವು ಪಕ್ಷದಲ್ಲಿ ಇಲ್ಲ, ದೃಷ್ಟಾಂತವಾದ ಆತ್ಮನಲ್ಲಿಯೂ ಇಲ್ಲವೆಂದರೆ ಅದು ಅಪ್ರಸಿದ್ಧವೆನಿಸುತ್ತದೆ. ಅದರಲ್ಲಿ ವ್ಯಾಪ್ತಿಗ್ರಹಣವಾಗುವುದಿಲ್ಲ. ಪ್ರಾತಿಭಾಸಿಕತ್ವಾನಧಿಕರಣತ್ವ ಅಸತ್ವಾನಧಿಕರಣತ್ವಗಳನ್ನು ಹೇತುಮಾಡಿದರೆ ದೃಷ್ಟಾಂತದಲ್ಲಿ ಅದು ಬರುವುದರಿಂದ ವ್ಯಾಪ್ತಿಗ್ರಹಣವಾಗುವುದು. ಚಕ್ಷುಸ್ಸಿಗೆ ತೈಜಸತ್ವಾನುಮಾನ ಮಾಡುವಾಗ 'ರೂಪಾದೀನಾಂ ಮಧ್ಯೇ ರೂಪಸ್ಯೈವ ಅಭಿವ್ಯಂಜಕತ್ವಾತ್ ಆಲೋಕವತ್' ಎಂದು ಹೇಳಬೇಕು. 'ರೂಪಾದೀನಾಂ ಮಧ್ಯೇ' ಎಂಬ ವಿಶೇಷಣವನ್ನು ಬಿಟ್ಟರೆ 'ರೂಪಸ್ಯೈವ ವ್ಯಂಜಕತ್ವಾತ್' ಎಂಬ ಹೇತು ಚಕ್ಷುಸ್ಸಿನಲ್ಲಿ ಪಕ್ಷದಲ್ಲಿ ಇಲ್ಲ, ಆಲೋಕ ದೃಷ್ಟಾಂತದಲ್ಲಿಯೂ ಇಲ್ಲ, ಎರಡೂ ಕೂಡ ರೂಪತ್ವಾಭಿವ್ಯಂಜಕವಾದ್ದರಿಂದ, ರೂಪಕ್ಕೆ ಮಾತ್ರ ವ್ಯಂಜಕವಲ್ಲ. ಹೀಗೆ ದೃಷ್ಟಾಂತದಲ್ಲಿಯೂ ಇಲ್ಲದ ಹೇತುವಿನಲ್ಲಿ ವ್ಯಾಪ್ತಿಗ್ರಹಣವಾಗುವುದಿಲ್ಲ. ಅದರಿಂದ ವಿಶೇಷಣವು ವ್ಯಾಪ್ತಿಗ್ರಹಣಕ್ಕೆ ಉಪಯುಕ್ತವಾಗುತ್ತದೆ. ಅಸಿದ್ಧಿವಾರಕತ್ವವಿಲ್ಲದಿದ್ದರೂ ವ್ಯಾಪ್ತಿಗ್ರಹಣದಲ್ಲಿ ಉಪಯೋಗವಿರುವುದ ರಿಂದ ಅದನ್ನು ದೋಷವಲ್ಲವೆಂದು ಸ್ವೀಕರಿಸಬಹುದು. ವ್ಯಭಿಚಾರವಾರಕವಾದರೆ ವಿಶೇಷಣವನ್ನು ಸ್ವೀಕರಿಸುತ್ತಾರೆ. ಏಕೆಂದರೆ ಅದು ವ್ಯಭಿಚಾರವಾರಣ ಮಾಡಿ ವ್ಯಾಪ್ತಿಗ್ರಹಣಕ್ಕೆ ಉಪಯುಕ್ತ ವಾಗುತ್ತದೆ ಎಂದು. ಅಸಿದ್ಧಿವಾರಕವಾದರೂ ಹಾಗೇ ವ್ಯಾಪ್ತಿಗ್ರಹಣಕ್ಕೆ ಉಪಯುಕ್ತವಾಗಿರುವಾಗ ಅದು ದೋಷ ಹೇಗಾದೀತು?

**ಯತ್ಕಿಂಚಿದನಧಿಕರಣತ್ವಸ್ಯ ಪ್ರಾತೀತಿಕೇऽಪಿ ಸತ್ತ್ವಾತ್ ವ್ಯಭಿಚಾರವಾರಕ ಮೇವೇದಂ ವಿಶೇಷಣಮಿತಿ ಕೇಚಿತ್ ।**

ಕೆಲವರು ಹೇಳುತ್ತಾರೆ. ಪ್ರಾತೀತಿಕವಾದ ಶುಕ್ತಿರಜತಾದಿಗಳಲ್ಲಿಯೂ ವಸ್ತುತ್ವಾದಿ ಕಿಂಚಿದನಧಿಕರಣತ್ವವಿರುವುದರಿಂದ ಹೇತು ಬರುತ್ತದೆ. ಸಾಧ್ಯವಾದ ಸತ್ವ ಅಥವಾ ಪಾರಮಾರ್ಥಿಕ ಸತ್ವಗಳಿರುವುದಿಲ್ಲ, ವ್ಯಭಿಚಾರ ಬರುತ್ತದೆ, ಅದಕ್ಕೆ 'ಪ್ರಾತಿಭಾಸಿಕತ್ವಾನಧಿಕರಣತ್ವೇಸತಿ' ಎಂದು ಪ್ರಾತಿಭಾಸಿಕತ್ವವಿಶೇಷಣ ಸಾರ್ಥಕವಾಗುತ್ತದೆ ಎನ್ನುತ್ತಾರೆ.

'ಇತಿ ಕೇಚಿತ್' 'ಕೆಲವರು ಹೀಗೆ ಹೇಳುತ್ತಾರೆ' ಎಂದು ಅಸ್ವಾರಸ್ಯ ಸೂಚನೆ ಇಲ್ಲಿ ಇದೆ. ಪ್ರಾತಿಭಾಸಿಕದಲ್ಲಿಯೂ ಧರ್ಮಿಸತ್ತಾ ನಿರಪೇಕ್ಷವಾದ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಾದಿ ಕಿಂಚಿತ್ ಧರ್ಮಗಳಿರುವುದರಿಂದ ಅಧಿಕರಣತ್ವ ಸಾಮಾನ್ಯಾಭಾವವನ್ನು ಹೇಳಲಾಗುವುದಿಲ್ಲ. ಹೀಗಾಗಿ ಅನಧಿಕರಣತ್ವ ಹೇತುವಿಗೆ ಪ್ರಾತೀತಿಕದಲ್ಲಿ ವ್ಯಭಿಚಾರ ಪ್ರಸಕ್ತಿ ಇಲ್ಲ ಎಂದು.

**ನ ಚ ವ್ಯಾವಹಾರಿಕ ಸತ್ವೇನಾಪಿ ಆದ್ಯಹೇತೋರುಪಪತ್ತ್ಯಾ ಅಪ್ರಯೋಜಕತಾ। ಬ್ರಹ್ಮಣಿ ಅಸತ್ ಪ್ರತಿಭಾಸಿಕವ್ಯಾವೃತ್ತಿರೂಪಹೇತುಂ ಪ್ರತಿ ವ್ಯಾವರ್ತಕತಯಾ ಪ್ರಯೋಜಕತ್ವೇನ ಕ್ಲೃಪ್ತ ಪರಮಾರ್ಥಸತ್ವತ್ಯಾಗಸ್ಯ ವಿಶ್ವಮಿಥ್ಯಾತ್ವಸಿದ್ಧಿಂ ವಿನಾ ಅಯೋಗೇನ ಅನ್ಯೋನ್ಯಾಶ್ರಯಾತ್। ಅನ್ಯಥಾ ಅತಿಪ್ರಸಂಗಾತ್।**

'ಪ್ರತಿಭಾಸಿಕತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವರೂಪ ಹೇತುವಿರುವಲ್ಲಿ ಪಾರಮಾರ್ಥಿಕ ಸತ್ವವೇ ಇರಬೇಕೆಂದಿಲ್ಲ. ವ್ಯಾವಹಾರಿಕ ಸತ್ವವಿರಬಹುದು. ವಿರೋಧವಿಲ್ಲ. ಆದ್ದರಿಂದ ಪಾರಮಾರ್ಥಿಕ ಸತ್ವಕ್ಕೆ ಈ ಹೇತು ಅಪ್ರಯೋಜಕ. ವ್ಯಾವಹಾರಿಕ ಸತ್ವದಿಂದಲೆ ಅದು ಉಪಪನ್ನವಾಗುತ್ತದೆ' ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ.

ಪ್ರಾತಿಭಾಸಿಕ ಸತ್ವಾನಧಿಕರಣತ್ವ ವಿಶಿಷ್ಟ ಅಸತ್ವಾನಧಿಕರಣತ್ವವು ಹೇತು. ಅದು ಪ್ರಾತಿಭಾಸಿಕ ವ್ಯಾವೃತ್ತಿ ವಿಶಿಷ್ಟ ಅಸದ್ ವ್ಯಾವೃತ್ತಿರೂಪವಾಗಿದೆ. ಬ್ರಹ್ಮನಲ್ಲಿ ಈ ಎರಡು ವ್ಯಾವೃತ್ತಿಗಳಿರಲು ಪ್ರಯೋಜಕವಾಗಿ ಕ್ಲೃಪ್ತವಾಗಿರುವ ವ್ಯಾವರ್ತಕವು ಪಾರಮಾರ್ಥಿಕಸತ್ವ. ಇದು ಉಭಯವಾದಿ ಸಂಮತ. ಅದರಿಂದ ಪ್ರಪಂಚದಲ್ಲಿ ಈ ಎರಡು ವ್ಯಾವೃತ್ತಿಗಳಿಗೂ ಈ ಪಾರಮಾರ್ಥಿಕ ಸತ್ವವನ್ನೇ ಪ್ರಯೋಜಕವೆನ್ನಬೇಕು. ಕ್ಲೃಪ್ತವಾದ ಈ ಪ್ರಯೋಜಕವನ್ನು ಬಿಟ್ಟು ವ್ಯಾವಹಾರಿಕ ಸತ್ವವನ್ನು ಪ್ರಯೋಜಕವೆಂದು ಅದ್ವೈತಿ ಹೇಳುವುದು ಸರಿಯಲ್ಲ. ವ್ಯಾವಹಾರಿಕ ಸತ್ವವೆನ್ನುವುದೇ ಇನ್ನು ಸಿದ್ಧವಾಗಿಲ್ಲ. ಮಿಥ್ಯಾತ್ವಾನುಮಾನದಿಂದ ಅದು ಸಿದ್ಧವಾಗಬೇಕು. ವಿಶ್ವಮಿಥ್ಯಾತ್ವಸಿದ್ಧವಾದರೆ ವ್ಯಾವಹಾರಿಕಸತ್ವವೆಂಬುದು ಸಿದ್ಧವಾಗುವುದರಿಂದ ಪ್ರಪಂಚದಲ್ಲಿ ಅಸತ್ ಪ್ರಾತಿಭಾಸಿಕ ವ್ಯಾವೃತ್ತಿಯು ಪಾರಮಾರ್ಥಿಕಸತ್ವವನ್ನು ಬಿಟ್ಟು ವ್ಯಾವಹಾರಿಕ ಸತ್ವದಿಂದಲೆ ಉಪಪನ್ನವಾಗುವುದು. ಅದು ಹೀಗೆ ಉಪಪನ್ನವಾದರೇ ಸತ್ವಹೇತು ಅಪ್ರಯೋಜಕವಾಗುವುದು. ಸತ್ವಹೇತುವು ಅಪ್ರಯೋಜಕವಾದರೆ ಸತ್ವಾನುಮಾನ ದುಷ್ಟವಾಗುವುದರಿಂದ ಮಿಥಾತ್ವಾನುಮಾನವು ಅಬಾಧಿತ ವೆನಿಸುವುದು, ವ್ಯಾವಹಾರಿಕಸತ್ವ ಸಿದ್ಧವಾಗುವುದು. ಹೀಗೆ ಅನ್ಯೋನ್ಯಾಶ್ರಯ, ಅನ್ಯಥಾ ಅತಿಪ್ರಸಂಗ. ಬ್ರಹ್ಮನಲ್ಲಿ ಅಸತ್ ಪ್ರಾತಿಭಾಸಿಕ ವ್ಯಾವೃತ್ತಿಗೆ, ಅದಕ್ಕೆ ವಿರುದ್ಧವಾಗಿ ಕ್ಲೃಪ್ತವಾದ

ಪಾರಮಾರ್ಥಿಕಸತ್ವವನ್ನೇ ಪ್ರಯೋಜಕವೆನ್ನದೆ, ಅವಿರುದ್ಧವಾದ ಜ್ಞಾನತ್ವಾದಿ ಧರ್ಮವನ್ನು ಪ್ರಯೋಜಕವೆನ್ನುವುದಾದರೆ ವಹ್ನಿಗೆ ಕ್ಲೃಪ್ತ ಪ್ರಯೋಜಕವಾದ ಧೂಮವನ್ನು ಬಿಟ್ಟು ಪರ್ವತತ್ವವನ್ನು ಪ್ರಯೋಜಕವೆನ್ನಬಹುದು. ಮಹಾನಸದಲ್ಲಿ ಪರ್ವತತ್ವವಿಲ್ಲದ್ದರಿಂದ ವಹ್ನಿ ಇಲ್ಲ ಎನ್ನಬಹುದು.

**ನಚ ಬ್ರಹ್ಮಣಿ ಜ್ಞಾನತ್ವಾನನ್ದತ್ವಾದಿರೂಪಬ್ರಹ್ಮತ್ವಮೇವ ತತ್ಪ್ರಯೋಜಕಂ। ಅಪೃಥಿವೀವ್ಯಾವೃತ್ತಿಂ ಪ್ರತಿ ಪೃಥಿವೀತ್ವಸ್ಯೇವ ಅಸದ್ ವ್ಯಾವೃತ್ತಿಂ ಪ್ರತಿ ತದ್ವಿರುದ್ಧಸತ್ತ್ವಸ್ಯೈವ ಪ್ರಯೋಜಕತ್ವೇನ ಕ್ಲೃಪ್ತತ್ವಾತ್। ಅನ್ಯಥಾ ಸತ್ಯಜ್ಞಾನಾದಿವಾಕ್ಯೇ ಜ್ಞಾನಪದೇನೈವ ಅನೃತವ್ಯಾವೃತ್ತಿಸಿದ್ಧೌ ಸತ್ಯಪದ ವೈಯರ್ಥ್ಯಂ ಸ್ಯಾತ್। ಪ್ರಪಂಚೇ ಅಸತ್ಪ್ರಾತೀತಿಕ ವ್ಯಾವೃತ್ತೌ ಸತ್ಯಾಮಪಿ ಬ್ರಹ್ಮತ್ವಾಭಾವಾಚ್ಚ।**

'ಬ್ರಹ್ಮನಲ್ಲಿ ಅಸತ್ಪ್ರಾತಿಭಾಸಿಕ ವ್ಯಾವೃತ್ತಿಗೆ ಬ್ರಹ್ಮತ್ವವೇ ಪ್ರಯೋಜಕ, ಬ್ರಹ್ಮತ್ವವೆಂದರೆ, ಜ್ಞಾನತ್ವಾನಂದತ್ವಾದಿಗಳೆ' ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. ಪೃಥಿವಿಯಲ್ಲಿ ಅಪೃಥಿವೀ ವ್ಯಾವೃತ್ತಿಗೆ ಅಪೃಥಿವೀತ್ವವಿರುದ್ಧ ಪೃಥಿವೀತ್ವವೇ ಪ್ರಯೋಜಕವಾಗುವಂತೆ ಬ್ರಹ್ಮನಲ್ಲಿಯೂ ಅಸತ್ಪ್ರಾತಿಭಾಸಿಕ ವ್ಯಾವೃತ್ತಿಗೆ ತದ್ ವಿರುದ್ಧವಾದ ಪಾರಮಾರ್ಥಿಕಸತ್ವವೇ ಪ್ರಯೋಜಕವೆಂದು ಕ್ಲೃಪ್ತವಾಗಿದೆ. ಇದನ್ನು ಒಪ್ಪದಿದ್ದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯದಲ್ಲಿ 'ಜ್ಞಾನಂ' ಎಂಬ ಪದದಿಂದಲೇ. ಅನೃತವ್ಯಾವೃತ್ತಿ ಸಿದ್ಧವಾಗುವಾಗ ಅನೃತವ್ಯಾವೃತ್ತಿಗಾಗಿ 'ಸತ್ಯಂ' ಎಂದು ಸತ್ಯಪದವು ಶ್ರುತಿಯಲ್ಲಿ ವ್ಯರ್ಥವಾಗಬೇಕಾದೀತು. ಅಸತ್ಪ್ರಾತಿಭಾಸಿಕ ವ್ಯಾವೃತ್ತಿಗೆ ಬ್ರಹ್ಮತ್ವವೇ ಪ್ರಯೋಜಕವೆನ್ನುವುದಾದರೆ ಪ್ರಪಂಚದಲ್ಲಿಯೂ ಅಸತ್ಪ್ರಾತಿಭಾಶಿಕ ವ್ಯಾವೃತ್ತಿಗೆ ಪ್ರಯೋಜಕ ವಾಗಿ ಬ್ರಹ್ಮತ್ವವನ್ನು ಒಪ್ಪಬೇಕಾದೀತು. ಪ್ರಪಂಚದಲ್ಲಿ ಬ್ರಹ್ಮತ್ವವಿಲ್ಲ!



**नच द्वितीये तत्त्वावेदकप्रमोक्तावसिद्धिः, अतत्त्वावेदकप्रमोक्तौ त्वप्रयोजकतेति वाच्यम्। प्रामाण्यातत्त्वावेदकत्वयोर्व्याहतत्वात्। प्रत्यक्षस्य तत्त्वावेदकतोक्तेश्च। अनुमानादेश्च परेणापि मिथ्यात्वादौ प्रमाणीकरणात्। विपक्षे व्याघातात्। विषयबाधे प्रामाण्यायोगात्।**

**नापि तृतीयेऽसिद्धिः। त्वयापीशस्य जगत्कर्तृत्वशास्त्रयोनित्वादिना कुलालपाणिन्यादिवदनिषेध्यत्वेन तद्द्रष्टृत्वोक्तेः। अन्यथेशस्य तत्पालनादौ प्रवृत्तिर्न स्यात्। विपक्षे चेशस्य भ्रान्तिः स्यात्। सा च श्रुत्यादिविरुद्धा।**

चतुर्थेऽर्थक्रियायाः सत्यायाः पक्षे सपक्षे च परं प्रत्यसिद्ध्या व्याप्तिपक्षधर्मतयोरयोगात्, असत्यायाश्चैन्द्रजालिकादौ व्यभिचारात्सप्रकारकाबाध्यत्वेन सा विशेषिता । व्यभिचारस्त्वस्य निरसिष्यते । सत्यस्य साक्षिणोऽज्ञानादिसाधकत्वान्न दृष्टान्तः साधनहीनः । असद्वा व्यतिरेकदृष्टान्तः । असाधारण्यस्यागृह्यमाणविशेषत्वावस्थायामेव दोषत्वात् । विपक्षे व्याघातः । ब्रह्मणि हेतुत्वं प्रति अकारणासदादिव्यावृत्तस्य परमार्थसत्त्वस्यैव प्रयोजकत्वेन क्लृप्तत्वात् ।

नच पञ्चमेऽसिद्धिः । परमतेऽपि जगन्मिथ्यात्वस्यारोपितत्वात् । अत्र च हेत्वन्तर्गतं मिथ्यात्वं सत्त्वाभावोऽभिप्रेत इति नासत्यनैकान्त्यम् ।

---

**द्वितीय इति ।।** हेताविति शेषः । ननु व्यावहारिकसत्तामादाय प्रामाण्यातत्त्वावेदकत्वयोरुपपत्तौ न व्याहतिरित्यत आह **प्रत्यक्षस्येति ।। अनुमानादेश्चेति ।।** तथाच धर्मदिरप्रत्यक्षत्वेऽपि अनुमितिशाब्दप्रमाविषयत्वेन तदंशेऽसिद्धिः । नच मिथ्यात्वानुमानस्य तत्त्वावेदकत्वेऽपि अनुमानमात्रस्य तत्त्वावेदकत्वे किमायातमिति वाच्यम् । व्याप्तिपक्षधर्मत्वयोरविशेषादिति भावः । **अन्यथेति** । अनिषेध्यत्वेन तद्द्रष्टृत्वाभाव इत्यर्थः । **प्रवृत्तिर्नस्यादिति** । प्रवृत्तेः स्वसमानविषयकप्रत्यक्षसामानाधिकरण्यनियमादिति भावः । **सत्यस्येति** । यद्यपि विशिष्टस्योपहितस्य वा चैतन्यस्य परमते साक्षित्वात् न तस्य सत्यत्वम् । नाप्यविद्यासाधकत्वम् । अविद्यायाः तत्सिद्धस्वरूप साक्षिणश्चानादित्वान्नाबाध्यार्थक्रिया कारित्वम्, तथापि साधकत्वांशे सत्यत्वादविद्याव्यवहारजनकत्वाच्च न तस्य दृष्टान्तत्वानुपपात्तिरिति भावः ।

ननु शुद्धचैतन्यात् सत्यादसतश्च व्यावृत्तत्वेनासाधारण इत्यत आह

**असाधारण्यस्येति ।।** व्याहतिमेवाह **ब्रह्मणीति ।** हेतुशरीरप्रविष्टस्यानन्यथा-सिद्धनियतपूर्वसत्त्वरूपकारणत्वस्य परमार्थसत्त्वघटितत्वेन ब्रह्मणि क्लृप्तत्वादित्यर्थः । ननु प्रतिपन्नोपाधिघटितं मिथ्यात्वम् असत्यरोपितमेव । तस्य प्रतिपन्नोपाध्यभावादित्यत आह **अत्र चेति ।** यद्यपि तन्मते सत्त्वाभावो जगत्यपि नारोपितः । तथापि साध्यांगक एवायं हेतुरिति द्रष्टव्यम् ।।



**ನಚ ದ್ವಿತೀಯೇ ತತ್ತ್ವಾವೇದಕ ಪ್ರಮೋಕ್ತೌ ಅಸಿದ್ಧಿಃ ಅತತ್ತ್ವಾವೇದಕಪ್ರಮೋಕ್ತೌ ತು ಅಪ್ರಯೋಜಕತಾ ಇತಿ ವಾಚ್ಯಂ। ಪ್ರಾಮಾಣ್ಯ-ಅತತ್ತ್ವಾವೇದಕತ್ವಯೋಃ ವ್ಯಾಹತತ್ವಾತ್। ಪ್ರತ್ಯಕ್ಷಸ್ಯ ತತ್ತ್ವಾವೇದಕತೋಕ್ತೇಶ್ಚ। ಅನುಮಾನಾದೇಶ್ಚ ಪರೇಣಾಪಿ ಮಿಥ್ಯಾತ್ವಾದೌ ಪ್ರಮಾಣೀಕರಣಾಚ್ಚ। ವಿಪಕ್ಷೇ ವ್ಯಾಘಾತಾತ್। ವಿಷಯಬಾಧೇ ಪ್ರಾಮಾಣ್ಯಾಯೋಗಾತ್।**

'ಅನಿಷೇಧ್ಯತ್ವೇನ ಪ್ರಮಾಂಪ್ರತಿ ಸಾಕ್ಷಾದ್ ವಿಷಯತ್ವಾತ್' ಎಂಬ ದ್ವಿತೀಯ ಹೇತುವಿನಲ್ಲಿ 'ಪ್ರಮಾ' ಶಬ್ದದಿಂದ ತತ್ತ್ವಾವೇದಕ ಪ್ರಮಾ ವಿವಕ್ಷಿತವೆಂದರೆ ಅದ್ವೈತಿಯು ಪ್ರಪಂಚವಿಷಯದಲ್ಲಿ ತತ್ತ್ವಾವೇದಕ ಪ್ರಮಾವನ್ನು ಒಪ್ಪಿಲ್ಲವಾದ್ದರಿಂದ ತತ್ತ್ವಾವೇದಕ ಪ್ರಮಾಂ ಪ್ರತಿ ಸಾಕ್ಷಾದ್ ವಿಷಯತ್ವ ಹೇತುವು ಅಸಿದ್ಧ ಎನ್ನುತ್ತಾನೆ. ಅತತ್ತ್ವಾವೇದಕ ಪ್ರಮಾವು 'ಪ್ರಮಾ' ಶಬ್ದದಿಂದ ವಿವಕ್ಷಿತವೆಂದರೆ ಹೇತುವು ಅಪ್ರಯೋಜಕವಾಗುತ್ತದೆ. ಅತತ್ತ್ವಾವೇದಕ ಪ್ರಮಾ ವಿಷಯತ್ವವು ಪಾರಮಾರ್ಥಿಕ ಸತ್ತ್ವವಿಲ್ಲದಿದ್ದರೂ ಕೂಡುತ್ತದೆ ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ.

ಪ್ರಾಮಾಣ್ಯ ಮತ್ತು ಅತತ್ತ್ವಾವೇದಕತ್ವಗಳು ಒಂದು ಪ್ರಮಾದಲ್ಲಿ ಇವೆ ಎನ್ನುವುದು ವ್ಯಾಹತ. 'ಪ್ರಮಾ' ಎಂದರೆ ತತ್ತ್ವಾವೇದಕವೆ. ತದ್ವತಿ ತತ್‌ಪ್ರಕಾರಕವಾದ ಜ್ಞಾನವೆ. ಇರುವ ವಿಷಯವನ್ನು ಇದೆ ಎಂದು ಅದು ಗ್ರಹಿಸಬೇಕು. 'ಅತತ್ತ್ವಾವೇದಕ' ಎಂದರೆ ಇಲ್ಲದುದನ್ನು ಇದೆ ಎಂದು ಗ್ರಹಿಸುವ ಭ್ರಮೆ. ಎರಡೂ ಒಂದಾಗುವುದೆಂದರೆ ವ್ಯಾಹತಿ. ಅದರಿಂದ 'ಅತತ್ತ್ವಾವೇದಕಪ್ರಮೆ' ವಿವಕ್ಷಿತವೆ?' ಎಂದು ವಿಕಲ್ಪ ಮಾಡುವುದು ಅಯುಕ್ತ. ನಾವು 'ಅನಿಷೇಧ್ಯತ್ವೇನ ಪ್ರಮಾಂ ಪ್ರತಿ ಸಾಕ್ಷಾತ್ ವಿಷಯತ್ವಾತ್' ಎಂಬ ಹೇತುವಿನಲ್ಲಿ 'ಪ್ರಮಾ' ಎಂದರೆ ತತ್ತ್ವಾವೇದಕ ಪ್ರಮಾವನ್ನೇ ವಿವಕ್ಷೆ ಮಾಡಿದ್ದೇವೆ.

'ಪಕ್ಷವಾದ ಪ್ರಪಂಚದಲ್ಲಿ ಈ ತತ್ತ್ವಾವೇದಕ ಪ್ರಮಾ ವಿಷಯತ್ವವನ್ನು ಅದ್ವೈತಿ ಒಪ್ಪಿಲ್ಲವಾದ್ದರಿಂದ ಹೇತುವಿಗೆ ಅಸಿದ್ಧಿ' ಎಂದರೆ, ಅದು ಸರಿಯಲ್ಲ. ಪ್ರತ್ಯಕ್ಷವು ಪಾರಮಾರ್ಥಿಕಸತ್ತ್ವಗ್ರಾಹಿ ಎಂದು ನಾವು ಈಗಾಗಲೇ ಸಾಧನೆ ಮಾಡಿರುವುದರಿಂದ ಅದ್ವೈತಿ ಅದನ್ನು ಒಪ್ಪಲೇಬೇಕು. ಹೇತ್ವಸಿದ್ಧಿ ದೋಷವನ್ನು ಹೇಳುವಂತಿಲ್ಲ.

ಮತ್ತು ಅದ್ವೈತಿಯೂ ಕೂಡ ಅನುಮಾನ ಆಗಮಗಳನ್ನು ಮಿಥ್ಯಾತ್ವ ವಿಷಯದಲ್ಲಿ ಪ್ರಮಾಣ ಎಂದು ಹೇಳಿ ಅವುಗಳನ್ನು ತತ್ತ್ವಾವೇದಕವೆಂದು ಒಪ್ಪಿರುವುದರಿಂದ ತಜ್ಜಾತೀಯವಾದ ತತ್ತ್ವಾವೇದಕವಾದ ಅನುಮಾನಾಗಮ ವಿಷಯತ್ವ ಪಕ್ಷದಲ್ಲಿ ಬರುವುದರಿಂದ ಅಸಿದ್ಧಿಯನ್ನು ಹೇಳಲು ಬರುವುದಿಲ್ಲ.

ವಿಪಕ್ಷೇವ್ಯಾಹತಿಯೂ ಬರುತ್ತದೆ. ಪ್ರಪಂಚದಲ್ಲಿ ಪಾರಮಾರ್ಥಿಕ ಸತ್ವವಿಲ್ಲ ಎಂದರೆ ಸತ್ವ ವಿಷಯದಲ್ಲಿ ಸತ್ಯತ್ವವನ್ನೇ ಗ್ರಹಿಸುವ ಪ್ರಮಾಕ್ಕೆ ಪ್ರಪಂಚವು ವಿಷಯವಾಗಲಾರದು. 'ವಿಷಯವಾಗುವುದು' ಎಂದರೆ ವ್ಯಾಹತವಾಗುವುದು.

ವಿಷಯಸತ್ವವಿಲ್ಲದಿದ್ದರೆ ಅದನ್ನು ಸತ್ಯವೆಂದು ಗ್ರಹಿಸುವ ಪ್ರಮೆಯು ಪ್ರಮೆಯೇ ಆಗಲಾರದು.

**ನಾಪಿ ತೃತೀಯೇ ಅಸಿದ್ಧಿಃ। ತ್ವಯಾಪಿ ಈಶಸ್ಯ ಜಗತ್ಕರ್ತೃತ್ವಶಾಸ್ತ್ರಯೋನಿತ್ವಾದಿನಾ ಕುಲಾಲಪಾಣಿನ್ಯಾದಿವತ್ ಅನಿಷೇಧ್ಯತ್ವೇನ ತದ್‌ದ್ರಷ್ಟೃತ್ವೋಕ್ತೇಃ। ಅನ್ಯಥಾ ಈಶಸ್ಯ ತತ್ಪಾಲನಾದೌ ಪ್ರವೃತ್ತಿರ್ನ ಸ್ಯಾತ್। ವಿಪಕ್ಷೇ ಚ ಈಶಸ್ಯ ಭ್ರಾಂತಿಃ ಸ್ಯಾತ್। 'ಸಾ ಚ ಶ್ರು'ತ್ಯಾದಿ ವಿರುದ್ಧಾ।**

ಅನಿಷೇಧ್ಯತ್ವೇನ ಈಶ್ವರಂ ಪ್ರತಿ ಸಾಕ್ಷಾದಪರೋಕ್ಷತ್ವಾತ್ ಎಂಬ ಮೂರನೆ ಹೇತುವಿಗೆ ಅಸಿದ್ಧಿದೋಷವಿಲ್ಲ. 'ಈಶ್ವರನಿಗೂ ಕೂಡ ಪ್ರಪಂಚವು ನಿಷೇಧ್ಯತ್ವೈನ್ಯೆವ ಅಪರೋಕ್ಷ ಗೋಚರವಾಗಿದೆ, 'ಪ್ರಪಂಚ ಇಲ್ಲ' ಎಂದೇ ಕಾಣುತ್ತದೆ' ಎಂದು ಅದ್ವೈತಿ ಹೇಳಕೂಡದು. ಈಶ್ವರನು ಜಗತ್ಕರ್ತನೆಂದು ಒಪ್ಪಿರುವುದರಿಂದ, ಕುಂಬಾರನು ಗಡಿಗೆಯನ್ನು ಇಲ್ಲದವಸ್ತು ಎಂದು ಸಾಕ್ಷಾತ್ಕರಿಸುವುದಿಲ್ಲ. ಹೇಗೋ ಹಾಗೇ ಈಶ್ವರನೂ ಪ್ರಪಂಚವನ್ನು ಇಲ್ಲವೆಂದು ತಿಳಿಯುವುದಿಲ್ಲ. 'ಅನಿಷೇಧ್ಯತ್ವೇನ' ಅಂದರೆ 'ಇದೆ' ಎಂದೇ ಪ್ರತ್ಯಕ್ಷವಾಗಿ ತಿಳಿಯುತ್ತಾನೆ. ಅದರಿಂದ ಅಸಿದ್ಧಿ ಇಲ್ಲ.

ಈಶ್ವರನನ್ನು ಅದ್ವೈತಿಯೂ ಕೂಡ ಶಾಸ್ತ್ರಯೋನಿ ಎಂದು ಒಪ್ಪಿರುವುದರಿಂದ ವ್ಯಾಕರಣಶಾಸ್ತ್ರವನ್ನು ಪಾಣಿನಿಯಂತೆ ವೇದಾದಿಶಾಸ್ತ್ರವನ್ನು ಈಶ್ವರನು ಅನಿಷೇಧ್ಯತ್ವೇನ, ಇದೆ ಎಂದೇ, ಪ್ರತ್ಯಕ್ಷೀಕರಿಸುತ್ತಾನೆ ಎಂದು ಅದ್ವೈತಿಯೇ ಜನ್ಮಾಧಿಕರಣ ಶಾಸ್ತ್ರಯೋನ್ಯಧಿಕರಣಗಳಲ್ಲಿ ಹೇಳಿದ್ದಾನೆ. ಅದರಿಂದ ಅಸಿದ್ಧಿ ಇಲ್ಲ.

ಜಗತ್ತನ್ನು ಇಲ್ಲ ಎಂದೇ ಅವನು ಸಾಕ್ಷಾತ್ಕರಿಸುವುದಾದರೆ ಜಗತ್ಪಾಲನೆಯಲ್ಲಿ ವೇದೋಪದೇಶದಲ್ಲಿ ಈಶ್ವರನು ಪ್ರವೃತ್ತಿ ಮಾಡುವುದು ಕೂಡಲಾರದು.

'ವಿಪಕ್ಷೇ' ಜಗತ್ತು ಸತ್ಯವಲ್ಲ ಎನ್ನುವ ಪಕ್ಷದಲ್ಲಿ ಈಶ್ವರನು ಸತ್ಯವಲ್ಲದ್ದನ್ನೇ ಸತ್ಯವೆಂದು ಸಾಕ್ಷಾತ್ಕರಿಸಿದರೆ ಈಶ್ವರನು ಭ್ರಾಂತನಾಗುವನು. 'ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ' ಎಂಬ ಶ್ರುತಿಯು ಈಶ್ವರನಿಗೆ ಶೋಕಮೋಹ ಜರೆ ಮರಣಗಳಿಲ್ಲ ಎನ್ನುತ್ತದೆ. ಅದಕ್ಕೆ ಇದು

ವಿರುದ್ಧವಾಗುತ್ತದೆ.

**ಚತುರ್ಥೇ ಅರ್ಥಕ್ರಿಯಾಯಾಃ ಸತ್ಯಾಯಾಃ ಪಕ್ಷೇ ಸಪಕ್ಷೇ ಚ ಪರಂ ಪ್ರತಿ ಅಸಿದ್ಧ್ಯಾ ವ್ಯಾಪ್ತಿಪಕ್ಷಧರ್ಮತಯೋರಯೋಗಾತ್, ಅಸತ್ಯಾಯಾಶ್ಚ ಐಂದ್ರಜಾಲಿಕಾದೌ ವ್ಯಭಿಚಾರಾತ್ ಸಪ್ರಕಾರಕಾಬಾಧ್ಯತ್ವೇನ ಸಾ ವಿಶೇಷಿತಾ । ವ್ಯಭಿಚಾರಸ್ತು ಅಸ್ಯ ನಿರಸಿಷ್ಯತೇ ।**

'ಸಪ್ರಕಾರಾಬಾಧ್ಯ ಅರ್ಥಕ್ರಿಯಾ ಕಾರಿತ್ವಾತ್' ಎಂಬ ನಾಲ್ಕನೇ ಹೇತುವಿನಲ್ಲಿ ಅರ್ಥಕ್ರಿಯೆಯನ್ನು ಸತ್ಯವೆಂದು ವಿವಕ್ಷೆ ಮಾಡಿದರೆ ಅದ್ವೈತಮತದಲ್ಲಿ ಅದು ಪಕ್ಷವಾದ ಪ್ರಪಂಚದಲ್ಲಿಯೂ ಇಲ್ಲ, ಸಪಕ್ಷವಾದ ಆತ್ಮನಲ್ಲಿಯೂ ಇಲ್ಲ. ಪಕ್ಷದಲ್ಲಿ ಇಲ್ಲದ್ದರಿಂದ ಹೇತುವಿಗೆ ಪಕ್ಷಧರ್ಮತಾ ಇಲ್ಲ. ಸಪಕ್ಷವಾದ ಆತ್ಮನಲ್ಲಿಲ್ಲದ್ದರಿಂದ ಹೇತುಸಾಧ್ಯಗಳಿಗೆ ವ್ಯಾಪ್ತಿ ಇಲ್ಲ. ಅರ್ಥಕ್ರಿಯೆಯನ್ನು ಅಸತ್ಯವೆಂದಿಟ್ಟುಕೊಂಡರೆ ಐಂದ್ರಜಾಲಿಕ ವಸ್ತುವಿನಲ್ಲಿ ಹೇತುವಾದ ಅಸತ್ಯವಾದ ಅರ್ಥಕ್ರಿಯಾಕಾರಿತ್ವವಿದೆ, ಪಾರಮಾರ್ಥಿಕ ಸತ್ಯತ್ವವೆಂಬ ಸಾಧ್ಯವಿಲ್ಲ ಎಂದು ವ್ಯಭಿಚಾರ. ಆದರಿಂದ ಸಪ್ರಕಾರಕ ಅಬಾಧ್ಯ ಎಂದು ಅರ್ಥಕ್ರಿಯಾಕ್ಕೆ ವಿಶೇಷಣ ನೀಡಿದ್ದೇವೆ.

ಇದಕ್ಕೆ ವ್ಯಭಿಚಾರ ದೋಷವನ್ನು ಮುಂದೆ ಪರಿಹರಿಸುತ್ತೇವೆ, ಸ್ವಾಪ್ನಪ್ರಿಯಾಸಂಗದಿಂದ ಅರ್ಥಕ್ರಿಯಾ ಇಲ್ಲ. ಆದರ ಜ್ಞಾನದಿಂದ ಅರ್ಥಕ್ರಿಯಾ ಆದರೂ ಜ್ಞಾನವು ಸತ್ಯವೇ ಆಗಿರುವುದರಿಂದ ವ್ಯಭಿಚಾರವಿಲ್ಲ ಎಂದು.

**ಸತ್ಯಸ್ಯ ಸಾಕ್ಷಿಣೋಽಜ್ಞಾನಾದಿ ಸಾಧಕತ್ವಾತ್ ನ ದೃಷ್ಟಾಂತಃ ಸಾಧನ ಹೀನಃ । ಅಸದ್ವಾ ವ್ಯತಿರೇಕ ದೃಷ್ಟಾಂತಃ ।**

'ಸತ್ಯವಾದ ಆತ್ಮನಲ್ಲಿ ಅರ್ಥಕ್ರಿಯಾಕಾರಿತ್ವವಿಲ್ಲ. ಆದರಿಂದ ದೃಷ್ಟಾಂತದಲ್ಲಿ ಸಾಧನ ವೈಕಲ್ಯವಿದೆ' ಎಂದರೆ, ಹೇಳುತ್ತೇವೆ, ಆತ್ಮರೂಪವಾದ ಸಾಕ್ಷಿಯೆ ಸತ್ಯವಾದ, ಸಪ್ರಕಾರಕಜ್ಞಾನ ಅಬಾಧ್ಯವಾದ ಅಜ್ಞಾನಾದಿರೂಪ ಅರ್ಥಕ್ರಿಯಾ ಸಾಧಕವಾಗಿದೆ.

ಅದ್ವೈತಿ ಹೇಳಬಹುದು, 'ಸಾಕ್ಷಿ ಚೈತನ್ಯವು ಬ್ರಹ್ಮರೂಪವೇ ಆದರೂ ಅದು ಅವಿದ್ಯಾವೃತ್ತಿ ಪ್ರತಿಬಿಂಬಿತ, ಮಿಥ್ಯಾ . ಆದರಿಂದ ದೃಷ್ಟಾಂತವಾಗದು. ಶುದ್ಧಬ್ರಹ್ಮವೆ ದೃಷ್ಟಾಂತ ಎನ್ನಬೇಕು. ಆದರೆ ಅದು ಅರ್ಥಕ್ರಿಯಾಕಾರಿಯಲ್ಲ. ಹೇತು ಇಲ್ಲದ್ದರಿಂದ ದೃಷ್ಟಾಂತದಲ್ಲಿ ಸಾಧನ ವೈಕಲ್ಯವಿದೆ' ಎಂದು. ಆದರೆ ಸುಷುಪ್ತಿಯಲ್ಲಿ ದೋಷಜನ್ಯ ಅವಿದ್ಯಾವೃತ್ತಿ ಇಲ್ಲದ್ದರಿಂದ ತತ್‌ಪ್ರತಿಬಿಂಬಿತ ಚೈತನ್ಯ ರೂಪ ಸಾಕ್ಷಿಯಿಲ್ಲ. ಶುದ್ಧ ಚೈತನ್ಯವನ್ನೇ ಆಗ ಸಾಕ್ಷಿ ಎನ್ನಬೇಕಾಗುತ್ತದೆ. ಅದು ಸತ್ಯ . ಆದರಿಂದ ಗ್ರಾಹ್ಯವಾದ ಅವಿದ್ಯೆಯು ಸಪ್ರಕಾರಕ ಜ್ಞಾನಾಬಾಧ್ಯ . ಆದರಿಂದ ದೃಷ್ಟಾಂತದಲ್ಲಿ ಸಾಧ್ಯಸಾಧನ ವೈಕಲ್ಯವಿಲ್ಲ. ಅಥವಾ ಅಸತ್ತನ್ನು ವ್ಯತಿರೇಕ ದೃಷ್ಟಾಂತವಾಗಿ ಕೊಡುತ್ತೇವೆ. ಅದರಲ್ಲಿ ಸಾಧ್ಯಸಾಧನಗಳೆರಡೂ ಇಲ್ಲ.

**ಅಸಾಧಾರಣ್ಯಸ್ಯ ಅಗೃಹ್ಯಮಾಣ ವಿಶೇಷತ್ವಾವಸ್ಥಾಯಾಮೇವ ದೋಷತ್ವಾತ್ ।**

'ಅರ್ಥಕ್ರಿಯಾಕಾರಿತ್ವ ಹೇತುವು ಸಪಕ್ಷವಿಪಕ್ಷ ವ್ಯಾವೃತ್ತವಾಗಿದ್ದು ಪಕ್ಷಮಾತ್ರ ವೃತ್ತಿಯಾಗಿದೆ. ಸತ್ವರೂಪ ಸಾಧ್ಯಯುಕ್ತ ಸಪಕ್ಷನಾದ ಆತ್ಮನಲ್ಲಿ ಅರ್ಥಕ್ರಿಯಾಕಾರಿತ್ವವಿಲ್ಲ. ವಿಪಕ್ಷವಾದ ಅಸತ್ತಿನಲ್ಲಿಯೂ ಇಲ್ಲ. ಪಕ್ಷವಾದ ಪ್ರಪಂಚದಲ್ಲಿ ಮಾತ್ರವಿದೆ. ಅದರಿಂದ ಅಸಾಧಾರಣ್ಯವು ಹೇತುದೋಷ' ಎಂದು ಅದ್ವೈತಿ ಹೇಳಿದರೆ, ಅದು ಸರಿಯಲ್ಲ. ಅಸಾಧಾರಣ ಹೇತುವು ಸಂಶಯಜನಕವಾದರೆ, ಅಥವಾ ಸತ್‌ಪ್ರತಿಪಕ್ಷ ಜನಕವಾದರೆ ಮಾತ್ರ 'ಅಗೃಹ್ಯಮಾಣ ವಿಶೇಷ'ವಾದರೆ ಮಾತ್ರ ದೋಷವಾಗುವುದು. ಪ್ರಕೃತ ಅನುಕೂಲತರ್ಕವನ್ನು ನಾವು ಮುಂದೆ ಹೇಳುವುದರಿಂದ ಸಂಶಯವಾಗಲಿ ಸತ್ಪ್ರತಿಪಕ್ಷವಾಗಲಿ ಉಂಟಾಗುವುದಿಲ್ಲ. ಹೀಗೆ ಗೃಹ್ಯಮಾಣ ವಿಶೇಷಉಳ್ಳದ್ದಾದ್ದರಿಂದ ದೋಷವಲ್ಲ.

**ವಿಪಕ್ಷೇ ವ್ಯಾಘಾತಃ। ಬ್ರಹ್ಮಣಿ ಹೇತುತ್ವಂ ಪ್ರತಿ ಅಕಾರಣ-ಅಸದಾದಿ ವ್ಯಾವೃತ್ತಸ್ಯ ಪರಮಾರ್ಥಸತ್ವಸ್ಯೈವ ಪ್ರಯೋಜಕತ್ವೇನ ಕ್ಲೃಪ್ತತ್ವಾತ್।**

ಅರ್ಥಕ್ರಿಯಾಕಾರಿತ್ವವು ಸತ್ವ ಪ್ರಯೋಜ್ಯವಾಗಿರುವುದರಿಂದ ಪ್ರಯೋಜ್ಯವಾದ ಅರ್ಥಕ್ರಿಯಾಕಾರಿತ್ವವನ್ನು ಒಪ್ಪಿ ಪ್ರಯೋಜಕವಾದ ಸತ್ವವನ್ನು ಒಪ್ಪದಿರುವುದು ವ್ಯಾಹತವಾಗುವುದು.

ಮತ್ತು ಬ್ರಹ್ಮನಲ್ಲಿ ಸಪ್ರಕಾರಕಾಬಾಧ್ಯ ಜಗತ್‌ಕಾರಣತ್ವರೂಪ ಅರ್ಥಕ್ರಿಯಾ ಹೇತುತ್ವವಿದೆ. ಅರ್ಥಕ್ರಿಯಾಕ್ಕೆ ಕಾರಣವಾಗದ ಅಸತ್ತಿನಿಂದ ವ್ಯಾವೃತ್ತವಾದ ಪಾರಮಾರ್ಥಿಕ ಸತ್ವವೆ ಬ್ರಹ್ಮನಲ್ಲಿ ಅರ್ಥಕ್ರಿಯಾಕಾರಿತ್ವಕ್ಕೆ ಪ್ರಯೋಜಕವೆಂದು ಕ್ಲೃಪ್ತವಾಗಿದೆ. ಅದು ಪ್ರಪಂಚದಲ್ಲಿ ಇಲ್ಲದಿದ್ದರೆ ಅದರಿಂದ ಪ್ರಯೋಜ್ಯವಾಗುವ ಅರ್ಥಕ್ರಿಯಾಕಾರಿತ್ವವೂ ಪ್ರಪಂಚದಲ್ಲಿ ಇಲ್ಲವಾದೀತು. ಈ ವಿಪಕ್ಷೇ ಬಾಧಕ ತರ್ಕದಿಂದ ಹೇತುವಿಗೆ ವ್ಯಾಪ್ಯತ್ವಗ್ರಹಣವಾಗುತ್ತದೆ. ಅದರಿಂದ ಅಪ್ರಯೋಜಕತ್ವವಿಲ್ಲ.

**ನಚ ಪಂಚಮೇ ಅಸಿದ್ಧಿಃ। ಪರಮತೇಽಪಿ ಜಗನ್ಮಿಥ್ಯಾತ್ವಸ್ಯ ಆರೋಪಿತತ್ವಾತ್। ಅತ್ರ ಚ ಹೇತ್ವಂತರ್ಗತಂ ಮಿಥ್ಯಾತ್ವಂ ಸತ್ತ್ವಾಭಾವೋಽಭಿಪ್ರೇತ ಇತಿ ನಾಸತಿ ಅನೈಕಾಂತ್ಯಂ।**

'ಆರೋಪಿತ ಮಿಥ್ಯಾತ್ವಕತ್ವಾತ್' ಎಂಬ ಪಂಚಮ ಹೇತುವಿಗೆ ಅಸಿದ್ಧಿದೋಷವಿಲ್ಲ. ಅದ್ವೈತದಲ್ಲಿಯೂ ಮಿಥ್ಯಾತ್ವವು ಆರೋಪಿತವೇ ಆಗಿದೆ. ಸತ್ಯವೆಂದು ಒಪ್ಪಿದರೆ ಅದರಿಂದ ಅದ್ವೈತಕ್ಕೇ ಹಾನಿ. ಮತ್ತು ಅದು ಪ್ರತಿಪನ್ನೋಪಾಧಿ ತ್ರೈಕಾಲಿಕ ನಿಷೇಧ ಮುಂತಾದ ಉಪಾಧಿ ಘಟಿತವಾದ್ದರಿಂದ ಅಖಂಡ ಬ್ರಹ್ಮಸ್ವರೂಪವಾಗಲಾರದು. ಅಭಾವ ದ್ವೈತವನ್ನು ಒಪ್ಪಿ ಸತ್ತಾನಿಷೇಧರೂಪ ಮಿಥ್ಯಾತ್ವವು ಸತ್ಯ ಎಂದು ಹೇಳಲು ಅವಕಾಶವಿಲ್ಲ. ಅಭಾವ ದ್ವೈತವನ್ನು ಹಿಂದೆಯೇ ನಿರಾಕರಿಸಿದ್ದೇವೆ. 'ಅಸತ್ತು ನಿರ್ಧರ್ಮಕವಾದ್ದರಿಂದ ಮಿಥ್ಯಾತ್ವರೂಪ ಅಭಾವ ಧರ್ಮವೂ ವಸ್ತುತಃ ಇಲ್ಲ, ಆರೋಪಿತವೇ ಆಗಿದೆ. ಹೀಗಾಗಿ ಅಸತ್ತಿನಲ್ಲಿ ವ್ಯಭಿಚಾರ' ಎಂದು

ಅದ್ವೈತಿ ಹೇಳಬಹುದು. ಆದರೆ ಇದು ಸರಿಯಲ್ಲ. ಅಸತ್ತಿನಲ್ಲಿ ಸತ್ತ್ವಾಭಾವರೂಪ ಮಿಥ್ಯಾತ್ವವು ಆರೋಪಿತವಲ್ಲ, ವಾಸ್ತವವೇ ಆಗಿದೆ. ಅದರಿಂದ ವ್ಯಭಿಚಾರವಿಲ್ಲ.



नच षष्ठेऽसिद्धिः । चिन्मात्रस्याद्रष्टृत्वेनान्यस्य च कल्पितत्वेनाकल्पकत्वात् । अत्र चाकल्पितत्वस्य साध्यत्वान्नासति व्यभिचारः । विपक्षे व्याघातः । कल्पकं विना कल्पनाऽयोगात् ।

किञ्च विमतं न सद्विलक्षणं, असद्विलक्षणत्वात्, आत्मवत् । नच शुक्तिरूप्ये व्यभिचारः । तस्यासद्विलक्षणत्वेन तद्विरुद्धसद्विलक्षण-त्वायोगात् ।

विमतं न चैतन्याज्ञानकार्यं, न चैतन्याज्ञानकार्यधीविषयो बा, न चैतन्याज्ञानकार्यसत्त्ववद्वा, चैतन्यज्ञानबाध्यं वा, चैतन्यज्ञानबाध्यसत्त्ववद्वा । तस्मिन्नपरोक्षेऽपि अनिषेध्यत्वेन साक्षाद्भासमानत्वात्, यदेवं तदेवं यथा पटेऽपरोक्षेऽप्युक्तभानवान् घटो न पटाज्ञानकार्यादिः ।

चैतन्यं चाधिष्ठानतया सुखादिसाक्षित्वेन चेदानी-मप्यपरोक्षमिति नासिद्धिः । शङ्खत्वादावपरोक्षेऽपि भासमानं पीतात्वादिकं न तदज्ञानकार्यम् । किन्तु श्वेतत्वाज्ञानकार्यादिकमिति न व्यभिचारः ।

अत्राप्यापरोक्ष्यस्याज्ञानविरोधित्वात् सति तस्मिन्नज्ञानांगीकारे व्याघातः । एवमुत्तरत्रापि विपक्षे बाधकमुन्नेयम् ।

विमतं नात्मन्यध्यस्तम् । तत्तत्वसाक्षात्कारवत्प्रवृत्तिविषयत्वात् यदेवं तदेवं यथा पटसाक्षात्कारवत्प्रवृत्तिविषयो घटो न तत्राध्यस्तः । नचासिद्धिः । ईशजीवन्मुक्तयोरात्मसाक्षात्कारवतोरपि जगद्रक्षण-

**भिक्षाटनशिष्यबोधनादौ प्रवृत्तेः । शङ्खेऽध्यस्तमपि पीतत्वं न शङ्खतत्त्वसाक्षात्कारवत् प्रवृत्तिविषय इति न व्यभिचारः ।**

**विमतं नेश्वरमायाकल्पितं तं प्रत्यपरोक्षत्वात्, यदेवं तदेवं यथा चैत्रं प्रत्यपरोक्षो घटो न चैत्रमायाकल्पितः ।**

**विमतं न जीवकल्पितं तस्मिन्सुषुप्तेऽप्यवस्थिततत्वात् आत्मवत् । नचाऽसिद्धिः प्रत्यभिज्ञानात् । तस्यात्यन्ताप्रामाण्ये च क्षणिकवादापातात् । बाधकाभावाच्च । अदृष्टादेरप्यभावेन पुनरुद्बोधायोगाच्च ।**

---

**अकल्पकत्वादिति ।।** अन्यथा शुक्तिरूप्यादिवत् जगतः प्रातिभासिकत्वं स्यादिति भावः । नन्वनादिर्जीवोऽकल्पित एव । जीवत्वस्य कल्पितत्वेऽपि तदाश्रयचैतन्यस्याकल्पितत्वेन स एव सादेः सर्वस्य कल्पक इति चेन्न । चैतन्यमात्रस्य जीवत्वाभावात् । अन्यथा जीवो ब्रह्म विशुद्धा चिदिति पार्थक्येन त्वदुक्त्ययोगादिति । **तस्येति ।** तथाच तत्र हेतुरेव नास्तीति भावः । **तस्मिन्निति ।** अत्र विपक्षे बाधकसूचनायापिशब्दः । बाधकज्ञानविषये अपरोक्षभ्रमविषये च शुक्तिरूप्यादौ व्यभिचारवारणाय विशेषणद्वयम् । बाधानन्तरं शुक्तिकैव रजतत्वेनाभादिति परामर्शविषये तत्रैव व्यभिचारवारणाय **साक्षादिति ।** पक्षेऽसिद्धिवारणाय **भासमानत्वादिति ।** अपिशब्दसूचितं विपक्षे बाधकमाह **अत्रापीति ।।** **तत्तत्वसाक्षात्कारवदिति ।।** अध्यासविरोधित्वाभिमत साक्षात्कारवत्प्रवृत्ति विषयत्वादित्यर्थः । तेन शङ्खतत्त्वरूपशङ्खत्वसाक्षात्कारवतो विशेषादर्शनदशायां प्रवृत्तिविषये पीतत्वे न व्यभिचारः ।



ನ ಚ ಪಕ್ಷೇ ಅಸಿದ್ಧಿಃ। ಚಿನ್ಮಾತ್ರಸ್ಯ ಅದ್ರಷ್ಟೃತ್ವೇನ, ಅನ್ಯಸ್ಯಚ ಕಲ್ಪಿತತ್ವೇನ ಅಕಲ್ಪಕತ್ವಾತ್ ।

ಕಲ್ಪಕರಹಿತತ್ವಾತ್ ಎಂಬ ಆರನೆ ಹೇತುವಿಗೆ ಅಸಿದ್ಧಿದೋಷವಿಲ್ಲ. ಪ್ರಪಂಚ ಮಿಥ್ಯಾ ಎನ್ನಲು ಅದಕ್ಕೊಬ್ಬ ಕಲ್ಪಕನಿಲ್ಲ. ಚಿನ್ಮಾತ್ರವು ಕಲ್ಪಕವಲ್ಲ. ಕಲ್ಪನೆಗೆ ಬೇಕಾಗುವ ದೇಹ ಇಂದ್ರಿಯಾದಿಗಳು ಚಿನ್ಮಾತ್ರಕ್ಕೆ ಇಲ್ಲ. ಅದರಿಂದ ಅದು ಅದ್ರಷ್ಟೃ, ಅಕಲ್ಪಕ. ಜೀವನು ಕಲ್ಪಿತನೇ ಆದ್ದರಿಂದ ಕಲ್ಪಕನಲ್ಲ. ಕಲ್ಪಕನಾದರೆ ಅವನು ಕಲ್ಪಿಸುವ ಶುಕ್ತಿರೂಪ್ಯದಂತೆ ಅವನು ಕಲ್ಪಿಸುವ ಪ್ರಪಂಚವೆಲ್ಲವೂ ಪ್ರಾತಿಭಾಸಿಕ ವಾದೀತು. 'ಜೀವೋ ಬ್ರಹ್ಮ ವಿಶುದ್ಧಾ ಚಿತ್' ಎಂದೂ ಅನಾದಿಪದಾರ್ಥಗಳಲ್ಲಿ ಜೀವನಿಗಿಂತ ಬೇರೆಯಾಗಿ ವಿಶುದ್ಧಚೇತನವನ್ನು ಅವರು ಹೇಳುವುದರಿಂದ 'ಶುದ್ಧಚೈತನ್ಯವೇ ಕಲ್ಪಕನಾದ ಜೀವ. ಅವನು ಕಲ್ಪಿತನಲ್ಲ, ಅನಾದಿ' ಎನ್ನುವುದು ಅವರ ಮಾತಿಗೇ ವಿರುದ್ಧವಾಗುವುದು.

**ಅತ್ರ ಚ ಅಕಲ್ಪಿತತ್ವಸ್ಯ ಸಾಧ್ಯತ್ವಾತ್ ನಾಸತಿ ವ್ಯಭಿಚಾರಃ। ವಿಪಕ್ಷೇ ವ್ಯಾಘಾತಃ। ಕಲ್ಪಕಂ ವಿನಾ ಕಲ್ಪನಾಽಯೋಗಾತ್।**

ಕಲ್ಪಕರಹಿತತ್ವವು ಅಸತ್ತಿನಲ್ಲಿಯೂ ಇದೆ. ಆದರೂ ವ್ಯಭಿಚಾರವಿಲ್ಲ. ಏಕೆಂದರೆ ಅಸತ್ತಿನಲ್ಲಿ ಅಕಲ್ಪಿತತ್ವವೂ ಇದೆ. ಅಕಲ್ಪಿತತ್ವವೇ ಇಲ್ಲಿ ಸಾಧ್ಯವಾಗಿರುವ ಸತ್ವ. 'ವಿಪಕ್ಷೇ' 'ಕಲ್ಪಕರಹಿತವಾದರೂ ಕಲ್ಪಿತವಾಗಿರಲಿ' ಎಂದರೆ ವ್ಯಾಹತಿ. ಕಲ್ಪಕನಿಲ್ಲದೆ ಕಲ್ಪನೆ ಉಂಟಾಗಲಾರದು.

**ಕಿಂಚ ವಿಮತಂ ನ ಸದ್ವಿಲಕ್ಷಣಂ, ಅಸದ್‌ವಿಲಕ್ಷಣತ್ವಾತ್ ಆತ್ಮವತ್। ನಚ ಶುಕ್ತಿರೂಪ್ಯೇ ವ್ಯಭಿಚಾರಃ। ತಸ್ಯ ಅಸದ್ವಿಲಕ್ಷಣತ್ವೇನ ತದ್ವಿರುದ್ಧಸದ್ವಿಲಕ್ಷಣತ್ವಾಯೋಗಾತ್।**

ಪ್ರಪಂಚವು ಸದ್‌ವಿಲಕ್ಷಣವಾಗದು. ಅಸದ್ವಿಲಕ್ಷಣವಾಗಿರುವುದರಿಂದ ಆತ್ಮನಂತೆ. ಶುಕ್ತಿರೂಪ್ಯದಲ್ಲಿ ವ್ಯಭಿಚಾರವಿಲ್ಲ. ಅದನ್ನು ಅಸದ್‌ವಿಲಕ್ಷಣವೆಂದು ಅದ್ವೈತಿ ತಾನೆ ಒಪ್ಪಿರುವುದರಿಂದ ತಾನೇ ಅದನ್ನು ಸದ್‌ವಿಲಕ್ಷಣವೆನ್ನುವುದು ವಿರುದ್ಧವಾಗುವುದು.

**ವಿಮತಂ ನ ಚೈತನ್ಯಾಜ್ಞಾನಕಾರ್ಯಂ, ನ ಚೈತನ್ಯಾಜ್ಞಾನ ಕಾರ್ಯಧೀ ವಿಷಯೋ ವಾ, ನ ಚೈತನ್ಯಾಜ್ಞಾನ ಕಾರ್ಯಸತ್ತ್ವವದ್ವಾ, ನ ಚೈತನ್ಯಜ್ಞಾನಾಬಾಧ್ಯಂ ವಾ ನ ಚೈತನ್ಯಜ್ಞಾನಾ ಬಾಧ್ಯಸತ್ತ್ವವದ್ವಾ। ತಸ್ಮಿನ್ನಪರೋಕ್ಷೇಽಪಿ ಅನಿಷೇಧ್ಯತ್ವೇನ ಸಾಕ್ಷಾದ್ ಭಾಸಮಾನತ್ವಾತ್। ಯದೇವಂ ತದೇವಂ ಯಥಾ ಪಟೇ ಅಪರೋಕ್ಷೇಽಪಿ ಉಕ್ತಭಾನವಾನ್ ಘಟೋ ನ ಪಟಾಜ್ಞಾನಕಾರ್ಯಾದಿಃ। ಚೈತನ್ಯಂ ಚಾಧಿಷ್ಠಾನತಯಾ ಸುಖಾದಿಸಾಕ್ಷಿತ್ವೇನ ಚೇದಾನೀಮಪ್ಯಪರೋಕ್ಷಮಿತಿ ನಾಸಿದ್ಧಿಃ।**

(1) ವಿಮತವಾದ ಪ್ರಪಂಚವು ಚೈತನ್ಯಾಜ್ಞಾನ ಕಾರ್ಯವಲ್ಲ.
(2) ಚೈತನ್ಯಾಜ್ಞಾನಕಾರ್ಯ ಜ್ಞಾನ ವಿಷಯವಲ್ಲ.
(3) ಚೈತನ್ಯಾಜ್ಞಾನಕಾರ್ಯ ಸತ್ವ ಉಳ್ಳದ್ದಲ್ಲ.
(4) ಚೈತನ್ಯಜ್ಞಾನ ಬಾಧ್ಯವಲ್ಲ.
(5) ಚೈತನ್ಯಜ್ಞಾನ ಬಾಧ್ಯ ಸತ್ವ ಉಳ್ಳದ್ದಲ್ಲ.

—ಈ ಎಲ್ಲ ಸಾಧ್ಯಗಳಿಗೆ ಹೇತುವು 'ಚೈತನ್ಯವು ಆರೋಪಾಧಿಷ್ಠಾನವಾಗಿ ಅಪರೋಕ್ಷದಲ್ಲಿ ಭಾಸಮಾನವಾಗಿರುವಾಗಲೇ ಪ್ರಪಂಚವು ಅನಿಷೇಧ್ಯತ್ವೇನ ಸಾಕ್ಷಾತ್ ಕಾಣುತ್ತಿರುವುದರಿಂದ' ಎಂದು. ಉದಾಹರಣೆಗೆ, 'ಪಟವು ಅಪರೋಕ್ಷವಾಗಿ ಕಾಣುತ್ತಿದ್ದರೂ ಘಟವು ಕಾಣುತ್ತದೆ. ಘಟವು ಪಟದ ಅಜ್ಞಾನಕಾರ್ಯವಾಗಿಲ್ಲ' ಎಂದು.

ಚೈತನ್ಯವು ಪ್ರಪಂಚಾರೋಪಕ್ಕೆ ಅಧಿಷ್ಠಾನವೆಂದು ಅದ್ವೈತಿ ಹೇಳುತ್ತಿರುವುದರಿಂದ, ಅದು ಪ್ರತ್ಯಕ್ಷವಾಗಿ ಕಾಣುತ್ತದೆ ಎಂದೂ ಒಪ್ಪಿರುವುದರಿಂದ, ಅದರಲ್ಲಿ ಪ್ರಪಂಚವು ಆರೋಪಿತವಾಗಿ ಕಾಣಬಾರದಿತ್ತು. ಕಾಣುತ್ತಿದೆ. ಹೀಗಾಗಿ ಹೇತುವಿಗೆ ಅಸಿದ್ಧಿ ಇಲ್ಲ. ಆದರಿಂದ ಪ್ರಪಂಚವು ಚೈತನ್ಯದ ಅಜ್ಞಾನದಿಂದಾಗಿರುವ ಕಲ್ಪನೆ ಎನ್ನಬಾರದು.

ಸುಖಾದಿಯು ಅನುಭವದಲ್ಲಿ ಕಾಣಲು ಅದಕ್ಕೆ ಗ್ರಾಹಕವು ಸಾಕ್ಷಿರೂಪವಾದ ಚೈತನ್ಯವೆ. ಸುಖಾದಿಯು ಕೇವಲ ಕಲ್ಪನೆ ಎಂದರೆ, ಚೈತನ್ಯದಲ್ಲಿ ಆರೋಪಿತವಾಗಿದೆ ಎಂದರೆ, ಸುಖಾದಿ ಕಾಣುವಾಗ ಅದಕ್ಕೆ ಆರೋಪಾಧಿಷ್ಠಾನವಾದ ಚೈತನ್ಯ ಕಾಣಲೇಬೇಕು, ರಜತಭ್ರಮಕಾಲದಲ್ಲಿ ಅದಕ್ಕೆ ಆರೋಪಾಧಿಷ್ಠಾನವಾದ ಶುಕ್ತಿಯು 'ಇದಂ' ಎಂದು ಕಾಣುವಂತೆ. ಆದರಿಂದ ಪ್ರಪಂಚ ಕಾಣುವಾಗ ಅಧಿಷ್ಠಾನ ಚೈತನ್ಯವೂ ಕಾಣಲೇಬೇಕು. ಹೀಗೆ ಅಧಿಷ್ಠಾನ ಚೆತನ್ಯವು ಅಪರೋಕ್ಷವಾಗಿ ಕಾಣುವಾಗ ಆರೋಪಿತವಾದ ಪ್ರಪಂಚ ಕಾಣಬಾರದು. ಶುಕ್ತಿಯನ್ನು ಇದು ಶುಕ್ತಿ ಎಂದು ಅಪರೋಕ್ಷವಾಗಿ ಕಾಣುವಾಗ 'ಇದು ರಜತ' ಎಂದು ಭ್ರಮ ಬರುವುದಿಲ್ಲ. ಆದರೆ ಚೈತನ್ಯವು ಅಪರೋಕ್ಷವಾಗಿ ಕಾಣುತ್ತಿರುವಾಗಲೆ ಪ್ರಪಂಚವು ಕಾಣುತ್ತಿದೆ. ಪಕ್ಷದಲ್ಲಿ ಹೇತುವಿದೆ, ಅಸಿದ್ಧಿ ಇಲ್ಲ. ಅದರಿಂದ ಚೈತನ್ಯಾಜ್ಞಾನದಿಂದ ಪ್ರಪಂಚ ಉಂಟಾಗಿಲ್ಲ. ಅಜ್ಞಾನದಿಂದ ಉಂಟಾದ ಭ್ರಮಕ್ಕೆ ವಿಷಯವಲ್ಲ. ಅಜ್ಞಾನದಿಂದ ಉಂಟಾದ ಸತ್ವಉಳ್ಳದ್ದಲ್ಲ. ಚೈತನ್ಯ ಜ್ಞಾನದಿಂದ ಬಾಧ್ಯವಲ್ಲ, ಚೈತನ್ಯಜ್ಞಾನಬಾಧ್ಯ ಸತ್ವ ಉಳ್ಳದ್ದೂ ಅಲ್ಲ. ಪಟವು ಅಪರೋಕ್ಷವಾಗಿ ಕಾಣುತ್ತಿರುವಾಗಲೇ ಘಟವು ಕಾಣುತ್ತದೆ. ಘಟವು ಪಟದ ಅಜ್ಞಾನಕಾರ್ಯವಲ್ಲ. ಅಜ್ಞಾನಕಾರ್ಯಭ್ರಮಕ್ಕೆ ವಿಷಯವಲ್ಲ. ಅಜ್ಞಾನ ಕಾರ್ಯವಾದ ಸತ್ವ ಉಳ್ಳದ್ದಲ್ಲ. ಜ್ಞಾನಬಾಧ್ಯವಲ್ಲ. ಜ್ಞಾನಬಾಧ್ಯ ಸತ್ವಉಳ್ಳದ್ದೂ ಅಲ್ಲ ಎಂದು ಸಾಧ್ಯವೆಲ್ಲವೂ ಸಿದ್ಧವಾಗುವುದು.

**ಶಂಖತ್ವಾದೌ ಅಪರೋಕ್ಷೇಽಪಿ ಭಾಸಮಾನಂ ಪೀತತ್ವಾದಿಕಂ ನ ತದಜ್ಞಾನಕಾರ್ಯಂ। ಕಿಂತು ಶ್ವೇತತ್ವಾಜ್ಞಾನಕಾರ್ಯಂ ಇತಿ ನ ವ್ಯಭಿಚಾರಃ। ಅತ್ರಾಪ್ಯಾಪರೋಕ್ಷ್ಯಸ್ಯ ಅಜ್ಞಾನ ವಿರೋಧಿತ್ವಾತ್ ಸತಿ ತಸ್ಮಿನ್ ಅಜ್ಞಾನಾಂಗೀಕಾರೇ ವ್ಯಾಘಾತಃ। ಏವಮುತ್ತರತ್ರಾಪಿ ವಿಪಕ್ಷೇ ಬಾಧಕಮುನ್ನೇಯಂ।**

ಯದ್ಯಪಿ ಈ ಅನುಮಾನಕ್ಕೆ ವ್ಯಭಿಚಾರ ದೋಷ ಕಾಣುತ್ತದೆ. ಶಂಖದಲ್ಲಿ ಶಂಖತ್ವ ಅಪರೋಕ್ಷವಾಗಿ ಕಾಣುತ್ತಿರುವಾಗಲೇ ಅದರಲ್ಲಿ ಆರೋಪಿತವಾದ ಪೀತತ್ವ ಕಾಣುತ್ತದೆ. ಯಾವುದು ಅಪರೋಕ್ಷವಾಗಿ ಕಾಣುತ್ತಿರುವಾಗಲೇ ಯಾವುದು ಅನಿಷೇಧ್ಯವಾಗಿ ಸಾಕ್ಷಾತ್ತಾಗಿ ಕಾಣುವುದೋ

ಅದು ಅದರ ಅಜ್ಞಾನದ ಕಾರ್ಯವಲ್ಲ ಎಂಬ ವ್ಯಾಪ್ತಿಗೆ ಈ ಶಂಖ ಪೀತತ್ವದಲ್ಲಿ ವ್ಯಭಿಚಾರ ಎಂದು. ಆದರೆ ವಸ್ತುತಃ ವ್ಯಭಿಚಾರವಿಲ್ಲ. ಶಂಖದ ಪೀತತ್ವವು ಶಂಖದ ಶ್ವೇತತ್ವಾಜ್ಞಾನ ಕಾರ್ಯವಾಗಿದೆ. ಶ್ವೇತತ್ವವು ಅಪರೋಕ್ಷವಾಗಿ ಕಾಣುತ್ತಿದ್ದರೆ ಆಗ ಪೀತತ್ವವು ಕಾಣುವುದಿಲ್ಲ. ಅದರಿಂದ ವ್ಯಭಿಚಾರವಿಲ್ಲ.

ಅತ್ರಾಪಿ ಅದ್ವೈತಿ ಹೇಳುತ್ತಾನೆ, 'ಚೈತನ್ಯವು ಅಪರೋಕ್ಷದಲ್ಲಿ ಕಾಣುತ್ತಿರುವಾಗಲೂ ಅಜ್ಞಾನವಿದೆ. ಅಜ್ಞಾನದಿಂದ ಪ್ರಪಂಚ ಕಾಣುತ್ತದೆ. ಅದರಿಂದ ಪ್ರಪಂಚವು ಅಜ್ಞಾನ ಕಾರ್ಯವಾಗಿದೆ' ಎಂದು. ಆದರೆ ಚೈತನ್ಯ ಅಪರೋಕ್ಷವಾಗಿ ಕಾಣುತ್ತಿದೆ, ಅಜ್ಞಾನವೂ ಇದೆ ಎನ್ನುವುದು ವ್ಯಾಹತ. ಅಪರೋಕ್ಷವು ಅಜ್ಞಾನಕ್ಕೆ ವಿರೋಧಿಯಾಗಿದೆ.

ಹೀಗೇ ಮುಂದಿನ ಅನುಮಾನಗಳಲ್ಲಿಯೂ ವಿಪಕ್ಷೇಬಾಧಕವನ್ನು ಹೇಳಲು ಬರುತ್ತದೆ.

ಚೈತನ್ಯವು ಅಪರೋಕ್ಷವಾಗಿ ಕಾಣುತ್ತಿರುವಾಗಲೇ ಕಾಣುವ ಪ್ರಪಂಚವು ಚೈತನ್ಯಾಜ್ಞಾನ ಕಾರ್ಯವಾದ ಭ್ರಮಕ್ಕೆ ವಿಷಯವಾಗಿದೆ. ಮತ್ತು ಚೈತನ್ಯಾಜ್ಞಾನ ಕಾರ್ಯವಾದ ವ್ಯಾವಹಾರಿಕ ಸತ್ಯತ್ವ ಉಳ್ಳದ್ದಾಗಿದೆ' ಎಂದರೆ ಚೈತನ್ಯದ ಅಪರೋಕ್ಷವಿರುವಾಗ ಅದರ ಅಜ್ಞಾನವಿದೆ ಎನ್ನುವುದು ವ್ಯಾಹತ. 'ಚೈತನ್ಯದ ಅಪರೋಕ್ಷವಿರುವಾಗಲೂ ಕಾಣುವ ಪ್ರಪಂಚವು ಬಾಧ್ಯವೆ, ಬಾಧ್ಯವಾದ ಸತ್ವಉಳ್ಳದ್ದೇ' ಎಂದರೆ ಇದೂ ವ್ಯಾಹತವಾಗುತ್ತದೆ. ಬಾಧ್ಯವಾಗಿರಬೇಕಾದರೆ, ಬಾಧ್ಯಸತ್ವ ಉಳ್ಳದ್ದಾಗಬೇಕಾದರೆ ಅದರ ಅಜ್ಞಾನವಿದ್ದರೆ ಮಾತ್ರ ಸಾಧ್ಯ. 'ಅಪರೋಕ್ಷವಿರುವಾಗ ಅಜ್ಞಾನವೂ ಇದೆ' ಎಂದರೆ ಅದು ವ್ಯಾಹತ. ಅಪರೋಕ್ಷವು ಅಜ್ಞಾನಕ್ಕೆ ವಿರೋಧಿಯಾಗಿದೆ.

**ವಿಮತಂ ನಾತ್ಮನ್ಯಧ್ಯಸ್ತಂ। ತತ್ತತ್ವ ಸಾಕ್ಷಾತ್ಕಾರವತ್ ಪ್ರವೃತ್ತಿವಿಷಯತ್ವಾತ್। ಯದೇವಂ ತದೇವಂ। ಯಥಾ ಪಟಸಾಕ್ಷಾತ್ಕಾರವತ್ ಪ್ರವೃತ್ತಿವಿಷಯೋ ಘಟೋ ನ ತತ್ರಾಧ್ಯಸ್ತಃ। ನ ಚಾಸಿದ್ಧಿಃ। ಈಶಜೀವನ್ಮುಕ್ತಯೋಃ ಆತ್ಮಸಾಕ್ಷಾತ್ಕಾರವತೋರಪಿ ಜಗದ್ರಕ್ಷಣ ಭಿಕ್ಷಾಟನ ಶಿಷ್ಯ ಬೋಧನಾದೌ ಪ್ರವೃತ್ತೇಃ। ಶಂಖೇ ಅಧ್ಯಸ್ತಮಪಿ ಪೀತತ್ವಂ ನ ಶಂಖ ತತ್ವ ಸಾಕ್ಷಾತ್ಕಾರವತ್ಪ್ರವೃತ್ತಿವಿಷಯಃ ಇತಿ ನ ವ್ಯಭಿಚಾರಃ।**

'ವಿಮತವಾದ ಪ್ರಪಂಚವು ಆತ್ಮನಲ್ಲಿ ಅಧ್ಯಸ್ತವಲ್ಲ. ಆತ್ಮನಲ್ಲಿ ಅಧ್ಯಾಸವಿರೋಧಿತ್ವೇನಾಭಿ ಮತವಾದ ತತ್ವದ ಸಾಕ್ಷಾತ್ಕಾರಿಯ ಪ್ರವೃತ್ತಿಗೆ ವಿಷಯವಾಗುವುದರಿಂದ. ಘಟಸಾಕ್ಷಾತ್ಕಾರಿಯ ಪ್ರವೃತ್ತಿಗೆ ವಿಷಯವಾದ ಘಟವು ಪಟದಲ್ಲಿ ಅಧ್ಯಸ್ತವಲ್ಲ.' ಈ ಅನುಮಾನಕ್ಕೆ ಅಸಿದ್ಧಿ ದೋಷವಿಲ್ಲ. ಈಶ್ವರನೂ ಜೀವನ್ಮುಕ್ತನೂ ಆತ್ಮತತ್ವಸಾಕ್ಷಾತ್ಕಾರಿಗಳೇ ಆದರೂ ಈಶ್ವರನು ಜಗದ್‌ರಕ್ಷಣೆಗೆ ಜೀವನ್ಮುಕ್ತನು ಭಿಕ್ಷಾಟನ ಶಿಷ್ಯಬೋಧನಾದಿಗಳಿಗೆ ಪ್ರಪಂಚದಲ್ಲಿ ಪ್ರವೃತ್ತಿ ಮಾಡುವುದು ಕಂಡಿದೆ. ಶಂಖದಲ್ಲಿ ಅಧ್ಯಸ್ತವಾದ ಪೀತತ್ವ ವಿಷಯದಲ್ಲಿ ಅಧ್ಯಾಸವಿರೋಧಿತ್ವಾಭಿಮತವಾದ ಶ್ವೇತತ್ವ ಸಾಕ್ಷಾತ್ಕಾರಿಯು ಪ್ರವೃತ್ತಿ ಮಾಡುವುದಿಲ್ಲ. ಇಲ್ಲಿ ತತ್ವವೆಂದರೆ ಅಧ್ಯಾಸ ವಿರೋಧಿತ್ವೇನ

ಅಭಿಮತವಾದ ಧರ್ಮ. ಶಂಖದಲ್ಲಿ ಶ್ವೇತತ್ವ. ಶಂಖತ್ವವು ಪೀತತ್ವಾಧ್ಯಾಸಕ್ಕೆ ವಿರೋಧಿಯಲ್ಲ. ಅದರಿಂದ ವ್ಯಭಿಚಾರವಿಲ್ಲ.

**ವಿಮತಂ ನೇಶ್ವರ ಮಾಯಾಕಲ್ಪಿತಂ ತಂ ಪ್ರತ್ಯಪರೋಕ್ಷತ್ವಾತ್। ಯದೇವಂ ತದೇವಂ। ಯಥಾ ಚೈತ್ರಂ ಪ್ರತಿ ಅಪರೋಕ್ಷೋ ಘಟೋ ನ ಚೈತ್ರಮಾಯಾಕಲ್ಪಿತಃ।**

ಪ್ರಪಂಚವು ಈಶ್ವರನ ಮಾಯೆಯಿಂದ ಕಲ್ಪಿತವಾದುದಲ್ಲ, ಈಶ್ವರನಿಗೆ ಪ್ರತ್ಯಕ್ಷವಾಗಿ ಕಾಣುವುದರಿಂದ. ಯಾವುದು ಯಾರಿಗೆ ಪ್ರತ್ಯಕ್ಷ ಕಾಣುವುದೋ ಅದು ಅವನ ಮಾಯೆಯಿಂದ ಕಲ್ಪಿತವಾದುದಲ್ಲ, ಘಟದಂತೆ, ಘಟವು ಚೈತ್ರನ ಮಾಯಾ ಕಲ್ಪಿತವಲ್ಲ. ಚೈತ್ರನಿಗೆ ಅಪರೋಕ್ಷವಾಗಿ ಕಾಣುತ್ತದೆ.

**ವಿಮತಂ ನ ಜೀವಕಲ್ಪಿತಂ। ತಸ್ಮಿನ್ ಸುಷುಪ್ತೇऽಪಿ ಅವಸ್ಥಿತತ್ವಾತ್ ಆತ್ಮವತ್। ನಚಾಸಿದ್ಧಿಃ। ಪ್ರತ್ಯಭಿಜ್ಞಾನಾತ್। ತಸ್ಯ ಅತ್ಯಂತಾಪ್ರಾಮಾಣ್ಯೇ ಚ ಕ್ಷಣಿಕವಾದಾಪಾತಾತ್। ಬಾಧಕಾಭಾವಾಚ್ಚ। ಅದೃಷ್ಟಾದೇರಪ್ಯಭಾವೇನ ಪುನರುದ್ಬೋಧಾಯೋಗಾಚ್ಚ।**

ಪ್ರಪಂಚವು ಜೀವನಿಂದ ಕಲ್ಪಿತವಲ್ಲ, ಅವನು ಸುಪ್ತಿಯಲ್ಲಿರುವಾಗಲೂ ಪ್ರಪಂಚ ಇರುವುದರಿಂದ. ಉದಾ: ಜೀವನು ಸುಷುಪ್ತಿಯಲ್ಲಿರುವಾಗಲೇ ಆತ್ಮನು ಇರುತ್ತಾನೆ. ಆತ್ಮನು ಅವನಿಂದ ಕಲ್ಪಿತನಲ್ಲ.

'ಜೀವನ ಸುಪ್ತಿಯಲ್ಲಿ ಅಹಮರ್ಥಪರ್ಯಂತ ಸರ್ವಪ್ರಪಂಚ ಲಯವಾಗುವುದರಿಂದ ಅವನ ಸುಪ್ತಿಕಾಲದಲ್ಲಿ ಪ್ರಪಂಚವೆ ಇಲ್ಲ. ಅದು ಕಾಣುವುದು ಅಸಂಭವ. ಅದರಿಂದ ಹೇತ್ವಸಿದ್ಧಿ'—ಎಂದರೆ ಅದು ಸರಿಯಲ್ಲ. ಸುಷುಪ್ತಿಯಲ್ಲಿ ಸಮಸ್ತಪ್ರಪಂಚ ಲಯವಾಗುವುದೆಂದು ಒಪ್ಪಿ, ಎಚ್ಚರವಾದಾಗ ಇನ್ನೊಂದು ಪ್ರಪಂಚ ಉತ್ಪನ್ನವಾಗುವುದೆಂದರೆ, ಅದರ ಪ್ರತ್ಯಭಿಜ್ಞೆ ಕೂಡಲಾರದು, ನಿನ್ನೆ ಕಂಡಿರುವ ಘಟವೇ ಇಂದು ಕಾಣುತ್ತಿದೆ ಎನಿಸುವುದು ಕೂಡಲಾರದು. ಅದನ್ನು ಕೇವಲ ಸಾದೃಶ್ಯವಶದಿಂದ ಬಂದ ಭ್ರಾಂತಿ ಎಂದು ಒಪ್ಪಿದರೆ ಬೌದ್ಧರ ಕ್ಷಣಿಕವಾದ ಪ್ರವೇಶಾಪತ್ತಿ. ಮತ್ತು ಪ್ರತ್ಯಭಿಜ್ಞೆಗೆ ಬಾಧವಿಲ್ಲದಿರುವಾಗ ಭ್ರಾಂತಿತ್ವ ಕೂಡುವುದೂ ಇಲ್ಲ. ಸುಪ್ತಿಯಲ್ಲಿ ಪ್ರಪಂಚ ಲಯವಾಗುವುದೆಂದು ಒಪ್ಪಿದರೆ ಮಲಗಿದವನು ಏಳಲಾರ. ಅವನನ್ನು ಎಬ್ಬಿಸಲು ಬೇಕಾಗುವ ಅದೃಷ್ಟ ಸಂಸ್ಕಾರಗಳು ಲಯ ಹೊಂದಿರುತ್ತವೆ.



**सामान्येनानात्मसत्यत्वे— मिथ्यात्वं नात्मन्यसर्ववृत्ति। मिथ्यामात्रवृत्तित्वात्। शुक्तिरूप्यत्ववत्।**

**आत्मा परमार्थसदन्यः, परमार्थसद्भावान्यो वा पदार्थत्वात् अनात्मवत्।**

आत्मा यावत्स्वरूपमनुवर्तमानानात्मवान् यावत्स्वरूप-मनुवर्तमान भावरूपानात्मवान्वा, स्वज्ञानाबाध्यानात्मवान्वा, स्वज्ञानाबाध्यभावरूपानात्मवान्वा, पदार्थत्वाद्भावत्वाद्वा घटवत् ।

विमता बन्धनिवृत्तिः स्वप्रतियोगिविषयविषयकज्ञानाबाध्या-नात्मसमानकालीना उक्तज्ञानाबाध्य भावरूपानात्मसमानकालीना वा । बन्धनिवृत्तित्वात् निगडबन्धनिवृत्तिवदित्यादीनि द्रष्टव्यानि ।

विशिष्यानात्मसत्यत्वे तु— आत्मधीः न स्वविषयविषयक-धीबाध्या धीत्वात् शुक्तिधीवत् ।

आत्माधिष्ठानकभ्रमहेतुः न स्वकार्यभ्रमाधिष्ठानज्ञानबाध्यः, भ्रमहेतुत्वात् यदेवं तदेवं यथा शुक्त्यधिष्ठानकभ्रमहेतुः काचादिः । शुक्त्यज्ञानमपि पक्षतुल्यम् ।

ब्रह्मान्यदनादि परमार्थसत् अनादित्वात् ब्रह्मवत् । दोषजन्यज्ञानात्पूर्वं सतोऽप्यनादेरनाद्यध्यस्तत्वे ब्रह्माप्यनाद्यन-न्ताध्यस्तं स्यात् ।

ब्रह्म कालाद्यसंबद्धं नावतिष्ठते, पदार्थत्वात् घटवत् ।

ब्रह्मान्यद्वेदैकगम्यं धर्मादि, परमार्थसत्, श्रुतितात्पर्यविषयत्वाद् ब्रह्मवत् ।

---

**सामान्येनेति ।** मिथ्यात्वाधिकरणतावच्छेदकपुरस्कारेणेत्यर्थः । अत्रानात्म-सत्यत्व इत्यस्यानन्तरं अनुमानानीति शेषः । अनुमानानि द्रष्टव्यानीत्यग्रेतनेन संबन्धः । मण्डनरीत्या सिद्धसाधनतां वारयितुमाह **परमार्थसद्भावान्य इति ।** अनाद्यनन्तानात्मसत्तां साधयति **आत्मा यावदिति ।**

ननु पदार्थत्वं पदजन्यप्रतीतिविषयत्वं, तच्च निःस्वरूपे अळीके व्यभिचरति ।

तत्र स्वरूपघटितसाध्याभावादित्यत आह **भावत्वाद्वेति ।** भावत्वमभावत्व-वदखण्डोपाधिरिति न काप्यनुपपत्तिरिति द्रष्टव्यम् । **स्वप्रतियोगिविषयेति ।** स्वप्रतियोगी निवृत्तिप्रतियोगी यो बन्धः तस्य यो विषयो बध्यस्तद्विषयकं यज्ज्ञानं तदबाध्यो योऽनात्मा तत्समानकालीनेत्यर्थः । अत्रानात्मसमानकालीनेत्येवोक्ते इदानींतनमुक्तावंशतः सिद्धसाधनं स्यात्, अत उक्तं **स्वप्रतियोगिविषय-विषयकज्ञानाबाध्येति ।** निर्विषयनिवृत्तौ व्यभिचारवारणायाह **बन्धेति ।। विशिष्येति ।।** मिथ्यात्वाधिकरणतावच्छेदकव्याप्यधर्म पुरस्कारेणेत्यर्थः । **शुक्त्यज्ञानमिति ।** तथाच पक्षे तत्र व्यभिचारसंदेहो न दोषायेति भावः । **ब्रह्मान्यदनादीति ।।** अत्रानुमाने अनादिशब्देन यावत्प्रागभावावच्छिन्न-समयसम्बन्धि विवक्षितम् । तेनासदंशे न बाधव्यभिचाराविति द्रष्टव्यम् । **दोषेति ।** यद्यप्यनाद्यध्यस्तत्वं अनादिभ्रमप्रवाहविषयत्वम्, अत एवानादित्वमपि । लाघवेन भ्रमविषयीभूतैकाज्ञानसिद्धेः । तत्र च दोषजन्यज्ञानात् पूर्वमिति नास्त्येव । न ह्यविद्याजन्यज्ञानप्रवाहस्य पूर्वमस्ति यत्किञ्चित् । ब्रह्माप्यध्यस्तं स्यादित्यपि न सम्यक् । सोपाधेरध्यस्तत्वात् । निरुपाधेश्चाधिष्ठानाभावेन अध्यासायोगात् । तथापि यो यज्ज्ञानात् पूर्वः स तद्भ्रमत्वानापादक इति व्याप्तेः दोषजन्यज्ञानात् पूर्वमसतोऽज्ञानस्य तज्ज्ञानाध्यासत्वानापादकत्वमित्यत्र तात्पर्यम् । तथासत्यप्य-ध्यस्तत्वे ब्रह्माप्यध्यस्तं स्यात् । न चाधिष्ठानाभावः । अज्ञानस्यैवाधिष्ठानत्व-सम्भवात् । निरुपाधौ मानाभावेन शून्यतायामेव पर्यवसानात् । निरधिष्ठानभ्रमस्य वक्ष्यमाणत्वाच्चेति दिक् । असत्प्रातिभासिकयोरंशे बाधव्यभिचारवारणाय पक्षं हेतुं च विशिनष्टि **अनिषेध्यत्वेनेत्यादिना । ब्रह्मान्यदिति ।** एतच्चांशतःसिद्धसाधन-वारणाय । असत्यंशतो बाधवारणायाह **एकेति ।** तद्धैक आहुरसदेवेदमग्र आसीदित्यादिना असतो वेदगम्यत्वात् । किं तदित्यपेक्षायामुक्तं **धर्मादीति ।**



ಸಾಮಾನ್ಯೇನಾನಾತ್ಮಸತ್ಯತ್ವೇ—

ಮಿಥ್ಯಾತ್ವಂ ನಾತ್ಮಾನ್ಯ ಸರ್ವವೃತ್ತಿ, ಮಿಥ್ಯಾಮಾತ್ರವೃತ್ತಿತ್ವಾತ್ । ಶುಕ್ತಿರೂಪ್ಯತ್ವವತ್ ।

**ಆತ್ಮಾ ಪರಮಾರ್ಥಸದನ್ಯಃ, ಪರಮಾರ್ಥಸದ್‌ಭಾವಾನ್ಯೋ ವಾ ಪದಾರ್ಥತ್ವಾತ್ ಅನಾತ್ಮವತ್ ।**

**ಆತ್ಮಾ ಯಾವತ್‌ಸ್ವರೂಪಮನುವರ್ತಮಾನಾನಾತ್ಮವಾನ್ ಯಾವತ್ ಸ್ವರೂಪ-ಮನುವರ್ತಮಾನ ಭಾವ ರೂಪಾನಾತ್ಮವಾನ್ ವಾ, ಸ್ವಜ್ಞಾನಾಬಾಧ್ಯ-ಅನಾತ್ಮವಾನ್ ವಾ, ಸ್ವಜ್ಞಾನಾಬಾಧ್ಯಭಾವರೂಪಾನಾತ್ಮವಾನ್ ವಾ, ಪದಾರ್ಥತ್ವಾದ್ ಭಾವತ್ವಾದ್ ವಾ ಘಟವತ್ ।**

ಸಾಮಾನ್ಯತಃ ಅಂದರೆ, ಮಿಥ್ಯಾತ್ವಾಧಿಕರಣತಾವಚ್ಛೇದಕ ಅನಾತ್ಮತ್ವ ಪುರಸ್ಕಾರೇಣ ಅನಾತ್ಮಪದಾರ್ಥ ಸತ್ಯತ್ವ ವಿಷಯದಲ್ಲಿ ಅನುಮಾನಗಳು—

(1) ಮಿಥ್ಯಾತ್ವವು ಆತ್ಮವ್ಯತಿರಿಕ್ತ ಸರ್ವವೃತ್ತಿಯಲ್ಲ. ಮಿಥ್ಯಾಮಾತ್ರ ವೃತ್ತಿಯಾದ್ದರಿಂದ ಶುಕ್ತಿರೂಪ್ಯದಂತೆ.

(2) ಆತ್ಮನು ಪಾರಮಾರ್ಥಿಕ ಸತ್ಯವಾದ ಪದಾರ್ಥಗಳಿಗಿಂತ ಭಿನ್ನ. ಪದಾರ್ಥವಾದ್ದರಿಂದ, ಅನಾತ್ಮದಂತೆ.

(3) ಆತ್ಮನು ಪರಮಾರ್ಥಸತ್ತಾದ ಭಾವಪದಾರ್ಥಕ್ಕಿಂತ ಭಿನ್ನ, ಪದಾರ್ಥವಾದ್ದರಿಂದ, ಅನಾತ್ಮದಂತೆ.

—ಮಿಥ್ಯಾತ್ವಕ್ಕೆ ಅಧಿಕರಣತಾವಚ್ಛೇದಕವು ಆತ್ಮಾನ್ಯತ್ವ. ಈ ಸಾಮಾನ್ಯಧರ್ಮ ಪುರಃಸರವಾಗಿ ಯಾವುದಾದರೊಂದು ಆತ್ಮಾನ್ಯವು ಸತ್ಯವಿರುತ್ತದೆ ಎಂದು ಸಾಧಿಸುವ ಅನುಮಾನಗಳು ಇವು.

ಮಿಥ್ಯಾವೃತ್ತಿಯಾದ ಜ್ಞೇಯತ್ವಾದಿಗಳು ಯದ್ಯಪಿ ಆತ್ಮಾನ್ಯಸರ್ವವೃತ್ತಿಯೆ. ಹೀಗಾಗಿ ವ್ಯಭಿಚಾರವಿದೆ. ಆದರೆ ಮಿಥ್ಯಾಮಾತ್ರವೃತ್ತಿಯಲ್ಲ. ಸತ್ಯವೃತ್ತಿಯಾಗಿದೆ, ಆತ್ಮನಲ್ಲಿಯೂ ಇದೆ. ಆದರಿಂದ ಜ್ಞೇಯತ್ವಾದಿಗಳಲ್ಲಿ ವ್ಯಭಿಚಾರವಿಲ್ಲ.

ಮಂಡನರೀತ್ಯಾ ಅಭಾವ ದ್ವೈತವಾದದಲ್ಲಿ ಆತ್ಮನು ಪರಮಾರ್ಥಸತ್ತಾದ ಅಭಾವಕ್ಕಿಂತ ಅನ್ಯ ಎಂದು ಸಿದ್ಧವಿರುವುದರಿಂದ ಸಿದ್ಧಸಾಧನ ದೋಷ ಬಂದೀತು. ಅದಕ್ಕೆ ಪರಮಾರ್ಥಸತ್ತಾದ ಭಾವಪದಾರ್ಥಕ್ಕಿಂತ ಅನ್ಯತ್ವವನ್ನು ಸಾಧನೆ ಮಾಡಿದರೆ, ಆತ್ಮನು ಪರಮಾರ್ಥಸತ್ತಾದ ಯಾವ ಭಾವಪದಾರ್ಥಕ್ಕಿಂತಲೂ ಭಿನ್ನನೆಂದು ಸಿದ್ಧವಾಗಿಲ್ಲ. ಅದರಿಂದ ಅದನ್ನು ಸಾಧನೆ ಮಾಡುತ್ತೇವೆ.

ಅನಾತ್ಮದೃಷ್ಟಾಂತದಲ್ಲಿ, ಅದು, ಪರಮಾರ್ಥಸತ್ತಾದ ಭಾವವೆಂದರೆ ಆತ್ಮ, ಅದಕ್ಕಿಂತ ಭಿನ್ನವಾಗಿದೆ. ಅನಾತ್ಮ ಪದಾರ್ಥ ಸತ್ಯತ್ವವಿಷಯದಲ್ಲಿ ಇನ್ನೂ ಅನೇಕ ಅನುಮಾನಗಳು—

(4) ಆತ್ಮನು 'ಯಾವತ್‌ಸ್ವರೂಪಂ' ತಾನಿರುವಷ್ಟು ಕಾಲವೂ ಇರುವ ಅನಾತ್ಮ ಉಳ್ಳವನಾಗಿದ್ದಾನೆ.

(5) ಆತ್ಮನು ತನ್ನ ಸ್ವರೂಪವಿರುವಷ್ಟು ಕಾಲವೂ ಇರುವ ಭಾವರೂಪ ಅನಾತ್ಮ ಉಳ್ಳವನಾಗಿದ್ದಾನೆ.

(6) ಆತ್ಮನು ಸ್ವಜ್ಞಾನಾಬಾಧ್ಯ ಅನಾತ್ಮ ಉಳ್ಳವನಾಗಿದ್ದಾನೆ.

(7) ಆತ್ಮನು ಸ್ವಜ್ಞಾನಾಬಾಧ್ಯ ಭಾವರೂಪ ಅನಾತ್ಮ ಉಳ್ಳವನಾಗಿದ್ದಾನೆ.

ಈ ಎಲ್ಲ ಅನುಮಾನಗಳಿಗೂ ಪದಾರ್ಥತ್ವವು ಅಥವಾ ಭಾವತ್ವವು ಹೇತು. ಘಟವು ದೃಷ್ಟಾಂತ. ಏಕೆಂದರೆ ಘಟವು ತನ್ನ ಸ್ವರೂಪವಿರುವಷ್ಟು ಕಾಲವೂ ಅನಾತ್ಮವಾದ ಅಥವಾ ಅನಾತ್ಮ ಭಾವವಾದ ಅಥವಾ ಸ್ವಜ್ಞಾನಾಬಾಧ್ಯವಾದ ಅಥವಾ ಸ್ವಜ್ಞಾನಾಬಾಧ್ಯಭಾವವಾದ ಪಟದಿಂದ ಕೂಡಿದೆ.

ಪದಾರ್ಥತ್ವವು ಪದಜನ್ಯ ಪ್ರತೀತಿವಿಷಯತ್ವವೆ. ಅದು ನಿಸ್ವರೂಪವಾದ ಅತ್ಯಂತಾಸತ್ತಿನಲ್ಲಿದೆ. ಅದಕ್ಕೆ ಸ್ವರೂಪವಿಲ್ಲ. ತನ್ನ ಸ್ವರೂಪವಿರುವಷ್ಟು ಕಾಲವೂ ಇರುವ ಅನಾತ್ಮದಿಂದ ಯುಕ್ತವಾಗಿ ಇರುವುದೆಂಬ ಸಾಧ್ಯವಿಲ್ಲ, ವ್ಯಭಿಚಾರ ಎಂದು ಆಕ್ಷೇಪ ಬಂದರೆ, ಭಾವತ್ವಾತ್ ಎಂದು ಹೇತು. ಇದು ನಿಸ್ವರೂಪವಾದ ಅನಾತ್ಮದಲ್ಲಿಲ್ಲ. ವ್ಯಭಿಚಾರವಿಲ್ಲ.

**ವಿಮತಾ ಬಂಧನಿವೃತ್ತಿಃ ಸ್ವಪ್ರತಿಯೋಗಿ ವಿಷಯವಿಷಯಕ ಜ್ಞಾನಾಬಾಧ್ಯ ಅನಾತ್ಮಸಮಾನಕಾಲೀನಾ, ಉಕ್ತಜ್ಞಾನಾಬಾಧ್ಯಭಾವರೂಪ ಅನಾತ್ಮಸಮಾನಕಾಲೀನಾ ವಾ। ಬಂಧನಿವೃತ್ತಿತ್ವಾತ್। ನಿಗಡಬಂಧ ನಿವೃತ್ತಿವದಿತ್ ಇತ್ಯಾದೀನಿ ದ್ರಷ್ಟವ್ಯಾನಿ।**

ವಿಮತವಾದ ಬಂಧನಿವೃತ್ತಿಯು ತನ್ನ ಪ್ರತಿಯೋಗಿಯಾದ ಬಂಧಕ್ಕೆ ವಿಷಯನಾದ, ಅಂದರೆ ಬಧ್ಯನಾದ ಆತ್ಮನ ಜ್ಞಾನದಿಂದ ಬಾಧ್ಯವಾಗದ ಅನಾತ್ಮಕ್ಕೆ ಸಮಕಾಲೀನವಾಗಿದೆ. ಅಥವಾ ಆ ಜ್ಞಾನದಿಂದ ಬಾಧ್ಯವಾಗದ ಭಾವರೂಪ ಅನಾತ್ಮಕ್ಕೆ ಸಮಕಾಲೀನವಾಗಿದೆ. ಬಂಧನಿವೃತ್ತಿಯಾದ್ದರಿಂದ, ನಿಗಡ ಬಂಧನಿವೃತ್ತಿಯಂತೆ ಇತ್ಯಾದಿ ಅನುಮಾನಗಳಿವೆ. ಇವು ಸಾಮಾನ್ಯತಃ ಅನಾತ್ಮಪದಾರ್ಥ ಸತ್ಯತ್ವವಿಷಯದಲ್ಲಿ ಸಾಧಕ.

ನಿಗಡ ಬಂಧ ನಿವೃತ್ತಿಗೆ ಸ್ವಪ್ರತಿಯೋಗಿಯು ನಿಗಡಬಂಧ. ಅದಕ್ಕೆ ವಿಷಯ ಅಂದರೆ ಬಧ್ಯನಾಗುವವನು ಅಪರಾಧಿ. ಅವನ ವಿಷಯಕವಾದ ಜ್ಞಾನದಿಂದ ಘಟಾದಿ ಬಾಧ್ಯವಾಗುವುದಿಲ್ಲ. ಅಂಥ ಅಬಾಧ್ಯವಾದ, ಅಥವಾ ಅಬಾಧ್ಯಭಾವರೂಪವಾದ ಅನಾತ್ಮವು ಘಟಾದಿ. ಅದಕ್ಕೆ ಸಮಕಾಲೀನವಾಗಿದೆ, ನಿಗಡ ಬಂಧ ನಿವೃತ್ತಿ. ಅಜ್ಞಾನಬಂಧನಿವೃತ್ತಿಯೂ ಹಾಗೇ ತನಗೆ ವಿಷಯನಾದ, ಅಂದರೆ ಬಧ್ಯನಾದ ಆತ್ಮನ ವಿಷಯಕವಾದ ಜ್ಞಾನದಿಂದ ಬಾಧ್ಯವಾಗದ ಯಾವುದಾದರೂ ಅನಾತ್ಮಕ್ಕೆ ಅಜ್ಞಾನಬಂಧನಿವೃತ್ತಿಯು ಸಮಕಾಲೀನವಾಗಬೇಕು. ಘಟಾದಿ ಅನಾತ್ಮವು ಆತ್ಮಜ್ಞಾನದಿಂದ ಅಬಾಧ್ಯವಾದರೆ ಮಾತ್ರ ತತ್ಸಮಾನಕಾಲೀನವಾದೀತು ಅಜ್ಞಾನ ಬಂಧನಿವೃತ್ತಿ. ಅಥವಾ ಅಭಾವದ್ವೈತವಾದಿ ಮಂಡನ ರೀತಿಯಿಂದ ಉಕ್ತಜ್ಞಾನಬಾಧ್ಯಭಾವರೂಪ ಅನಾತ್ಮ ಪದಾರ್ಥಕ್ಕೆ ಬಂಧನಿವೃತ್ತಿಯು ಸಮಕಾಲೀನವೆಂದು ಸಾಧನೆ ಮಾಡಬಹುದು.

**ವಿಶಿಷ್ಟಾನಾತ್ಮಸತ್ಯತ್ವೇ ತು—**

**(1)ಆತ್ಮಧೀಃ ನ ಸ್ವವಿಷಯವಿಷಯಕಧೀಬಾಧ್ಯಾ ಧೀತ್ವಾತ್ ಶುಕ್ತಿಧೀವತ್ ।**

'ವಿಶಿಷ್ಟ ಅನಾತ್ಮಸತ್ಯತ್ವ' ಎಂದರೆ ಮಿಥ್ಯಾತ್ವಾಧಿಕರಣತಾವಚ್ಛೇದಕವಾದ ಅನಾತ್ಮತ್ವಕ್ಕೆ ವ್ಯಾಪ್ಯವಾದ ಘಟತ್ವಾದಿಧರ್ಮ ಪುರಸ್ಕಾರೇಣ 'ಘಟೋ ಮಿಥ್ಯಾ' ಎಂದು ಮುಂತಾಗಿ ಹೇಳುವ ಘಟಾದಿ ಅನಾತ್ಮಸತ್ಯತ್ವ. ಅದನ್ನು ಸಾಧಿಸುವ ಅನುಮಾನಗಳು—

ಆತ್ಮಜ್ಞಾನವು ಸ್ವವಿಷಯ ವಿಷಯಕ ಜ್ಞಾನದಿಂದ ಬಾಧ್ಯವಲ್ಲ. ಜ್ಞಾನವಾದ್ದರಿಂದ, ಶುಕ್ತಿಜ್ಞಾನ ದಂತೆ, ಶುಕ್ತಿಜ್ಞಾನವು ಸ್ವವಿಷಯ ಶುಕ್ತಿವಿಷಯಕವಾದ ಶುಕ್ತಿಜ್ಞಾನದಿಂದ ಬಾಧ್ಯವಾಗುವುದಿಲ್ಲ. ಹಾಗೇ ಚರಮವೃತ್ತಿರೂಪವಾದ ಆತ್ಮಜ್ಞಾನವು ಸ್ವವಿಷಯ ಆತ್ಮವಿಷಯಕವಾದ ಆತ್ಮಜ್ಞಾನದಿಂದ, ಅಂದರೆ ತನ್ನಿಂದ ತಾನೇ ಕತಕರಜದಂತೆ ಬಾಧ್ಯವಾಗುವುದಿಲ್ಲ, ಎಂದು ಆತ್ಮವಿಷಯ ಚರಮ ವೃತ್ತಿಗೆ ಅಬಾಧ್ಯತ್ವವನ್ನು ಸಾಧನೆ ಮಾಡುತ್ತಿದ್ದಾರೆ.

**(2) ಆತ್ಮಾಧಿಷ್ಠಾನಕ ಭ್ರಮಹೇತುಃ ನ ಸ್ವಕಾರ್ಯಭ್ರಮಾಧಿಷ್ಠಾನ ಜ್ಞಾನಬಾಧ್ಯಃ । ಭ್ರಮ ಹೇತುತ್ವಾತ್ । ಯದೇವಂ ತದೇವಂ । ಯಥಾ ಶುಕ್ತ್ಯಧಿಷ್ಠಾನಕ ಭ್ರಮಹೇತುಃ ಕಾಚಾದಿಃ । ಶುಕ್ತ್ಯಜ್ಞಾನಮಪಿ ಪಕ್ಷತುಲ್ಯಂ ।**

ಆತ್ಮಾಧಿಷ್ಠಾನಕ ಭ್ರಮಕ್ಕೆ ಹೇತುವಾದ ಅಜ್ಞಾನವು ಸ್ವಕಾರ್ಯವಾದ ಭ್ರಮಕ್ಕೆ ಅಧಿಷ್ಠಾನವಾದ ಆತ್ಮನ ಜ್ಞಾನದಿಂದ ಬಾಧ್ಯವಲ್ಲ; ಭ್ರಮಹೇತುವಾದ್ದರಿಂದ, ಶುಕ್ತ್ಯಧಿಷ್ಠಾನಕಭ್ರಮ ಹೇತುವಾದ ಕಾಚಾದಿಯಂತೆ.

ಆತ್ಮನಲ್ಲಿ ಜಗದ್ ಭ್ರಮಕ್ಕೆ ಹೇತುವಾದ ಅಜ್ಞಾನವು ಕೂಡ, ಜಗತ್ತಿನೊಂದಿಗೇ ಆತ್ಮಜ್ಞಾನದಿಂದಲೇ ಬಾಧ್ಯವಾಗುವುದೆಂದು ಅದ್ವೈತಿ ಹೇಳುತ್ತಾನೆ. ಬಾಧ್ಯವಾಗುವುದಿಲ್ಲವೆಂದು ಸಾಧಿಸುತ್ತಾರೆ. ಶುಕ್ತಿಯಲ್ಲಿ ರೂಪ್ಯಭ್ರಮಹೇತುವಾದ ಅಜ್ಞಾನವು ಶುಕ್ತಿಜ್ಞಾನದಿಂದ ಬಾಧ್ಯವಲ್ಲ. ಅದು ಸತ್ಯವೆ. ಅದ್ವೈತಿಯು 'ಶುಕ್ತ್ಯಜ್ಞಾನದಲ್ಲಿ ತತ್ಕಾರ್ಯಭ್ರಮಾದಿಷ್ಠಾನಭೂತ ಶುಕ್ತಿಜ್ಞಾನದಿಂದ ಬಾಧ್ಯತ್ವವಿರುವುದರಿಂದ ಸಾಧ್ಯಾಭಾವವಿದೆ, ಹೇತು ವ್ಯಭಿಚರಿತವಾಗಿದೆ' ಎನ್ನುತ್ತಾನೆ. ಅದಕ್ಕೆ ಶುಕ್ತ್ಯಜ್ಞಾನವು ಪಕ್ಷತುಲ್ಯವೆಂದು, ವ್ಯಭಿಚಾರವು ದೋಷವಲ್ಲವೆಂದು ಹೇಳುತ್ತಾರೆ.

**(3) ಬ್ರಹ್ಮಾನ್ಯದನಾದಿ ಪರಮಾರ್ಥಸತ್ । ಅನಾದಿತ್ವಾತ್ ಬ್ರಹ್ಮವತ್ । ದೋಷಜನ್ಯ ಜ್ಞಾನಾತ್ ಪೂರ್ವಂ ಸತೋಽಪಿ ಅನಾದ್ಯಧ್ಯಸ್ತತ್ವೇ ಬ್ರಹ್ಮಾಪ್ಯನಾದ್ಯನಂತಾಧ್ಯಸ್ತಂ ಸ್ಯಾತ್ ।**

ಬ್ರಹ್ಮಾನ್ಯ ಅನಾದಿಯಾದ ಅಜ್ಞಾನವು ಪಾರಮಾರ್ಥಿಕ ಸತ್ಯವಾಗಿದೆ, ಅನಾದಿಯಾದ್ದರಿಂದ, ಬ್ರಹ್ಮದಂತೇ. ದೋಷಜನ್ಯ ಜ್ಞಾನಕ್ಕಿಂತ ಪೂರ್ವದಲ್ಲಿಯೇ ಅನಾದಿ ಅಜ್ಞಾನವಿದ್ದರೂ ಅದು ಅನಾದಿಯಿಂದಲೇ ಅಧ್ಯಸ್ತವೆಂದು ಅದ್ವೈತಿ ಹೇಳುತ್ತಾನೆ. ಇದು ವ್ಯಾಹತ. ಅಧ್ಯಾಸವೆಂದರೆ

ದೋಷಜನ್ಯಜ್ಞಾನ. ಅದಕ್ಕಿಂತ ಪೂರ್ವದಲ್ಲಿ ಇರುವ ಅಜ್ಞಾನವು ಅನಾದಿ ಅಧ್ಯಸ್ತವೆಂದರೆ ಬ್ರಹ್ಮವು ದೋಷಜನ್ಯಜ್ಞಾನದ ಉತ್ಪತ್ತಿಗೆ ಪೂರ್ವದಲ್ಲಿಯೂ ಇದೆ, ಮತ್ತು ಅದರ ನಾಶಾನಂತರವೂ ಇದೆ, ಆದರಿಂದ, 'ಅನಾದಿಯಿಂದ ಅನಂತಕಾಲದವರೆಗೂ ಬ್ರಹ್ಮವು ಅಧ್ಯಸ್ತ' ಎಂದೇಕೆ ಹೇಳಬಾರದು? ಎನ್ನುತ್ತಾರೆ.

ಇಲ್ಲಿ ಅದ್ವೈತಿ ಹೇಳಬಹುದು—'ಅನಾದ್ಯಧ್ಯಸ್ತತ್ವ'ವೆಂದರೆ ಅನಾದಿಭ್ರಮಪ್ರವಾಹ ವಿಷಯತ್ವ' ಲಾಘವದಿಂದ ಒಂದೇ ಅಜ್ಞಾನ ಭ್ರಮಪ್ರವಾಹವಿಷಯವಾಗಿದೆ ಎನ್ನುತ್ತೇನೆ. ಅನಾದಿಯಾದ ಈ ಅವಿದ್ಯಾರೂಪದೋಷಜನ್ಯಜ್ಞಾನ ಪ್ರವಾಹಕ್ಕೆ ಪೂರ್ವವೆಂಬುದೇ ಇಲ್ಲ. 'ಪೂರ್ವದಲ್ಲಿ ಅಜ್ಞಾನವಿದೆ, ಬ್ರಹ್ಮವಿದೆ, ಎನ್ನಲಾಗದು' ಎಂದು. ಇದು ಸರಿಯಲ್ಲ. ಜ್ಞಾನಕ್ಕೆ ಪೂರ್ವದಲ್ಲಿಯೇ ವಿಷಯವು ಇದ್ದರೆ ಅದರಿಂದ ಜ್ಞಾನವು 'ಭ್ರಮ'ವೆನಿಸದು ಎಂದು ನಿಯಮ. ಆದರಿಂದ, ಅಜ್ಞಾನವು ಜ್ಞಾನಕ್ಕಿಂತ ಪೂರ್ವದಲ್ಲಿರುವುದರಿಂದಲೇ ಜ್ಞಾನವು ಭ್ರಮ ವಿಷಯ ವಾಗದು. ಆಗುವುದಾದರೆ ಅಜ್ಞಾನದಂತೇ ಬ್ರಹ್ಮವೂ ಅಧ್ಯಸ್ತವಾದೀತು. ಅದಕ್ಕೆ ಅಧಿಷ್ಠಾನವಿಲ್ಲ' ಎಂದರೆ ಅಜ್ಞಾನವೇ ಅಧಿಷ್ಠಾನವಾಗಲಿ, ಎನ್ನುತ್ತೇವೆ.

**(4) ಬ್ರಹ್ಮ ಕಾಲಾದ್ಯಸಂಬದ್ಧಂ ನಾವತಿಷ್ಠತೇ, ಪದಾರ್ಥತ್ವಾತ್ ಘಟವತ್ ।**

**(5) ಬ್ರಹ್ಮಾನ್ಯದ್ ವೇದ್ಯೈಕಗಮ್ಯಂ ಧರ್ಮಾದಿ ಪರಮಾರ್ಥಸತ್, ಶ್ರುತಿತಾತ್ಪರ್ಯವಿಷಯತ್ವಾತ್ ಬ್ರಹ್ಮವತ್ ।**

ಬ್ರಹ್ಮವು ಕಾಲ ದೇಶ ಸಂಬಂಧ ರಹಿತವಾಗಿ ಇರುವುದಿಲ್ಲ. ಪದಾರ್ಥವಾದ್ದರಿಂದ ಘಟದಂತೆ. ಕಾಲ ದೇಶಗಳೂ ಬ್ರಹ್ಮಾನ್ಯವಾಗಿದ್ದು ಮಿಥ್ಯಾ ಆಗಿರುವುದರಿಂದ ಬ್ರಹ್ಮಜ್ಞಾನ ಬಂದಾಗ ನಾಶವಾಗುತ್ತವೆ ಎಂದು ಅದ್ವೈತಿ ಹೇಳುತ್ತಾನೆ. ಹಾಗಿದ್ದರೆ ಬ್ರಹ್ಮವು ಬ್ರಹ್ಮಜ್ಞಾನ ಬಂದಾಗ ಕಾಲದೇಶ ಸಂಬಂಧರಹಿತವಾಗಿದೆ ಎಂದಂತಾಗುವುದು. ವಸ್ತುತಃ 'ಕಾಲದೇಶಗಳಿಲ್ಲ' ಎಂದರೆ, 'ಯಾವಾಗ ಯಾವ ಕಾಲದಲ್ಲಿ ಕಾಲವಿಲ್ಲ? ಬ್ರಹ್ಮಜ್ಞಾನೋತ್ತರಕಾಲದಲ್ಲಿ ಕಾಲ ಇಲ್ಲ' ಎಂದು ಹೇಳುವುದು ವ್ಯಾಹತವಾಗುತ್ತದೆ. ಆದರಿಂದ ಕಾಲ ದೇಶಗಳಿಗೆ ಪರಿಚ್ಛೇದ, ಎಲ್ಲೆ ಇಲ್ಲ. ಕಾಲದೇಶಗಳಲ್ಲಿ ಬ್ರಹ್ಮನಿಗೂ ಪರಿಚ್ಛೇದವಿಲ್ಲ.

ಬ್ರಹ್ಮಾನ್ಯವಾದ, ವೇದ್ಯೈಕಗಮ್ಯವಾದ ಧರ್ಮಾದಿಯು ಪಾರಮಾರ್ಥಿಕಸತ್ಯ. ಶ್ರುತಿ ತಾತ್ಪರ್ಯವಿಷಯವಾದ್ದರಿಂದ ಬ್ರಹ್ಮನಂತೆ.



## साक्षिवेद्यं सुखादि परमार्थसत्, अनिषेध्यत्वेन दोषाजन्यज्ञानं प्रति साक्षाद्विषयत्वात् आत्मवत् ।

**विमतं परमार्थसत्, स्वविषयकसाक्षात्कारात्पूर्वभावित्वात् आत्मवत् । नचाऽसिद्धिः, त्वन्मतेऽपि प्रतिकर्मव्यवस्थार्थं स्वविषयसाक्षात्कारात्पूर्वं घटादेर्भावात् ।**

**अन्योन्याभावव्यतिरिक्तैतद्धट समानाधिकरणैतद्धट प्रतियोगिकाभावत्वं एतद्धट समान कालीनावृत्ति, अन्योन्याभाव व्यतिरिक्तैतद्धट समानाधिकरणैतद्धट प्रतियोगिकाभाव मात्र वृत्तित्वात्, एतद्धट प्रतियोगिक प्रागभावत्ववदित्याद्यूह्यम् ।**

**व्यधिकरणधर्मावच्छिन्नाभावपक्षे व्यधिकरणधर्मानवच्छिन्नेति विशेषणीयम् । अनेन च स्वसमानाधिकरणः स्वसमानकालीनः अन्योन्याभाव व्यतिरिक्तो योऽभावः तद्प्रतियोगित्वरूप सत्त्वसिद्धिः ।**

**अत्र चानुकूलतर्का वक्ष्यन्ते इति नोपाध्याभाससाम्यादिशङ्का । तथाच—**

**असत्प्रातीतिकान्यत्वात्प्रमाणविषयत्वतः ।**
**अर्थक्रियाकारितादेर्विश्वं सत्यमिति स्थितम् ।।**

---

एतद्धटान्योन्याभावमादाय बाधवारणायाह **अन्योन्याभावव्यतिरिक्तेति ।** उभयसिद्धैतद्धटप्रतियोगिकात्यन्ताभावमादाय बाधवारणायाह **एतद्धटसमानाधिकरणेति ।।** अन्यप्रतियोगिकात्यन्ताभावमादाय बाधवारणायाह **एतद्धटप्रतियोगिकेति ।।** एतद्धटान्योन्याभावत्वे व्यभिचारवारणाय **अन्योन्येति ।** एतद्धटात्यन्ताभावत्वे व्यभिचारवारणाय **एतद्धटसमानाधिकरणेति ।** संसर्गाभावत्वे व्यभिचारवारणाय **मात्रेति ।** अन्यप्रतियोगिकात्यन्ताभावत्वे व्यभिचारवारणाय **एतद्धटप्रतियोगिकेति ।** इत्याद्यूह्यमित्यादिपदात् संसर्गाभावत्वं प्रतियोगिकालान्यकालीनमात्रवृत्ति संसर्गाभावमात्रवृत्तित्वात् प्रागभावत्ववदित्यादेः परिग्रहः । **व्यधिकरणेति ।** इदमुपलक्षणम् । व्यधिकरणसंबन्धेनाभावाभ्युपगमपक्षे

तदनवच्छिन्नेत्यपि द्रष्टव्यम् । **विशेषणीयमिति ।** पक्षीकृतमुक्ताभावत्वं हेतूकृतमुक्ताभावमात्रवृत्तित्वं चेति शेषः । नन्वत्र कादाचित्कमात्रवृत्तित्वमुपाधिः । संसर्गाभावत्वं घटसमानाधिकरण घटसमानकालीन घटप्रतियोगिकाभाववृत्ति । साक्षादभावविभाजकोपाधित्वात् अन्योन्याभावत्ववदित्याभाससाम्यं चेत्यत आह **अत्र चेति ।** आदिशब्देन प्रतिकूलतर्कपराहत्यादिपरिग्रहः । उक्तमर्थं संगृह्णाति **तथाचेति ।**



ಸಾಕ್ಷಿವೇದ್ಯಂ ಸುಖಾದಿ ಪರಮಾರ್ಥಸತ್, ಅನಿಷೇಧ್ಯತ್ವೇನ ದೋಷಾಜನ್ಯಜ್ಞಾನಂ ಪ್ರತಿ ಸಾಕ್ಷಾದ್ವಿಷಯತ್ವಾತ್ ಆತ್ಮವತ್ ।

ವಿಮತಂ ಪರಮಾರ್ಥಸತ್, ಸ್ವವಿಷಯಕಸಾಕ್ಷಾತ್ಕಾರಾತ್ಪೂರ್ವಭಾವಿತ್ವಾತ್ ಆತ್ಮವತ್ । ನಚಾಸಿದ್ಧಿಃ, ತ್ವನ್ಮತೇಽಪಿ ಪ್ರತಿಕರ್ಮವ್ಯವಸ್ಥಾರ್ಥಂ ಸ್ವವಿಷಯ ಸಾಕ್ಷಾತ್ಕಾರಾತ್ಪೂರ್ವಂ ಘಟಾದೇರ್ಭಾವಾತ್ ।

ಅನ್ಯೋನ್ಯಾಭಾವವ್ಯತಿರಿಕ್ತೈತದ್ಘಟಸಮಾನಾಧಿಕರಣೈತದ್ಘಟಪ್ರತಿಯೋಗಿಕಾಭಾವತ್ವಂ ಏತದ್ಘಟಸಮಾನಕಾಲೀನಾವೃತ್ತಿ, ಅನ್ಯೋನ್ಯಾಭಾವವ್ಯತಿರಿಕ್ತೈತದ್ಘಟಸಮಾನಾಧಿಕರಣೈತದ್ಘಟ ಪ್ರತಿಯೋಗಿಕಾಭಾವಮಾತ್ರವೃತ್ತಿತ್ವಾತ್, ಏತದ್ಘಟಪ್ರತಿಯೋಗಿಕಪ್ರಾಗಭಾವತ್ವವದಿತ್ಯಾದ್ಯೂಹ್ಯಂ ।

(3) ಸಾಕ್ಷಿವೇದ್ಯವಾದ ಸುಖಾದಿಯು ಪಾರಮಾರ್ಥಿಕಸತ್ಯವಾಗಿದೆ. ಅನಿಷೇಧ್ಯವಾಗಿ ದೋಷಾಜನ್ಯವಾದ ಜ್ಞಾನಕ್ಕೆ ಸಾಕ್ಷಾದ್ ವಿಷಯವಾದ್ದರಿಂದ, ಆತ್ಮನಂತೆ.

(4) ವಿಮತವಾದ ಬ್ರಹ್ಮಭಿನ್ನವು ಪಾರಮಾರ್ಥಿಕ ಸತ್ಯ. ಸ್ವವಿಷಯ ಸಾಕ್ಷಾತ್ಕಾರಕ್ಕಿಂತ ಪೂರ್ವದಲ್ಲಿಯೂ ಅಸ್ತಿತ್ವದಲ್ಲಿರುವುದರಿಂದ, ಆತ್ಮನಂತೆ. ಅಸಿದ್ಧಿ ದೋಷವನ್ನು ಇಲ್ಲಿ ಹೇಳುವಂತಿಲ್ಲ. ನಿನ್ನ ಮತದಲ್ಲಿಯೂ ಪ್ರತಿಕರ್ಮ ವ್ಯವಸ್ಥೆಗಾಗಿ ಸ್ವವಿಷಯ ಸಾಕ್ಷಾತ್ಕಾರಕ್ಕಿಂತ ಪೂರ್ವದಲ್ಲಿಯೂ ಘಟಾದಿಗಳಿಗೆ ಅಸ್ತಿತ್ವವಿದೆ ಎಂದು ಒಪ್ಪಿರುವುದರಿಂದ.

(5) ಅನ್ಯೋನ್ಯಾಭಾವ ವ್ಯತಿರಿಕ್ತ– ಏತದ್‌ಘಟ ಸಮಾನಾಧಿಕರಣ–ಏತದ್‌ಘಟ ಪ್ರತಿಯೋಗಿಕ–ಅಭಾವತ್ವವು ಏತದ್‌ಘಟ ಸಮಾನ ಕಾಲೀನಾವೃತ್ತಿಯಾಗಿದೆ. ಅನ್ಯೋನ್ಯಾಭಾವ ವ್ಯತಿರಿಕ್ತ ಏತದ್‌ಘಟ ಸಮಾನಾಧಿಕರಣ ಏತದ್‌ಘಟ ಪ್ರತಿಯೋಗಿಕ ಅಭಾವ ಮಾತ್ರ ವೃತ್ತಿಯಾದ್ದರಿಂದ. ಏತದ್‌ಘಟ ಪ್ರತಿಯೋಗಿಕ ಪ್ರಾಗಭಾವತ್ವದಂತೆ. ಏತದ್‌ಘಟ ಪ್ರಾಗಭಾವವು ಅನ್ಯೋನ್ಯಾಭಾವ ವ್ಯತಿರಿಕ್ತ–ಏತದ್‌ಘಟ ಸಮಾನಾಧಿಕರಣವಾದರೂ ಘಟ ಸಮಾನಕಾಲೀನ

ವಲ್ಲದ್ದರಿಂದ ಏತದ್‌ಘಟ ಪ್ರತಿಯೋಗಿಕ ಪ್ರಾಗಭಾವತ್ವವು ಘಟಸಮಾನಾಧಿಕರಣ ಘಟ ಸಮಾನಕಾಲೀನ ಅಭಾವದಲ್ಲಿ ಇಲ್ಲ. ಹಾಗೇ ಘಟಾತ್ಯಂತಾಭಾವವೂ ಭಿನ್ನಕಾಲದಲ್ಲಿ ಕಪಾಲದಲ್ಲಿ ಘಟಸಮಾನಾಧಿಕರಣವಾದರೂ ಸಮಾನ ಕಾಲದಲ್ಲಿ ಘಟಸಮಾನಾಧಿಕರಣವಾಗುವುದಿಲ್ಲ. ಅದರಿಂದ ಸ್ವಸಮಾನಾಧಿಕರಣ ಸ್ವಸಮಾನಕಾಲೀನ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವವು ಘಟದಲ್ಲಿ ಬರುವುದಿಲ್ಲ. ಮಿಥ್ಯಾತ್ವಾಭಾವರೂಪ ಸತ್ಯತ್ವವು ಸಿದ್ಧವಾಗುವುದು.

ಹೀಗೇ ಸಂಸರ್ಗಾಭಾವತ್ವವು ಸಂಸರ್ಗಾಭಾವ ಮಾತ್ರವೃತ್ತಿಯಾದ್ದರಿಂದ ಪ್ರತಿಯೋಗಿ ಕಾಲಾನ್ಯ ಕಾಲೀನ ಮಾತ್ರವೃತ್ತಿ, ಪ್ರಾಗಭಾವತ್ವದಂತೆ', ಇತ್ಯಾದಿ ಅನುಮಾನಗಳನ್ನು ಇಟ್ಟುಕೊಳ್ಳಬೇಕು. ಪ್ರಪಂಚಾಭಾವವು ಪ್ರತಿಯೋಗಿ ಪ್ರಪಂಚಕಾಲದಲ್ಲಿಯೇ ಇರುತ್ತದೆ. ಅದರಿಂದ ಪ್ರಪಂಚಮಿಥ್ಯಾ ಎನ್ನುತ್ತಾನೆ, ಅದ್ವೈತಿ. ಅದು ಸರಿಯಲ್ಲ. ಪ್ರತಿಯೋಗಿಕಾಲಾನ್ಯ ಕಾಲದಲ್ಲಿಯೇ ಅಭಾವವಿರುತ್ತದೆ.

**ವ್ಯಧಿಕರಣಧರ್ಮಾವಚ್ಛಿನ್ನಾಭಾವಪಕ್ಷೇ ವ್ಯಧಿಕರಣಧರ್ಮಾನವಚ್ಛಿನ್ನೇತಿ ವಿಶೇಷಣೀಯಮ್ । ಅನೇನ ಚ ಸ್ವಸಮಾನಾಧಿಕರಣಃ ಸ್ವಸಮಾನಕಾಲೀನಃ ಅನ್ಯೋನ್ಯಾಭಾವವ್ಯತಿರಿಕ್ತೋ ಯೋಽಭಾವಃ ತದಪ್ರತಿಯೋಗಿತ್ವರೂಪಸತ್ತ್ವಸಿದ್ಧಿಃ । ಅತ್ರ ಚಾಽನುಕೂಲತರ್ಕಾ ವಕ್ಷ್ಯಂತೇ ಇತಿ ನೋಪಾಧ್ಯಾಭಾಸಸಾಮ್ಯಾದಿಶಂಕಾ ।**

ಯದ್ಯಪಿ ವ್ಯಧಿಕರಣಧರ್ಮಾವಚ್ಛಿನ್ನಾಭಾವವನ್ನು ಒಪ್ಪುವ ಪಕ್ಷದಲ್ಲಿ ಕಪಾಲದಲ್ಲಿ ಘಟವಿರುವ ಕಾಲದಲ್ಲಿಯೇ ಪಟತ್ವಾವಚ್ಛಿನ್ನ ಪ್ರತಿಯೋಗಿತಾಕ ಘಟಾಭಾವವೂ ಇರುವುದರಿಂದ ಕಪಾಲದಲ್ಲಿ ಅದು ಘಟಸಮಾನಾಧಿಕರಣ ಮತ್ತು ಘಟಕಾಲೀನವಾಗಬಹುದು. ಆಗ ಉಕ್ತ ಅಭಾವತ್ವದಲ್ಲಿ ಏತದ್ ಘಟ ಸಮಾನಕಾಲೀನ ಅವೃತ್ತಿತ್ವವಿಲ್ಲ ಎಂದು ಬಾಧ ಬಂದೀತು. ಅದಕ್ಕೆ ಅಭಾವತ್ವದಲ್ಲಿ ವ್ಯಧಿಕರಣ ಧರ್ಮಾನವಚ್ಛಿನ್ನತ್ವ ವಿಶೇಷಣವನ್ನು ಹಾಕಬೇಕು. ವ್ಯಧಿ ಕರಣಧರ್ಮಾನವಚ್ಛಿನ್ನ ಉಕ್ತ ಅಭಾವತ್ವವು ಏತದ್ ಘಟ ಸಮಾನಕಾಲೀನಾವೃತ್ತಿಯೇ ಆಗುವುದು.

ಈ ಎಲ್ಲ ಅನುಮಾನಗಳಿಗೆ ಅನುಕೂಲ ತರ್ಕಗಳನ್ನು ಮುಂದೆ ಹೇಳುತ್ತೇವೆ. ಅದರಿಂದ ಉಪಾಧಿ ಆಭಾಸಸಾಮ್ಯಾದಿ ದೋಷಗಳಿರುವುದಿಲ್ಲ.

**ತಥಾಚ**

**ಅಸತ್‌ಪ್ರಾತೀತಿಕಾನ್ಯತ್ವಾತ್ಪ್ರಮಾಣವಿಷಯತ್ವತಃ ।**
**ಅರ್ಥಕ್ರಿಯಾಕಾರಿತಾದೇರ್ವಿಶ್ವಂ ಸತ್ಯಮಿತಿ ಸ್ಥಿತಮ್ ॥**

ಅಸತ್ತಿಗಿಂತಲೂ ಪ್ರಾತಿಭಾಸಿಕಕ್ಕಿಂತಲೂ ಪ್ರಪಂಚವು ಅನ್ಯವಾದ್ದರಿಂದ, ಅಂದರೆ ಪಕ್ಷವಾದ ಪ್ರಪಂಚದಲ್ಲಿ 'ಪ್ರಾತಿಭಾಸಿಕತ್ವಾನಧಿಕರಣತ್ವೇ ಸತಿ ಅಸತ್ವಾನಧಿಕರಣತ್ವಾತ್ ಎಂಬ ಹೇತು ಬರುವುದರಿಂದ, ಪ್ರಮಾಣಗಳಿಗೆ ವಿಷಯವಾಗಿರುವುದರಿಂದ, ಅಂದರೆ, 'ಅನಿಷೇಧ್ಯತ್ವೇನ ಪ್ರಮಾಂ

ಪ್ರತಿ ಸಾಕ್ಷಾದ್ ವಿಷಯತ್ವಾತ್' ಎಂಬ ಹೇತು ಬರುವುದರಿಂದ, ಅರ್ಥಕ್ರಿಯಾಕಾರಿತ್ವಾದಿಗಳಿರುವುದರಿಂದ, ಅಂದರೆ, 'ಸಪ್ರಕಾರಕಾಬಾಧ್ಯಾರ್ಥಕ್ರಿಯಾಕಾರಿತ್ವಾತ್' ಎಂಬ ಹೇತು, 'ಆರೋಪಿತ ಮಿಥ್ಯಾತ್ವಕತ್ವಾತ್' 'ಕಲ್ಪಕರಹಿತ್ವಾತ್' ಇತ್ಯಾದಿ ಹೇತುಗಳೂ ಬರುವುದರಿಂದ 'ಪ್ರಪಂಚವು ಸತ್ಯ' ಎನ್ನುವ ನಮ್ಮ ಸಿದ್ಧಾಂತ ಸ್ಥಾಪಿತವಾಯಿತು.



## ವಿಶ್ವಮಿಥ್ಯಾತ್ವಸ್ಯ ಆಗಮಾದಿಬಾಧಃ

**किञ्च ''विश्वं सत्यं'' ''यच्चिकेत सत्यमित्तन्न मोघं'' ''याथातथ्यतोऽर्थान्व्यदधाच्छाश्वतीभ्यः समाभ्य'' इत्यादिश्रुतिभिः, ''असत्यमप्रतिष्ठन्ते जगदाहुरनीश्वर''मित्यादिस्मृतिभिः, ''नाभाव उपलब्धेः, वैधर्म्याच्च न स्वप्नादिवदि''त्यादिसूत्रैश्च बाधिता दृश्यत्वादयः ।**

---

**विश्वंसत्यमिति ।** विश्वं सत्यं मघवाना युवोरिदापश्चन प्रमिनन्ति व्रतं वाम् इतिश्रुतेरयमर्थः । हे मघवानौ युवयोः संबन्धि इदं विश्वं संकोचकाभावात् प्रत्यक्षादिसिद्धं सर्वं सत्यं ब्रह्मवदबाध्यम् । अत एव तादृशविश्वान्तर्गतत्वादेव वां व्रतं कर्मविशेषं आपश्चन अबभिमानिन्यो देवता अपि प्रमिनन्ति प्रमित्या विषयीकुर्वत इति ।

नतु— ''हे मघवानाविन्द्रौ विश्वं सर्वं वां व्रतं भवदर्थं व्रतं सत्यं सफलं, आपश्चन प्रमिनन्ति अबभिमानिन्यो देवता अपि सफलत्वेन जानन्ति'' इति वा, ''आचरन्ति'' इति वा ''यद्वो वयं प्रमिनाम व्रतानी''तिवत्— इत्यर्थः । युवोरिति पदवैयर्थ्यात् । सत्यशब्दरूढ्यर्थत्यागापत्तेश्च ।।

**यच्चिकेत सत्यमित्तन्न मोघमिति** श्रुतेरयमर्थः । पूर्ववाक्यगतसुपर्णशब्देन प्रकृतः परमात्मा यच्चकार तत्सत्यमेव । अत एव नमोघम्,स्वोचितार्थक्रियाकारीति ।

यत्तु ''यच्चिकेत सत्यमिदिति वाक्यान्न सत्यत्वसिद्धिः । यच्छब्दनिर्दिष्टस्य सत्यस्योद्देश्यत्वेन ग्रहैकत्ववत्तन्निष्ठसत्यत्वरूप धर्मस्याविवक्षितत्वात् । तन्न मोघमिति तद्वृत्तयोगेनामोघत्वलक्षणार्थक्रियाकारित्वस्यैव विधेयत्वात् । सत्यत्वस्यापि विधाने वाक्यभेदप्रसङ्गादिति ।'' तन्न । सत्यत्वस्य विधेयत्वेनोद्देश्यविशेषणत्वासिद्धेः, उद्देश्यविशेषणत्वेऽप्यसतः साधकत्वायोगेन विधेयामोघत्वनिर्वाहाय सत्यत्वस्य विवक्षणीयत्वाच्च । अत एव 'यस्योभावग्री

अनुगतावभिनिम्लोचेदभ्युदियाद्वा पुनराधेयं तस्य प्रायश्चित्तिरि'त्याहवनीय गार्हपत्याग्नि गतद्वित्वस्योद्देश्यविशेषणत्वेऽपि विवक्षा ।। **याथातथ्यत इति ।** अस्याः श्रुतेरयमर्थः । कविर्मनीषीति पूर्ववाक्यप्रतिपन्नः परमात्मा बहुवर्षानन्तरं अर्थान् पुनःपुनरबाधितांश्चकारेति ।

एतेन 'कविर्मनीषीतिश्रुत्या न विश्वसत्यत्वसिद्धिः । तत्प्रापकशब्दाभावात् । याथातथ्यशब्दस्य सत्येऽप्रसिद्धेः । तथाच 'धाता यथापूर्वमकल्पयदि'ति श्रुत्यन्तरानुसारेण परमात्मा बहुवत्सरेभ्योऽनन्तरं यथापूर्वमर्थान् असृजदिति तदर्थ' इति निरस्तम् । सत्यं तथ्यमृतं सम्यगिति कोशप्रसिद्धसत्यशब्दपर्यायतथ्यशब्दस्य वीप्सार्थकयथाशब्देन समासे स्वार्थिकतद्धिते च सत्यादिवृद्धौ याथातथ्यशब्दस्य निष्पत्त्या तस्याबाध्यपरत्वात् । असत्यमप्रतिष्ठन्त इति स्मृतौ असत्यत्वादिवादनिन्दनेन मिथ್यात्वाभावस्यैवावगमादिति भावः ।



**ಕಿಂಚ 'ವಿಶ್ವಂ ಸತ್ಯಂ' 'ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ' 'ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯ' ಇತ್ಯಾದಿ ಶ್ರುತಿಭಿಃ, 'ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ' ಇತ್ಯಾದಿ ಸ್ಮೃತಿಭಿಃ, 'ನಾಭಾವ ಉಪಲಬ್ಧೇಃ' 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಇತ್ಯಾದಿ ಸೂತ್ರೈಶ್ಚ ಬಾಧಿತಾ ದೃಶ್ಯತ್ವಾದಯಃ ।**

ವಿಶ್ವಂ ಸತ್ಯಂ ಮಘವಾನಾ ಯುವೋರಿದ್
ಆಪಶ್ಚನ ಪ್ರಮಿನಂತಿ ವ್ರತಂ ವಾಂ ।
ಅಚ್ಛೇಂದ್ರಾಬ್ರಹ್ಮಣಸ್ಪತೀ ಹವಿ-
ರ್ನೋರ್ಣ್ನಂ ಯುಜೇವ ವಾಜಿನಾ ಜಿಗಾತಂ ।। (ಋ.2.7.3)

ಹೇ 'ಮಘವಾನೌ ಇಂದ್ರಾಬ್ರಹ್ಮಣಸ್ಪತೀ'-ಅನ್ನಾಹುತಿಉಳ್ಳ ಇಂದ್ರ ಬೃಹಸ್ಪತಿನಾಮಕ ರೂಪದ್ವಯ ಯುಕ್ತನಾದ ಶ್ರೀಹರಿಯೆ, ಪ್ರತ್ಯಕ್ಷ ಸಿದ್ಧವಾಗಿರುವ 'ಯುವಯೋಃ ವಿಶ್ವಂ' ನಿಮ್ಮ ಈ ಎಲ್ಲ ಪ್ರಪಂಚವು 'ಸತ್ಯಂ ಇತ್'-ಬ್ರಹ್ಮದಂತೇ ಸರ್ವಥಾ ಅಬಾಧ್ಯವೇ ಆಗಿದೆ. 'ವಾಂ ವ್ರತಂ'-ನಿಮ್ಮ ಸೃಷ್ಟ್ಯಾದಿ ವ್ಯಾಪಾರವನ್ನು 'ಆಪಶ್ಚನ' ಜಲಾಭಿಮಾನಿ ದೇವತೆಗಳು ಕೂಡ 'ಪ್ರಮಿನಂತಿ' ಯಥಾರ್ಥವಾಗಿ ತಿಳಿಯುತ್ತಾರೆ. 'ಅನ್ನಂ ಹವಿಃ' ಅನ್ನಾಹುತಿ ಸ್ವೀಕರಿಸಲು 'ವಾಜಿನಾ ಇವ ಯುಜಾ' ವೇಗದ ಕುದುರೆಗಳಂತೆ ಜೊತೆಯಾಗಿ ಅಚ್ಛ ಜಿಗಾತಂ ವೇಗವಾಗಿ ಬನ್ನಿರಿ.

'ನಾವು ಮಾಡುವ ನಿಮ್ಮ ಆರಾಧನೆ ಸಫಲವಾಗಲಿ, ಸಫಲವಾಗುವುದೆಂದು ದೇವತೆಗಳು

ತಿಳಿಯುತ್ತಾರೆ. ಅಥವಾ ತಾವು ಆಚರಿಸುತ್ತಾರೆ' ಎಂದು ಅದ್ವೈತಿಗಳು ಗೌಣಾರ್ಥಮಾಡಿದ್ದಾರೆ. 'ಯದ್ವೋ ವಯಂ ಪ್ರಮಿನಾಮ ವ್ರತಾನಿ' ಎಂದು ಉದಾಹರಣವನ್ನು ತೋರಿಸುತ್ತಾರೆ. ಆದರೆ 'ಯುವೋಃ' ಎಂಬ ಶಬ್ದ ವ್ಯರ್ಥವಾಗುವುದು. 'ಸತ್ಯ' ಶಬ್ದಕ್ಕೆ ಸತ್ಯವೆಂಬ ರೂಢ್ಯರ್ಥ ಬಿಟ್ಟು ಸಫಲ ಎಂದು ಅರ್ಥೈಸುವುದಕ್ಕೆ ಏನೂ ಕಾರಣವಿಲ್ಲ. ಸಿದ್ಧಿಕಾರನು 'ಆಪಶ್ಚನ' ಎಂಬಲ್ಲಿ 'ಚನ' ಎಂಬ ಅವ್ಯಯವನ್ನು 'ಚ-ನ' ಎಂದು ಬಿಡಿಸಿ 'ಆಪಶ್ಚ' ದೇವತೆಗಳು ಕೂಡ 'ನ ಪ್ರಮಿನಂತಿ' ನಿಮ್ಮ ಆರಾಧನೆಯನ್ನು ಹಿಂಸಿಸುವುದಿಲ್ಲ. ಅಂದರೆ ಅನುಮೋದಿಸುತ್ತಾರೆ ಎಂದು ವ್ಯಾಖ್ಯಾನಿಸುತ್ತಾನೆ. 'ಏಕಪದ್ಯಂ ತು ಅಧ್ಯಾಪಕ ಸಂಪ್ರದಾಯ ಸಿದ್ಧಂ' ಚನ ಎಂಬುದು 'ಅಪಿ' ಅರ್ಥದ ಒಂದು ಅವ್ಯಯವೆಂದು ಸಂಪ್ರದಾಯದಲ್ಲಿದೆ ಎಂದೂ ಹೇಳುತ್ತಾನೆ. ಈ ಮಂತ್ರಕ್ಕೆ 'ಸ್ತೋತ್ರದಲ್ಲಿ ತಾತ್ಪರ್ಯವಿದೆ, ಅದು ಹೇಳುವ ಜಗತ್‌ಸತ್ಯತ್ವದಲ್ಲಿ ತಾತ್ಪರ್ಯವಿಲ್ಲ' ಎನ್ನುತ್ತಲೇ 'ಯದ್ಯತ್ ಗುಣಜಾತಂ ಸ್ತುತ್ಯಾ ಪ್ರತಿಪಾದ್ಯತೇ ತತ್ ಸರ್ವಂ ಯುವಯೋಃ ವಿದ್ಯಮಾನಮೇವ ನ ತ್ವಾರೋಪಿತಮಿತ್ಯರ್ಥಃ' ಎಂದೂ ವ್ಯಾಖ್ಯಾನಿಸುತ್ತಾನೆ. 'ಸ್ತುತಿಯಿಂದ ಪ್ರತಿಪಾದಿತವಾಗುವ ಗುಣಗಳೆಲ್ಲ ಸತ್ಯವೆ ಆರೋಪಿತವಲ್ಲ' ಎನ್ನುತ್ತಾನೆ.

ಶಾಕ್ಮನಾ ಶಾಕೋ ಅರುಣಃ ಸುಪರ್ಣಃ
ಆಯೋ ಮಹಃ ಶೂರಃ ಸನಾದನೀಳಃ ।
ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ
ವಸು ಸ್ಪಾರ್ಹಂ ಉತ ಜೇತೋತ ದಾತಾ ॥ (ಋ.8.1.17)

'ಶಕ್ಮನಾ ಶಾಕಃ' ಸ್ವಶಕ್ತಿಯಿಂದಲೆ ಎಲ್ಲ ಕರ್ಮಮಾಡಲು ಶಕ್ತ. 'ಅರುಣಃ' ಉದಿಸುವ ಸೂರ್ಯನಂತೆ ಕೆಂಬಣ್ಣದವನು. 'ಸುಪರ್ಣಃ' ಆನಂದಮಯ. 'ಆ' 'ಆಗಚ್ಛತಿ' ನಮ್ಮ ಆರಾಧನೆಯನ್ನು ಸ್ವೀಕರಿಸಲಿ ಬರುತ್ತಾನೆ. 'ಮಹೋ ಮಹಾನ್ ಶೂರಃ' ಮಹಾಶೂರನಾಗಿದ್ದಾನೆ. 'ಅನೀಳಃ' ತನಗಾಗಿ ಒಂದು ಮನೆ ಕಟ್ಟಿಕೊಳ್ಳುವವನಲ್ಲ. ಲಕ್ಷ್ಮ್ಯಾತ್ಮಕ ಧಾಮತ್ರಯದಲ್ಲಿಯೇ ಇರುತ್ತಾನೆ. 'ಯಚ್ಚಿಕೇತ' ಅವನು ಏನು ಸೃಷ್ಟಿ ಮಾಡುವನೋ ಅದು 'ಸತ್ಯಮಿತ್' ಸತ್ಯವೇ ಅಬಾಧ್ಯವೇ ಆಗಿದೆ. ಅದರಿಂದ 'ತನ್ನ ಮೋಘಂ' ಅದು ಮಿಥ್ಯಾ ಅಲ್ಲ. 'ಸ್ಪಾರ್ಹಂ ವಸು ಜೇತಾ' ತನಗೆ ಬೇಕಾದ್ದನ್ನೆಲ್ಲ ದಾನವರಿಂದ ಗೆದ್ದುಕೊಂಡೇ ಇದ್ದಾನೆ. 'ಉತ ದಾತಾ' ಭಕ್ತರಿಗೆ ಕೊಡುತ್ತಾನೆ. ಇಲ್ಲಿ ಸತ್ಯತ್ವವು ಅಮೋಘತ್ವೋಪಪಾದಕವಾದ್ದರಿಂದ ವಿವಕ್ಷಿತವೇ ಆಗಿದೆ.

'ಯಚ್ಚಿಕೇತ ಸತ್ಯಮಿತ್, ತತ್ ನ ಮೋಘಂ' 'ಸತ್ಯವಾದ ಯಾವುದನ್ನು ಈಶನು ಸೃಜಿಸಿದನೋ ಅದು ಮೋಘವಲ್ಲ, ಅರ್ಥಕ್ರಿಯಾಕಾರಿಯೆ ಎಂದು ಸತ್ಯತ್ವವು ಉದ್ದೇಶ್ಯ ವಿಶೇಷಣ. ಅವಿವಕ್ಷಿತ' ಎಂದರೆ—ಇದು ಸರಿಯಲ್ಲ.

'ಯಸ್ಯೋಭಾವಗ್ನೀ ಅನುಗತಾವಭಿನಿಮ್ಲೋಚೇತ್' ಆಹವನೀಯ ಗಾರ್ಹಪತ್ಯ

ಅಗ್ನಿಗಳೆರಡೂ ನಾಶವಾದರೆ ಪುನರಾಧಾನ ವಿಹಿತವಾಗಿದೆ. ಇಲ್ಲಿ 'ಉಭಾವಗ್ನೀ' ಎಂದು ದ್ವಿತ್ವವು ಉದ್ದೇಶ್ಯವಿಶೇಷಣವಾದರೂ ಪ್ರಾಯಶ್ಚಿತ್ತ ಯೋಗ್ಯತಾನಿವಾರ್ಹಕವಾಗಿ ವಿವಕ್ಷಿತವೇ ಆಗಿದೆ.

—ಹೀಗೆ ಜೈ.ಸೂತ್ರ (6.4.26)ರಲ್ಲಿ ಸಿದ್ಧಾಂತ ಮಾಡಿದ್ದಾರೆ. 'ಅಗ್ನೀ ಆದಧೀತ' ಎಂದು ಶತಪಥ ಬ್ರಾಹ್ಮಣವೂ ಎರಡು ಅಗ್ನ್ಯಾಧಾನಗಳನ್ನು ವಿಧಿಸಿದೆ.

ಕವಿರ್ಮನೀಷೀ ಪರಿಭೂಃ ಸ್ವಯಂಭೂಃ
ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ।

ಸರ್ವಜ್ಞನು ಮನಃಪ್ರೇರಕನು ಎಲ್ಲರನ್ನೂ ಮಣಿಸಿದವನು 'ಸ್ವಯಂಭೂಃ' ಸ್ವತಂತ್ರನಾಗಿ 'ಶಾಶ್ವತೀಭ್ಯಃ ಸಮಾಭ್ಯಃ' ಅನಂತಾನಂತ ಕಾಲಗಳಲ್ಲಿಯೂ 'ಯಾಥಾತಥ್ಯತಃ' ಸತ್ಯವಾದ 'ಅರ್ಥಾನ್' ಮಹದಾದಿ ತತ್ವಗಳನ್ನು 'ವ್ಯದಧಾತ್' ಸೃಜಿಸಿದನು.

ಸಿದ್ಧಿಕಾರನು 'ಯಾಥಾತಥ್ಯತಃ' 'ಯಥಾತಥಾ' ಪೂರ್ವಕಾಲದಲ್ಲಿ ಸೃಷ್ಟಿ ಮಾಡಿದಂತೇ ಸೃಷ್ಟಿ ಮಾಡಿದನು' ಎನ್ನುತ್ತಾನೆ. ಆದರೆ, 'ತಥ್ಯಂ ಸತ್ಯಮೃತಂ ಸಮ್ಯಕ್' ಎಂದು ಕೋಶ ಪ್ರಸಿದ್ಧವಾದ ಸತ್ಯಾರ್ಥಕ ತಥ್ಯಶಬ್ದಕ್ಕೆ ವೀಪ್ಸಾರ್ಥಕ ಯಥಾ ಶಬ್ದದಿಂದ ಸಮಾಸ ಮಾಡಿ ಸ್ವಾರ್ಥಿಕ ತದ್ಧಿತ ಪ್ರತ್ಯಯ ಮಾಡಿದರೆ ಆದಿವೃದ್ಧಿ. ಅಬಾಧ್ಯ ಎಂದರ್ಥ. ಇದನ್ನು 'ಸ್ತುತಿಪರ' ಎನ್ನುತ್ತಾನೆ ಸಿದ್ಧಿಕಾರ. ಅರ್ಥಪ್ರಕಾಶನ ಸಾಮರ್ಥ್ಯರೂಪ ಲಿಂಗದಿಂದ ಮಂತ್ರಗಳಿಗೆ ವಿನಿಯೋಗ ಸಿದ್ಧವಾಗುವುದು ಮೀಮಾಂಸಾ ಶಾಸ್ತ್ರ ಸಿದ್ಧವಾಗಿದೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದೂ ಸ್ತುತಿಪರವೆ. 'ಸತ್ಯ ಜ್ಞಾನ ಅನಂತ ಸ್ವರೂಪವಾದ್ದರಿಂದ ಉತ್ಕೃಷ್ಟವಾದ್ದರಿಂದ ಬ್ರಹ್ಮವು ಜ್ಞೇಯ' ಎಂದು. ಸ್ತುತಿಪರವಾಕ್ಯದಲ್ಲಿ ಅರ್ಥಸತ್ವದಲ್ಲಿಯೂ ತಾತ್ಪರ್ಯವನ್ನು ಒಪ್ಪಿದರೆ ವಾಕ್ಯಭೇದದೋಷ ಬರುತ್ತದೆ ಎನ್ನುತ್ತಾನೆ. ಇದು ಸತ್ಯಜ್ಞಾನಾದಿ ವಾಕ್ಯಕ್ಕೂ ಸಮಾನವೆ. ಮತ್ತು 'ಸತ್ಯಮಿತ್ ತನ್ನ ಮೋಘಂ' ಎಂಬಲ್ಲಿ 'ಅಮೋಘ' 'ಅರ್ಥಕ್ರಿಯಾಕಾರಿ' ಎಂದು ಹೇಳಿ ಅದನ್ನು 'ಸತ್ಯಮಿತ್' ಅಬಾಧ್ಯವೆಂದು ಉಪಪತ್ತಿಯನ್ನು ಹೇಳುವುದರಿಂದ ಕೇವಲ ಸ್ತುತಿ ತಾತ್ಪರ್ಯವೆನ್ನಬಾರದು ಮತ್ತು ಶ್ರುತಿಯು ಸ್ತುತಿಪರವೆಂದು ಒಪ್ಪಿದರೂ ಸಿದ್ಧಿಕಾರನೇ ಸ್ತುತಿಯನ್ನು ಯಥಾರ್ಥವೆಂದೇ ಒಪ್ಪಿದ್ದಾನೆ ಎಂದಮೇಲೆ,

'ಅಚೇತನಾಸತ್ಯಾಯೋಗ್ಯಾನ್ಯನುಪಾಸ್ಯಾನಿ ಅಫಲತ್ವವಿಪರ್ಯಯಾಭ್ಯಾಂ'

ಎಂದು ಸಾಂಕರ್ಷಣ ಸೂತ್ರವು ಅಸತ್ಯದ ಉಪಾಸನೆ ಅನರ್ಥಕರವೆಂದು ಹೇಳಿದೆ ಎಂದಮೇಲೆ ಸ್ತುತಿಯಲ್ಲಿ ಮತ್ತು ವಿಶ್ವಸತ್ಯತ್ವದಲ್ಲಿ ಎರಡರಲ್ಲಿಯೂ ಶ್ರುತಿಗೆ ತಾತ್ಪರ್ಯ ಒಪ್ಪಬೇಕು. ವಾಕ್ಯಭೇದ ದೋಷವಾಗುವುದಿಲ್ಲ.

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರ ಸಂಭೂತಂ ಕಿಮನ್ಯತ್ ಕಾಮ ಹೈತುಕಂ ।
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪ ಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥

'ಅಸತ್ಯಂ' ಮಿಥ್ಯಾಭೂತವಾಗಿದೆ. 'ಅಪ್ರತಿಷ್ಠಂ' ಅಬಾಧಿತವಾಗಿ ನಿಲ್ಲುವಂಥದಲ್ಲ, ಕೊನೆಯಲ್ಲಿ ಜ್ಞಾನದಿಂದ ಬಾಧಿತವಾಗುತ್ತದೆ. 'ನಾಸೀದಸ್ತಿ ಭವಿಷ್ಯತಿ' ಮೂರು ಕಾಲಗಳಲ್ಲಿಯೂ ಪ್ರಪಂಚ ಇಲ್ಲ ಎಂದೇ ಕಾಣುತ್ತದೆ. 'ಅನೀಶ್ವರಂ' ಜೀವವ್ಯತಿರಿಕ್ತನಾಗಿ ಈಶ್ವರನಿಲ್ಲ. ಏಕಜೀವವಾದದಲ್ಲಿ ಜೀವನೊಬ್ಬನೇ ಇದ್ದಾನೆ, ಈಶ್ವರನೆಂಬುವನೇ ಇಲ್ಲ. 'ಅಪರಸ್ಪರಸಂಭೂತಂ' ಮಣ್ಣಿಂದ ಮಡಿಕೆ ಹುಟ್ಟುತ್ತದೆ ಎಂಬ ಕಾರ್ಯಕಾರಣ ಭಾವವಿಲ್ಲ. ಅವಿದ್ಯೆಯಿಂದಲೇ ಮೊದಲಿಗೆ ಮಣ್ಣು ಹುಟ್ಟುತ್ತದೆ. ಬಳಿಕ ಮಡಿಕೆಯು ಹುಟ್ಟುತ್ತದೆ ಎಂದು ದೃಷ್ಟಿಸೃಷ್ಟಿ ಪಕ್ಷ. ಇದೇ ಮುಖ್ಯ ಅದ್ವೈತ ಎನ್ನುತ್ತಾರೆ. ಹಾಗಾದರೆ ಪ್ರಪಂಚವು 'ಕಿಂ?' 'ಏನು?' ಸತ್ತೋ ಅಸತ್ತೋ? ಎಂದರೆ 'ಅನ್ಯತ್' ಎರಡೂ ಅಲ್ಲ ಎರಡಕ್ಕಿಂತಲೂ ವಿಲಕ್ಷಣ ಸದಸದ್ ವಿಲಕ್ಷಣ. ಅನಿರ್ವಚನೀಯ. 'ಕಾಮಹೈತುಕಂ' ಇಚ್ಛಾನುಸಾರ ಕಲ್ಪಿತವಾದ ಅವಿದ್ಯೆಯೇ ಪ್ರಪಂಚಕ್ಕೆ ಹೇತು ಹೊರತು ಈಶ್ವರನು ಹೇತುವಲ್ಲ, ಈಶ್ವರತತ್ವ ಕೇವಲ ಮಂದಾಧಿಕಾರಿಗಳಿಗೆ ಉಪಾಸನೆಗಾಗಿ ಹೇಳಿದ್ದು. 'ಯೇ ಮಂದಾಸ್ತೇನು ಕಂಪ್ಯಂತೇ ಸವಿಶೇಷನಿರೂಪಣೈಃ' ಎನ್ನುತ್ತಾರೆ. ಹೀಗೆ ಅಪರತತ್ವವೆಲ್ಲವೂ ಅವಿದ್ಯಾಕಲ್ಪಿತ, ಪರತತ್ವವು 'ಈಶ್ವರೋಽಹಂ' 'ಅಹಂ ಬ್ರಹ್ಮಾಸ್ಮಿ' ಎನ್ನುತ್ತ, 'ಮಾಮಾತ್ಮಪರದೇಹೇಷು ಪ್ರದ್ವಿಷಂತಃ' ತನ್ನ ದೇಹ ಪರರ ದೇಹಗಳಲ್ಲೆಲ್ಲ ಕಾಣುವ ದುಃಖಾದಿ ದೋಷವನ್ನು ಹರಿಗೇ ಆರೋಪಿಸುತ್ತಾರೆ. ಅಂಥವನನ್ನು, ಹರಿಯೆ ಹೇಳುತ್ತಾನೆ, 'ಸಂಸಾರೇ ಕ್ಷಿಪಾಮಿ' 'ಕ್ಷಿಪ'ನಿರಸನೇ. ನಿರಸ್ತ ಜ್ಞಾನಾನಂದಾದಿ ಗುಣರನ್ನಾಗಿ ಮಾಡುತ್ತೇನೆ, ಎಂದು 'ಮೂಢಾ ಜನ್ಮನಿ ಜನ್ಮನಿ' ಮಿಥ್ಯಾಜ್ಞಾನಾದಿ ದೋಷಗಳು ಜನ್ಮಜನ್ಮ ಗಳಲ್ಲಿಯೂ ಅವರಲ್ಲಿ ಅಭಿವೃದ್ಧಿಯನ್ನೇ ಹೊಂದುವವು. ಪೂರ್ತಿ ಅಭಿವೃದ್ಧವಾದಾಗ 'ಮಾಮಪ್ರಾಪ್ಯೈವ ಅಧಮಾಂ ಗತಿಂ ಯಾಂತಿ' ನಿಯಮೇನ ನಿತ್ಯನರಕವನ್ನೇ ಹೊಂದುತ್ತಾರೆ ಎಂದು ಭಗವದ್‌ಗೀತೆ (16.8,9,20) ಹೇಳುತ್ತಿದೆ.

ಅದ್ವೈತಿಯು ಈ ಶ್ಲೋಕಗಳಿಗೆ ಹೀಗೆ ವ್ಯಾಖ್ಯಾನ ಮಾಡುತ್ತಾನೆ— ಇದು ಶೂನ್ಯವಾದದ ನಿರಾಕರಣೆ ಅದ್ವೈತ ನಿರಾಕರಣೆಯಲ್ಲ. 'ಅಸತ್ಯಂ' ಪ್ರಪಂಚ ಅತ್ಯಂತ ಅಸತ್ತಾಗಿದೆ, ಅದರ ಕಲ್ಪನೆಗೆ ಅಧಿಷ್ಠಾನವಾಗಿ ಬ್ರಹ್ಮನಿಲ್ಲದ್ದು, 'ಅಪ್ರತಿಷ್ಠಂ' ಸ್ಥಿರವಲ್ಲದ್ದು ಕ್ಷಣಿಕವಾಗಿದೆ. 'ಅನೀಶ್ವರಂ' ಈಶ್ವರನಿಲ್ಲದ್ದು. ನಾಸ್ತಿಕವಾದವಿದು. ಅಪರಸ್ಪರ ಸಂಭೂತಂ ಒಂದರಿಂದ ಇನ್ನೊಂದು ಹುಟ್ಟದೇ ಪ್ರತಿಕ್ಷಣ ಕಾಣುವ ಕ್ಷಣಿಕ ಪರಮಾಣುಪುಂಜ ರೂಪವಾದುದು. ದೋಷವಿಲ್ಲದೆಯೆ ಅವಿದ್ಯೆಯಿಂದ ಆರೋಪಿತವಾದುದು' ಇತ್ಯಾದಿ.

ಆದರೆ ಶೂನ್ಯ ಬ್ರಹ್ಮಗಳಲ್ಲಿ ಏನೂ ವೈಲಕ್ಷಣ್ಯವಿಲ್ಲ. ಪ್ರಪಂಚವನ್ನೂ ಅತ್ಯಂತಾಸತ್ತೆಂದು ಬೌದ್ಧನು ಹೇಳುವುದಿಲ್ಲ. ಸಾಂವೃತ ಸತ್ಯ, ವ್ಯಾವಹಾರಿಕ ಸತ್ಯ ಎಂದೇ ಹೇಳುತ್ತಾನೆ. ಪರ ಅಪರ ತತ್ವಗಳೆರಡರಲ್ಲಿಯೂ ಏನೂ ವೈಲಕ್ಷಣ್ಯವಿಲ್ಲದಿರುವಾಗ 'ಶೂನ್ಯವಾದದ ನಿರಾಕರಣೆ ಇದು, ಅದ್ವೈತ ನಿರಾಕರಣೆಯಲ್ಲ' ಎನ್ನಲಾಗದು.

'ನಾಭಾವ ಉಪಲಬ್ಧೇಃ' 'ಸತ್ಯವೆಂದು ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ್ದರಿಂದ ಪ್ರಪಂಚವು ಅಸತ್ಯವಲ್ಲ.

'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' 'ಸ್ವಪ್ನದಂತೆ ಜಗತ್ತು ಸತ್ಯವಾಗಿ ಕಾಣುತ್ತದೆ' ಎನ್ನಬಾರದು. ಸ್ವಪ್ನವು ಎಚ್ಚರದಲ್ಲಿ ಅಸತ್ಯವೆಂದು ಬಾಧಿತವಾಗುತ್ತದೆ. ಜಗತ್ತು ಎಂದೂ ಬಾಧಿತವಾಗುವುದಿಲ್ಲ. ಆದರಿಂದ ಸ್ವಪ್ನದಂತೆ ಅಲ್ಲ'.

ಯದ್ಯಪಿ ಈ ಸೂತ್ರಗಳು ಶೂನ್ಯವಾದ ನಿರಾಕರಣೆಗೇ ಹೊರಟಿವೆ ಎಂದು ಅದ್ವೈತಿ ಹೇಳುತ್ತಾನೆ. ಆದರೆ ಸೂತ್ರವು ವಿಶ್ವತೋಮುಖವಾದ್ದರಿಂದ, ಯಾವಕಾರಣದಿಂದ ಶೂನ್ಯವಾದವು ಹೇಯವೋ ಅದೇ ಕಾರಣದಿಂದ ಅದ್ವೈತವೂ ಹೇಯವೆಂದು ನ್ಯಾಯಸಾಮ್ಯದಿಂದ ಎರಡನ್ನೂ ಗೀತೆ ಮತ್ತು ಬ್ರಹ್ಮಸೂತ್ರಗಳು ನಿರಾಕರಿಸುತ್ತಿವೆ.



**नचायं प्रत्यक्षप्राप्तानुवादः, त्वन्मते सन्धट इत्यत्र सदर्थस्य व्यावृत्तघटाद्यन्यानुवृत्तब्रह्मत्वेन घटादिसत्त्वस्याप्राप्तेः । यच्चिकेते-त्यादिवाक्यद्वये ईश्वरस्य मानान्तराप्राप्त सत्य जगत्स्रष्टृत्वस्यैवोक्तेश्च ।**

**पृथिवी इतरभिन्ना, न हिंस्यात्सर्वा भूतानीत्यादाविव एकदेशे विधेयसिद्धावपि विश्वमात्रे तदसिद्ध्याननुवादकत्वाच्च । अनुवादकत्वं हि वाक्यस्य न ज्ञातज्ञापकत्वमात्रं, अतिप्रसङ्गात् । किंतु ज्ञातमात्रज्ञापकत्वम् । एकशाखास्थविधिवाक्यैकार्थशाखान्तरस्थ विधिवाक्यस्य पुरुषान्तरं प्रतीव येन पुंसा वादि विप्रतिपत्त्यादिना प्रत्यक्षेण विश्वसत्यता न निर्णीता तं प्रत्यर्थवत्त्वाच्च ।**

---

ब्रह्मनिष्ठसत्त्वस्यैव घटादौ प्रत्यक्ष विषयत्वे लाघवाख्यं पराभिमतं तर्कं सूचयन्नाह **व्यावृत्तेति** । परस्परव्यावृत्ता ये घटादयः तदन्यत्तत्र अनुवृत्तं यत् ब्रह्म तत्वे(ने)त्यर्थः । ननु सन् घट इति घटे सत्यत्वप्राप्तिरस्त्येव । अन्यथा सत्त्वस्य घटत्वसामानाधिकरण्यानुभवायोगात्, किन्तु सा प्राप्तिरध्यासरूपैवेति स्यादेवानु-वादकत्वं श्रुतीनामित्यत आह **यच्चिकेतेति** ।। ननु स्रष्टृत्वांशे श्रुतिद्वयस्याननुवादकत्वेऽपि विश्वं सत्यमिति श्रुतावत्र च सत्यत्वांशे स्यादेवानुवादकतेत्यत आह **पृथिवीति** । **विश्वमात्र इति** । अयोग्यप्रपञ्चे

प्रत्यक्षस्याप्रसरादिति भावः । यद्यप्ययोग्यप्रपञ्चसिद्धौ धर्मिग्राहकमानेन सत्त्वसिद्धिः । तदसिद्धौ च तत्र सत्यत्वविधानमेवासंभवि । तथापि धर्मिग्राहकमानेन वियत्त्वादिरूपेण सत्यत्वसिद्धावपि विश्वत्वेन तस्यासिद्धेर्नानुवादकत्वमिति । **अतिप्रसङ्गादिति** । प्रमेयत्वेन वस्तुमात्रज्ञानस्य सुलभत्वादिति भावः । प्रकार भेदेनेव प्रमातृभेदेनापि नानुवादकत्वमित्यत्र श्रौतदृष्टान्तमाह **एकशाखास्थेति** ।। एतच्च द्वितीयाध्याये चतुर्थपादे चिन्तितम् । नाम रूप धर्मविशेष पुनरुक्तिनिन्दाऽशक्ति समाप्तिवचन प्रायश्चित्तान्यार्थदर्शनाच्छाखान्तरेषु कर्मभेदः स्यात् । (जै.सू.अ.२ पा. ४ सू. ८) नानाशाखास्वाम्नातमग्निहोत्रादि भिद्यते न वेति संदेहे अविशेषपुनःश्रुतिरूपाभ्यासात्, दूरस्थत्वलक्षणप्रकरणान्तराच्च भिद्यत इति पूर्वपक्षे पुनःश्रुत्या प्रकरणान्तराच्च कर्म विधेयमित्येतावत् सिध्यति नतु भेदः । विधिवशात्तु भेदसिद्धिः, अन्यत्र विहितस्य विधानायोगादिति । इह तु शाखा-भेदानामध्येतृभेदनियतत्वेन विहितस्यापि पुरुषान्तरं प्रति विधिः संभवतीति न ताभ्यां भिद्यत इति सिद्धान्त इति ।



**ನ ಚಾಯಂ ಪ್ರತ್ಯಕ್ಷ ಪ್ರಾಪ್ತಾನುವಾದಃ । ತ್ವನ್ಮತೇ 'ಸನ್‌ಘಟಃ' ಇತ್ಯಸ್ಯ ಸದರ್ಥಸ್ಯ ವ್ಯಾವೃತ್ತ ಘಟಾದ್ಯನ್ಯ-ಅನುವೃತ್ತ ಬ್ರಹ್ಮತ್ವೇನ ಘಟಾದಿ ಸತ್ವಸ್ಯ ಅಪ್ರಾಪ್ತೇಃ ।**

'ಪ್ರತ್ಯಕ್ಷದಿಂದ ಪ್ರಾಪ್ತವಾದ ಜಗತ್‌ಸತ್ಯತ್ವವನ್ನು ಮಿಥ್ಯಾತ್ವ ಶ್ರುತಿಯು ನಿಷೇಧಿಸುತ್ತಿದೆಯಾದ್ದರಿಂದ ಶ್ರುತಿಸ್ಮೃತಿ ಸೂತ್ರಗಳೆಲ್ಲವೂ ಪ್ರತ್ಯಕ್ಷಸಿದ್ಧವಾದ ಸತ್ಯತ್ವವನ್ನು ನಿಷೇಧಕ್ಕಾಗಿ ಅನುವಾದ ಮಾಡುತ್ತಿವೆ. ಹೀಗಾಗಿ ಪ್ರತ್ಯಕ್ಷವು ದುರ್ಬಲ. ಅದು ಪ್ರಬಲವಾದ ಮಿಥ್ಯಾತ್ವಾನುಮಾನಕ್ಕೆ ಬಾಧಕವಲ್ಲ.'

ಹೀಗೆ ಅದ್ವೈತಿ ಹೇಳಿದರೆ ಅದು ಯುಕ್ತವಾಗುವುದಿಲ್ಲ. ನಿನ್ನ ಮತದಲ್ಲಿ 'ಸನ್ ಘಟಃ' 'ಘಟವು ಸತ್ಯ' ಎಂದರೆ ಘಟವು ಸತ್ಯ ಎಂದರ್ಥವಲ್ಲ. ಸತ್ಯವಾದ ಬ್ರಹ್ಮವೇ ಅವಿದ್ಯಾಪರಿಣಾಮವಾಗಿ ಘಟವಾಗಿ ಕಾಣುತ್ತದೆ ಎಂದರ್ಥ. ಸತ್ಯವಾಗಿ ಕಾಣುವುದು ಬ್ರಹ್ಮವೇ ಹೊರತು ಘಟವಲ್ಲ. ಹೀಗೆ ಹೇಳಿದರೆ ಲಾಘವವಿದೆ. ಘಟಃಸನ್ ಪಟಃಸನ್ ಎಂದು ಮುಂತಾಗಿ ವ್ಯಾವೃತ್ತವಾದ ಅನಂತವಾದ ಘಟಾದಿಗಳಲ್ಲಿ ಅನಂತ ಸತ್ಯತ್ವ ಕಾಣುತ್ತದೆ ಎನ್ನುವುದಕ್ಕಿಂತ ಅನುವೃತ್ತವಾದ ಒಂದು ಸತ್ಯಬ್ರಹ್ಮ ವಸ್ತುವಿನಲ್ಲಿ ಅನಂತಘಟಾದಿಗಳು ಕಾಣುತ್ತವೆ ಎಂದರೇ ಲಾಘವ. ಒಂದು ಹಗ್ಗದಲ್ಲಿ ಹಾವು ಹೂಮಾಲೆ ಮುಂತಾಗಿ ಅನೇಕ ವಸ್ತುಗಳು ಆರೋಪಿತವಾಗಿ

ಕಾಣುತ್ತವೆ. ಆ ಎಲ್ಲ ವ್ಯಾವೃತ್ತವಾದ ವಸ್ತುಗಳಲ್ಲಿ ಒಂದು ಹಗ್ಗವು ಅಯಂ ಅಯಂ ಎಂದು ಅನುವೃತ್ತವಾಗಿ ತೋರುವಂತೆ, ವ್ಯಾವೃತ್ತವಾದ ಎಲ್ಲ ಘಟಪಟಾದಿ ಪದಾರ್ಥಗಳು ಅನುವೃತ್ತವಾದ ಒಂದು ಸತ್ಯವಾದ ಬ್ರಹ್ಮವಸ್ತುವಿನಲ್ಲಿ ಆರೋಪಿತವಾಗಿ ಕಾಣುತ್ತವೆ. ಯದ್ಯಪಿ ಬ್ರಹ್ಮವು 'ಬ್ರಹ್ಮ' ಎಂದು ವ್ಯವಹಾರದಲ್ಲಿ ಕಾಣುವುದಿಲ್ಲ. ಆದರೆ ಅದು ಸತ್ಯಸ್ವರೂಪವಾದ್ದರಿಂದ ಸತ್ಯ ಎಂದೇ ಕಾಣುತ್ತದೆ. ಬ್ರಹ್ಮ ಒಂದೇ ಸತ್ಯ. ಬೇರೆ ಎಲ್ಲವೂ ಮಿಥ್ಯಾ. ಅಯಂ ಸರ್ಪಃ ಎಂದು ರಜ್ಜುಸರ್ಪ ಭ್ರಮದಲ್ಲಿ ರಜ್ಜು 'ರಜ್ಜು' ಎಂದು ಕಾಣುವುದಿಲ್ಲ. 'ಅಯಂ' 'ಇದು' ಎಂದು ಕಾಣುತ್ತದೆ.

ಹಾಗೇ ಸತ್ಯ ಎಂದು ಪ್ರತ್ಯಕ್ಷದಲ್ಲಿ ಕಾಣುವುದು ಸತ್ಯವಾದ ಬ್ರಹ್ಮವೇ ಹೊರತು ಘಟವಲ್ಲ. ಹೀಗೆ ಘಟಾದಿ ಪ್ರಪಂಚ ಸತ್ಯತ್ವವು ಪ್ರತ್ಯಕ್ಷದಲ್ಲಿ ಕಾಣುವುದಿಲ್ಲ. ಪ್ರತ್ಯಕ್ಷದಲ್ಲಿ ಕಂಡಿದ್ದರೆ ಶ್ರುತಿಯು ಅದನ್ನು ಅನುವಾದ ಮಾಡಬಹುದಿತ್ತು. 'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿಯು ಅನುವಾದ ಎನ್ನಬಹುದಿತ್ತು. ಯದ್ಯಪಿ 'ಸನ್ ಘಟಃ' 'ಘಟವು ಸತ್ಯ' ಎಂದೇ ಕಾಣುತ್ತದೆ. ಆದರೆ ಅದ್ವೈತಿ ಹೇಳುತ್ತಾನೆ, ಇದು ಅಧಿಷ್ಠಾನಾನುವೇಧ ಅಧಿಷ್ಠಾನವಾದ ಬ್ರಹ್ಮನ ಸತ್ಯತ್ವವು ಆರೋಪಿತದಲ್ಲಿ ಕಾಣುತ್ತದೆ. ಇದಂ ರಜತಂ ಅಯಂ ಸರ್ಪಃ ಎಂದು ಪುರೋವೃತ್ತಿ ಶುಕ್ತಿ ರಜ್ಜುಗಳಲ್ಲಿರುವ ಪುರೋವೃತ್ತಿತ್ವವು, ಇದಂತ್ವವು, ರಜತ ಸರ್ಪಾದಿ ಆರೋಪಿತ ವಸ್ತುವಿನಲ್ಲಿ ಕಾಣುತ್ತದೆ ಎನ್ನುತ್ತಾನೆ. ಹೀಗಾಗಿ ಅವನ ಪ್ರಕಾರ ಘಟಾದಿ ಸತ್ಯತ್ವವು ಪ್ರತ್ಯಕ್ಷ ಸಿದ್ಧವಲ್ಲ. ಶ್ರುತಿಯು ಹೇಗೆ ಅನುವಾದ ಮಾಡುತ್ತದೆ?

**ಯಚ್ಚಿಕೇತೇತ್ಯಾದಿ ವಾಕ್ಯದ್ವಯೇ ಈಶ್ವರಸ್ಯ ಮಾನಾಂತರಾಪ್ರಾಪ್ತ ಸತ್ಯಜಗತ್ ಸ್ರಷ್ಟೃತ್ವಸ್ಯೈವ ಉಕ್ತೇಶ್ಚ ।**

'ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ' 'ಯಾಥಾತಥ್ಯತೋಽರ್ಥಾನ್' ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ' ಎಂಬ ಶ್ರುತಿವಾಕ್ಯಗಳಲ್ಲಿ ಈಶ್ವರನ ಸತ್ಯಜಗತ್ ಸ್ರಷ್ಟೃತ್ವವು ಉಕ್ತವಾಗಿದೆ. ಅದು ಪ್ರತ್ಯಕ್ಷ ಸಿದ್ಧವಲ್ಲ. ಮಾನಾಂತರ ಅಪ್ರಾಪ್ತವಾದ ಈಶ್ವರನ ಮಹಿಮೆಯನ್ನು ಇವು ಹೇಳುತ್ತಿವೆ. ಅದನ್ನು ಅನುವಾದವೆನ್ನುವಂತಿಲ್ಲ.

**ಪೃಥಿವೀ ಇತರಭಿನ್ನಾ, ನ ಹಿಂಸ್ಯಾತ್ ಸರ್ವಾಭೂತಾನಿ ಇತ್ಯಾದಾವಿವ ಏಕದೇಶೇ ವಿಧೇಯ ಸಿದ್ಧಾವಪಿ ವಿಶ್ವಮಾತ್ರೇ ತದಸಿದ್ಧ್ಯಾ ಅನನುವಾದಕತ್ವಾಚ್ಚ ।**

ವಿಶ್ವಸ್ರಷ್ಟೃತ್ವಾಂಶದಲ್ಲಿ ಶ್ರುತಿಯು ಅನುವಾದಕವಲ್ಲದಿದ್ದರೂ 'ವಿಶ್ವಂ ಸತ್ಯಂ' ಎಂದು ಸತ್ಯತ್ವಾಂಶದಲ್ಲಿ ಶ್ರುತಿಯು ಅನುವಾದಕವೇ ಎಂದರೆ ಹೇಳುತ್ತೇವೆ— 'ಪೃಥಿವೀ ಇತರಭಿನ್ನಾ' ಎಂದೂ 'ನ ಹಿಂಸ್ಯಾತ್ ಸರ್ವಾ ಭೂತಾನಿ' ಎಂದೂ ಅನುಮಾನ ಆಗಮಗಳು, 'ಘಟವು ಜಲಾದಿ ಭಿನ್ನ' 'ಬ್ರಾಹ್ಮಣನ ಹಿಂಸೆ ಮಾಡಬಾರದು' ಎಂದು ಪ್ರತ್ಯಕ್ಷಾದಿ ಸಿದ್ಧವಾದ ಅಂಶಗಳಲ್ಲಿ ಅನುವಾದಕವೆಂದು ಯಾರೂ ಹೇಳುವುದಿಲ್ಲ. ಘಟತ್ವಾದ್ಯವಚ್ಛೇದೇನ ಪೃಥಿವಿಯಲ್ಲಿ ಜಲಾದಿಭೇದ

ಪ್ರತ್ಯಕ್ಷ ಸಿದ್ಧವಾಗಿದ್ದರೂ ಪೃಥಿವೀತ್ವಾವಚ್ಛೇದೇನ ಅದು ಸಿದ್ಧವಾಗಿಲ್ಲವೆಂದು ಅನುಮಾನವನ್ನು ಸದನುಮಾನವೆನ್ನುತ್ತಾರೆ. ಬ್ರಾಹ್ಮಣತ್ವಾದ್ಯವಚ್ಛೇದೇನ ಹಿಂಸಾನಿಷೇಧವು ಸಿದ್ಧವಾಗಿದ್ದರೂ ಸರ್ವಭೂತತ್ವಾವಚ್ಛೇದೇನ ಅದು ಸಿದ್ಧವಾಗಿಲ್ಲ ಎಂದು ಶ್ರುತಿಯು ಅನುವಾದಕವಲ್ಲ ಎನ್ನುತ್ತಾರೆ. ಹಾಗೇ 'ಘಟಃಸನ್' ಇತ್ಯಾದಿ ಪ್ರತ್ಯಕ್ಷಯೋಗ್ಯ ಸ್ಥಳದಲ್ಲಿ ಸತ್ವವು ಪ್ರತ್ಯಕ್ಷಸಿದ್ಧವಾದರೂ ಅತೀಂದ್ರಿಯ ಧರ್ಮಾದಿ ಪರಮಾಣ್ವಾದಿ ವಿಷಯಗಳಲ್ಲಿ ಸತ್ವಸಿದ್ಧಿಗಾಗಿ ಶ್ರುತಿಯು ಧರ್ಮಾದಿ ಪರಮಾಣ್ವಾದಿ ಸಾಧಾರಣ ವಿಶ್ವತ್ವಾವಚ್ಛೇದೇನ ಶ್ರುತಿಯು ಸತ್ಯತ್ವವನ್ನು ಹೇಳುವುದು ಯುಕ್ತವೆ.

ಯದ್ಯಪಿ ಅತೀಂದ್ರಿಯ ಪರಮಾಣ್ವಾದಿಗಳು ಅನುಮಾನದಿಂದ ಸಿದ್ಧವಾದರೇ ಅವುಗಳಲ್ಲಿ ಶ್ರುತಿಯು ಸತ್ಯತ್ವವಿಧಾನ ಮಾಡಬಹುದು. ಆದರೆ ಧರ್ಮಿಗ್ರಾಹಕವಾದ ಅನುಮಾನದಿಂದಲೇ ಅವು ಸತ್ಯವೆಂದು ಸಿದ್ಧವಾಗಿರುತ್ತವೆ. ಹಾಗೆ ಸಿದ್ಧವಾಗದಿದ್ದರೆ ಅವುಗಳನ್ನು ಅನುವಾದ ಮಾಡಿ ಶ್ರುತಿಯು ಅವುಗಳಲ್ಲಿ ಸತ್ಯತ್ವ ವಿಧಾನ ಮಾಡುವುದು ಯುಕ್ತವಾಗದು. ಆದರೂ ಅನುಮಾನದಿಂದ ಪರಮಾಣುತ್ವಾದ್ಯವಚ್ಛೇದೇನ ಸತ್ಯತ್ವ ಸಿದ್ಧವಾದರೂ ತತ್ಸಾಧಾರಣ ವಿಶ್ವತ್ವಾವಚ್ಛೇದೇನ ಸತ್ಯತ್ವಸಿದ್ಧವಾಗಿಲ್ಲದಿರುವುದರಿಂದ ಶ್ರುತಿಯು ಅನುವಾದಕವಾಗುವುದಿಲ್ಲ.

ಯದ್ಯಪಿ ವಿಶ್ವತ್ವವೆಂದು ಅನುಗತವಾದ ಒಂದು ಧರ್ಮವಿಲ್ಲ. ಅದು ಸರ್ವನಾಮ. ಬುದ್ಧಿಸ್ಥ ಅನನುಗತ ತತ್ತದ್ ಘಟತ್ವಾದ್ಯವಚ್ಛೇದೇನ ಘಟಾದಿಗಳಲ್ಲಿ ಸತ್ವವನ್ನು ಶ್ರುತಿಯು ವಿಧಾನ ಮಾಡಬೇಕಾಗುತ್ತದೆ. ಅದು ಪ್ರತ್ಯಕ್ಷದಿಂದಲೆ ಸಿದ್ಧವಿರುವುದರಿಂದ ವಿಧಾನ ಕೂಡುವುದಿಲ್ಲ. ಆದರೆ ವಿಶ್ವಶಬ್ದವು ಸರ್ವನಾಮವಾದರೂ 'ಜಗತ್' 'ಪ್ರಪಂಚ' ಇತ್ಯಾದಿ ಶಬ್ದಗಳಿಗೆ ಪರ್ಯಾಯ ವಾದ್ದರಿಂದ ಜಗತ್ತ್ವಾದಿ ಸರ್ವವೃತ್ತಿ ಧರ್ಮಾವಚ್ಛೇದೇನ ಸರ್ವೋಪಸ್ಥಾಪಕವಾಗುವುದು ಅನುಭವಸಿದ್ಧವಾಗಿದೆ. ಅದರಿಂದ ಶ್ರುತಿಯು ಸತ್ಯತ್ವಾಂಶದಲ್ಲಿಯೂ ಕೂಡ ಅನನುಗತ ಘಟತ್ವಾದಿ ಗಳಿಗಿಂತ ಭಿನ್ನವಾದ ಸರ್ವಾನುಗತವಾದ ಪ್ರಕಾರದಿಂದ ಸರ್ವತ್ರ ಸತ್ವ ಬೋಧಕವಾಗಬಹುದು. ಅದರಿಂದ ಅನುವಾದಕತ್ವವಿಲ್ಲ.

ನ ಹಿಂಸ್ಯಾತ್ ಸರ್ವಾಭೂತಾನಿ ಎಂಬ ಶ್ರುತಿಯೂ ಸರ್ವಾವಚ್ಛೇದೇನ ಹಿಂಸಾನಿಷೇಧ ಮಾಡುವುದರಿಂದ 'ಬ್ರಾಹ್ಮಣೋ ನ ಹಂತವ್ಯಃ' ಇತ್ಯಾದಿ ವಾಕ್ಯ ಸಿದ್ಧವಾದ ಬ್ರಾಹ್ಮಣ ಹಿಂಸಾನಿಷೇಧವನ್ನೇ ಅನುವಾದ ಮಾಡುವುದಿಲ್ಲ. ಪ್ರಕೃತದಲ್ಲಿ ಪ್ರತ್ಯಕ್ಷಯೋಗ್ಯ ಘಟಾದಿ ಪದಾರ್ಥಗಳಲ್ಲಿ ಸತ್ಯತ್ವವು ಘಟತ್ವಾದ್ಯವಚ್ಛೇದೇನ ಪ್ರತ್ಯಕ್ಷಸಿದ್ಧವೆಂದರೂ ಪ್ರತ್ಯಕ್ಷಅಯೋಗ್ಯ ಧರ್ಮಾಧರ್ಮಾದಿ ಸಾಧಾರಣ್ಯೇನ ಸರ್ವತ್ವಾವಚ್ಛೇದೇನ ಸರ್ವಸತ್ಯತ್ವವು ಪ್ರತ್ಯಕ್ಷ ಸಿದ್ಧವಲ್ಲ. ಅದರಿಂದ 'ವಿಶ್ವಂ ಸತ್ಯಂ' ಎಂಬ ಶ್ರುತಿಯು ಅನುವಾದಕವಲ್ಲ.

**ಅನುವಾದಕತ್ವಂ ಹಿ ವಾಕ್ಯಸ್ಯ ನ ಜ್ಞಾತಜ್ಞಾಪಕತ್ವ ಮಾತ್ರಂ । ಅತಿಪ್ರಸಂಗಾತ್ । ಕಿಂತು ಜ್ಞಾತಮಾತ್ರಜ್ಞಾಪಕತ್ವಂ । ಏಕಶಾಖಾಸ್ಥ ವಿಧಿವಾಕ್ಯ–ಏಕಾರ್ಥ ಶಾಖಾಂತರಸ್ಥ ವಿಧಿವಾಕ್ಯಸ್ಯ**

**ಪುರುಷಾಂತರಂ ಪ್ರತೀವ, ಯೇನ ಪುಂಸಾ ವಾದಿವಿಪ್ರತಿಪತ್ತ್ಯಾದಿನಾ ಪ್ರತ್ಯಕ್ಷೇಣ ವಿಶ್ವಸತ್ಯತಾ ನ ನಿರ್ಣೀತಾ ತಂ ಪ್ರತಿ ಅರ್ಥವತ್ತ್ವಾಚ್ಚ।**

ವಾಕ್ಯವು ಅನುವಾದಕವೆನಿಸುವುದು ಪ್ರಮಾಣಾಂತರ ಸಿದ್ಧವಾದ್ದನ್ನು ಹೇಳಿದ ಮಾತ್ರಕ್ಕೇ ಎಂದೇನಿಲ್ಲ. ಹಾಗೆ ಹೇಳಿದರೆ ಅತಿಪ್ರಸಕ್ತಿ. ಏಕೆಂದರೆ, ಪ್ರಮೇಯತ್ವೇನ ಸಾಮಾನ್ಯತಃ ಎಲ್ಲವೂ ಎಲ್ಲರಿಗೂ ಜ್ಞಾತವೇ ಆಗಿರುತ್ತದೆ. ಯಾರಿಗೂ ಯಾವುದೂ ಅಜ್ಞಾತವೆಂಬುದೇ ಇರುವುದಿಲ್ಲ ಎಂದಮೇಲೆ ಅನನುವಾದಕವೆಲ್ಲವೂ ವಸ್ತುತಃ ಅನುವಾದಕವೇ ಎಂದಾದೀತು. 'ಪರ್ವತೋ ವಹ್ನಿಮಾನ್' ಎಂಬಲ್ಲಿ ಪ್ರತ್ಯಕ್ಷ ಸಿದ್ಧವಾದ ಪರ್ವತವನ್ನು ಉದ್ದೇಶಿಸಿ ವಹ್ನಿವಿಧಾನ ಮಾಡುವಂತೆ, 'ದಧ್ನಾ ಜುಹೋತಿ' ಎಂಬಲ್ಲಿಯೂ 'ಜುಹೋತಿ' ಎಂಬಂಶದಲ್ಲಿ ಅಗ್ನಿಹೋತ್ರ ಹೋಮವನ್ನು ಅನುವಾದಮಾಡಿ 'ದಧ್ನಾ' ಎಂದು ದಧಿದ್ರವ್ಯವನ್ನು ಅಧಿಕವಾಗಿ ವಿಧಾನ ಮಾಡುವಂತೆ ಪ್ರತಿಯೊಂದು ವಾಕ್ಯದಲ್ಲಿ ವಿಧಾನ ಮಾಡಲು ಉದ್ದೇಶವನ್ನು ಅನುವಾದ ಮಾಡಲೇ ಬೇಕಾಗುತ್ತದೆ. ಅದನ್ನು ದೋಷವೆನ್ನಬೇಕಾದೀತು ಎಂಬ ಅತಿಪ್ರಸಕ್ತಿ. ಅಧಿಕ ವಿಧಾನ ಮಾಡುವುದಕ್ಕಾಗಿ ಸಿದ್ಧವಾದ ಧರ್ಮಿಯನ್ನು ಅನುವಾದ ಮಾಡಿದರೂ ದೋಷವಾದೀತು. ನಿಷೇಧಕ್ಕಾಗಿಯೂ ನಿಷೇಧ್ಯವನ್ನು ಅನುವಾದ ಮಾಡಬೇಕಾಗುತ್ತದೆ. ಅದನ್ನೂ ದೋಷವೆಂದರೆ, ನೇದಂ ರಜತಂ ಎಂಬಲ್ಲಿ 'ಇದಂ' ಎಂದು ಅನುವಾದವೂ ದೋಷವಾದೀತು. ಅದರಿಂದ ಜ್ಞಾತಮಾತ್ರಜ್ಞಾಪಕತ್ವವನ್ನು ಅನುವಾದವೆಂದು ದೋಷವೆಂದು ಹೇಳಬೇಕು. ಎಲ್ಲವೂ ಪ್ರಮೇಯತ್ವಾದಿನಾ ಸಾಮಾನ್ಯತಃ ಜ್ಞಾತವೇ ಆಗಿದ್ದರೂ ವಿಶೇಷತಃ ಅಜ್ಞಾತವಿರುವುದರಿಂದ ವಾಕ್ಯವು ಅದನ್ನು ಬೋಧಿಸಿದಾಗ ಅನುವಾದಕವೆನಿಸುವುದಿಲ್ಲ. 'ಪರ್ವತೋ ವಹ್ನಿಮಾನ್' ಎಂಬಲ್ಲಿ ಪರ್ವತವು ಜ್ಞಾತವೇ ಇದ್ದರೂ ಅದರಲ್ಲಿ ವಹ್ನಿ ಜ್ಞಾತವಿರುವುದಿಲ್ಲ. 'ದಧ್ನಾ ಜುಹೋತಿ' ಎಂಬಲ್ಲಿಯೂ 'ಜುಹೋತಿ' ಎಂಬಂಶ ಜ್ಞಾತವಿದ್ದರೂ, ಜ್ಞಾತವಿರುವುದರಿಂದಲೇ ಅದನ್ನು ಅನುವಾದ ಮಾಡಿ, 'ದಧ್ನಾ' ಎಂದು ದಧಿರೂಪಗುಣ ವಿಧಾನ ಮಾಡುತ್ತದೆ. ಅದು ಅನುವಾದಕವಲ್ಲ. ಅಧಿಕವೇನನ್ನೂ ಹೇಳದಿದ್ದರೂ ನಿಷೇಧವನ್ನೂ ಮಾಡದಿದ್ದರೂ ಒಂದು ಶಾಖೆಯಲ್ಲಿ ಹೇಳಿದ್ದನ್ನು ಇನ್ನೊಂದು ಶಾಖೆಯಲ್ಲಿ ಹೇಳುವುದು ಅನುವಾದವಾಗುವುದಿಲ್ಲ. ಒಂದು ಶಾಖೆಯಲ್ಲಿ ಕಾಣುವ ವಿಧಿವಾಕ್ಯವು ಇನ್ನೊಂದು ಶಾಖೆಯಲ್ಲಿ ಕಂಡು ಬಂದರೆ, ಅದು ಆ ಶಾಖೆಯ ಅಧಿಕಾರಿಪುರುಷನಿಗೆ ವಿಧಾಯಕವೇ ಆಗುವುದು. ಹಾಗೇ ಯಾರಿಗೆ ವಾದಿವಿಪ್ರತಿಪತ್ತಿ ಇರುವ ಕಾರಣ ಪ್ರತ್ಯಕ್ಷದಿಂದ ವಿಶ್ವಸತ್ಯತ್ವ ನಿರ್ಣಯವಾಗುವುದಿಲ್ಲವೋ ಅವರಿಗೆ ಶ್ರುತಿಯು ಆ ವಿಷಯದಲ್ಲಿ ನಿರ್ಣಾಯಕವೇ ಆಗುವುದು, ಕೇವಲ ಅನುವಾದಕವೆನಿಸುವುದಿಲ್ಲ.

'ನಾಮರೂಪ ಧರ್ಮವಿಶೇಷ ಪುನರುಕ್ತಿನಿಂದಾऽಶಕ್ತಿ ಸಮಾಪ್ತಿವಚನ ಪ್ರಾಯಶ್ಚಿತ್ತಾನ್ಯಾರ್ಥ ದರ್ಶನಾತ್ ಶಾಖಾಂತರೇಷು ಕರ್ಮಭೇದಃ ಸ್ಯಾತ್ (ಜೈ.ಸೂ.2.4.8)

ಈ ಮೀಮಾಂಸಾಧಿಕರಣದಲ್ಲಿ ಬೇರೆಬೇರೆ ಶಾಖೆಗಳಲ್ಲಿ ಹೇಳಿದ ಕರ್ಮಗಳು ಬೇರೆಬೇರೆಯೆ

ಆಗುವುದೆ ಅಥವಾ ಇಲ್ಲವೆ ಎಂದು ಸಂದೇಹ, ಏನೂ ವ್ಯತ್ಯಾಸವಿಲ್ಲದೆ ಪುನಃ ಪುನಃ ಹೇಳಿದರೆ ಅದು ಅಭ್ಯಾಸವೆನಿಸುವುದು ಅಭ್ಯಾಸವಿರುವಲ್ಲಿ ಕರ್ಮಗಳು ಬೇರೆಬೇರೆಯೆ ವಿಹಿತವಾಗುವುವು ಎಂದು ಪೂರ್ವಪಕ್ಷ.

ಪುನಃ ಹೇಳಿದರೆ ದೂರದಲ್ಲಿ ಬೇರೆ ಪ್ರಕರಣದಲ್ಲಿಯು ಹೇಳಿದರೆ, ಕರ್ಮವಿಹಿತವಾಗುತ್ತಿದೆ ಎಂದು ಮಾತ್ರ ಸಿದ್ಧವಾದೀತು, ವಿಹಿತವಾಗುವ ಕರ್ಮ ಬೇರೆಬೇರೆಯೆ ಎನ್ನುವುದು ಸಿದ್ಧವಾಗದು. ಒಮ್ಮೆ ವಿಹಿತವಾದದ್ದನ್ನು ಪುನಃ ವಿಧಾನ ಮಾಡುವುದು ಕೂಡದಿರುವುದರಿಂದ ಪುನಃ ಹೇಳಿದ ಕರ್ಮ ಬೇರೆ ಎಂದು ತಿಳಿಯುತ್ತೇವೆ. ಬೇರೆ ಶಾಖೆಯಲ್ಲಿ ಹೇಳಿದ ಕರ್ಮಕ್ಕೆ ವಿಧಾನ ಕೂಡಲಾರದೆನ್ನುವಂತಿಲ್ಲ ಕೂಡುತ್ತದೆ. ಏಕೆಂದರೆ ಬೇರೆಬೇರೆ ಶಾಖೆಗಳಿಗೆ ಅಧ್ಯೇತೃಗಳು ಬೇರೆಬೇರೆಯೆ ಇರುತ್ತಾರೆ. ಒಂದು ಶಾಖೆಯಲ್ಲಿ ವಿಹಿತವಾದ ಕರ್ಮ ಆ ಶಾಖೆಯವರಿಗೆ ಮಾತ್ರ ವಿಹಿತವಾಗುತ್ತದೆ. ಬೇರೆ ಶಾಖೆಯವರಿಗೆ ವಿಹಿತವಾಗುವುದಿಲ್ಲ. ಅವರಿಗೆ ಅದು ತಿಳಿಯುವುದಿಲ್ಲ. ಅವರ ಶಾಖೆಯಲ್ಲಿ ವಿಹಿತವಾದರೆ ಅವರಿಗೆ ತಿಳಿಯುತ್ತದೆ. ಹೀಗೆ ಒಂದೇ ಕರ್ಮವು ಬೇರೆಬೇರೆ ಶಾಖೆಗಳಲ್ಲಿ ಬೇರೆಬೇರೆಯಾಗಿ ವಿಹಿತವಾಗುವುದು ಯುಕ್ತವೆ. ಅದು ಅನುವಾದವೆನಿಸುವುದಿಲ್ಲ ಎಂದು ಸಿದ್ಧಾಂತ.



**अनुवादकत्वं तु सर्वाविवादस्थले सावकाशम् । अत एव त्वयापि बृहदारण्यकभाष्ये देहान्यात्मबोधिकायाः "अस्तीत्येवोपलब्धव्य" इतिश्रुतेः प्रत्यक्षप्राप्तानुवादित्वमाशङ्क्य वादिविप्रतिपत्तिदर्शनादि-त्यादिना तत्परिहृतम् । द्वयोः प्रणयन्तीति वाक्यस्यावैयर्थ्याय चातुर्मास्य मध्यपर्वणोश्चोदकाप्राप्त प्रणयनान्तर प्रापकत्ववत् इहापि श्रुतेरवैयर्थ्याय तत्सत्यमित्यादि श्रुतिवत् वर्तमानमात्र ग्राहि प्रत्यक्षाप्राप्त कालत्रयाबाध्यत्वरूप सत्यत्व प्रापकत्वाच्च ।**

**अन्यथा आत्मन आनन्दत्वश्रुतिरपि सुखं सुप्तोऽस्मीति प्रत्यक्षप्राप्तातात्त्विकानन्दत्वानुवादिनी स्यात् ।**

**अनुवादकत्वं तु अप्राप्तविषयान्तराभावे सावकाशम् ।**

---

नन्वेवमनुवादमात्रोच्छेद इत्यत आह **अनुवादकत्वं त्विति । सर्वाविवा-**

**दस्थले ।** नान्तरिक्षे न दिवीत्यादिस्थले । **द्वयोः प्रणयन्तीति ।।** एतच्च सप्तमेऽध्याये तृतीयपादे विचारितम् । ''सौमिकं तु प्रणयनमवाच्यं हीतरत्'' चातुर्मास्येषु द्वयोः प्रणयन्तीति वैश्वदेव वरुणप्रघास साकमेध शुनासीरीयाख्यानां चतुर्णां चातुर्मास्यपर्वणां मध्ये द्वयोः पर्वणोरुच्यमानं अग्निप्रणयनं किं दार्शपौर्णमासिकधर्मकमुत सौमिकधर्मकमनेकाङ्गकलापयुक्तमुतोभयविलक्षणमपूर्वमिति विशये चातुर्मास्यानां दर्शपूर्णमासप्रकृतिकत्वेन चोदकप्राप्तत्वेन सन्निधानात् दार्शपौर्णमासिकधर्मकमित्येकः पक्षः, चोदकप्राप्तस्याविधेयत्वात्, गुणविध्यभावेनानुवादानर्थक्याच्चार्थवत्त्वाय सौमिकधर्मकमिति द्वितीयः पक्षः । प्रणयन्तीत्यस्य प्रणयनसामान्यवाचिनः सौमिकप्रणयनविशेषपरत्वे लक्षणाप्रसङ्गात् चातुर्मास्येष्वेव किञ्चित् प्रणयनमस्पृष्टसौमिकत्वाद्याकारं विधीयते । तच्च तदुभयविलक्षणमपूर्वं पर्यवस्यतीति सिद्धान्त इति । **श्रुतेरिति ।** विश्वं सत्यमित्यादिश्रुतेरित्यर्थः । यद्यपि सिद्धान्तिना सत्त्वद्वैविध्यानङ्गीकारात् विश्वं सत्यमित्यादिश्रुतेः प्रणयनवाक्यवैषम्यम् । तथापि परेण विश्वसत्यत्वश्रुतेरनुवादकत्वं वक्तुं न शक्यत इत्यत्र तात्पर्यम् ।।

**अन्यथेति ।।** यथाकथंचित्प्रत्यक्षप्राप्तप्रापकत्व इत्यर्थः ।



**ಅನುವಾದಕತ್ವಂ ತು ಸರ್ವಾವಿವಾದಸ್ಥಳೇ ಸಾವಕಾಶಂ। ಅತ ಏವ ತ್ವಯಾಪಿ ಬೃಹದಾರಣ್ಯಕಭಾಷ್ಯೇ ದೇಹಾನ್ಯಾತ್ಮ ಬೋಧಿಕಾಯಾಃ 'ಅಸ್ತೀತ್ಯೇವೋಪಲಬ್ಧವ್ಯ' ಇತಿಶ್ರುತೇಃ ಪ್ರತ್ಯಕ್ಷಪ್ರಾಪ್ತಾನುವಾದಿತ್ವಮಾಶಂಕ್ಯ ವಾದಿವಿಪ್ರತಿಪತ್ತಿ ದರ್ಶನಾದಿತ್ಯಾದಿನಾ ತತ್ ಪರಿಹೃತಮ್ ।**

ಹಾಗಾದರೆ ಅನುವಾದದೋಷ ಎಂಬುದೇ ಇಲ್ಲವೆಂದಾಯಿತು! ಎಂದರೆ ಹೇಳುತ್ತಾರೆ— ಅದರಿಂದ ಸರ್ವಾವಿವಾದ ಸ್ಥಳದಲ್ಲಿಯೇ ಪ್ರಮಾಣಾಂತರ ಪ್ರಾಪ್ತವಾದುದರ ಅನುವಾದ ದೋಷವೆನ್ನಬೇಕು. 'ನ ಪೃಥಿವ್ಯಾಮಗ್ನಿಶ್ಚೇತವ್ಯೋ ನಾಂತರಿಕ್ಷೇ ನ ದಿವಿ' ಎಂದು 'ಹಿರಣ್ಯಂ ನಿಧಾಯ ಚೇತವ್ಯಂ' ಎಂಬ ವಿಧಿಯನ್ನು ನಹಿ ನಿಂದಾನ್ಯಾಯದಿಂದ ಸ್ತುತಿಸುವ ಅರ್ಥವಾದವಿದೆ. ಅಂತರಿಕ್ಷ ದ್ಯುಲೋಕಗಳಲ್ಲಿ ಹೇಗೋ ಹಾಗೇ ಬರಿನೆಲದ ಮೇಲೆ, ಹಿರಣ್ಯವಿಡದೇ ಅಗ್ನಿಚಯನ ಎಲ್ಲೂ ಕಂಡಿಲ್ಲ. ಸರ್ವಾವಿವಾದ ಸ್ಥಳವಿದು ಅನುವಾದ. ಹಿರಣ್ಯಸ್ತುತಿ.

ಆದರಿಂದಲೇ ಬೃಹದಾರಣ್ಯಕ ಶಾಂಕರಭಾಷ್ಯದಲ್ಲಿ 'ಅಸ್ತೀತ್ಯೇವೋಪಲಬ್ಧವ್ಯಃ' 'ದೇಹವ್ಯತಿರಿಕ್ತ ಆತ್ಮನಿದ್ದಾನೆ ಎಂದೇ ತಿಳಿಯಬೇಕು' ಎನ್ನುವ ಶ್ರುತಿಯನ್ನು ಹೇಳಿ 'ದೇಹವ್ಯತಿರಿಕ್ತ ಆತ್ಮಸತ್ವವು ಪ್ರತ್ಯಕ್ಷಸಿದ್ಧವೇ ಇದೆ, ಅದನ್ನೇ ಶ್ರುತಿಯು ಹೇಳುವುದು ವ್ಯರ್ಥವಲ್ಲವೆ? ಎಂದರೆ 'ವಾದಿಗಳಲ್ಲಿ ದೇಹವ್ಯತಿರಿಕ್ತಾತ್ಮನಿದ್ದಾನೆ ಇಲ್ಲ ಎಂದು ವಿಪ್ರತಿಪತ್ತಿ ಇರುವುದರಿಂದ ಇದ್ದಾನೆ ಎಂದೇ ತಿಳಿಯಬೇಕು' ಎನ್ನುತ್ತ ಶ್ರುತಿಯು ವಿಪ್ರತಿಪತ್ತಿಯನ್ನು ನಿರಾಸ ಮಾಡಿದೆ. ವಿಪ್ರತಿಪತ್ತಿನಿರಾಸ ರೂಪ ಪ್ರಯೋಜನವಿರುವುದರಿಂದ ಶ್ರುತಿಯಲ್ಲಿ ಪ್ರತ್ಯಕ್ಷಸಿದ್ಧವಾದ ವಿಷಯವನ್ನು ಅನುವಾದ ಮಾಡಿದ್ದು ವ್ಯರ್ಥವಲ್ಲ' ಎಂದಿದೆ.

ಯದ್ಯಪಿ ವಾದಿ ವಿಪ್ರತಿಪತ್ತಿ ಇರುವುದರಿಂದಲೇ ಭೇದಪ್ರತ್ಯಕ್ಷವಿಲ್ಲ ಎನ್ನಬೇಕು. ಭೇದಪ್ರತ್ಯಕ್ಷ ಎಲ್ಲರಿಗೂ ಇದೆ ಎಂದರೆ, ಚಾರ್ವಾಕರಿಗೂ ಇದೆ ಎಂದು ಹೇಳಿದಂತಾಗುವುದು. ಹಾಗಾದರೆ ಪ್ರತ್ಯಕ್ಷ ಪ್ರಾಮಾಣ್ಯವಾದಿಗಳಾದ ಅವರು ಹೇಗೆ ವಿಪ್ರತಿಪತ್ತಿ ಮಾಡುತ್ತಾರೆ? ಎನ್ನುವ ಪ್ರಶ್ನೆ ಬರುತ್ತದೆ. ಅದಕ್ಕೆ 'ಪ್ರತ್ಯಕ್ಷವಿದ್ದರೂ ಅದು ಅಪ್ರಮಾಣವಾಗಿದೆ ಎಂದು ಅಭಿಮಾನವಿದೆ ಎನ್ನಬೇಕು. ಹೀಗೆ ಹೇಳದಿದ್ದರೆ ಹುಟ್ಟಿದ ಶಿಶು ಮಾತೆಯ ಸ್ತನಪಾನವನ್ನು ಏಕೆ ಮಾಡುತ್ತದೆ? ಪೂರ್ವಜನ್ಮ ಸಂಸ್ಕಾರದಿಂದ ಎನ್ನಲೇಬೇಕು. 'ಪ್ರತ್ಯಕ್ಷ ಒಂದೇ ಪ್ರಮಾಣ' ಎಂದೆನ್ನುವ ಚಾರ್ವಾಕನು ಕೂಡ ಶುಕ್ತಿಯಲ್ಲಿ 'ಇದಂ ರಜತಂ' ಎಂಬ ಜ್ಞಾನವನ್ನು ಭ್ರಮವೆಂದೇ ಒಪ್ಪುತ್ತಾನೆ.

**'ದ್ವಯೋಃ ಪ್ರಣಯಂತಿ' ಇತಿ ವಾಕ್ಯಸ್ಯ ಅವೈಯರ್ಥ್ಯಾಯ ಚೋದಕಾಪ್ರಾಪ್ತ ಪ್ರಣಯನಾಂತರ ಪ್ರಾಪಕತ್ವವತ್ ಇಹಾಪಿ ಶ್ರುತೇಃ ಅವೈಯರ್ಥ್ಯಾಯ 'ತತ್ ಸತ್ಯಂ' ಇತ್ಯಾದಿ ಶ್ರುತಿವತ್ ವರ್ತಮಾನ ಮಾತ್ರಗ್ರಾಹಿ ಪ್ರತ್ಯಕ್ಷಾಪ್ರಾಪ್ತ ಕಾಲತ್ರಯಾಬಾಧ್ಯತ್ವರೂಪ ಸತ್ಯತ್ವ ಪ್ರಾಪಕತ್ವಾಚ್ಚ ।**

ಸೌಮಿಕಂ ತು ಪ್ರಣಯನಂ ಅವಾಚ್ಯಂ ಹೀತರತ್ (ಜೈ.ಸೂ.7.3.8.19) ವೈಶ್ವದೇವ-ವರುಣಪ್ರಘಾಸ-ಸಾಕಮೇಧ-ಶುನಾಸೀರೀಯ ಎಂಬ ಚಾತುರ್ಮಾಸ್ಯ ಯಾಗದ ನಾಲ್ಕು ಪರ್ವಗಳಲ್ಲಿ ನಡುವಿನ ವರುಣಪ್ರಘಾಸ ಮತ್ತು ಸಾಕಮೇಧ ಪರ್ವಗಳಲ್ಲಿ 'ದ್ವಯೋಃ ಪ್ರಣಯಂತಿ' ಎಂದು ವಿಧಿ ಇದೆ.

ಇದು ದರ್ಶಪೂರ್ಣಮಾಸ ಪ್ರಕೃತಿಕವಾದ್ದರಿಂದ ದರ್ಶಪೂರ್ಣಮಾಸ ರೀತಿಯ ಅಗ್ನಿಪ್ರಣಯನವೇ ಇಲ್ಲಿ ಸನ್ನಿಧಾನಬಲದಿಂದ ಚೋದಕಪ್ರಾಪ್ತವಾಗಿದೆ. ಅದೇ ಅನುಷ್ಠೇಯ ಎಂದು ಒಂದು ಪೂರ್ವಪಕ್ಷ.

ಚೋದಕ ಪ್ರಾಪ್ತವಾದರೆ ವಿಧಿ ಕೂಡುವುದಿಲ್ಲ. 'ಪ್ರಣಯಂತಿ' ಎಂದು ವಿಧಿ ಹೇಗೆ? ಅನುವಾದವೆನ್ನುವುದಾದರೂ ಅದು ವ್ಯರ್ಥವಾಗಬಾರದು. ದಾರ್ಶಪೌರ್ಣಮಾಸಿಕ ಪ್ರಣಯನವು ಚೋದಕದಿಂದಲೇ ಪ್ರಾಪ್ತವಾಗುವುದು. ಆದರಿಂದ ಸೋಮಯಾಗದ ರೀತಿಯ ಪ್ರಣಯನವೇ

ಅನುಷ್ಠೇಯ, 'ಸೌಮಿಕಂ ತು ಪ್ರಣಯನಂ, ಅವಾಚ್ಯಂ ಹಿ ಇತರತ್' ಸೌಮಿಕವೇ ಅನುಷ್ಠೇಯ'. ಬೇರೆ ಪ್ರಣಯನವಿಧಿ ಬೇಕಿಲ್ಲ. ಅದು ಪ್ರಾಪ್ತ' ಎಂದು ಇನ್ನೊಂದು ಪೂರ್ವಪಕ್ಷ.

'ಪ್ರಣಯಂತಿ' ಎಂದು ಪ್ರಣಯನ ಸಾಮಾನ್ಯ ಉಕ್ತವಾಗಿದೆ. ವಿಶೇಷ ವಾಚಕವಾದ ಶಬ್ದವಿಲ್ಲ. 'ಸೌಮಿಕ ಪ್ರಣಯನ', ಸೋಮಯಾಗದ ರೀತಿಯ ಪ್ರಣಯನ ಎಂದು ವಿವಕ್ಷೆ ಮಾಡಿದರೆ ಲಕ್ಷಣಾಪ್ರಸಂಗ. ಅದರಿಂದ ಚೋದಕ ಪ್ರಾಪ್ತವಾದ ಪ್ರಣಯನದ ಅನುವಾದವೆಂದೇ ಸ್ವೀಕರಿಸಬೇಕು. ಅದು ಸಾರ್ಥಕವಾಗಬೇಕು. ಅದಕ್ಕೆ,, ಚಾತುರ್ಮಾಸ್ಯ ಪರ್ವಗಳ ಪ್ರಣಯನದಲ್ಲಿಯೇ ಇರುವ, ದರ್ಶಪೂರ್ಣಮಾಸದ ರೀತಿಯದಲ್ಲದೇ ಇರುವ ಬೇರೇ ಒಂದು ಬಗೆಯ ವಿಲಕ್ಷಣವಾದ ಪ್ರಣಯನಕ್ಕಾಗಿ 'ಉತ್ತರವೇದ್ಯಾಮಗ್ನಿಂ ನಿದಧಾತಿ' ಎಂದು ಉತ್ತರವೇದಿರೂಪ ಗುಣವಿಧಿ ಇದು. ಈ ಪ್ರಣಯನವು ವಿಲಕ್ಷಣ. ಅದರಿಂದ ಬರುವ ಅಪೂರ್ವವೂ ಬೇರೆಯೇ ಇದೆ' ಎಂದು ಸಿದ್ಧಾಂತ.

ಹಾಗೇ ಪ್ರಕೃತ ಪ್ರತ್ಯಕ್ಷವು ವರ್ತಮಾನ ಮಾತ್ರ ಗ್ರಾಹಿಯಾದ್ದರಿಂದ ವರ್ತಮಾನಕಾಲಾ ಬಾಧ್ಯತ್ವ ರೂಪ ವ್ಯಾವಹಾರಿಕಸತ್ವವನ್ನು ಗ್ರಹಿಸಿದರೂ ಶ್ರುತಿಯು ಅದನ್ನೇ ಹೇಳಿ ವ್ಯರ್ಥವೆನಿಸಲಾರದು. ಅದಕ್ಕಿಂತ ವಿಲಕ್ಷಣವಾದ ತ್ರಿಕಾಲಾಬಾಧ್ಯತ್ವವನ್ನೇ ಹೇಳುತ್ತದೆ ಎಂದು ಒಪ್ಪಬೇಕು. ಶ್ರುತಿಯು ಪ್ರತ್ಯಕ್ಷ ಪ್ರಾಪ್ತಾನುವಾದಕವಲ್ಲ ಎನ್ನಬೇಕು.

ಯದ್ಯಪಿ ಸಿದ್ಧಾಂತದಲ್ಲಿ ವ್ಯಾವಹಾರಿಕ ಪಾರಮಾರ್ಥಿಕಗಳೆಂದು ಸತ್ವದಲ್ಲಿ ಎರಡು ಬಗೆಗಳಿಲ್ಲ. ಪ್ರಣಯನದಲ್ಲಿ ವೈಶ್ವದೇವ ಶುನಾಸೀರೀಯಗಳಲ್ಲಿರುವಂಥದ್ದು ವರುಣಪ್ರಘಾಸ ಸಾಕಮೇಧಗಳಲ್ಲಿರುವಂಥದ್ದೆಂದು ಎರಡು ಬಗೆ ಇವೆ. ಆದರೂ ಅದ್ವೈತಿಯು 'ಪ್ರತ್ಯಕ್ಷ ಮತ್ತು ಶ್ರುತಿಗಳು ಒಂದೇ ಬಗೆಯ ಸತ್ವವನ್ನು ಗ್ರಹಿಸುತ್ತವೆ, ಅನುವಾದಕವಾಗಿವೆ' ಎನ್ನಬಾರದು ಎನ್ನುವಲ್ಲಿ ತಾತ್ಪರ್ಯ.

**ಅನ್ಯಥಾ ಆತ್ಮನ ಆನಂದತ್ವಶ್ರುತಿರಪಿ 'ಸುಖಂ ಸುಪ್ತೋಽಸ್ಮಿ' ಇತಿ ಪ್ರತ್ಯಕ್ಷಪ್ರಾಪ್ತ ಅತಾತ್ವಿಕ ಆನಂದತ್ವಾನುವಾದಿನೀ ಸ್ಯಾತ್ । ಅನುವಾದಕತ್ವಂ ತು ಅಪ್ರಾಪ್ತವಿಷಯಾಂತರಾ ಭಾವೇ ಸಾವಕಾಶಂ ।**

'ಅನ್ಯಥಾ' ಪ್ರತ್ಯಕ್ಷಪ್ರಾಪ್ತವಾದುದನ್ನೇ ಶ್ರುತಿಯು ಅನುವಾದಿಸುತ್ತದೆ, ಎರಡೂ ವ್ಯಾವಹಾರಿಕ ಸತ್ವವನ್ನೇ ತಿಳಿಸುತ್ತವೆ ಎಂದರೆ 'ಆನಂದಂ ಬ್ರಹ್ಮ' ಎನ್ನುವ ಶ್ರುತಿಯೂ ಕೂಡ 'ಸುಖಂ ಸುಪ್ತೋಽಸ್ಮಿ' 'ಸುಖವಾಗಿ ನಿದ್ದೆ ಮಾಡಿದ್ದೇನೆ' ಎಂದು ಪ್ರತ್ಯಕ್ಷಪ್ರಾಪ್ತವಾದ ಅತಾತ್ವಿಕ ಆನಂದತ್ವವನ್ನೇ ಅನುವಾದ ಮಾಡುತ್ತದೆ ಎಂದೇಕೆ ಹೇಳಬಾರದು? ಅದ್ವೈತಿ ಹೇಳುತ್ತಾನೆ— ಹೀಗೆ ಪ್ರತಿಬಂದಿಯನ್ನು ಕೊಟ್ಟು ಶ್ರುತಿಗೆ ಅನುವಾದಕತ್ವವನ್ನು ಇಲ್ಲವೆಂದರೆ ಅನುವಾದಕತ್ವವೆಂಬುದೆ ಎಲ್ಲಿಯೂ ಇಲ್ಲವೆಂದಾದೀತು' ಎಂದು. ಇದಕ್ಕೆ ಶ್ರೀಮದಾಚಾರ್ಯರು ಹೇಳಿದ್ದಾರೆ— 'ಸರ್ವಾವಿವಾದ ಸ್ಥಳೇ ಏವ

ಕಥಂಚಿದನುವಾದಕತ್ವಂ' ಶ್ರುತಿಗೆ ಅಪ್ರಾಪ್ತವಾದ ಬೇರೆ ವಿಷಯವು ಸರ್ವಥಾ ಇಲ್ಲದಿದ್ದಲ್ಲಿ ಅನುವಾದಕತ್ವವು ಸಾವಕಾಶವಾಗುತ್ತದೆ.

ಇದಕ್ಕೆ ಉದಾಹರಣೆ ಹಿಂದೆ ಹೇಳಿದಂತೆ, ಅಗ್ನಿಚಯನ ಮಾಡುವಾಗ ಹಿರಣ್ಯವನ್ನಿಟ್ಟೇ ಅದರ ಮೇಲೆ ಚಯನ ಮಾಡುತ್ತಾರೆ. ಬರಿ ನೆಲದ ಮೇಲೆ ಮಾಡುವುದಿಲ್ಲ. ಆದರೂ 'ನ ಪೃಥಿವ್ಯಾಮಗ್ನಿಶ್ಚೇತವ್ಯಃ' ಎಂಬ ಶ್ರುತಿಯು 'ಬರಿನೆಲದ ಮೇಲೆ ಅಗ್ನಿಚಯನ ಮಾಡಬಾರದು' ಎಂದು ಹೇಳುತ್ತದೆ. ಇದು ವ್ಯರ್ಥ ಅನುವಾದವಾಗುವುದರಿಂದ 'ಹಿರಣ್ಯಪ್ರಶಂಸಾರ್ಥ ಈ ವಾಕ್ಯ ಹೊರಟಿದೆ' ಎನ್ನುತ್ತಾರೆ. ಸರ್ವಾವಿವಾದ ಸ್ಥಳವಾದ್ದರಿಂದ ಅನುವಾದಕತ್ವವು ಸ್ತುತಿರೂಪೇಣ ಕಥಂಚಿತ್ ಅವಕಾಶವನ್ನು ಪಡೆಯುತ್ತದೆ.



**निगमनवत्, तत्त्वमसीति नवकृत्वोऽभ्यासवत्, पिपासितस्य एकजलविषयक लिङ्ग शब्द प्रत्यक्ष रूप प्रमाण संप्लववत्, त्व(न्मते)त्पक्षे प्रत्यक्षसिद्ध भावरूपाज्ञाने "तम आसीदि"त्यादि श्रुतिवत्, श्रुतेरैक्य तात्पर्ये षड्विधलिङ्गवच्च प्रत्यक्षानाश्वास निरासेन दार्ढ्यार्थत्वाच्च । अनुवादकत्वं तु यत्र दार्ढ्यं प्रागेव सिद्धं तत्रैव । तदुक्तं "बहुप्रमाणसंवादश्च दार्ढ्यहेतुरेवे"ति ।**

**किञ्च यथा "षड्विंशतिरस्य वंक्रय" इति मन्त्रस्याश्वमेधे चोदकप्राप्तस्य "चतुस्त्रिंशद्वाजिनो देवबन्धो"रिति वैशेषिक मन्त्रेणापोदितस्य प्रतिप्रसवार्थं "षड्विंशतिरित्येव ब्रूयादि"ति वचनम् तथा प्रत्यक्षप्राप्तस्य जगत्सत्त्वस्याद्वैतश्रुत्याऽऽपाततोऽपोदितस्य प्रतिप्रसवार्थं सत्त्वश्रुतिः किं न स्यात्? दृश्यन्ते हि मृडमृदेत्याद्याः प्रतिप्रसवार्थं विधयः । तस्मात्**

**'धर्मिप्रमातृधर्मादिभेदान्न द्वैतगीर्वृथा ।**
**अहिंसावाग्भिन्नशाखावाग्द्विप्रणयनादिवत्' ।**

---

नन्वेवं प्रत्यक्षस्य त्रिकालाबाध्यत्वरूपसत्त्वाविषयकत्वे मिथ्यात्वग्राहि-

प्रमाणबाधकता न स्यादित्यत आह **निगमनवदिति** । ननु स्वतः सिद्धप्रमाणभावे प्रत्यक्षे क्लृप्तदोषाभावनिश्चयात् अनाश्वासशङ्कैव नोदेतुमर्हतीति त्वयैवोक्तत्वात् कथमेवंसति तद्विरोधो न स्यादित्यत आह **किञ्च यथेति** ।। एतच्च नवमेऽध्याये चतुर्थपादे विचारितम् । 'तत्प्रतिषिध्य प्रकृतिर्नियुज्यते सा चतुस्त्रिंशद्वाच्यत्वात् ।' (जै.सू.अ.९, पा.४,अधि.३,सू. १८) अग्नीषोमीयपशावध्रिगुप्रैषे श्रुतस्य षड्विंशतिरस्य वंक्रय इति मन्त्रस्याश्वमेधीयाश्वपशुके प्राजापत्ययागे चोदकप्राप्तस्य चतुस्त्रिंशद्वाजिनो देवबन्धोर्वंक्रीरश्वस्य स्वधितिः समेतीति वैशेषिकमन्त्रेणापोदितस्य सर्वथैव निवृत्तौ प्रसक्तायां तत्रैवेदमाम्नायते 'न चतुस्त्रिंशदिति ब्रूयात्, षड्विंशतिरित्येव ब्रूयात्' इति । तत्र च संशयः किमश्वस्य पठितमेव वैशेषिकमध्रिगुवचनं कर्तव्यमिति प्राकृताध्रिगुवचनस्य सर्वथैव निवृत्तिरुत न निवृत्तिरिति । तत्र 'न चतुस्त्रिंशदि'त्यादिवचनस्य 'चतुस्त्रिंशद्वाजिन' इत्यस्यां ऋचि चतुस्त्रिंशत्पदं प्रतिषिध्य षड्विंशतिपदनिधानार्थत्वोपपत्तेः समस्ताया ऋचः प्रतिषेधकत्वेन प्रकरणपठितायाः तस्याः बाधोऽभ्युपगन्तुमयुक्त इति प्राकृताध्रिगुवचनस्य निवृत्तिरेवेति प्राप्ते पठितायां ऋचि चतुस्त्रिंशत्पदप्रतिषेधे तत्र तत्स्थाने षड्विंशतिपदप्राप्तौ प्रमाणाभावेन षड्विंशतिरित्येव ब्रूयादिति तदनुवादासम्भवात् तस्यापि विधौ वाक्यभेदापत्तेः एकवाक्यत्वनिर्वाहाय नचतस्त्रिंशदिति वैशेषिकीं ऋचं प्रतिषिध्य षड्विंशतिरिति निष्परिपन्थिचोदकप्राप्तं प्राकृताध्रिगुवचनमनूद्यत इत्यभ्युपेयत्वात्, न तस्य निवृत्तिरिति सिद्धान्त इति ।। **आपाततोऽपोदितस्येति** ।। अविचारदशायामपवादविषयत्वेन प्रसक्तस्येत्यर्थः । **प्रतिप्रसवार्थमिति** ।। अपवादनिरासेनौत्सर्गिकस्य पुनःप्रापणार्थमित्यर्थः । उक्तमर्थमुपसंहारव्याजेन संगृह्णाति **तस्मादिति** ।। अत्र पञ्चम्यन्तो भेदशब्दो धर्म्यादिभिः प्रत्येकं सम्बध्यते । आदिशब्दात्संबन्धपरिग्रहः ।। **द्वैतगीरिति** ।। जगत्सत्त्वश्रुतिरित्यर्थः ।



ನಿಗಮನವತ್, ತತ್ತ್ವಮಸೀತಿ ನವಕೃತ್ವೋಽಭ್ಯಾಸವತ್, ಪಿಪಾಸಿತಸ್ಯ ಏಕಜಲವಿಷಯಕ ಲಿಂಗ ಶಬ್ದ ಪ್ರತ್ಯಕ್ಷರೂಪ ಪ್ರಮಾಣ ಸಂಪ್ಲವವತ್, ತ್ವತ್ ಪಕ್ಷೇ

**ಪ್ರತ್ಯಕ್ಷಸಿದ್ಧ ಭಾವರೂಪಾಜ್ಞಾನೇ 'ತಮ ಆಸೀತ್' ಇತ್ಯಾದಿ ಶ್ರುತಿವತ್, ಶ್ರುತೇರೈಕ್ಯ ತಾತ್ಪರ್ಯೇ ಷಡ್‌ವಿಧಲಿಂಗವಚ್ಚ ಪ್ರತ್ಯಕ್ಷಾನಾಶ್ವಾಸ ನಿರಾಸೇನ ದಾರ್ಢ್ಯಾರ್ಥತ್ವಾಚ್ಚ ।**

ಪ್ರತಿಜ್ಞಾ ಹೇತು ಉದಾಹರಣ ಉಪನಯ ನಿಗಮನ ಎಂದು ಪರಾರ್ಥಾನುಮಾನ ಪ್ರಯೋಗದಲ್ಲಿ ಐದು ಅವಯವಗಳಿವೆ. ಪರ್ವತವು ವಹ್ನಿ ಉಳ್ಳದ್ದಾಗಿದೆ ಎಂದು ಪ್ರತಿಜ್ಞೆ. ಹೊಗೆಯಿರುವುದರಿಂದ ಎಂದು ಹೇತುವಚನ, ಹೊಗೆ ಇರುವಲ್ಲೆಲ್ಲ ಬೆಂಕಿ ಇದೆ ಮಹಾನಸದಂತೆ ಎಂದು ಉದಾಹರಣ. ವಹ್ನಿ ವ್ಯಾಪ್ಯಧೂಮ ಉಳ್ಳದ್ದು ಪರ್ವತ ಎಂದು ಉಪನಯ. ಆದರಿಂದ ವಹ್ನಿ ಉಳ್ಳದ್ದು ಪರ್ವತ ಎಂದು ನಿಗಮನ. ಇಲ್ಲಿ 'ವಹ್ನಿ ಉಳ್ಳದ್ದು ಪರ್ವತ' ಎಂದು ಪ್ರತಿಜ್ಞೆಯಂತೆ ನಿಗಮನವೂ 'ವಹ್ನಿ ಉಳ್ಳದ್ದು ಪರ್ವತ' ಎನ್ನುತ್ತಿದೆ. ಹೀಗೆ ಪ್ರತಿಜ್ಞೆಯಲ್ಲಿ ಹೇಳಿದ್ದನ್ನೇ ನಿಗಮನದಲ್ಲಿ ಹೇಳಿದ್ದು ದಾರ್ಢ್ಯಕ್ಕಾಗಿ, 'ತತ್ವಮಸಿ' ಎಂದು ಜೀವಬ್ರಹ್ಮರಿಗೆ ಐಕ್ಯವನ್ನು ಒಂಬತ್ತು ಉದಾಹರಣೆಗಳೊಂದಿಗೆ ಒಂಬತ್ತು ಬಾರಿ ಹೇಳುವುದು ದಾರ್ಢ್ಯಕ್ಕಾಗಿ. ಬಾಯಾರಿದವನು ಜಲಪಾನಕ್ಕೆ ನಿಃಶಂಕವಾಗಿ ಪ್ರವೃತ್ತಿಮಾಡಲು ಲಿಂಗ ಶಬ್ದ ಪ್ರತ್ಯಕ್ಷಗಳೆಂದು ಅನೇಕ ಪ್ರಮಾಣಗಳಿಂದ ಸಂದೇಹ ಪರಿಹಾರ ಮಾಡಿಕೊಳ್ಳುತ್ತಾನೆ. ಒಂದೇ ಜಲವಿಷಯದಲ್ಲಿ ಮೂರು ಪ್ರಮಾಣಗಳು ಅನುವಾದಕಗಳೇ ಆದರೂ ಅವು ಜಲಜ್ಞಾನದಲ್ಲಿ ದಾರ್ಢ್ಯ ಉಂಟು ಮಾಡುವುವು.

ಅದ್ವೈತಮತದಲ್ಲಿ 'ಅಹಮಜ್ಞಃ' ಎನ್ನುವುದು ಭಾವರೂಪ ಅಜ್ಞಾನ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣ. ಆದರೂ 'ತಮ ಆಸೀತ್' 'ಸೃಷ್ಟಿಗೆ ಮೊದಲು ಭಾವರೂಪ ಅಜ್ಞಾನ ಮಾತ್ರವಿದ್ದಿತು' ಎಂದು ಶ್ರುತಿಯನ್ನು ತೋರಿಸುವುದು ದಾರ್ಢ್ಯಕ್ಕಾಗಿ.

ಶ್ರುತಿಗೆ ಅದ್ವೈತದಲ್ಲಿ ತಾತ್ಪರ್ಯ ಉಂಟೆನ್ನುವಲ್ಲಿ ಉಪಕ್ರಮಾದಿ ಷಡ್‌ವಿಧ ತಾತ್ಪರ್ಯ ಲಿಂಗಗಳೂ ಇವೆ ಎಂದು ಪ್ರತಿಪಾದನೆ ಮಾಡುತ್ತಾರೆ. ಅವೆಲ್ಲವೂ 'ಅದ್ವೈತದಲ್ಲಿ ತಾತ್ಪರ್ಯ'ವೆಂಬ ಒಂದೇ ವಿಷಯವನ್ನು ತಿಳಿಸುತ್ತಿದ್ದರೂ ಅವು ದಾರ್ಢ್ಯ ಉಂಟುಮಾಡುತ್ತವೆ. ಪ್ರತ್ಯಕ್ಷದಲ್ಲಿ ಅವಿಶ್ವಾಸವನ್ನು ದೂರಮಾಡುತ್ತವೆ.

ಅದೇ ರೀತಿ ಪ್ರತ್ಯಕ್ಷಪ್ರಾಪ್ತವಾದ ಜಗತ್‌ಸತ್ಯತ್ವವಿಷಯದಲ್ಲಿ ಅನಾಶ್ವಾಸವನ್ನು ದೂರ ಮಾಡಲು ಶ್ರುತಿಯೂ ಅದನ್ನು ಹೇಳುತ್ತದೆ. ಆದರಿಂದ ಅನುವಾದಕತ್ವವು ದೋಷವಲ್ಲ.

**ಅನುವಾದಕತ್ವಂ ತು ಯತ್ರ ದಾರ್ಢ್ಯಂ ಪ್ರಾಗೇವ ಸಿದ್ಧಂ ತತ್ರೈವ । ತದುಕ್ತಂ—**

**'ಬಹುಪ್ರಮಾಣ ಸಂವಾದಶ್ಚ ದಾರ್ಢ್ಯ ಹೇತುರೇವ' ಇತಿ ।**

ಎಲ್ಲಿ ದಾರ್ಢ್ಯವು ಮೊದಲೇ ಸಿದ್ಧವಾಗಿರುವುದೋ ಅಲ್ಲಿಯೇ ಅನುವಾದಕತ್ವವು ದೋಷ. ಶ್ರೀಮದಾಚಾರ್ಯರು ಹೇಳಿದ್ದಾರೆ—

'ಬಹುಪ್ರಮಾಣ ಸಂವಾದವು ದಾರ್ಢ್ಯಹೇತುವೇ ಆಗುತ್ತದೆ, ವ್ಯರ್ಥವಾಗುವುದಿಲ್ಲ.

**ಕಿಂಚ ಯಥಾ 'ಷಡ್‌ವಿಂಶತಿರಸ್ಯ ವಂಕ್ರಯ' ಇತಿ ಮಂತ್ರಸ್ಯ ಅಶ್ವಮೇಧೇ ಚೋದಕಪ್ರಾಪ್ತಸ್ಯ 'ಚತುಸ್ತ್ರಿಂಶದ್ ವಾಜಿನೋ ದೇವಬಂಧೋಃ' ಇತಿ ವೈಶೇಷಿಕ ಮಂತ್ರೇಣ ಅಪೋದಿತಸ್ಯ ಪ್ರತಿ ಪ್ರಸವಾರ್ಥಂ ಷಡ್‌ವಿಂಶತಿರಿತ್ಯೇವ ಬ್ರೂಯಾತ್ ಇತಿ ವಚನಂ ತಥಾ ಪ್ರತ್ಯಕ್ಷಪ್ರಾಪ್ತಸ್ಯ ಜಗತ್ ಸತ್ಯತ್ವಸ್ಯ ಅದ್ವೈತಶ್ರುತ್ಯಾ ಆಪಾತತೋಽಪೋದಿತಸ್ಯ ಪ್ರತಿಪ್ರಸವಾರ್ಥಂ ಸತ್ವಶ್ರುತಿಃ ಕಿಂ ನ ಸ್ಯಾತ್ ?**

ಸತ್ವಪ್ರತ್ಯಕ್ಷಕ್ಕೆ ವ್ಯಾವಹಾರಿಕ ಸತ್ವ ವಿಷಯಕತ್ವವನ್ನೂ ಸತ್ವಶ್ರುತಿಗೆ ಪಾರಮಾರ್ಥಿಕ ಸತ್ವವಿಷಯತ್ವವನ್ನು ಹೇಳಿ ಶ್ರುತಿಗೆ ಅನುವಾದಕತ್ವದೋಷ ಪರಿಹಾರ ಮಾಡಿದರೆ ಸತ್ವಪ್ರತ್ಯಕ್ಷಕ್ಕೆ ಮಿಥ್ಯಾತ್ವ ಶ್ರುತಿಬಾಧಕತ್ವವನ್ನು ಹೇಗೆ ಹೇಳಲಾದೀತು? ಎಂದು ಅದ್ವೈತಿ ಕೇಳಿದರೆ ನಾವು ಹೇಳುತ್ತೇವೆ, ನಿನ್ನ ರೀತಿಯಿಂದ ಪ್ರತ್ಯಕ್ಷಕ್ಕೆ ವ್ಯಾವಹಾರಿಕ ವಿಷಯತ್ವವನ್ನು ಅಭ್ಯುಪಗಮವಾದದಿಂದ ಒಪ್ಪಿದೆವು. ವಸ್ತುತಃ ಪ್ರತ್ಯಕ್ಷವು ಪಾರಮಾರ್ಥಿಕಸತ್ವ ವಿಷಯಕವೆ. 'ಆಗ ಸತ್ವಶ್ರುತಿಗೆ ಅನುವಾದಕತ್ವದೋಷ ಸ್ಥಿರವಾಗುವುದಿಲ್ಲವೆ?' ಎಂದರೆ, ಶ್ರುತಿಗೆ ಅನುವಾದಕತ್ವವು ಸ್ಥಿರವಾಗುವುದಿಲ್ಲ. ಪ್ರತ್ಯಕ್ಷಕ್ಕೇ ಪಾರಮಾರ್ಥಿಕಸತ್ವವಿಷಯಕತ್ವವು ಸ್ಥಿರವಾಗುತ್ತದೆ, ಶ್ರುತಿಯ ಸಂವಾದದಿಂದ ಪ್ರತ್ಯಕ್ಷಕ್ಕೆ ದಾರ್ಢ್ಯ ಉಂಟಾಗುತ್ತದೆ ಎಂದು, ಶ್ರುತಿಗೆ ಒಂದು ಪ್ರಯೋಜನವನ್ನು ಹೇಳಿದ್ದಾಯಿತು. ಇದೀಗ ಸತ್ವಪ್ರತ್ಯಕ್ಷವು ತಿಳಿಸುವ ಪಾರಮಾರ್ಥಿಕಸತ್ಯತ್ವವು ಮಿಥ್ಯಾತ್ವ ಶ್ರುತಿಯಿಂದ ಬಾಧಿತವಾಗಿದೆ ಎಂದು ಮೇಲುನೋಟಕ್ಕೆ ಕಂಡುಬಂದರೂ ಸತ್ಯತ್ವಶ್ರುತಿಯಿಂದ ಅದು ಪುನರುಜ್ಜೀವಿತವಾಯಿತೆಂದು ಸತ್ವಶ್ರುತಿಗೆ ಇನ್ನೊಂದು ಪ್ರಯೋಜನವನ್ನು ಹೇಳುತ್ತಿದ್ದಾರೆ.

ಪ್ರತ್ಯಕ್ಷಪ್ರಾಮಾಣ್ಯವು ಸಾಕ್ಷಿಯಿಂದ ಸಿದ್ಧವೇ ಇರುವಾಗ ಪ್ರತ್ಯಕ್ಷದಲ್ಲಿ ಕ್ಲೃಪ್ತದೋಷಗಳ ಅಭಾವ ನಿಶ್ಚಿತವಾಗಿಯೇ ಇರುತ್ತದೆ. ಅನಾಶ್ವಾಸ ಶಂಕೆಗೇ ಅವಕಾಶವಿಲ್ಲ ಎಂದು ನೀವೇ ಹೇಳುತ್ತಿದ್ದೀರಿ, ಅನಾಶ್ವಾಸ ಶಂಕೆಯನ್ನು ಪರಿಹರಿಸಿ ದಾರ್ಢ್ಯ ಉಂಟುಮಾಡಲು ಸತ್ವಶ್ರುತಿ ಬೇಕೆಂದೂ ನೀವೇ ಹೇಳುತ್ತೀರಿ. 'ಇದು ಪರಸ್ಪರ ವಿರುದ್ಧವಲ್ಲವೆ?' ಎಂದು ಅದ್ವೈತಿಯು ಆಕ್ಷೇಪಿಸಿದರೆ ಸತ್ವಶ್ರುತಿಗೆ ಇನ್ನೊಂದು ಪ್ರಯೋಜನವನ್ನು ಕೂಡ ಹೇಳುತ್ತಾರೆ.

'ತತ್‌ಪ್ರತಿಷಿಧ್ಯ ಪ್ರಕೃತಿರ್ಯುಜ್ಯತೇ ಸಾ ಚತುರ್ವಿಂಶದ್ ವಾಚ್ಯತ್ವಾತ್'

(ಜೈ.ಸೂ.9.4.18)

'ತತ್ ಪ್ರತಿಷಿಧ್ಯ' ಆ ವಿಶೇಷ ವಚನವನ್ನು ನಿಷೇಧಿಸಿ 'ಪ್ರಕೃತಿಃ ನಿಯುಜ್ಯತೇ' ಆ ಸ್ಥಾನದಲ್ಲಿ ಪ್ರಕೃತಿಯಿಂದ ಬಂದ ಹೋತೃವಚನವು ಪುನಃ ವಿಹಿತವಾಗುತ್ತದೆ. ಆದರಿಂದ ಪ್ರಕೃತಿಯಿಂದ ಬಂದ ಆ ಚತುಸ್ತ್ರಿಂಶದ್ ಪದಯುಕ್ತವಾದ ವಚನವು ಪಾಕ್ಷಿಕವಾಗಿ ಬರುವುದೆಂದು ಹೇಳಬೇಕಾಗಿದೆ ಎಂದು ಪೂರ್ವಪಕ್ಷ ಸೂತ್ರಾರ್ಥ.

ಅಗ್ನೀಷೋಮೀಯ ಪಶುಯಾಗದಲ್ಲಿ ಹೋತೃ ಹೇಳುವ ಪ್ರೈಷಮಂತ್ರ 'ಷಡ್‌ವಿಂಶತಿರಸ್ಯ

ವಂಕ್ರಯಃ' ಎಂದು. ಅಶ್ವಮೇಧ ಪಶುವನ್ನು ಪ್ರಜಾಪತಿ ದೇವತಾಕ ಯಾಗದಲ್ಲಿ ಅರ್ಪಿಸುವಾಗ ಈ ಮಂತ್ರವನ್ನು ಹೇಳಬೇಕೆಂದು ಚೋದಕದಿಂದ ಪ್ರಾಪ್ತವಾಗಿದೆ. ಈ ಮಂತ್ರವನ್ನು,

'ಚತುಸ್ತ್ರಿಂಶತ್ ವಾಜಿನೋ ದೇವಬಂಧೋಃ
ವಂಕ್ರೀರಶ್ವಸ್ಯ ಸ್ವಧಿತಿಃ ಸಮೇತಿ ।'

ಎಂಬ ವಿಶೇಷ ಮಂತ್ರವು ನಿಷೇಧಿಸುತ್ತದೆ. ಆಗ ಸಾಮಾನ್ಯಮಂತ್ರವು ನಿಷಿದ್ಧವಾಗುತ್ತಿರುವಾಗ,

ನ ಚತುಸ್ತ್ರಿಂಶದಿತಿ ಬ್ರೂಯಾತ್
ಷಡ್‌ವಿಂಶತಿರಿತ್ಯೇವ ಬ್ರೂಯಾತ್

ಎಂಬ ವಚನವು ಪ್ರಾಪ್ತವಾಗುತ್ತದೆ. ವಿಶೇಷ ಮಂತ್ರವು ಈಗ ಪೂರ್ತಿಯಾಗಿಯೇ ನಿಷಿದ್ಧವಾಗುವುದೆ ಇಲ್ಲವೆ ಎಂದು ಸಂದೇಹ.

ಪೂರ್ವಪಕ್ಷಿ ಹೇಳುತ್ತಾನೆ— ಪೂರ್ತಿಯಾಗಿ ಮಂತ್ರವನ್ನು ನಿಷೇಧಿಸುವುದು ಯುಕ್ತವಲ್ಲ. ಅದರಲ್ಲಿರುವ 'ಚತುಸ್ತ್ರಿಂಶತ್' ಎಂಬ ಪದವನ್ನು ಮಾತ್ರ ನಿಷೇಧಿಸಬೇಕು. ಅದರ ಸ್ಥಾನದಲ್ಲಿ 'ಷಡ್‌ವಿಂಶತಿಃ' ಎಂಬ ಪದವನ್ನು ಹೇಳಬೇಕು, ಎನ್ನುವುದೇ 'ನ ಚತುಸ್ತ್ರಿಂಶದಿತಿ ಬ್ರೂಯಾತ್ ಷಡ್‌ವಿಂಶತಿರಿತ್ಯೇವ ಬ್ರೂಯಾತ್' ಎಂಬ ವಚನದ ಅರ್ಥ ಹೊರತು ಪೂರ್ತಿಯಾಗಿ ಮಂತ್ರವನ್ನೇ ನಿಷೇಧಿಸುವುದು ಯುಕ್ತವಲ್ಲ! ಹೀಗಾಗಿ ಪ್ರಕೃತಿಯಿಂದ ಬಂದ ಸಾಮಾನ್ಯ ಮಂತ್ರವು ಪೂರ್ತಿ ನಿಷಿದ್ಧವಾಗುತ್ತದೆ ಎಂದು.

ಸಿದ್ಧಾಂತಿ ಹೇಳುತ್ತಾನೆ— ಮಂತ್ರದಲ್ಲಿ 'ಚತುಸ್ತ್ರಿಂಶತ್' ಎಂಬ ಪದವನ್ನು ಮಾತ್ರ ನಿಷೇಧಿಸುವ ಪಕ್ಷದಲ್ಲಿ ಅದರ ಸ್ಥಾನದಲ್ಲಿ 'ಷಡ್‌ವಿಂಶತಿಃ' ಎಂಬ ಪದ ಪ್ರಾಪ್ತಿಗೆ ಪ್ರಮಾಣವೇನಿಲ್ಲ. ಅದರಿಂದ 'ಷಡ್‌ವಿಂಶತಿರಿತ್ಯೇವ ಬ್ರೂಯಾತ್' ಎಂದು ಅನುವಾದ ಅಸಂಭವ. ಚತುಸ್ತ್ರಿಂಶತ್ ಪದದ ನಿಷೇಧವನ್ನೂ ಷಡ್‌ವಿಂಶತಿ ಪದವಿಧಾನವನ್ನೂ ಈ ಮಂತ್ರ ಮಾಡುತ್ತದೆ ಎಂದರೆ 'ಚತುಸ್ತ್ರಿಂಶತ್ ಪದವನ್ನು ತೆಗೆಯಬೇಕು', 'ಷಡ್‌ವಿಂಶತಿ ಪದವನ್ನು ಹಾಕಬೇಕು' ಎಂದು ಎರಡು ಬೇರೆಬೇರೆ ವಾಕ್ಯಗಳನ್ನು ಮಾಡಿಕೊಳ್ಳುವುದು ಅಯುಕ್ತ. ಅದರಿಂದ ಚತುಸ್ತ್ರಿಂಶತ್ ಪದಯುಕ್ತವಾದ ಮಂತ್ರವನ್ನು ಪೂರ್ತಿನಿಷೇಧಿಸಬೇಕು. ಆಗ ಪ್ರಕೃತಿಯಿಂದ ಬಂದ ಮಂತ್ರಕ್ಕೆ ಬಂದಿದ್ದ ನಿಷೇಧವನ್ನು ತೆರವು ಮಾಡಿದಂತಾಗುವುದರಿಂದ ಅದು ಸ್ವಾಭಾವಿಕವಾಗಿ ಪ್ರಾಪ್ತವಾಗುವುದು. 'ಷಡ್‌ವಿಂಶತಿರಿತ್ಯೇವ ಬ್ರೂಯಾತ್' ಎಂದು, ಅಪ್ರಾಕೃತ ಮಂತ್ರವನ್ನು ಈ ವಿಶೇಷ ಮಂತ್ರವು ಅನುವಾದ ಮಾಡುತ್ತದೆ ಎಂದಾಗುವುದು. ಹೀಗಾಗಿ ಪ್ರಾಕೃತ ಮಂತ್ರ ಪೂರ್ತಿ ನಿಷಿದ್ಧವಾಗುವುದಿಲ್ಲ ಎಂದು ಸಿದ್ಧಾಂತ.

ಹಾಗೇ ಪ್ರಕೃತ ಪ್ರತ್ಯಕ್ಷಪ್ರಾಪ್ತವಾದ ಜಗತ್‌ಸತ್ಯತ್ವವು ಅದ್ವೈತ ಶ್ರುತಿಯಿಂದ ಆಪಾತತಃ ಬಾಧಿತವಾದಾಗ ಅದರ ಪುನರುಜ್ಜೀವನವನ್ನು ಸತ್ವಶ್ರುತಿಯು ಮಾಡುತ್ತದೆ. ಇದು ಸತ್ವಶ್ರುತಿಯಿಂದಾಗುವ ಇನ್ನೊಂದು ಪ್ರಯೋಜನ.

**ದೃಶ್ಯಂತೇ ಹಿ ಮೃಡ ಮೃದೇತ್ಯಾದ್ಯಾಃ ಪ್ರತಿಪ್ರಸವಾರ್ಥಂ ವಿಧಯಃ ।**

'ನ ಕ್ತ್ವಾ ಸೇಟ್' ಸೇಟ್ ಧಾತುವಿಗೆ ಲಶಕ್ವತದ್ಧಿತೇ ಎಂದು ಬಂದ ಕ್ತ್ವಾ ಪ್ರತ್ಯಯವು ಕಿತ್ ಎನಿಸುವುದಿಲ್ಲ ಎಂಬುದು ಕಿತ್ವಾಪವಾದ ಸೂತ್ರ. ಈ ಅಪವಾದಕ್ಕೆ ಪ್ರತಿಪ್ರಸವ ಸೂತ್ರವು 'ಮೃಡ ಮೃದ ಗುಧ ಕುಷ ಕ್ಲಿಷ ವದ ವಸಃ ಕ್ತ್ವಾ' ಮೃಡ ಮುಂತಾದ ಧಾತುಗಳಿಗೆ ಬಂದ ಕ್ತ್ವಾ ಪ್ರತ್ಯಯವು ಕಿತ್ ಆಗುತ್ತದೆ. ಇಲ್ಲಿ 'ಮೃಡಮೃದ' ಇತ್ಯಾದಿ ಸೂತ್ರದಲ್ಲಿ ನಿಷೇಧಕ ನಕಾರವಿಲ್ಲ. ಆದರೂ ಅದು ಅಪ್ರಯೋಜಕವಾದ್ದರಿಂದ ನಿಷೇಧಕ ನಕಾರ ಯುಕ್ತವಾದ 'ನ ಕ್ತ್ವಾ ಸೇಟ್' ಎಂಬ ನಿಷೇಧಸೂತ್ರಕ್ಕೆ ನಿಷೇಧಕವಾಗಿ ಪ್ರತಿಪ್ರಸವ ಮಾಡುತ್ತದೆ. ಹಾಗೇ 'ವಿಶ್ವಂ ಸತ್ಯಂ' ಎಂದು ಶ್ರುತಿಯು ನಿಷೇಧಕ ನಕಾರ ಯುಕ್ತವಲ್ಲದಿದ್ದರೂ, ಅದು ಅಪ್ರಯೋಜಕವಾದ್ದರಿಂದ ಸತ್ವಗ್ರಾಹಿ ಪ್ರತ್ಯಕ್ಷ ನಿಷೇಧಕವಾದ ನೇಹ ನಾನೇತ್ಯಾದಿ ಅಪವಾದ ಶ್ರುತಿಗೆ ಬಾಧಕವಾಗಿ ಪ್ರತಿಪ್ರಸವ ಮಾಡುತ್ತದೆ.

**ತಸ್ಮಾತ್—**

**ಧರ್ಮಿ ಪ್ರಮಾತೃ ಧರ್ಮಾದಿ ಭೇದಾನ್ನ ದ್ವೈತಗೀರ್ವೃಥಾ ।**
**ಅಹಿಂಸಾವಾಗ್ ಭಿನ್ನಶಾಖಾವಾಗ್ ದ್ವಿಪ್ರಣಯನಾದಿವತ್ ॥**

ಸತ್ವಶ್ರುತಿಯು ಸತ್ವಪ್ರತ್ಯಕ್ಷ ಪ್ರಾಪ್ತಸತ್ವಾನುವಾದವಾದರೂ ವ್ಯರ್ಥವಲ್ಲ. 'ಧರ್ಮಿಭೇದಾತ್' ಧರ್ಮಿತಾವಚ್ಛೇದಕ ಭೇದವಿರುವುದರಿಂದ. ಅಂದರೆ ಪ್ರತ್ಯಕ್ಷವು ಪ್ರತ್ಯಕ್ಷಯೋಗ್ಯ ಘಟಾದಿ ಧರ್ಮಿಗಳಲ್ಲಿ ಮಾತ್ರವೇ ಸತ್ವವನ್ನು ಗ್ರಹಿಸುತ್ತದೆ. 'ವಿಶ್ವಂ ಸತ್ಯಂ' ಎಂಬ ಸತ್ವಶ್ರುತಿಯು ಅತೀಂದ್ರಿಯ ಧರ್ಮಾದಿ ಸಾಧಾರಣವಾಗಿ ವಿಶ್ವತ್ವಾವಚ್ಛೇದೇನ ಸರ್ವಧರ್ಮಿಗಳಲ್ಲಿ ಸತ್ವವನ್ನು ತಿಳಿಸುತ್ತದೆ. ಹೀಗೆ ಧರ್ಮಿಭೇದವಿರುವುದರಿಂದ ಸತ್ವಪ್ರತ್ಯಕ್ಷ ಮತ್ತು ಸತ್ವಶ್ರುತಿಗಳೆರಡೂ ಸಾರ್ಥಕ. ಇದಕ್ಕೆ ಉದಾಹರಣೆ 'ಅಹಿಂಸಾವಾಕ್' ನ ಹಿಂಸ್ಯಾತ್ ಸರ್ವಾಭೂತಾನಿ ಎಂಬ ವಾಕ್ಯವು ಸರ್ವಭೂತತ್ವಾವಚ್ಛೇದೇನ ಹಿಂಸಾನಿಷೇಧ ಮಾಡುತ್ತದೆ, ಬ್ರಾಹ್ಮಣೋ ನ ಹಂತವ್ಯಃ ಎಂಬ ವಾಕ್ಯವು ಬ್ರಾಹ್ಮಣತ್ವಾವಚ್ಛೇದೇನ ಹಿಂಸಾ ನಿಷೇಧ ಮಾಡುತ್ತದೆ. ಹೀಗೆ ಭೂತತ್ವ ಬ್ರಾಹ್ಮಣತ್ವರೂಪ ಧರ್ಮಿತಾವಚ್ಛೇದಕ ಭೇದವಿರುವುದರಿಂದ ಎರಡು ಅಹಿಂಸಾವಾಕ್ಯಗಳು ಸಾರ್ಥಕವಾಗುವುವು.

'ಪ್ರಮಾತೃಭೇದಾತ್'— ಸತ್ವಪ್ರತ್ಯಕ್ಷವು ಪ್ರತ್ಯಕ್ಷದಲ್ಲಿ ಅನಾಶ್ವಾಸವಿಲ್ಲದವರಿಗೆ ಸತ್ವವನ್ನು ತಿಳಿಸುತ್ತದೆ. ವಾದಿ ವಿಪ್ರತಿಪತ್ತಿಯಿಂದ ಪ್ರತ್ಯಕ್ಷದಲ್ಲಿ ವಿಶ್ವಾಸವಿಲ್ಲದವರಿಗೆ ಸತ್ವಶ್ರುತಿಯು ಸತ್ವನಿರ್ಣಯ ಮಾಡಿಕೊಡುತ್ತದೆ. ಇದಕ್ಕೆ ಉದಾಹರಣೆ— ಒಂದು ಶಾಖೆಯಲ್ಲಿ ವಿಹಿತವಾದ ಕರ್ಮವು ಆ ಶಾಖಾಧ್ಯೇತೃಗಳಿಗೆ ಸಿದ್ಧವಾಗುತ್ತದೆ. ಬೇರೆ ಶಾಖೆಯವರಿಗೆ ಆ ಬೇರೆ ಶಾಖೆಯಲ್ಲಿ ಹೇಳಿದರೆ ಮಾತ್ರ ಆ ಕರ್ಮ ಸಿದ್ಧವಾಗುತ್ತದೆ. ಹೀಗೆ ಶಾಖಾಭೇದದಿಂದ ಅಧ್ಯೇತೃಭೇದ ವಿರುವುದರಿಂದ ಭಿನ್ನ ಶಾಖೆಗಳಲ್ಲಿ ಒಂದೇ ಕರ್ಮವಿಧಾನ ಮಾಡುವುದು ಸಾರ್ಥಕವಾಗುವುದು.

'ಧರ್ಮಭೇದಾತ್'—ಸತ್ವಪ್ರತ್ಯಕ್ಷವು ವ್ಯಾವಹಾರಿಕ ಸತ್ವವನ್ನು ತಿಳಿಸುತ್ತದೆ. ಸತ್ವಶ್ರುತಿಯು

ಪಾರಮಾರ್ಥಿಕ ಸತ್ವವನ್ನು ತಿಳಿಸುತ್ತದೆ. ಹೀಗೆ ವ್ಯಾವಹಾರಿಕತ್ವ ಪಾರಮಾರ್ಥಿಕತ್ವರೂಪ ಪ್ರಕಾರಭೇದದಿಂದ ಸತ್ವವನ್ನು ತಿಳಿಸುವ ಪ್ರತ್ಯಕ್ಷಶ್ರುತಿಗಳೆರಡೂ ಸಾರ್ಥಕವಾಗುತ್ತವೆ. ಇದಕ್ಕೆ ಉದಾಹರಣೆ— ಚಾತುರ್ಮಾಸ್ಯಯಾಗದ ನಡುವಿನ ಎರಡು ಪರ್ವಗಳಲ್ಲಿ ಚೋದಕದಿಂದ ದಾರ್ಶಪೌರ್ಣಮಾಸಿಕ ಪ್ರಣಯನ ಪ್ರಾಪ್ತವಾಗುತ್ತದೆ. ದ್ವಯೋಃ ಪ್ರಣಯಂತಿ ಎಂಬ ವಾಕ್ಯದಿಂದ ಸೌಮಿಕಪ್ರಣಯನವು ಉಕ್ತವಾಗುತ್ತದೆ. ಎರಡಕ್ಕೂ ವಿರೋಧವಿಲ್ಲ. ದಾರ್ಶಪೌರ್ಣಮಾಸಿಕತ್ವ ಸೌಮಿಕತ್ವರೂಪ ಧರ್ಮಭೇದದಿಂದ ಎರಡೂ ಪ್ರಣಯನಗಳು ಸಾರ್ಥಕವಾಗುವುವು.

'ಧರ್ಮಿ ಪ್ರಮಾತೃ ಧರ್ಮಾದಿ ಭೇದಾತ್' ಎಂಬಲ್ಲಿ ಆದಿಶಬ್ದದಿಂದ ಸಂಬಂಧ ಭೇದವನ್ನಿಟ್ಟುಕೊಳ್ಳಬೇಕು. ಸತ್ವಪ್ರತ್ಯಕ್ಷವು ಸತ್ವಕ್ಕೆ ಅಪ್ರಾಪ್ತ ಪ್ರಾಪಕ. ಸತ್ವಶ್ರುತಿಯು ಅದಕ್ಕೇ ಅಪೋದಿತ ಪ್ರಾಪಕ. ಪ್ರತ್ಯಕ್ಷಪ್ರಾಪ್ತವಾದ ಸತ್ವವು ಮಿಥ್ಯಾತ್ವಶ್ರುತಿಯಿಂದ ಆಪಾತತಃ ಅಪೋದಿತವಾದಾಗ ಸತ್ವಶ್ರುತಿಯು ಅದಕ್ಕೆ ಪುನಃ ಪ್ರಾಪಕವಾಗುತ್ತದೆ. ಇದಕ್ಕೆ ಉದಾಹರಣೆ— ಅಶ್ವಮೇಧೀಯ ಅಶ್ವಪಶುಕವಾದ ಪ್ರಾಜಾಪತ್ಯಯಾಗದಲ್ಲಿ ಅದಕ್ಕೆ ಪ್ರಕೃತಿಯಾದ ಅಗ್ನೀಷೋಮೀಯಪಶುಯಾಗದಿಂದ 'ಷಡ್ವಿಂಶತಿರಸ್ಯವಂಕ್ರಯಃ' ಎಂಬ ಮಂತ್ರವು ಚೋದಕದಿಂದ ಪ್ರಾಪ್ತವಾಗುತ್ತದೆ. ಇಲ್ಲಿ ಈ ಮಂತ್ರಕ್ಕೆ ಚೋದಕವು ಅಪ್ರಾಪ್ತಪ್ರಾಪಕ. ಈ ಮಂತ್ರವು 'ಚತುಸ್ತ್ರಿಂಶತ್ ವಾಜಿನೋ ದೇವಬಂಧೋಃ' ಎಂಬ ಮಂತ್ರದಿಂದ ಆಪಾತತಃ ಆಪೋದಿತವಾದಾಗ 'ನ ಚತುಸ್ತ್ರಿಂಶದಿತಿ ಬ್ರೂಯಾತ್ ಷಡ್ವಿಂಶತಿರಿತ್ಯೇವ ಬ್ರೂಯಾತ್' ಎಂಬ ವಿಶೇಷ ವಚನವು ಅದನ್ನು ಪುನಃ ವಿಧಾನ ಮಾಡುತ್ತದೆ. ಇದು ಈ ಮಂತ್ರಕ್ಕೆ ಆಪೋದಿತ ಪ್ರಾಪಕ. ಒಂದೇ ಮಂತ್ರದ ವಿಷಯದಲ್ಲಿ ಚೋದಕ ಮತ್ತು ವಿಶೇಷವಚನಗಳಿಗೆ ಅಪ್ರಾಪ್ತಪ್ರಾಪಕತ್ವ ಮತ್ತು ಅಪೋದಿತ ಪ್ರಾಪಕತ್ವರೂಪ ಸಂಬಂಧ ಭೇದವಿರುವುದರಿಂದ ಎರಡೂ ಸಾರ್ಥಕ.

ಸತ್ವಪ್ರತ್ಯಕ್ಷವು ಕೇವಲ ವರ್ತಮಾನ ಕಾಲಾಬಾಧ್ಯತ್ವರೂಪ ವ್ಯಾವಹಾರಿಕ ಸತ್ವವನ್ನು ಗ್ರಹಣ ಮಾಡುತ್ತದೆ. ಸತ್ವಶ್ರುತಿಯು ತ್ರಿಕಾಲಾಬಾಧ್ಯತ್ವರೂಪ ಪಾರಮಾರ್ಥಿಕಸತ್ವವನ್ನು ಹೇಳುತ್ತದೆ ಎಂದು ಧರ್ಮಭೇದದಿಂದ ಎರಡೂ ಸಾರ್ಥಕವೆಂದು ಹೇಳಿದ್ದಕ್ಕೆ ಸಿದ್ಧಿಕಾರನ ಆಕ್ಷೇಪ—

'ತ್ರೈಕಾಲಿಕ ಸತ್ವನಿಷೇಧಕವಾದ ಮಿಥ್ಯಾತ್ವಶ್ರುತಿಯ ವಿರೋಧವಿರುವುದರಿಂದ ಸತ್ವಶ್ರುತಿಯು ತ್ರೈಕಾಲಿಕಸತ್ವವನ್ನು ಹೇಳಲಾರದು' ಎಂದು.

'ಇದಕ್ಕೆ ವಿಪರೀತವಾಗಿ ತ್ರೈಕಾಲಿಕ ಸತ್ವಶ್ರುತಿಯ ವಿರೋಧವಿರುವುದರಿಂದ ಮಿಥ್ಯಾತ್ವ ಶ್ರುತಿಯು ತ್ರೈಕಾಲಿಕ ಸತ್ವನಿಷೇಧ ಮಾಡಲಾರದು ಎಂದೇಕೆ ಹೇಳಬಾರದು? ವಿನಿಗಮಕವೇನು?' ಎನ್ನಬಾರದು. ತಾತ್ಪರ್ಯಾನ್ಯಥಾನುಪಪತ್ತಿ ಮತ್ತು ಗತಿಸಾಮಾನ್ಯಗಳೇ ವಿನಿಗಮಕ.

ಅದ್ವೈತ ಶ್ರುತಿಯು ಷಡ್ವಿಧ ತಾತ್ಪರ್ಯ ಲಿಂಗೋಪೇತವಾಗಿದೆ. ತಾತ್ಪರ್ಯಲಿಂಗ ಷಡ್ವಿಧ ಹೇಗೆಂದರೆ ಅಜ್ಞಾತತ್ವ ಅಬಾಧಿತತ್ವ ಮತ್ತು ಪ್ರಯೋಜನವತ್ವ ಇವು ಮೂರು– ಪ್ರಾಮಾಣ್ಯ

ಶರೀರಘಟಕವಾಗಿ ಅರ್ಥನಿಷ್ಠವಾಗಿವೆ. ಉಪಕ್ರಮೋಪಸಂಹಾರೈಕ ರೂಪ್ಯ ಅಭ್ಯಾಸ ಮತ್ತು ಅರ್ಥವಾದ ಇವು ಮೂರು ಶಬ್ದನಿಷ್ಠವಾಗಿದ್ದು ಅತಿಪ್ರಸಂಗವಾರಕವಾಗಿವೆ. ಶಬ್ದನಿಷ್ಠವಾದ ಮೂರು ತಾತ್ಪರ್ಯಲಿಂಗಗಳು ಅದ್ವೈತಶ್ರುತಿಗೆ ಇವೆ ಎನ್ನುವಲ್ಲಿ ವಿವಾದವಿಲ್ಲ. ಎಲ್ಲ ಉಪನಿಷತ್ತುಗಳಲ್ಲಿಯೂ ಇವು ಕಂಡು ಬರುತ್ತವೆ. ಅಜ್ಞಾತತ್ವ ಮತ್ತು ಸಪ್ರಯೋಜನತ್ವಗಳೆಂಬ ಅರ್ಥನಿಷ್ಠ ಲಿಂಗಗಳಲ್ಲಿಯೂ ವಿವಾದವಿಲ್ಲ. ಏಕೆಂದರೆ ಅದ್ವೈತವು ಪ್ರತ್ಯಕ್ಷಾದಿ ಪ್ರಮಾಣದಿಂದ ಅಸಿದ್ಧವಾದ್ದರಿಂದ ಅಜ್ಞಾತ ಮೋಕ್ಷಹೇತು ಜ್ಞಾನ ವಿಷಯವಾದ್ದರಿಂದ ಪ್ರಯೋಜನವತ್ವರೂಪ ಅರ್ಥನಿಷ್ಠ ಲಿಂಗವೂ ಇದೆ.

ಅಬಾಧಿತತ್ವವು ಮಾತ್ರ ಸಂದಿಗ್ಧ. ಆದರೆ ಅದು ಕೂಡ ಅನ್ಯಥಾನುಪಪತ್ತಿಯಿಂದಲೂ ಗತಿಸಾಮಾನ್ಯದಿಂದಲೂ ನಿರ್ಣಯವಾಗುತ್ತದೆ. ಏಕೆಂದರೆ ಅದ್ವೈತವು ಸರ್ವಪ್ರಪಂಚ ನಿಷೇಧರೂಪ ವಾದ್ದರಿಂದ ವ್ಯಾವಹಾರಿಕವಾಗಲು ಸಾಧ್ಯವಿಲ್ಲ. ಆದರಿಂದ ಅದ್ವೈತ ಶ್ರುತಿಗೆ ವ್ಯಾವಹಾರಿಕ ಪ್ರಾಮಾಣ್ಯವನ್ನೂ ಬಾಧಿತತ್ವವನ್ನೂ ಹೇಳಲು ಬರುವುದಿಲ್ಲ. ಅದರಿಂದ ತಾತ್ವಿಕಪ್ರಾಮಾಣ್ಯವನ್ನೇ ಹೇಳಬೇಕು. ದ್ವೈತಸತ್ಯತ್ವವು ವ್ಯಾವಹಾರಿಕ. ಅದರಿಂದ ಅದರಲ್ಲಿ ಶ್ರುತಿಗೆ ತಾತ್ವಿಕ ಪ್ರಾಮಾಣ್ಯವಿಲ್ಲ. ಪರಸ್ಪರ ವಿರುದ್ಧವಾದ ದ್ವೈತ ಅದ್ವೈತಗಳೆರಡೂ ತಾತ್ವಿಕವಾಗಲಾರವು. ವಸ್ತುವಿನಲ್ಲಿ ವಿಕಲ್ಪವು ಕೂಡಲಾರದು. ಒಂದು ತಾತ್ವಿಕಪ್ರಮಾಣ, ಇನ್ನೊಂದು ವ್ಯಾವಹಾರಿಕ ಪ್ರಮಾಣ ಎಂದು ವ್ಯವಸ್ಥೆ ಕೂಡುವುದು. ವಿಶ್ವಸತ್ಯತ್ವವಾಕ್ಯಕ್ಕೆ ಸ್ತುತಿಪರತ್ವವಿರುವುದರಿಂದ ಸತ್ಯತ್ವದಲ್ಲಿ ತಾತ್ಪರ್ಯವಿಲ್ಲವೆಂದು ನಿರ್ಣಯವಾಗಿರುವುದರಿಂದ ವಿಶ್ವಸತ್ಯತ್ವವಾಕ್ಯಕ್ಕೇ ಅನ್ಯಾರ್ಥ ಮಾಡಬೇಕು. 'ವಿಶ್ವಂ ಸತ್ಯಂ' ಎಂಬ ವಾಕ್ಯದಲ್ಲಿ ಅಧ್ಯಾಸೇ ಸಾಮಾನಾಧಿಕರಣ್ಯಂ ಎಂದಾಗಲಿ, ಬಾಧಾಯಾಂ ಸಾಮಾನಾಧಿಕರಣ್ಯಂ ಎಂದಾಗಲಿ ಹೇಳಬೇಕು.

'ಇದಂ ರಜತಂ' ಈ ವಸ್ತುವಿನಲ್ಲಿ ರಜತವು ಅಧ್ಯಸ್ತವಾಗಿದೆ. ಇದು ಅಧ್ಯಾಸೇ ಸಾಮಾನಾಧಿ ಕರಣ್ಯ. 'ಸ್ಥಾಣುಃ ಪುರುಷಃ' ಸ್ಥಾಣುವು ಪುರುಷ ಎಂಬುದು ಬಾಧಿತ. ಇದು ಬಾಧಾಯಾಂ ಸಾಮಾನಾಧಿಕರಣ್ಯ. ಸತ್ಯತ್ವ ಶ್ರುತಿಯಲ್ಲಿ ಈ ಬಗೆಯ ಸಾಮಾನಾಧಿಕರಣ್ಯಗಳು ಕೂಡುವುದರಿಂದ ಅದು ಷಡ್ವಿಧ ತಾತ್ಪರ್ಯಲಿಂಗೋಪೇತವಾದ ಅದ್ವೈತ ಶ್ರುತಿಗೆ ಬಾಧಕವಾಗಲಾರದು'.

—'ಇದು ಸರಿಯಲ್ಲ. ಅದ್ವೈತದಲ್ಲಿ ಅಬಾಧಿತತ್ವರೂಪ ತಾತ್ಪರ್ಯಲಿಂಗವಿಲ್ಲ. ಪರೀಕ್ಷಿತವಾದ ಸಾಕ್ಷಿ ಪ್ರತ್ಯಕ್ಷದಿಂದಲೂ ಅಪೂರ್ವಾರ್ಥಕವಾದ ಭೇದಶ್ರುತಿಯಿಂದಲೂ ಅದ್ವೈತವು ಬಾಧಿತವೇ ಆಗಿದೆ. ಅದರಿಂದ ಅದ್ವೈತದಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ. ಏಕವಿಧಾರ್ಥ ಪ್ರತಿಪಾದಕತ್ವರೂಪ ಗತಿಸಾಮಾನ್ಯವೂ ಇಲ್ಲ. ಶ್ರುತಿಯು ಅಖಂಡಾರ್ಥಪರವೆಂದಮೇಲೆ ಏಕವಿಧ ಬ್ರಹ್ಮಪ್ರತಿಪಾದಕ ವಲ್ಲ. ಐಕ್ಯಜ್ಞಾನವು ಮೋಕ್ಷಸಾಧನವಲ್ಲವಾದ್ದರಿಂದ ಪ್ರಯೋಜನವತ್ವವೂ ಇಲ್ಲ. ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ಎಂಬ ಪ್ರಮಾಣದಿಂದ ಐಕ್ಯಜ್ಞಾನವು ಅನರ್ಥಸಾಧನವೆಂದೇ ನಿರ್ಣೀತವಾಗಿದೆ. ಇನ್ನು ಅಜ್ಞಾತತ್ವ ಒಂದು ಉಳಿಯಿತು. ಅಷ್ಟರಿಂದಲೇ

ಪ್ರಾಮಾಣ್ಯವನ್ನು ಹೇಳುವುದಾದರೆ ಬೌದ್ಧೋಕ್ತಕ್ಷಣಿಕತ್ವ ಶೂನ್ಯಜಗತ್ಕಾರಣತ್ವಾದಿ ಪ್ರತಿಪಾದಕ ಬೌದ್ಧಾಗಮಗಳಿಗೂ ಪ್ರಾಮಾಣ್ಯವನ್ನು ಹೇಳಬೇಕಾದೀತು. ಶಬ್ದನಿಷ್ಠ ಉಪಕ್ರಮಾದಿ ಲಿಂಗಗಳೂ ಅಸಿದ್ಧ. ಅದ್ವೈತಶ್ರುತಿಯು ಮಿಥ್ಯಾತ್ವವಿಶಿಷ್ಟವನ್ನು ಹೇಳಿದರೆ ಅಖಂಡಾರ್ಥಪರತ್ವಭಂಗ. ಲಕ್ಷಣಯಾ ಸ್ವರೂಪಮಾತ್ರ ಪರವೆಂದರೆ ಭೇದಕ್ಕೆ ಅದು ಬಾಧಕವಾಗಲಾರದು. ಸತ್ವಶ್ರುತಿಗೆ ಅಧ್ಯಾಸೇ ಸಾಮಾನ್ಯಾಧಿಕರಣ್ಯವೂ ಅಸಿದ್ಧ. ಬಾಧಾಯಾಂ ಸಾಮಾನಾಧಿಕರಣ್ಯವೂ ಅಸಿದ್ಧ.



**किञ्च प्रत्यक्षं प्रमाणं चेत्तद्बाधो मिथ्यात्वानुमानादेः, नचेत्कथं सत्त्वश्रुतिरनुवादिका । श्रुतेः सदर्थत्वायाननुवादकत्वाय च प्रत्यक्षाप्राप्त तात्विक सत्व विषयत्वोपपत्तेः । नहि प्रमाभ्रमयोरेकविषयता ।**

**किञ्च—**

**'यथा नापहरेत् द्वैताभावश्रुत्यर्थमक्षधीः ।**

**तथा नोपहरेद् द्वैतश्रुत्यर्थमपि दुर्बला ।'**

**प्रत्यक्षं प्रमाणत्वेन निश्चितं चेत्तद्बाधो मिथ्यात्वानुमानादेः । अनिश्चितं चेत्प्रत्यक्षं मिथ्यात्वश्रुतिविषयापहार इव सत्त्वश्रुति-विषयोपहारेऽप्यशक्तं स्वप्रामाण्यनिर्णयाय श्रुतिसंवादापेक्षं सन्न श्रुत्यनुवादकत्वापादकम् । अस्यौष्ण्यप्रत्यक्षस्य प्रामाण्यानिश्चयेऽ-ग्निर्हिमस्य भेषजमित्यादिरप्यनुवादो न स्यादेव । अन्यथा ''सत्यं ज्ञानं, नेह नाने''त्यादि श्रुतिरप्यनुबादिनी स्यात् । ब्रह्मसत्त्वस्य लोकतो भ्रमाधिष्ठानत्वादिलिङ्गेन च विश्वमिथ्यात्वस्य च दृश्यत्वाद्यनुमानेनावेदमूल प्रवाहानादि विज्ञान वादादिना च प्राप्तेः ।**



**कथं सत्त्वश्रुतिरनुवादिकेति ।** न कथमपीत्यर्थः ।। **श्रुतेरिति ।।** नित्यनिर्दुष्टत्वेन प्रामाण्यनिश्चयादिति भावः । किञ्च प्रत्यक्षं प्रमाणं चेदि-त्यादिनोक्तमेवार्थं प्रतिवादिमुखेन (प्रतिबन्दीमुखेन) द्रढयति **किञ्चेति ।।**

**नश्रुत्यनुवादत्वापादकमिति ।।** निश्चितप्रामाण्यज्ञानसमानविषयकज्ञानजनकस्यै-वानुवादकत्वरूपत्वादिनि भावः । नन्वेवं तर्हि ''अग्निर्हिमस्य भेषजमि''त्यादिः औष्ण्यप्रत्यक्षस्य प्रामाण्यानिश्चयदशायामनुवादो न स्यादित्याशङ्क्येष्टापत्त्या समाधत्ते **अग्न्यौष्ण्येति ।। अन्यथेति ।।** यथाकथंश्चित्प्राप्तार्थत्वमात्रेणानुवादकत्व इत्यर्थः ।। **लोकत इति ।।** प्रत्यक्षतो वा लोकप्रसिद्धितो वेत्यर्थः ।।



**ಕಿಂಚ ಪ್ರತ್ಯಕ್ಷಂ ಪ್ರಮಾಣಂ ಚೇತ್ ತದ್‌ಬಾಧೋ ಮಿಥ್ಯಾತ್ವಾನುಮಾನಾದೇಃ, ನ ಚೇತ್ ಕಥಂ ಸತ್ವಶ್ರುತಿರನುವಾದಿಕಾ? ಶ್ರುತೇಃ ಸದರ್ಥತ್ವಾಯ ಅನನುವಾದಕತ್ವಾಯ ಚ ಪ್ರತ್ಯಕ್ಷಾಪ್ರಾಪ್ತತಾತ್ವಿಕಸತ್ವವಿಷಯತ್ವೋಪಪತ್ತೇಃ। ನಹಿ ಪ್ರಮಾ ಭ್ರಮಯೋಃ ಏಕವಿಷಯತಾ।**

ಪ್ರತ್ಯಕ್ಷವು ಪ್ರಮಾಣವೆ, ಅಬಾಧಿತಾರ್ಥಗ್ರಾಹಕವೆ ಎನ್ನುವುದಾದರೆ ಅದರಿಂದ ಮಿಥ್ಯಾತ್ವಾನುಮಾನಾಗಮಗಳಿಗೆ ಬಾಧವೆ. ಹಾಗಲ್ಲದಿದ್ದರೆ ಸತ್ವಶ್ರುತಿಯು ಹೇಗೆ ಅನುವಾದಕ? ಶ್ರುತಿಯು ನಿತ್ಯ, ನಿರ್ದುಷ್ಟವಾಗಿದ್ದು, ಅದರ ಪ್ರಾಮಾಣ್ಯವು ನಿಶ್ಚಿತವಾಗಿರುವುದರಿಂದ ಅದನ್ನು ಅಬಾಧಿತಾರ್ಥಕವೆಂದೂ, ಅನುವಾದಕವಲ್ಲವೆಂದೂ ಒಪ್ಪಲೇಬೇಕಾಗುವುದು. ಅದಕ್ಕೆ ಪ್ರತ್ಯಕ್ಷಾಪ್ರಾಪ್ತವಾದ ತಾತ್ವಿಕಸತ್ವವು ವಿಷಯವೆನ್ನಲೇಬೇಕು. ಏಕೆಂದರೆ ಪ್ರಮಾ ಭ್ರಮಗಳಿಗೆ ಒಂದೇ ವಿಷಯವೆನ್ನಲಾಗದು ತಾನೆ? ಅಪ್ರಮಾಣವಾದ ಪ್ರತ್ಯಕ್ಷದಂತೆ ಪ್ರಮಾಣವಾದ ಶ್ರುತಿಯೂ ಕೂಡ ಅತಾತ್ವಿಕ ಸತ್ವವನ್ನೇ ಹೇಳಿದರೆ ಪ್ರಮಾ ಭ್ರಮಗಳಿಗೆ ಏಕವಿಷಯತ್ವವನ್ನೇ ಹೇಳಿದಂತಾಗುತ್ತದೆ.

**ಕಿಂಚ—**

**ಯಥಾನಾಪಹರೇತ್ ದ್ವೈತಾಭಾವಶ್ರುತ್ಯರ್ಥಮಕ್ಷಧೀಃ।**
**ತಥಾ ನೋಪಹರೇದ್ ದ್ವೈತಶ್ರುತ್ಯರ್ಥಮಪಿ ದುರ್ಬಲಾ।**

ಪ್ರತ್ಯಕ್ಷವು ದುರ್ಬಲವಾದ್ದರಿಂದ ಅದ್ವೈತ ಶ್ರುತ್ಯರ್ಥವನ್ನು ಬಾಧಿಸಲಾರದು ಎನ್ನುವುದಾದರೆ ದುರ್ಬಲವಾದ್ದರಿಂದಲೇ ಪ್ರತ್ಯಕ್ಷವು ದ್ವೈತಶ್ರುತಿಗೆ ದ್ವೈತಶ್ರುತ್ಯರ್ಥವನ್ನು ಅನುವಾದ ಮಾಡಲು ನೀಡದು. ಇದರ ವಿವರಣೆ—

**ಪ್ರತ್ಯಕ್ಷಂ ಪ್ರಮಾಣತ್ವೇನ ನಿಶ್ಚಿತಂ ಚೇತ್ ತದ್‌ಬಾಧೋ ಮಿಥ್ಯಾತ್ವಾನುಮಾನಾದೇ। ಅನಿಶ್ಚಿತಂ ಚೇತ್ ಪ್ರತ್ಯಕ್ಷಂ ಮಿಥ್ಯಾತ್ವಶ್ರುತಿವಿಷಯಾಪಹಾರ ಇವ ಸತ್ವಶ್ರುತಿವಿಷಯೋಪ-ಹಾರೇಽಪ್ಯಶಕ್ತಂ ಸ್ವಪ್ರಾಮಾಣ್ಯನಿರ್ಣಯಾಯ ಶ್ರುತಿಸಂವಾದಾಪೇಕ್ಷಂ ಸತ್, ನ ಶ್ರುತ್ಯನುವಾದಕತ್ವಾಪಾದಕಂ।**

ಪ್ರತ್ಯಕ್ಷವು ಪ್ರಮಾಣವೆಂದು ನಿಶ್ಚಿತವಾಗಿದ್ದರೆ ಅದರಿಂದ ಮಿಥ್ಯಾತ್ವಾನುಮಾನಾದಿಗಳಿಗೆ ಬಾಧವೆಂದು ಹೇಳಬೇಕು. ಪ್ರತ್ಯಕ್ಷವು ಪ್ರಮಾಣವೆಂದು ನಿಶ್ಚಿತವಲ್ಲದಿದ್ದರೆ ಅದು ಮಿಥ್ಯಾತ್ವಶ್ರುತಿಯ ವಿಷಯವನ್ನು ಬಾಧಿಸಿ ಹೇಗೆ ಅಪಹರಿಸಲಾರದೋ ಹಾಗೇ ಸತ್ಯತ್ವಶ್ರುತಿಗೆ ವಿಷಯವನ್ನೂ ತಂದುಕೊಡಲಾರದು. ತನ್ನ ಪ್ರಾಮಾಣ್ಯ ನಿರ್ಣಯಕ್ಕೇ ಶ್ರುತಿಯ ಸಂವಾದವನ್ನು ಅಪೇಕ್ಷಿಸೀತು. ಹೊರತು ಶ್ರುತಿಗೆ ವಿಷಯವನ್ನು ತಂದುಕೊಟ್ಟು ಅದನ್ನು ಅನುವಾದಕವನ್ನಾಗಿ ಮಾಡಲಾರದು. ಪ್ರಮಾಣವೆಂದು ನಿಶ್ಚಿತವಾದ ಬೇರೆ ಜ್ಞಾನದ ವಿಷಯವನ್ನು ವಿಷಯೀಕರಿಸಿದರೇ ಅನುವಾದಕವು ಅನುವಾದಕವೆನಿಸುವುದು.

**ಅಗ್ನ್ಯೌಷ್ಣ್ಯ ಪ್ರತ್ಯಕ್ಷಸ್ಯ ಪ್ರಾಮಾಣ್ಯಾನಿಶ್ಚಯೇ 'ಅಗ್ನಿರ್ಹಿಮಸ್ಯ ಭೇಷಜಂ' ಇತ್ಯಾದಿರಪ್ಯನುವಾದೋ ನ ಸ್ಯಾದೇವ।**

'ಅಗ್ನಿ ಉಷ್ಣವಾಗಿದೆ' ಎನ್ನುವ ಪ್ರತ್ಯಕ್ಷಕ್ಕೆ ಪ್ರಾಮಾಣ್ಯ ನಿಶ್ಚಿತವಾಗಿರದಿದ್ದರೆ 'ಅಗ್ನಿಯು ಹಿಮನಿವಾರಕ' ಎನ್ನುವ ಶ್ರುತಿಯೂ ಕೂಡ ಸರ್ವಥಾ ಅನುವಾದಕವಾಗದು.

ಅನ್ಯಥಾ 'ಸತ್ಯಂ ಜ್ಞಾನಂ' 'ನೇಹ ನಾನಾ' ಇತ್ಯಾದಿ ಶ್ರುತಿರಪಿ ಅನುವಾದಿನೀ ಸ್ಯಾತ್ । ಬ್ರಹ್ಮಸತ್ವಸ್ಯ ಲೋಕತೋ, ಭ್ರಮಾಧಿಷ್ಠಾನತ್ವಾದಿ ಲಿಂಗೇನ ಚ, ವಿಶ್ವಮಿಥ್ಯಾತ್ವಸ್ಯ ಚ ದೃಶ್ಯತ್ವಾದ್ಯನುಮಾನೇನ, ಅವೇದಮೂಲ ಪ್ರವಾಹಾನಾದಿವಿಜ್ಞಾನವಾದಾದಿನಾ ಚ ಪ್ರಾಪ್ತೇಃ।

ಪ್ರತ್ಯಕ್ಷಕ್ಕೆ ಪ್ರಾಮಾಣ್ಯ ನಿಶ್ಚಯವಾಗದಿರುವಾಗಲೂ ಶ್ರುತಿಯು ಅನುವಾದಕವಾಗುವುದು ಎನ್ನುವುದಾದರೆ 'ಸತ್ಯಂ ಜ್ಞಾನಂ' 'ನೇಹ ನಾನಾ' ಇತ್ಯಾದಿ ಶ್ರುತಿಗಳೂ ಕೂಡ ಅನುವಾದಕ ವೆನ್ನಬೇಕಾದೀತು. ಏಕೆಂದರೆ, ಈ ಶ್ರುತಿಗಳು ಹೇಳುವ ಬ್ರಹ್ಮಸತ್ಯತ್ವವು ಲೋಕಸಿದ್ಧವಾಗಿದೆ, ಅದ್ವೈತಪ್ರಕಾರ 'ನಾನು ಅಜ್ಞ' ಎಂಬ ಸಾಕ್ಷಿ ಅನುಭವವು 'ಬ್ರಹ್ಮನು ಅಜ್ಞಾನಿ' ಎಂದೂ, 'ಸುಖಾನುಭವವು ಸತ್ಯ' ಎಂಬ ಸಾಕ್ಷಿ ಅನುಭವವು 'ಸುಖಾನುಭವರೂಪ ಬ್ರಹ್ಮವು ಸತ್ಯ' ಎಂದೂ ವಿಷಯೀಕರಿಸುತ್ತದೆ. ಹೀಗೆ ಬ್ರಹ್ಮಸತ್ಯತ್ವವು ಲೋಕಸಿದ್ಧವಾಗಿರುವುದರಿಂದ ಅದನ್ನೇ ವಿಷಯೀಕರಿಸುವ ಅದ್ವೈತಶ್ರುತಿಯು ಅನುವಾದಕವೇ ಆಗಬೇಕಾಗುವುದು. ಪ್ರಪಂಚಭ್ರಮಾಧಿ ಷ್ಠಾನವೂ ಸತ್ಯವಾದ ಬ್ರಹ್ಮವೆ ಎಂಬ ಅದ್ವೈತಾನುಸಾರ ಭ್ರಮಾಧಿಷ್ಠಾನತ್ವಲಿಂಗದಿಂದಲೂ ಬ್ರಹ್ಮಸತ್ಯತ್ವವು ಸಿದ್ಧವಾಗುವುದು. ಹೀಗೆ ಸಿದ್ಧವಾಗಿರುವ ಬ್ರಹ್ಮಸತ್ಯತ್ವವನ್ನೇ 'ಸತ್ಯಂ ಜ್ಞಾನಂ' ಎಂಬ ಶ್ರುತಿಯು ವಿಷಯೀಕರಿಸುವುದರಿಂದ ಅದು ಅನುವಾದಕವಾಗುವುದು. ವಿಶ್ವಮಿಥ್ಯಾತ್ವವೂ ದೃಶ್ಯತ್ವಾದಿ ಅನುಮಾನಗಳಿಂದಲೂ ವೇದಮೂಲಕವಲ್ಲದ ಪ್ರವಾಹಾನಾದಿಯಾದ ವಿಜ್ಞಾನವಾದಾದಿಗಳಿಂದಲೂ ಸಿದ್ಧವಾಗುವುದು. ಅದನ್ನೇ ವಿಷಯಿಕರಿಸುವ ನೇಹನಾನಾ ಇತ್ಯಾದಿ ಶ್ರುತಿಯೂ ಅನುವಾದಕವಾಗಿರಬೇಕಾದೀತು. ಅದರಿಂದ ಪ್ರತ್ಯಕ್ಷವು ಪ್ರಮಾಣವೆಂದು ನಿಶ್ಚಿತವಾದರೆ ಮಾತ್ರ ಅದು ಶ್ರುತಿಗೆ ತನ್ನ ವಿಷಯವನ್ನು ನೀಡಿ ಅದನ್ನು ಅನುವಾದಕವಾಗಿ ಮಾಡೀತು.

❖❖❖

उक्ता हि मन्त्राधिकरणे मन्त्रलिङ्गप्राप्तबोधकस्यापि तदर्थशास्त्रस्यानुवादकता । उक्ता च त्वयैवेक्षत्यधिकरणे सदेवेत्यादि वाक्यस्य प्रधानपरत्वे सांख्यस्मृतिप्राप्तानुवादिता ।

किञ्च सत्त्वश्रुतेः सत्त्वप्रत्यक्षानपेक्षत्वान्न सापेक्षानुवादत्वं । निरपेक्षानुवादित्वं तु धारावाहिकज्ञान इव नाप्रामाण्यहेतुः । उक्तं हि नयविवेके "सापेक्षानुवादे हि न प्रमितिः । नतु दैवादनुवादे धारावाहिकवदि"ति । उक्तञ्च वाचस्पत्ये "यत्र तु प्रमाणान्तरसंवादः तत्र प्रमाणान्तरादिवार्थवादादपि सोऽर्थः प्रसिद्ध्यति । द्वयोः परस्परानपेक्षयोः प्रत्यक्षानुमानयोरिवैकत्रार्थे प्रवृत्तेः प्रमात्रपेक्षया त्वनुबादत्वं, प्रमाता ह्यव्युत्पन्नः प्रथमं यथा प्रत्यक्षादिभ्योऽर्थमवगच्छति, न तथाऽऽम्नायतस्तत्र व्युत्पत्त्यपेक्षत्वादि"ति ।

---

**मन्त्राधिकरण** इति ।। प्रमाणलक्षणे द्वितीयपादे "तदर्थशास्त्रात्" (जै.सू.अ.१,पा.२, अधि. ४,सू.३१) इत्यत्र "उरु प्रथस्वोरु ते यज्ञपतिः प्रथतां" इत्यादयो मन्त्राः किमुच्चारणमात्रेण दर्शपूर्णमासादिकर्मसूपकुर्वन्ति उत पुरोडाशप्रथनादितत्तत्कर्मसमवेतार्थाभिधानद्वारेणेति संशये अनुच्चारितानामर्थानभिधायकत्वात् प्राथम्यावश्यकत्वाभ्यामुच्चारणस्यैव तद्द्वारत्वं युक्तमिति तन्मात्रेणोपकुर्वन्तीति पूर्वपक्षयित्वा कर्मप्रकरणेषु मन्त्राणामुच्चारणस्याविधानात् कर्मविध्यनपेक्षितत्वेन तैरप्यनाक्षेपात् पुंव्यापारस्य मन्त्रगतव्यापारत्वाभावेन मन्त्राङ्गत्वानिर्वाहकत्वेन तेनाप्यनाक्षेपाच्च मन्त्रोच्चारणकर्तव्यतायामेव न प्रमाणमिति न तस्य द्वारत्वं युक्तम् । किन्त्वनुष्ठानाय कर्मविधेरपेक्षितत्वेन मन्त्रगतव्यापारत्वेन मन्त्राङ्गत्व निर्वाहकतयार्थाभिधानस्य विध्याक्षेपसम्भवादभिधानस्य द्वारत्वं युक्तम् । तादर्थ्येन तु पश्चादुच्चारणस्यापि कर्तव्यतासिद्धिः । तस्मादभिधानेन मन्त्राः उपकुर्वन्तीति सिद्धान्त इत्यधिकरण इत्यर्थः ।। **ईक्षत्यधिकरण** इति ।। (ब्र.सू.१,१.५,१) ईक्षतेर्नाशब्दमित्यत्र 'सदेव सोम्येदमग्र आसीत्

एकमेवाद्वितीय'मिति वाक्यगतं सच्छब्दनिर्दिष्टं किं प्रधानमुत ब्रह्मेति संशये बहुभावश्रवणादिना प्रधानं, न ब्रह्मेति पूर्वपक्षे ईक्षतिश्रवणात् जडस्य चेक्षणायोगात् सच्छब्दवाच्यं ब्रह्मैवेति सिद्धान्त इत्यधिकरण इत्यर्थः ।

**सापेक्षानुवादत्वमिति ।।** परप्रामाण्याधीनप्रामाण्यकत्वमित्यर्थः । तेन व्युत्पत्त्यादिद्वारा प्रत्यक्षापेक्षत्वमादाय न दोषावकाश इत्यवधेयम् ।।



**ಉಕ್ತಾ ಹಿ ಮಂತ್ರಾಧಿಕರಣೇ ಮಂತ್ರಲಿಂಗ ಪ್ರಾಪ್ತ ಬೋಧಕಸ್ಯಾಪಿ ತದರ್ಥಶಾಸ್ತ್ರಸ್ಯ ಅನುವಾದಕತಾ ।**

'ತದರ್ಥಶಾಸ್ತ್ರಾತ್'(ಜೈ.ಸೂ.1.2.31)

ಕರ್ಮಾನುಷ್ಠಾನೋಪಯುಕ್ತವಾದ ಪದಾರ್ಥವವನ್ನು ವಿನಿಯೋಜಕ ಬ್ರಾಹ್ಮಣವಾಕ್ಯಾದಿಗಳೂ ತಿಳಿಸಬಲ್ಲವು. ಅದಕ್ಕೆ ಮಂತ್ರವೇ ಆವಶ್ಯಕವೆನ್ನಲಾಗದು. ಅದರಿಂದ ಅರ್ಥಪ್ರಕಾಶನಕ್ಕಾಗಿ ಮಂತ್ರೋಚ್ಚಾರಣ ಮಾಡುವುದು ಆವಶ್ಯಕವಲ್ಲ. ಅದರಿಂದ ಅದೃಷ್ಟಕ್ಕಾಗಿ ಮಂತ್ರೋಚ್ಚಾರಣೆ ಹೊರತು ಅರ್ಥಜ್ಞಾನಕ್ಕಾಗಿ ಅಲ್ಲ ಎಂದು ಪೂರ್ವಪಕ್ಷ ಸೂತ್ರಾರ್ಥ.

'ಉರುಪ್ರಥಸ್ವೋರು ತೇ ಯಜ್ಞಪತಿಃ ಪ್ರಥತಾಂ' ಇತ್ಯಾದಿ ಮಂತ್ರವು 'ಹೇ ಪುರೋಡಾಶವೇ, ಚೆನ್ನಾಗಿ ಹರಡು, ಅದರಿಂದ ಯಜಮಾನನ ಸಂಪತ್ತು ಚೆನ್ನಾಗಿ ಹರಡಲಿ' ಎನ್ನುತ್ತ ಈ ಅರ್ಥಪ್ರಕಾಶನ ರೂಪಲಿಂಗದಿಂದ ಪುರೋಡಾಶ ಪ್ರಸಾರಣಕರ್ಮದಲ್ಲಿ ಈ ಮಂತ್ರವು ಅಂಗ ಎಂದು ತಿಳಿಸುವುದು.

ಇಲ್ಲಿ ಸಂಶಯ—ಮಂತ್ರವು ಕೇವಲ ಉಚ್ಚಾರಣ ಮಾತ್ರದಿಂದಲೆ ಅದೃಷ್ಟದ್ವಾರಾ ದರ್ಶಪೂರ್ಣಮಾಸಾದಿ ಕರ್ಮಗಳಲ್ಲಿ ಅಂಗವಾಗುವುದೆ ಅಥವಾ ಪುರೋಡಾಶ ಪ್ರಸಾರಣಾದಿ ಆಯಾ ಕರ್ಮದಲ್ಲಿ ಸೇರಿದ ವಿಧಿವಿಧಾನಗಳನ್ನು ವಾಚ್ಯವೃತ್ತಿಯಿಂದ ತಿಳಿಸುವ ಮೂಲಕ ಅಂಗವಾಗುವುದೆ? ಎಂದು.

ಪೂರ್ವಪಕ್ಷಿ ಹೇಳುತ್ತಾನೆ—

ಮಂತ್ರವನ್ನು ಉಚ್ಚರಿಸದಿದ್ದರೆ ಅದು ಅರ್ಥವನ್ನು ತಿಳಿಸಲಾರದು. ಅದರಿಂದ ಉಚ್ಚಾರಣೆ ಆವಶ್ಯಕ. ಮತ್ತು ಉಚ್ಚಾರಣ ಮೊದಲು, ಅನಂತರವೇ ಅರ್ಥಜ್ಞಾನ. ಹೀಗಾಗಿ ಉಚ್ಚಾರಣದ್ವಾರಾ ಮಂತ್ರವು ಕರ್ಮಾಂಗವಾಗುತ್ತದೆ ಎನ್ನಬೇಕು. ಅದರಿಂದ ಕೇವಲ ಉಚ್ಚಾರಣದಿಂದಲೇ ಅದೃಷ್ಟದ್ವಾರಾ ಮಂತ್ರವು ಅಂಗವಾಗುತ್ತದೆ, ಅರ್ಥಜ್ಞಾನವು ಆವಶ್ಯಕವಲ್ಲ. ಅರ್ಥಜ್ಞಾನದ

ಮೂಲಕವೇ ಮಂತ್ರವು ಕರ್ಮಾಂಗವಾಗುವುದಾದರೆ 'ಉರುಪ್ರಥಸ್ವೇತಿ ಪುರೋಡಾಶಂ ಪ್ರಥಯತಿ' ಎಂದು ಬ್ರಾಹ್ಮಣವಾಕ್ಯರೂಪ ಶಾಸ್ತ್ರವು 'ತದರ್ಥ'ವಾಗಿ ಅಂದರೆ ಅದಕ್ಕಾಗಿ ಹೊರಡುವುದು ವ್ಯರ್ಥ ಎಂದು ಪೂರ್ವಪಕ್ಷ.

ಸಿದ್ಧಾಂತಿ ಹೇಳುತ್ತಾನೆ— ಕರ್ಮವನ್ನು ಹೇಳುವ ಪ್ರಕರಣಗಳಲ್ಲಿ ಎಲ್ಲಿಯೂ ಮಂತ್ರೋಚ್ಚಾರಣವಿಧಿ ಇಲ್ಲ. ಉಚ್ಚಾರಣವು ಕರ್ಮಾನುಷ್ಠಾನಕ್ಕೆ ಆವಶ್ಯಕವೂ ಅಲ್ಲ. ಆದರಿಂದ ಅರ್ಥಾಪತ್ತಿಯಿಂದಲೂ ಉಚ್ಚಾರಣವಿಧಿ ಸಿದ್ಧವಾಗುವುದಿಲ್ಲ. ಉಚ್ಚಾರಣವು ಪುರುಷನ ವ್ಯಾಪಾರ. ಹೊರತು ಮಂತ್ರದ ವ್ಯಾಪಾರವೂ ಅಲ್ಲ. ಹೀಗಾಗಿ ಮಂತ್ರವು ಉಚ್ಚಾರಣದ್ವಾರಾ ತನಗೆ ಕರ್ಮಾಂಗತ್ವ ನಿರ್ವಾಹಕವಲ್ಲ. ನಿರ್ವಾಹಕತ್ವಾನ್ಯಥಾನುಪಪತ್ತಿಯೂ ಇಲ್ಲದ್ದರಿಂದ ಮಂತ್ರೋಚ್ಚಾರಣ ಅವಶ್ಯ ಮಾಡಬೇಕೆನ್ನಲು ಪ್ರಮಾಣವಿಲ್ಲ.

ಆದರಿಂದ, ಮಂತ್ರವು ಕರ್ಮದಲ್ಲಿ ಸೇರಿದ ವಿಧಿವಿಧಾನಗಳ ಬಗ್ಗೆ ವಾಚ್ಯವೃತ್ತಿಯಿಂದ ತಾನು ತಿಳಿಸಬೇಕು. ಆ ಮೂಲಕ ಮಂತ್ರವು ತನಗೆ ಕರ್ಮಾಂಗತ್ವ ನಿರ್ವಾಹಕವಾಗುತ್ತದೆ. ಹೀಗಾಗಿ ಮಂತ್ರವು ವಾಚ್ಯವೃತ್ತಿಯಿಂದ ತಿಳಿಸುವುದು ಎಂಬುದು ಕರ್ಮವಿಧಿಯಿಂದಲೇ ಅನ್ಯಥಾನುಪಪತ್ತಿಯಿಂದ ಸಿದ್ಧವಾಗುತ್ತದೆ. ಮಂತ್ರವು ಹೀಗೆ ತಿಳಿಸಬೇಕಾದರೆ ಉಚ್ಚಾರಣವು ಆವಶ್ಯಕವಾಗುವುದರಿಂದ ಉಚ್ಚಾರಣೆಯೂ ಅವಶ್ಯಕರ್ತವ್ಯವೆನಿಸುತ್ತದೆ. ಹೀಗಾಗಿ ಅರ್ಥವನ್ನು ತಿಳಿಸುವ ಮೂಲಕ ಮಂತ್ರವು ಕರ್ಮಾಂಗವಾಗುವುದು ಹೊರತು ಕೇವಲ ಉಚ್ಚಾರಣೆಯಿಂದ ಅದೃಷ್ಟದ್ವಾರಾ ಅಲ್ಲ ಎಂದು ಸಿದ್ಧಾಂತ.

ಇಲ್ಲಿ ಪೂರ್ವಪಕ್ಷಿ ಹೇಳಿದಂತೆ ತದರ್ಥಶಾಸ್ತ್ರವು ಮಂತ್ರಲಿಂಗದಿಂದ ಬೋಧಿತವಾದ ಕರ್ಮವಿಧಿವಿಧಾನಗಳನ್ನು ಅನುವಾದ ಮಾಡುತ್ತದೆ ಎಂದು ಸಿದ್ಧವಾಗುತ್ತದೆ. ಸಿದ್ಧಾಂತಿ ಹೇಳುವಂತೆ—ಮಂತ್ರದಿಂದಲೇ ವಿಧಿವಿಧಾನಗಳು ಉಕ್ತವಾಗಬೇಕೆಂಬ ನಿಯಮಕ್ಕೆ ದೃಷ್ಟಪ್ರಯೋಜನವೇನಿಲ್ಲದ್ದರಿಂದ ಅದೃಷ್ಟವನ್ನು ಪ್ರಯೋಜನವಾಗಿ ಕಲ್ಪನೆ ಮಾಡುತ್ತೇವೆ.

**ಉಕ್ತಾ ಚ ತ್ವಯ್ಯೈವ ಈಕ್ಷತ್ಯಧಿಕರಣೇ ಸದೇವೇತ್ಯಾದಿವಾಕ್ಯಸ್ಯ ಪ್ರಧಾನಪರತ್ವೇ ಸಾಂಖ್ಯ ಸ್ಮೃತಿ ಪ್ರಾಪ್ತಾನುವಾದಿತಾ ।**

ಈಕ್ಷತೇರ್ನಾಶಬ್ದಂ (ಬ್ರ.ಸೂ.1.1.5) ಎಂಬ ಅಧಿಕರಣದಲ್ಲಿ 'ಸದೇವ ಸೋಮ್ಯೇದಮಗ್ರ ಆಸೀತ್ ಏಕಾಮೇವಾದ್ವಿತೀಯಂ' ಎಂಬ ಬೃಹದಾರಣ್ಯಕಶ್ರುತಿಯಲ್ಲಿ 'ಸದೇವ' ಎಂದು ಹೇಳಿದ್ದು ಸಾಂಖ್ಯರು ಹೇಳುವ ಪ್ರಧಾನವನ್ನೆ? ಅಥವಾ ಬ್ರಹ್ಮನನ್ನೆ? ಎಂದು ಸಂಶಯ. 'ಬಹು ಸ್ಯಾಂ ಪ್ರಜಾಯೇಯ' ಎಂದು ಬಹುವಾಗಿ ಪರಿಣಾಮ ಹೊಂದುವುದನ್ನು ಉಪನಿಷತ್ತು ಹೇಳುವುದರಿಂದ 'ಸತ್' ಶಬ್ದಾರ್ಥವು ಪ್ರಧಾನವೇ ಎಂದು ಪೂರ್ವಪಕ್ಷ. 'ತದೈಕ್ಷತ' ಆಲೋಚನೆ ಮಾಡಿತು ಎಂದು ಉಕ್ತವಾದ 'ಸತ್' ಶಬ್ದಾರ್ಥವು ಬ್ರಹ್ಮನೆ ಹೊರತು ಜಡವಾದ ಪ್ರಧಾನವಲ್ಲ ಎಂದು ಸಿದ್ಧಾಂತ. ಇಲ್ಲಿ

'ಸತ್' ಶಬ್ದಾರ್ಥವು ಪೂರ್ವಪಕ್ಷ ರೀತಿಯಿಂದ ಸಾಂಖ್ಯಶಾಸ್ತ್ರೋಕ್ತವಾದ ಪ್ರಧಾನವೇ. ಶ್ರುತಿಯು ಅದನ್ನು ಅನುವಾದಿಸುತ್ತದೆ ಎಂದು ಅದ್ವೈತಿಯೇ ಹೇಳಿದ್ದಾನೆ. ಹಾಗೇ ವಿಶ್ವಸತ್ಯತ್ವವೂ ಕೂಡ ಪ್ರತ್ಯಕ್ಷದಿಂದಲೇ ಪ್ರಾಪ್ತ, ಶ್ರುತಿಯು ಅನುವಾದಿಸುತ್ತದೆ ಎಂದು ನಾವು ಹೇಳುತ್ತೇವೆ.

**ಕಿಂಚ ಸತ್ವಶ್ರುತೇಃ ಸತ್ವಪ್ರತ್ಯಕ್ಷಾನಪೇಕ್ಷತ್ವಾತ್ ನ ಸಾಪೇಕ್ಷಾನುವಾದತ್ವಂ। ನಿರಪೇಕ್ಷಾನುವಾದಿತ್ವಂ ತು ಧಾರಾವಾಹಿಕ ಜ್ಞಾನ ಇವ ನಾಪ್ರಾಮಾಣ್ಯಹೇತುಃ । ಉಕ್ತಂ ಹಿ ನಯವಿವೇಕೇ 'ಸಾಪೇಕ್ಷಾನುವಾದೇ ಹಿ ನ ಪ್ರಮಿತಿಃ। ನತು ದೈವಾದನುವಾದೇ ಧಾರಾವಾಹಿಕವತ್' ಇತಿ । ಉಕ್ತಂಚ ವಾಚಸ್ಪತ್ಯೇ 'ಯತ್ರ ತು ಪ್ರಮಾಣಾಂತರಸಂವಾದಃ ತತ್ರ ಪ್ರಮಾಣಾಂತರಾದಿವಾರ್ಥವಾದಾದಪಿ ಸೋಽರ್ಥಃ ಪ್ರಸಿದ್ಧ್ಯತಿ, ದ್ವಯೋಃ ಪರಸ್ಪರಾನಪೇಕ್ಷಯೋಃ ಪ್ರತ್ಯಕ್ಷಾನುಮಾನಯೋರಿವೈಕತ್ರಾರ್ಥೇ ಪ್ರವೃತ್ತೇಃ ಪ್ರಮಾತ್ರಪೇಕ್ಷಯಾ ತ್ವನುವಾದತ್ವಂ, ಪ್ರಮಾತಾ ಹ್ಯವ್ಯುತ್ಪನ್ನಃ ಪ್ರಥಮಂ ಯಥಾ ಪ್ರತ್ಯಕ್ಷಾದಿಭ್ಯೋಽರ್ಥಮವಗಚ್ಛತಿ, ನ ತಥಾಽಽಮ್ನಾಯತಸ್ತತ್ರ ವ್ಯುತ್ಪತ್ತ್ಯಪೇಕ್ಷತ್ವಾದಿ''ತಿ ।**

ಅನಾದಿಯಾದ ಸತ್ವಶ್ರುತಿಯು ಸಾದಿಯಾದ ಸತ್ವಪ್ರತ್ಯಕ್ಷವನ್ನು ಅವಲಂಬಿಸಿ ಸತ್ವವನ್ನು ಹೇಳುತ್ತದೆ ಎನ್ನಲಾಗದು. ಯದ್ಯಪಿ ಸತ್ವಪ್ರತ್ಯಕ್ಷ ಇದ್ದರೆ ಮಾತ್ರ 'ಸತ್ವ' ಶಬ್ದಕ್ಕೆ ಸತ್ವವು ಅರ್ಥ ಎಂದು ಶಕ್ತಿಜ್ಞಾನವು ಲೋಕಕ್ಕೆ ಬರುತ್ತದೆ. ಆಗ 'ಸದೇವ' ಶ್ರುತಿಯು 'ಸತ್' ಶಬ್ದದಿಂದ ಸತ್ವವನ್ನು ಲೋಕಕ್ಕೆ ಹೇಳುತ್ತದೆ. ಹೀಗೆ ಸತ್ವಪ್ರತ್ಯಕ್ಷದ ಅವಲಂಬನೆ ಸತ್ವಶ್ರುತಿಗೆ ಇದೆ. ಆದರೂ ಈ ರೀತಿಯ ಅವಲಂಬನೆಯು ಶ್ರುತಿಗೆ ದೋಷವಲ್ಲ. ಸತ್ವಪ್ರತ್ಯಕ್ಷವು ಪ್ರಮಾಣವಾದರೆ ಮಾತ್ರ ಸತ್ವವನ್ನು ಹೇಳುವ ಶ್ರುತಿಯು ಪ್ರಮಾಣವೆನಿಸುತ್ತದೆ ಎಂದಿದ್ದರೆ ಮಾತ್ರ ಅದು ದೋಷವಾಗುತ್ತಿತ್ತು.. ಅಂಥ ಅವಲನಂಬನೆ ಇಲ್ಲ. ಶ್ರುತಿಯು ಹೇಳುವ ಸತ್ವವನ್ನೆ ಪ್ರತ್ಯಕ್ಷವು ತಿಳಿಸುತ್ತಿದೆಯಷ್ಟೆ. ಹೇಳುವ ವಿಷಯ ಒಂದೇ ಆದ್ದರಿಂದ ಶ್ರುತಿಯು ಅನುವಾದ ಮಾಡುತ್ತಿದೆ ಎಂದು ವ್ಯವಹಾರ. ಅದರಿಂದ ಅದು ಸಾಪೇಕ್ಷ ಅನುವಾದವಲ್ಲ, ನಿರಪೇಕ್ಷಾನುವಾದವಾಗಿದೆ. ಇದು ಅಪ್ರಾಮಾಣ್ಯಕ್ಕೆ ಹೇತುವಾಗುವುದಿಲ್ಲ.

ಧಾರಾವಾಹಿಕ ಜ್ಞಾನ ಸ್ಥಳದಲ್ಲಿ ಪೂರ್ವಜ್ಞಾನದ ವಿಷಯವನ್ನು ಉತ್ತರಜ್ಞಾನವು ನಿರಪೇಕ್ಷವಾಗಿ ಅನುವಾದ ಮಾಡುತ್ತದೆ. ಅದು ಅನುವಾದತ್ವ ಪ್ರಯುಕ್ತವಾಗಿ ಅಪ್ರಮಾಣವೆನಿಸುವುದಿಲ್ಲ. ಹಾಗೇ ನಿರಪೇಕ್ಷವಾಗಿಯೇ ಪ್ರತ್ಯಕ್ಷದ ಅನುವಾದವಾಗಿರುವ ಶ್ರುತಿಯು ಅಪ್ರಮಾಣವಾಗುವುದಿಲ್ಲ.

ನಯವಿವೇಕ ಎಂಬ ಪ್ರಾಭಾಕರ ಮೀಮಾಂಸಾಗ್ರಂಥದಲ್ಲಿ ಹೇಳಿದೆ— 'ಸಾಪೇಕ್ಷಾನುವಾದಸ್ಥಳದಲ್ಲಿ ಅನುವಾದಕವು ಪ್ರಮಾಣವೆನಿಸುವುದಿಲ್ಲ. ಧಾರಾವಾಹಿಕ ಜ್ಞಾನದಂತೆ ನಿರಪೇಕ್ಷವಾಗಿ ದೈವಾತ್ ಅನುವಾದ ಮಾಡುತ್ತಿದ್ದರೆ ಅದು ಪ್ರಮಾಣವೆ. ಅಪ್ರಮಾಣವಲ್ಲ' ಎಂದು.

ವಾಚಸ್ಪತ್ಯದಲ್ಲಿಯೂ ಹೇಳಿದೆ—ಪ್ರಮಾಣಾಂತರ ಸಂವಾದವಿರುವಲ್ಲಿ ಪ್ರಮಾಣಾಂತರದಿಂದ ಹೇಗೋ ಹಾಗೇ ಅರ್ಥವಾದದಿಂದಲೂ ಆ ಪ್ರಮೇಯ ಸಿದ್ಧಿಸುವುದು. ಏಕೆಂದರೆ ಒಂದರ ಪ್ರಾಮಾಣ್ಯವನ್ನು ಅವಲಂಬಿಸಿಯೆ ಇನ್ನೊಂದು ಪ್ರಮಾಣವೆನಿಸದೆ ಸ್ವತಂತ್ರವಾಗಿ ಪ್ರತ್ಯಕ್ಷ ಅನುಮಾನಗಳಂತೆ ಒಂದೇ ಪ್ರಮೇಯದ ವಿಷಯದಲ್ಲಿ ಎರಡೂ ಪ್ರವೃತ್ತಿ ಮಾಡುತ್ತವೆ. ಜ್ಞಾತೃವು ವ್ಯುತ್ಪನ್ನನೆ, ಅವ್ಯುತ್ಪನ್ನನೆ ಎನ್ನುವುದನ್ನು ಅವಲಂಬಿಸಿ ಜ್ಞಾನವು ಅನುವಾದ ಅಥವಾ ಅನನುವಾದವಾಗಬಹುದು. ಏಕೆಂದರೆ ಅವ್ಯುತ್ಪನ್ನನಾದ ಜ್ಞಾತೃವು ಮೊದಲಿಗೆ ಪ್ರತ್ಯಕ್ಷಾದಿಗಳಿಂದ ಹೇಗೆ ಒಂದು ಪ್ರಮೇಯ ಜ್ಞಾನವನ್ನು ಹೊಂದುವನೋ ಹಾಗೆ ಶ್ರುತಿಯಿಂದ ಅದೇ ಪ್ರಮೇಯದ ಜ್ಞಾನವನ್ನು ಹೊಂದಲಾರ. ಅವನಿಗೆ ಅದು, ಅನುವಾದ ಎನಿಸುವುದಿಲ್ಲ. ಆದಕ್ಕೆ ವ್ಯುತ್ಪತ್ತಿ ಬೇಕಾಗುತ್ತದೆ'—ಹೀಗೆ ವಾಚಸ್ಪತಿಯೂ ಹೇಳುವುದರಿಂದ ವ್ಯುತ್ಪನ್ನನಿಗೆ ಶ್ರುತಿಯು, ಪ್ರತ್ಯಕ್ಷವು ತಿಳಿಸುವ ಪ್ರಮೇಯವನ್ನು ಹೇಳುತ್ತ ಅವನಿಗೆ ಅನುವಾದವೆನಿಸುತ್ತದೆ.



**किञ्च वादिविप्रतिपत्तिनिरासार्थत्वान्न निष्प्रयोजनानुवादत्वम् । सप्रयोजनानुवादत्वं तु विद्वद्वाक्य इव स्वार्थपरत्वाविरोधि । अत एव मीमांसकैर्विद्वद्वाक्यस्य समुदाय द्वित्वापादन रूप प्रयोजनपरत्त्वेनानुवाद्यार्थ परत्वाद्वाक्यैकवाक्यतोक्ता । स्वार्थपरत्वाभावे ह्यर्थवादवत् पदैकवाक्यतोच्येत ।**

---

**विद्वद्वाक्य इवेति** ।। एतच्च भेदलक्षणे द्वितीये द्वितीयपादे चिन्तितम् ।

''प्रकरणन्तु पौर्णमास्यां रूपावचनात्'' । (जै.सू.२,२,३,३)

आग्नेयादिवाक्य सन्निधाविदमाम्नायते । य एवं विद्वान्पौर्णमासीं यजते य एवं विद्वानमावास्यां यजत इति । अत्र संशयः किमिमौ यजती प्रकृतानामाग्नेयादीनां पौर्णमास्यमावास्या काल संयुक्तानामनुवदितारौ, उत एवंसंज्ञकयोरपूर्वयोः कर्मणोर्विधाताराविति । अनुवाद मात्रस्यानर्थक्यात् विधिपुनःश्रुत्याऽपूर्वकर्म विधायकाविति पूर्वःपक्षः । सिद्धान्तस्तु कर्मान्तर विधिपक्षे ध्रौवाज्यस्य द्रव्यस्य लाभेऽपि देवतायाः कुतोऽप्यलाभेनारूपत्वापत्त्या कर्मान्तर विधायकत्वानुपपत्तेरनुवादचिह्न यत्पद समभिव्याहाराच्चानुवाद एव ।

नचानुवादवैयर्थ्यम् । तस्य दर्शपूर्णमासाभ्यां स्वर्गकामो यजेतेत्याग्नेयादीनां षण्णां फलसम्बन्धबोधके वाक्ये द्विवचनोपपत्तये दर्शत्रिकस्य पौर्णमासत्रिकस्य च समुदायद्वित्वापादनप्रयोजनकत्वात् । अन्यथा तेषां बहुत्वेन बहुवचनापत्तेरिति ।। **स्वार्थपरत्वाभावे हीति ।।** यथाश्रुतार्थपरत्वाभावे हीत्यर्थः ।

यथा अर्थवादानां विध्यपेक्षितप्राशस्त्यमात्रपरत्वेन निश्चितानां मुख्यवृत्त्या प्राशस्त्यप्रतिपादकत्वासम्भवेन तेषां प्राशस्त्यपरत्वोपपत्तये वृत्तिमत्त्वेन कल्पितानामर्थवादगतपदानामेव लक्षणया खलेकपोतन्यायेन प्राशस्त्यसमर्पणद्वारा विधिवाक्येन सह एकवाक्यता मीमांसकैरुच्यते, न तु पदार्थसंसर्गसमर्पणद्वारा वाक्यैकवाक्यता, तथा विद्वद्वाक्यस्यापि अनुवाद्यस्वार्थपरत्वाभावे वाक्यैकवाक्यता नोच्येत । किन्तूक्तरीत्या पदैकवाक्यतैवोच्येतेत्यर्थः ।।



**ಕಿಂಚ ವಾದಿವಿಪ್ರತಿಪತ್ತಿ ನಿರಾಸಾರ್ಥತ್ವಾತ್ ನ ನಿಷ್ಪ್ರಯೋಜನಾನುವಾದತ್ವಂ। ಸಪ್ರಯೋಜನಾನುವಾದತ್ವಂ ತು ವಿದ್ವದ್ವಾಕ್ಯೇ ಇವ ಸ್ವಾರ್ಥಪರತ್ವಾವಿರೋಧಿ। ಅತ ಏವ ಮೀಮಾಂಸಕೈರ್ವಿದ್ವದ್ವಾಕ್ಯಸ್ಯ ಸಮುದಾಯದ್ವಿತ್ವಾಪಾದನರೂಪ ಪ್ರಯೋಜನ ಪರತ್ವೇನ ಅನುವಾದ್ಯಾರ್ಥಪರತ್ವಾದ್ ವಾಕ್ಯೈಕವಾಕ್ಯತೋಕ್ತಾ। ಸ್ವಾರ್ಥಪರತ್ವಾಭಾವೇ ಹ್ಯರ್ಥವಾದವತ್ ಪದೈಕವಾಕ್ಯತೋಚ್ಯೇತ।**

ವಾದಿವಿಪ್ರತಿಪತ್ತಿ ನಿರಾಸಕ್ಕಾಗಿ ಪ್ರತ್ಯಕ್ಷಸಿದ್ಧವಾದುದನ್ನು ಶ್ರುತಿಯು ಅನುವಾದ ಮಾಡಬಹುದು. ಆಗ ಶ್ರುತಿಯು ಅನುವಾದಕವಾದರೂ ಅದು ನಿಷ್ಪ್ರಯೋಜನ ಅನುವಾದವಾಗಿರುವುದಿಲ್ಲ. ಅಪ್ರಮಾಣವೆನಿಸುವುದಿಲ್ಲ.

ಇಲ್ಲಿ ಸಿದ್ಧಿಕಾರನು ಹೇಳುತ್ತಾನೆ— ಪ್ರತ್ಯಕ್ಷಸಿದ್ಧವಾದ ವಿಷಯದಲ್ಲಿ ವಾದಿವಿಪ್ರತಿಪತ್ತಿ ಇದೆ ಎಂದರೆ 'ಅಗ್ನಿರ್ಹಿಮಸ್ಯ ಭೇಷಜಂ' ಎಂಬಲ್ಲಿಯೂ ವಿಪ್ರತಿಪತ್ತಿಯಿಂದ ಶ್ರುತಿಯು ಸಪ್ರಯೋಜನವೆನಿಸಿ ಪ್ರಮಾಣವೆನಿಸೀತು' ಎಂದು.

ಆದರೆ ಪ್ರತ್ಯಕ್ಷಸಿದ್ಧವೆಂದು ಅವನು ಹೇಳುವ ಭಾವರೂಪಾಜ್ಞಾನ ವಿಷಯದಲ್ಲಿ ವಿಪ್ರತಿಪತ್ತಿಯನ್ನು ಒಪ್ಪುತ್ತಾನೆ. 'ತಮಆಸೀತ್' ಮುಂತಾದ ಶ್ರುತಿಯನ್ನು ಅದಕ್ಕೆ ಪ್ರಮಾಣವಾಗಿ ತೋರಿಸುತ್ತಾನೆ.

ವಸ್ತುತಃ ಪ್ರತ್ಯಕ್ಷದಲ್ಲಿ ಅಪ್ರಾಮಾಣ್ಯ ಶಂಕಾ ಬಂದಾಗ ತದಾಹಿತ ಅರ್ಥಶಂಕಾಕ್ಕೆ, ಶ್ರುತಿಯು ಅನುವಾದ ಮಾಡಿ, ಶಂಕಾಬೀಜವನ್ನು ನಿರಾಸಮಾಡುತ್ತದೆ.

ಪ್ರಯೋಜನವಿದ್ದರೆ ಅನುವಾದವು ಶ್ರುತಿಗೆ ತಾನು ಹೇಳುವ ವಿಷಯದಲ್ಲಿ ತಾತ್ಪರ್ಯವಿರಲು ಬಾಧಕವಾಗುವುದಿಲ್ಲ. ಆದರಿಂದಲೇ ವಿದ್ವದ್‌ವಾಕ್ಯವು ದರ್ಶಯಾಗಸಮೂಹ ಮತ್ತು ಪೌರ್ಣಮಾಸಯಾಗ ಸಮೂಹಗಳೆಂದು ಎರಡು ಯಾಗ ಸಮೂಹಗಳಿವೆ ಎಂದು ತಿಳಿಸುತ್ತದೆ.

ಹೀಗೆ ಸಪ್ರಯೋಜನವಾಗಿದ್ದರೆ ಶ್ರುತಿಯು ತಾನು ಅನುವಾದ ಮಾಡುವ ವಿಷಯದಲ್ಲಿ ತಾತ್ಪರ್ಯಯುಕ್ತವೆ ಆಗಿದ್ದು ವಾಕ್ಯೈಕವಾಕ್ಯತಾ ಉಳ್ಳದ್ದಾಗುತ್ತದೆ ಎಂದು ಮೀಮಾಂಸಕರು ನಿರ್ಣಯಿಸಿದ್ದಾರೆ. ತಾತ್ಪರ್ಯವಿಲ್ಲದಿರುತ್ತಿದ್ದರೆ ಅರ್ಥವಾದದಂತೆ ಪದೈಕವಾಕ್ಯತೆಯನ್ನು ಮಾತ್ರ ಹೊಂದಿರುತ್ತಿತ್ತು.

'ಪ್ರಕರಣಂ ತು ಪೌರ್ಣಮಾಸ್ಯಾಂ ರೂಪಾವಚನಾತ್' (ಜೈ.ಸೂ.2.2.3) 'ಪೌರ್ಣಮಾಸೀ ಅಮಾವಾಸ್ಯಾ ವಾಕ್ಯಗಳಲ್ಲಿ ಯಾಗವಿಧಿ ಇಲ್ಲ, ಯಾಗದ ರೂಪದ್ವಯ ಶ್ರವಣವಿಲ್ಲದ್ದರಿಂದ. ಪ್ರಕರಣ ಸಹಾಯದಿಂದ ಆಗ್ನೇಯಾದಿ ಯಾಗಾನುವಾದ ಮಾತ್ರ ಇದೆ' ಎಂದು ಸೂತ್ರಾರ್ಥ.

ಆಗ್ನೇಯಾದಿ ಯಾಗವಿಧಾಯಕ ವಾಕ್ಯಸಮೀಪದಲ್ಲಿ, 'ಯ ಏವಂ ವಿದ್ವಾನ್ ಪೌರ್ಣಮಾಸೀಂ ಯಜತೇ। ಯ ಏವಂ ವಿದ್ವಾನ್ ಅಮಾವಾಸ್ಯಾಂ ಯಜತೇ।' ಎಂದು ವಾಕ್ಯಗಳಿವೆ. ಇವುಗಳಲ್ಲಿ ಪೌರ್ಣಮಾಸೀ ಅಮಾವಾಸ್ಯಾ ಎಂದು ಎರಡು ಯಾಗ ವಿಧಾನವೆ? ಅಥವಾ ಹಿಂದೆ ವಿಹಿತವಾಗಿರುವ ಆಗ್ನೇಯಾದಿ ಆರು ಯಾಗಗಳನ್ನೇ ಪೌರ್ಣಮಾಸೀ ಅಮಾವಾಸ್ಯಾ ಕಾಲಯುಕ್ತ ಎರಡು ಸಮುದಾಯವಾಗಿ ಅನುವಾದಿಸುತ್ತವೆಯೆ? ಎಂದು ಸಂದೇಹ. ವಿಹಿತವಾದ ಯಾಗಗಳನ್ನೇ ಎರಡು ಕಾಲಯುಕ್ತವಾಗಿ ಅನುವಾದ ಮಾಡಿದರೆ ಅದು ವ್ಯರ್ಥವಾಗುವುದು. ಆದರಿಂದ ಹೊಸ ಎರಡು ಯಾಗಗಳನ್ನೇ ವಿಧಾನ ಮಾಡುತ್ತವೆ ಎನ್ನಬೇಕು ಎಂದು ಪೂರ್ವಪಕ್ಷ.

ಬೇರೆ ಎರಡು ಹೊಸ ಯಾಗಗಳನ್ನು ವಿಧಾನ ಮಾಡುವ ಪಕ್ಷದಲ್ಲಿ ಆ ಯಾಗಗಳಿಗೆ ಧ್ರುವಾ ಎಂಬ ಆಜ್ಯಪಾತ್ರೆಯಲ್ಲಿ ತೆಗೆದಿಟ್ಟಿರುವ ಆಜ್ಯವು ಆಹುತಿ ದ್ರವ್ಯವಾಗಿ ಸಿಗುವಂತಿದ್ದರೂ ದೇವತೆಯು ಯಾವ ವಿಧದಿಂದಲೂ ಲಭ್ಯವಾಗುವುದಿಲ್ಲ. ದೇವತಾರಹಿತವಾದ ಯಾಗಗಳು ಇವು ಎಂದಾಗುವ ಪ್ರಸಂಗವಿದೆ. ಆದರಿಂದ ಬೇರೇ ಎರಡು ಹೊಸ ಯಾಗಗಳ ವಿಧಾನ ಎನ್ನುವುದು ಕೂಡುವುದಿಲ್ಲ. 'ಯಃ ಯಜತೇ' ಎಂದು ಅನುವಾದ ಚಿಹ್ನೆಯಾದ 'ಯತ್' ಪದದ ಜೊತೆಗೆ ವಿಧಿ ಪ್ರತ್ಯಯವಿರುವುದರಿಂದ ಇದು ಯಾಗಗಳ ಅನುವಾದವೆ. ಅನುವಾದವು ಇಲ್ಲಿ ವ್ಯರ್ಥವಾಗುವುದಿಲ್ಲ. 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' 'ದರ್ಶ ಮತ್ತು ಪೂರ್ಣಮಾಸ ಎಂಬ ಎರಡು ಯಾಗಗಳಿಂದ ಸ್ವರ್ಗಕಾಮನು ಸ್ವರ್ಗಫಲವನ್ನು ಸಂಪಾದಿಸಬೇಕು' ಎಂದು ಫಲವನ್ನು ಹೇಳುವ ವಾಕ್ಯದಲ್ಲಿ ದ್ವಿವಚನದಿಂದ ಆರು ಯಾಗಗಳನ್ನು ಮೂರುಮೂರು ಯಾಗಗಳ ಎರಡು ಸಮೂಹಗಳಾಗಿ ಮಾಡಿ ಅನುವಾದಿಸಿರುವುದು ಕಾಣುತ್ತದೆ. ವಿದ್ವತ್‌ಪದ ಘಟಿತವಾದ ಎರಡು ವಾಕ್ಯಗಳಲ್ಲಿ ಎರಡು ಕಾಲಯುಕ್ತವಾಗಿ ಎರಡು ಯಾಗಸಮೂಹಗಳ ಅನುವಾದವಿದೆ. ದ್ವಿವಚನವನ್ನು ಕೂಡಿಸುವುದೇ ಈ ಎರಡು ಯಾಗಸಮೂಹಗಳನ್ನು ಅನುವಾದ

ಮಾಡಿದ್ದಕ್ಕೆ ಪ್ರಯೋಜನ. ಇಲ್ಲದಿದ್ದರೆ ಆರು ಯಾಗಗಳಿರುವುದರಿಂದ ಅವುಗಳನ್ನು ಅನುವಾದ ಮಾಡುವಾಗ ಬಹುವಚನ ಬರಬೇಕಿತ್ತು ಎಂದು ಸಿದ್ಧಾಂತ.

ವಿಧಿಗೆ ಬೇಕಾಗುವ ಪ್ರಾಶಸ್ತ್ಯವನ್ನು ತಿಳಿಸುವುದರಲ್ಲಿ ಮಾತ್ರ ಅರ್ಥವಾದಗಳಿಗೆ ತಾತ್ಪರ್ಯವೆಂದು ನಿಶ್ಚಿತವಾಗಿದೆ. ಮುಖ್ಯವೃತ್ತಿಯಿಂದ ಪ್ರಾಶಸ್ತ್ಯ ಪ್ರತಿಪಾದನೆ ಅಶಕ್ಯ. ಆದರೆ ಪ್ರಾಶಸ್ತ್ಯವನ್ನು ತಿಳಿಸುವ ವಿವಕ್ಷೆ ಇದೆ. ಅದು ಕೂಡಬೇಕಾದರೆ ಅರ್ಥವಾದದಲ್ಲಿರುವ ಎಲ್ಲ ಪದಗಳಿಗೂ ಲಕ್ಷಣಾವೃತ್ತಿಯನ್ನಿಟ್ಟುಕೊಂಡು ಎಲ್ಲ ಪದಗಳೂ ಒಟ್ಟಾಗಿ ಖಲೇಕಪೋತ ನ್ಯಾಯದಿಂದ ಪ್ರಾಶಸ್ತ್ಯಪದಾರ್ಥವನ್ನು ಬೋಧನೆ ಮಾಡುತ್ತ ಆ ಮೂಲಕ ವಿಧಿವಾಕ್ಯದೊಂದಿಗೆ ಪದೈಕವಾಕ್ಯತೆಯನ್ನು ಹೊಂದುತ್ತದೆ ಎಂದು ಮೀಮಾಂಸಕರು ಹೇಳುತ್ತಾರೆ.

ಲಿಙ್ಪದಕ್ಕೆ ಭಾವನಾ ಅರ್ಥ. ಶಾಬ್ದೀಭಾವನಾಕ್ಕೆ ಕಿಂ ಭಾವಯೇತ್ ಕೇನ ಭಾವಯೇತ್ ಕಥಂ ಭಾವಯೇತ್ ಎಂದು ಫಲ–ಸಾಧನ–ಇತಿಕರ್ತವ್ಯತಾಗಳ ಮೂರು ಆಕಾಂಕ್ಷಾಗಳಿವೆ. ಅವುಗಳಲ್ಲಿ ಇತಿಕರ್ತವ್ಯತಾಕಾಂಕ್ಷೆಯಿಂದ ವಿಧಿಯು ಪ್ರಾಶಸ್ತ್ಯಬೋಧನವನ್ನು ಅಪೇಕ್ಷಿಸುತ್ತದೆ. ಆಗ ಪ್ರಾಶಸ್ತ್ಯವು ಇತಿಕರ್ತವ್ಯತಾರೂಪದಿಂದ ಭಾವನಾದಲ್ಲಿ ಅನ್ವಯ ಹೊಂದುತ್ತದೆ. ಹೀಗೆ ಅರ್ಥವಾದದ ಪದಗಳೆಲ್ಲ ಒಂದಾಗಿ ಸೇರಿ ಪ್ರಾಶಸ್ತ್ಯರೂಪ ಇತಿಕರ್ತವ್ಯತೆಯನ್ನು ಸಮರ್ಪಿಸುವ ಮೂಲಕ ಲಿಙ್ಪದದ ಆಕಾಂಕ್ಷಾಪೂರ್ತಿ ಮಾಡುವುದರಿಂದ ಇದು ಪದೈಕವಾಕ್ಯತಾ. ವಾಕ್ಯಕ್ಕೆ ಬರುವ ಆಕಾಂಕ್ಷೆಯನ್ನು ವಾಕ್ಯವಾಗಿ ಪೂರ್ತಿ ಮಾಡಿದರೆ ಅದು ವಾಕ್ಯೈಕವಾಕ್ಯತಾ. ಅರ್ಥವಾದವು ಶಕ್ತಿಯಿಂದ ಕ್ರಮೇಣ ಎಲ್ಲ ಪದಾರ್ಥಗಳ ಸಂಸರ್ಗವನ್ನು ಬೋಧಿಸಿ ಪ್ರಯಾಜಾದಿ ಅಂಗವಾಕ್ಯಗಳಂತೆ ವಾಕ್ಯರೂಪದಿಂದ ವಿಧಿವಾಕ್ಯದ ಆಕಾಂಕ್ಷಾಪೂರ್ಣ ಮಾಡುತ್ತಿಲ್ಲ. ಪದರೂಪದಿಂದಲೇ ಲಕ್ಷಣೆಯಿಂದ ಅದರ ಎಲ್ಲ ಪದಗಳೂ ಒಟ್ಟಿಗೆ ಒಮ್ಮೆಲೇ ಪ್ರಾಶಸ್ತ್ಯವನ್ನು ಬೋಧಿಸಿ ವಿಧಿವಾಕ್ಯದ ಆಕಾಂಕ್ಷೆಯನ್ನು ಪೂರ್ತಿಮಾಡುತ್ತ ಅನ್ವಯಹೊಂದುವುವು. 'ಖಲ' ಎಂದರೆ ಧಾನ್ಯಗಳನ್ನು ಒಕ್ಕುವ ಸ್ಥಳ. ಅಲ್ಲಿ ಕಪೋತಗಳು ಅಂದರೆ ಪಾರಿವಾಳಗಳು ಕ್ರಮವಾಗಿ ಒಂದೊಂದಾಗಿ ಬಾರದೆ, ಎಲ್ಲವೂ ಒಟ್ಟಿಗೇ ಒಮ್ಮೆಲೇ ಬಂದು ಧಾನ್ಯದ ಕಾಳುಗಳನ್ನೆತ್ತಿಕೊಳ್ಳುವುವು. ಇದು ಇಲ್ಲಿ ದೃಷ್ಟಾಂತ. ವಿದ್ವದ್ವಾಕ್ಯಗಳಿಗೂ ಯಥಾಶ್ರುತವಾಗಿ ಅವು ಅನುವಾದಿಸುವ ಆರು ಯಾಗಗಳಲ್ಲಿ ತಾತ್ಪರ್ಯವಿಲ್ಲದಿದ್ದರೆ ಅರ್ಥವಾದದಂತೆಯೇ ಖಲೇಕಪೋತ ನ್ಯಾಯದಿಂದ ಲಕ್ಷಣಯಾ ಪ್ರಾಶಸ್ತ್ಯವನ್ನು ಬೋಧಿಸಿ ಪದೈಕವಾಕ್ಯತೆಯನ್ನೇ ಅವು ಹೊಂದುತ್ತಿದ್ದುವು.



**किञ्चानुवादत्वेऽपि नैष्फल्यमात्रं न त्वप्रामाण्यम् । याथार्थ्यमेव प्रामाण्यं, न त्वनधिगतार्थत्वमित्यन्यत्रोक्तत्वात् । किञ्चायमनुवादो न तावद्वायुक्षेपिष्ठादिवाक्यवत्स्तुत्यर्थः, नापि ''दध्ना जुहोती''त्यत्र**

**जुहोतिरिवान्य विधानार्थः, विधानाय प्रमाणानूदितस्य तात्त्विकत्व नियमात्। नहि ''व्रीहीन् प्रोक्षती''त्यादावारोपित व्रीह्यादेर्धीः, अनुवाद्यस्यासत्त्वे ह्याश्रयासिद्धौ धर्मिधर्म संसर्गरूपानुमिति वेद्य इवानुवाद्य विधेय संसर्ग रूप वाक्यार्थो बाधितः स्यात्। नापि नेह नानेति निषेधार्थः। तत्रैव किञ्चनेत्यनुवादकांशस्य सत्त्वात्। नहि ''न सुरां पिबेदि''ति निषेधाय ''सुरां पिबेदि''ति वाक्यान्तरमपेक्षितम्। अत्र च 'आपश्चन प्रमिनन्ती'त्यलौकिकस्य प्रमाणस्य विधेयस्य सत्त्वाच्च।**

---

**याथार्थ्यमिति ।।** यद्यपि विप्रतिपत्तिविषयप्रत्यक्षसमानविषयकानुवाद-रूपत्वेनास्य वाक्यस्य याथार्थ्यमेव सन्दिग्धम्। तथापि क्लृप्तदोषाभावेन प्रवृत्त्यादिसंभवेन च प्रत्यक्षे याथार्थ्यरूपप्रामाण्यनिश्चयसंभवात्, कदाचि-द्विप्रत्तिपत्तिविषयत्वेऽपि न किञ्चिदनिष्टमिति भावः। **किञ्चायमनुवाद इति ।।** तादृशविधिसन्निधानादर्शनादिति भावः। निषेधायानूदिते व्यभिचारवारणायाह **विधानायेति ।।**

ननु विश्वं सत्यमित्यादिवाक्ये सन्निहितविधिनिषेधयोरन्यतरस्यानुप-लम्भादध्ययनविध्यापादित पुरुषार्थ पर्यवसायित्व निर्वाहाय, नेहनानेति निषेधाय तदसन्निहितस्यापि अगत्यानुवादकत्वं कल्पनीयमित्याशङ्क्याह **अत्रेति ।।** विश्वं सत्यमित्यादिवाक्य इत्यर्थः ।।



**ಕಿಂಚ ಅನುವಾದತ್ವೇಽಪಿ ನೈಷ್ಫಲ್ಯಮಾತ್ರಂ। ನತು ಅಪ್ರಾಮಾಣ್ಯಂ। ಯಾಥಾರ್ಥ್ಯಮೇವ ಪ್ರಾಮಾಣ್ಯಂ। ನತು ಅನಧಿಗತಾರ್ಥತ್ವಂ ಇತಿ ಅನ್ಯತ್ರೋಕ್ತತ್ವಾತ್ ।**

ಸತ್ವ ಶ್ರುತಿಯು ಸತ್ವಪ್ರತ್ಯಕ್ಷದಿಂದ ಗೃಹೀತವಾದ ವಿಶ್ವಸತ್ಯತ್ವವನ್ನೇ ಅನುವಾದ ಮಾಡಿದ ಮಾತ್ರಕ್ಕೆ ಅದು ಅಪ್ರಮಾಣವಾಗುವುದಿಲ್ಲ. ಶ್ರೋತೃವಿನ ಅಜ್ಞಾನಾದಿ ಪರಿಹಾರರೂಪ ಪ್ರಯೋಜನಕಾರಿಯಾಗದುದರಿಂದ ನಿಷ್ಫಲವೆನಿಸಬಹುದಷ್ಟೆ. ನಿಷ್ಫಲತ್ವವೆ ಅಪ್ರಾಮಾಣ್ಯವೆಂದು

ತಿಳಿಯಬಾರದು. ಅಯಥಾರ್ಥತ್ವವೇ ಅಪ್ರಾಮಾಣ್ಯ. 'ಶ್ರೋತೃವಿಗೆ ತಿಳಿಯದಿದ್ದುದನ್ನು ತಿಳಿಸುವ ವಾಕ್ಯವೇ ಪ್ರಮಾಣ'ವೆನ್ನುವುದು ಸರಿಯಲ್ಲ ಎಂದು ಪ್ರಮಾಣಲಕ್ಷಣಾದಿಗಳಲ್ಲಿ ಹೇಳಿದ್ದಾರೆ.

ಯದ್ಯಪಿ ಪ್ರತ್ಯಕ್ಷದಲ್ಲಿ ವಿಪ್ರತಿಪತ್ತಿಯಿರುವುದುಂಟು. ಸತ್ವಪ್ರತ್ಯಕ್ಷದಲ್ಲಿ ವಿಪ್ರತಿಪತ್ತಿ ಇದೆ. ವಿಪ್ರತಿಪನ್ನ ಪ್ರತ್ಯಕ್ಷ ಸಮಾನವಿಷಯಕವಾಗಿರುವ ಶ್ರುತಿವಾಕ್ಯವು ಅನುವಾದಕವೆನಿಸಿದೆ. ಅದರಿಂದ ಅದರಲ್ಲಿ ಯಾಥಾರ್ಥ್ಯ ಸಂದಿಗ್ಧವಾಗಿರುತ್ತದೆ. ಅದು ಮಿಥ್ಯಾತ್ವಶ್ರುತಿಗೆ ಬಾಧಕವಾಗದು. ಆದರೆ ಪ್ರತ್ಯಕ್ಷದಲ್ಲಿ ಕ್ಲೃಪ್ತದೋಷಾಭಾವನಿಶ್ಚಯ, ಪ್ರವೃತ್ತಿ, ಅರ್ಥಕ್ರಿಯಾದಿಗಳಿಂದ ಅಯಾಥಾರ್ಥ್ಯ ಶಂಕಾ ನಿರಾಸವಾಗುವುದರಿಂದ ಅದನ್ನು ಅನುವಾದ ಮಾಡುವ ಶ್ರುತಿಯ ಯಾಥಾರ್ಥ್ಯವು ಸಂದಿಗ್ಧವಾಗಿರುವುದಿಲ್ಲ. ಹೀಗಾಗಿ ಸತ್ವಶ್ರುತಿಯು ಮಿಥ್ಯಾತ್ವಾನುಮಾನಾಗಮಗಳನ್ನು ಬಾಧಿಸಲು ಶಕ್ತವಾಗುವುದು.

'ತಿಳಿದಿದ್ದನ್ನೇ ತಿಳಿಸುವಲ್ಲಿ ಶ್ರುತಿಗೆ ತಾತ್ಪರ್ಯವಿರುವುದಿಲ್ಲ. ತಾತ್ಪರ್ಯವಿಷಯದಲ್ಲಿಯೇ ಶಬ್ದಕ್ಕೆ ಪ್ರಾಮಾಣ್ಯ' ಎಂದು ಹೇಳಬಾರದು. ಸಿದ್ಧವಾದ ವಿಷಯವೇ ಇಷ್ಟವಾಗಿದ್ದರೆ ಪುನಃಪುನಃ ಹೇಳುವುದುಂಟು. ಸಿದ್ಧವಾದ ವಿಷಯದಲ್ಲಿಯೇ ಮಕ್ಕಳಾಡುವ ತೊದಲು ನುಡಿಯನ್ನು ಆಲಿಸುವುದುಂಟು. ಅದರಿಂದ ಅಜ್ಞಾನನಿವೃತ್ತಿರೂಪ ಫಲವಿಲ್ಲದಿದ್ದರೂ ಶ್ರವಣಜನ್ಯಸುಖ ರೂಪಫಲವಿದ್ದೇ ಇರುತ್ತದೆ. ತಿಳಿದ ವಿಷಯದಲ್ಲಿ ದಾರ್ಢ್ಯವೂ ಪ್ರಯೋಜನವಾಗಬಹುದು.

**ಕಿಂಚಾಯಮನುವಾದೋ ನ ತಾವತ್ ವಾಯುಕ್ಷೇಪಿಷ್ಠಾದಿ ವಾಕ್ಯವತ್ ಸ್ತುತ್ಯರ್ಥಃ। ನಾಪಿ ದಧ್ನಾ ಜುಹೋತೀತ್ಯತ್ರ ಜುಹೋತಿರಿವ ಅನ್ಯವಿಧಾನಾರ್ಥಃ। ವಿಧಾನಾಯ ಪ್ರಮಾಣಾನೂದಿತಸ್ಯ ತಾತ್ವಿಕತ್ವನಿಯಮಾತ್।**

ಅನುವಾದವು ಸ್ತುತ್ಯರ್ಥವಿರಬಹುದು, ಅಧಿಕವಿಧಾನಾರ್ಥ ಇರಬಹುದು ಅಥವಾ ನಿಷೇಧಾರ್ಥವಿರಬಹುದು. ಈ ಪ್ರಯೋಜನಗಳು ಯಾವುದು ಇಲ್ಲವೆಂದರೆ ಸತ್ವಶ್ರುತಿ ಅನುವಾದವೆನ್ನಲಾಗದು. ಮೊದಲಿಗೆ ಇದು ಸ್ತುತ್ಯರ್ಥವಲ್ಲ. 'ವಾಯುಃ ಕ್ಷೇಪಿಷ್ಠಾ ದೇವತಾ' 'ವಾಯುವು ಈ ಯಾಗಕ್ಕೆ ಶೀಘ್ರಫಲದಾಯಕವಾದ ದೇವತೆ' ಎನ್ನುವಂತೆ ಇಲ್ಲಿ ಯಾವ ಪ್ರಶಂಸೆಯೂ ಕಾಣುವುದಿಲ್ಲ.

'ದಧ್ನಾ ಜುಹೋತಿ' 'ದಧಿಯನ್ನು ಹೋಮಿಸಬೇಕು' ಎನ್ನುವಲ್ಲಿ ಅಗ್ನಿಹೋತ್ರದಲ್ಲಿ ಹೋಮಿಸುವುದು ದಧಿಯನ್ನು ಎಂದು ಹೋಮಾನುವಾದ ಮಾಡಿ ದಧಿರೂಪದ್ರವ್ಯವನ್ನು ಹೋಮಿಸಬೇಕೆಂದು ಅನ್ಯವಿಧಾನ ಮಾಡುವುದು ಕಾಣುತ್ತದೆ. ಇಲ್ಲಿ ದಧಿವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿದ ಹೋಮವು ತಾತ್ವಿಕವಾಗಿದೆ. ಅನ್ಯವಿಧಾನಕ್ಕಾಗಿ ಅನುವಾದ ಮಾಡಿದರೆ ಅದು ತಾತ್ವಿಕವೇ ಎಂದು ನಿಯಮವಿದೆ. ಪ್ರಕೃತದಲ್ಲಿ ವಿಶ್ವಸತ್ಯತ್ವವನ್ನು ಶ್ರುತಿಯು ಅನ್ಯವಿಧಾನಕ್ಕಾಗಿ ಅನುವಾದ ಮಾಡುವುದಾದರೆ ವಿಶ್ವಸತ್ಯತ್ವವು ತಾತ್ವಿಕವೇ ಆಗಬೇಕು.

**ನಹಿ 'ವ್ರೀಹೀನ್ ಪ್ರೋಕ್ಷತಿ' ಇತ್ಯಾದೌ ಆರೋಪಿತ ವ್ರೀಹ್ಯಾದೇಃ ಧೀಃ। ಅನುವಾದ್ಯಸ್ಯ ಅಸತ್ತ್ವೇ ಹಿ ಆಶ್ರಯಾಸಿದ್ಧೌ ಧರ್ಮಿಧರ್ಮ ಸಂಸರ್ಗರೂಪ ಅನುಮಿತಿ ವೇದ್ಯಃ ಇವ, ಅನುವಾದ್ಯ ವಿಧೇಯ ಸಂಸರ್ಗ ರೂಪ ವಾಕ್ಯಾರ್ಥಃ ಬಾಧಿತಃ ಸ್ಯಾತ್।**

ಅನ್ಯವಿಧಾನಾರ್ಥ ಅನುವಾದಕ್ಕೆ 'ವ್ರೀಹೀನ್ ಪ್ರೋಕ್ಷತಿ' 'ಭತ್ತದ ಕಾಳುಗಳನ್ನು ಪ್ರೋಕ್ಷಿಸಬೇಕು' ಎನ್ನುವುದು ಉದಾಹರಣೆ. ಇಲ್ಲಿ ಪ್ರತ್ಯಕ್ಷಸಿದ್ಧವಾದ ಭತ್ತವನ್ನು ಪ್ರಮಾಣ ಭೂತವಾದ ಶ್ರುತಿಯು ಅನುವಾದ ಮಾಡುವುದರಿಂದ ಭತ್ತವು ತಾತ್ವಿಕವೆ. ಹೊರತು ಆರೋಪಿತವಲ್ಲ. ಧರ್ಮಿಸತ್ತಾ ಸಾಪೇಕ್ಷವಾದ ಅನ್ವಯವನ್ನು ವಿಧಾನ ಮಾಡುವಲ್ಲಿ ಧರ್ಮಿ ತಾತ್ವಿಕವೇ ಆಗಬೇಕು. 'ವಂಧ್ಯಾಸುತನು ಮಾತನಾಡಲಾರ' ಎಂಬಲ್ಲಿ ವಕ್ತೃತ್ವಾಭಾವರೂಪ ಧರ್ಮವು ಧರ್ಮಿಸತ್ತಾಸಾಪೇಕ್ಷವಲ್ಲ. ಅಲ್ಲಿ ಧರ್ಮಿಯು ಆರೋಪಿತ ಅತಾತ್ವಿಕವಿರಬಹುದು. ಆರೋಪಿತವಾದ ಭತ್ತವನ್ನು ಅನುವಾದ ಮಾಡಿ ಪ್ರೋಕ್ಷಣ ವಿಧಾನ ಮಾಡಿದರೆ ಅನುವಾದ್ಯವಾದ ಭತ್ತಕ್ಕೂ ವಿಧೇಯವಾದ ಪ್ರೋಕ್ಷಣಕ್ಕೂ ಸಂಸರ್ಗವೆ ಕೂಡುವುದಿಲ್ಲವಾದ್ದರಿಂದ ಭತ್ತದ ಪ್ರೋಕ್ಷಣವೆಂಬುದು ಮೊಲದ ಕೊಂಬಿನಂತೆ ಸುಳ್ಳಾಗುವುದು. ಶ್ರುತಿವಾಕ್ಯವು ಅಪ್ರಮಾಣವಾಗುವುದು. ಅನುಮಾನದಲ್ಲಿಯೂ ಅನುವಾದ್ಯಪಕ್ಷವು ಅಸತ್ತಾದರೆ ಆಶ್ರಯಾಸಿದ್ಧಿ ಬರುವುದರಿಂದ ಧರ್ಮಿ ಧರ್ಮಸಂಬಂಧ ಅಸತ್ತಾಗುವುದು. ಪಕ್ಷಸಾಧ್ಯಸಂಬಂಧವು ಬಾಧಿತವಾಗುವುದು. ಹಾಗೇ ವಿಧಿವಾಕ್ಯದಲ್ಲಿಯೂ ದಧಿರೂಪ ಗುಣಕ್ಕೆ ಹೋಮವು ಆಶ್ರಯ. ಏಕೆಂದರೆ ಹೋಮದಲ್ಲಿ ದಧಿಯು ಕರಣಕಾರಕವಾಗುತ್ತದೆ. ಹೋಮವು ಅನುವಾದ್ಯ. ಅನುವಾದ್ಯ ಅಸತ್ತಾದರೆ ಆಶ್ರಯಾಸಿದ್ಧಿಯಿಂದ ಹೋಮದಧಿಸಂಸರ್ಗರೂಪ ವಾಕ್ಯಾರ್ಥವು ಬಾಧಿತವಾದೀತು. ಅನುವಾದ್ಯದ ಸತ್ವ ಸಿದ್ಧವಾಗಿದ್ದರೆ ತತ್‌ಸಂಸರ್ಗವೂ ಸಿದ್ಧವಾಗುವುದು.

**ನಾಪಿ ನೇಹ ನಾನೇತಿ ನಿಷೇಧಾರ್ಥಃ। ತತ್ರೈವ 'ಕಿಂಚನ' ಇತಿ ಅನುವಾದಕಾಂಶಸ್ಯ ಸತ್ತ್ವಾತ್। ನಹಿ ''ನ ಸುರಾಂ ಪಿಬೇತ್' ಇತಿ ನಿಷೇಧಾಯ 'ಸುರಾಂ ಪಿಬೇತ್' ಇತಿ ವಾಕ್ಯಾಂತರಮಪೇಕ್ಷಿತಂ।**

ಪ್ರತ್ಯಕ್ಷಪ್ರಾಪ್ತವಾದ ಪ್ರಪಂಚಸತ್ಯತ್ವವನ್ನು 'ವಿಶ್ವಂ ಸತ್ಯಂ' ಎಂದು ಅನುವಾದ ಮಾಡುವುದು 'ನೇಹ ನಾನಾಸ್ತಿ ಕಿಂಚನ' 'ಬ್ರಹ್ಮನಲ್ಲಿ ಕಾಣುವ ಪ್ರಪಂಚವು ಯಾವುದೂ ಸತ್ಯವಾಗಿ ಇಲ್ಲ' ಎಂದು ನಿಷೇಧ ಮಾಡುವುದಕ್ಕಾಗಿ ಎಂದು ಅದ್ವೈತಿ ಹೇಳುವುದೂ ಸರಿಯಲ್ಲ. 'ನೇಹ ನಾನಾಸ್ತಿ ಕಿಂಚನ' ಎಂಬ ನಿಷೇಧ ವಾಕ್ಯದೊಳಗೇ 'ಕಿಂಚನ' ಎಂದು ಅನುವಾದಕಾಂಶವಿದೆ, ನಿಷೇಧ್ಯದ ಅನುವಾದವಿದೆ.

'ಕಿಂಚನ' ಎಂಬುದು ಅನುವಾದವಲ್ಲ. ಅನುವಾದವನ್ನು ಬೇರೆಯಾಗಿ ಬೇರೆ ವಾಕ್ಯದಲ್ಲಿಯೇ ಮಾಡಬೇಕು' ಎನ್ನಬಾರದು. 'ನ ಸುರಾಂ ಪಿಬೇತ್' 'ಸುರಾಪಾನ ಮಾಡಬಾರದು' ಎಂದು

ನಿಷೇಧಮಾಡಲು 'ಸುರಾಂ ಪಿಬೇತ್' 'ಸುರಾಪಾನ ಮಾಡಬೇಕು' ಎಂದು ಬೇರೆ ವಾಕ್ಯದಲ್ಲಿ ಅನುವಾದ ಮಾಡಬೇಕಾಗಿಲ್ಲ.

**ಅತ್ರ ಚ 'ಆಪಶ್ಚನ ಪ್ರಮಿನಂತಿ' ಇತಿ ಅಲೌಕಿಕಸ್ಯ ಪ್ರಮಾಣಸ್ಯ ವಿಧೇಯಸ್ಯ ಸತ್ವಾಚ್ಚ।**

'ವಿಶ್ವಂ ಸತ್ಯ' ಎಂಬುದು ನಿಷೇಧಕ್ಕಾಗಿ ಅನುವಾದ ಎನ್ನುವುದು ಯುಕ್ತವಲ್ಲ. ಅನ್ಯವಿಧಾನಕ್ಕಾಗಿ ಅನುವಾದವಾಗಿದೆ. 'ದೇವತೆಗಳೂ ಕೂಡ ನಿಮ್ಮ ಈ ಪ್ರಪಂಚಸೃಷ್ಟಿ ಕಾರ್ಯವನ್ನು ಸತ್ಯವೆಂದು ತಿಳಿಯುತ್ತಾರೆ.' ಎಂದು ಅಲೌಕಿಕ ಪ್ರಮಾಣವನ್ನು ಪ್ರಪಂಚಸತ್ಯತ್ವದ ವಿಷಯದಲ್ಲಿ ಈ ವಾಕ್ಯವೇ ವಿಧಾನ ಮಾಡುತ್ತದೆ. ಅದು ವಿಧೇಯ. ಹೀಗೆ ಇಲ್ಲಿಯೇ ಅನ್ಯವಿಧೇಯ ಒಂದು ಇರುವಾಗ ಎಲ್ಲಿಯೋ ದೂರದಲ್ಲಿ ಇರುವ ನಿಷೇಧ್ಯದ ಬಗೆ ಆಕಾಂಕ್ಷೆಯೇ ಇರುವುದಿಲ್ಲ. ಹೀಗಾಗಿ ವಿಶ್ವಸತ್ಯತ್ವವು ನಿಷೇಧಕ್ಕಾಗಿ ಅನುವಾದ್ಯವಲ್ಲ. ವಿಶ್ವವು ಮಿಥ್ಯಾ ಅಲ್ಲ. ಅದರ ಸೃಷ್ಟಿಯೂ ಮಿಥ್ಯಾ ಅಲ್ಲ. ಎರಡನ್ನೂ ಸತ್ಯವೆಂದು ದೇವತೆಗಳು ಅಂಗೀಕಾರ ಮಾಡಿದ್ದಾರೆ.



**यत्तन्नेत्यादि निषेधार्थानुवाद लिङ्गाभावाच्च । तदभावेऽपि निषेधायानुवादे ''तत्सत्य''मित्याद्यपि ''न सत्तान्नासदुच्यते, असद्वा इदमग्र आसीदि''ति निषेधाय ब्रह्मसत्तानुवादकं स्यात् ।**

**''सर्वप्रत्ययवेद्ये च ब्रह्मरूपे व्यवस्थिते ।**
**प्रपञ्चस्य प्रविलयः शब्देन प्रतिपाद्यते''**

**इति मण्डनोक्त्या सन्घट इत्यत्रापि ब्रह्मसत्ताप्रतीतेः ।**

**''परागर्थप्रमेयेषु या फलत्वेन संमता ।**
**संवित्सैवेह मेयोऽर्थो वेदान्तोक्तिप्रमाणतः''**

**इति सुरेश्वरोक्त्या सद्घटज्ञानमित्यत्रापि तत्प्रतीतेश्च । सत्सुखस्फुरणं अज्ञोऽस्मीत्यादौ तु तत्प्रतीतौ न विवादः । शुद्धचित एव सुखस्फुरणत्वात्, अज्ञानाद्यध्यासाधिष्ठानत्वाच्च । अधिक-स्फुरणेऽपि चिदस्फुरणाभावात् । ब्रह्मशब्दानुल्लेखेऽपि अखण्डार्थ-निष्ठवाक्यबोध्यं यद् ब्रह्म तत्सत्त्वप्रतीतेः । एवमानन्दश्रुतिरपि**

## अदुःखमसुखं सममित्यादि निषेधाय प्रत्यक्ष प्राप्तानन्दानुवादिनी स्यात् ।

---

**यत्तन्नेत्यादीति ।।** यद्यपि न कलञ्जं भक्षयेदित्यादावुक्तलिङ्गाभावेऽपि तादृशानुवादकत्वमस्ति । तथापि तत्रैवात्र निषेधसमभिव्याहाराभावेन न तादृशानुवादित्वसिद्धिरिति भावः । अत्रादिपदान्निषेधज्ञापकनिन्दायाः परिग्रहः ।। **असद्वा इदमग्र आसीदिति ।।** यद्यपीदं वाक्यं सृष्टेः प्राक् इदंशब्दार्थस्य प्रपञ्चस्याव्याकृतनामरूपत्वमाहेति शक्यते वक्तुम् । तथाप्यलक्षणमचिन्त्यमव्यपदेश्यमिति निषेधो वा, तदाहुः किं तदासीत् ? तस्मै स होवाच नसन्नासन्नसदसदि'त्यादिनिषेधो वा द्रष्टव्यः । ननु ब्रह्मसत्त्वस्य मानान्तरेणाप्राप्तत्वात्कथं तत्सदित्यादेरनुवादकतेत्यत आह **सर्वप्रत्ययेत्यादिना ।। तत्प्रतीतेश्चेति ।।** ब्रह्मसत्त्वप्रतीतेरित्यर्थः ।

ननु ब्रह्मसत्वप्रतीतौ ब्रह्मशब्दोल्लेखप्रसङ्ग इत्यत आह **ब्रह्मशब्देति ।।** अन्यथा एडमूकस्य दाहादिप्रतीत्यभावप्रसङ्ग इति भावः ।। **आनन्दानुवादिनी स्यादिति ।।** यद्यपि द्वयोः प्रणयन्तीत्यस्येवानन्दश्रुतेरपि प्रत्यक्षाद्यप्राप्तापूर्वानन्दपरत्वमिति शक्यते वक्तुम् । तथापि परेणानन्दद्वैविध्यानङ्गीकारान्न तन्न्यायावतार इति भावः ।।



**'ಯತ್ ತನ್ನ' ಇತ್ಯಾದಿ ನಿಷೇಧಾರ್ಥಾನುವಾದ ಲಿಂಗಾಭಾವಾಚ್ಚ । ತದಭಾವೇಽಪಿ ನಿಷೇಧಾಯಾನುವಾದೇ 'ತತ್ ಸತ್ಯಂ' ಇತ್ಯಾದ್ಯಪಿ 'ನ ಸತ್ ತನ್ನಾಸದುಚ್ಯತೇ' 'ಅಸದ್ವಾ ಇದಮಗ್ರ ಆಸೀತ್'ಇತಿ ನಿಷೇಧಾಯ ಬ್ರಹ್ಮಸತ್ತಾನುವಾದಕಂ ಸ್ಯಾತ್ ।**

ನಿಷೇಧಕ್ಕಾಗಿ ಅನುವಾದ ಮಾಡುವಾಗ 'ಇತಿ ಯತ್ ತನ್ನ' 'ಹೀಗೆ ಏನು ಹೇಳುವಿಯೋ ಅದು ಸರಿಯಲ್ಲ' ಎಂದು ಮುಂತಾಗಿ ಹೇಳುವುದು, ನಿಷೇಧ ಜ್ಞಾಪಕವಾದ ನಿಂದಾದಿಗಳು ಕಂಡಿವೆ. ಮತ್ತು ನಿಷೇಧ ವಾಕ್ಯಸಮೀಪದಲ್ಲಿಯೆ ಅನುವಾದವೂ ಇರುತ್ತದೆ. 'ನ ಕಲಂಜಂ ಭಕ್ಷಯೇತ್' ಎಂಬಲ್ಲಿ 'ಯತ್ತನ್ನ' ಎಂದು ನಿಷೇಧ ಲಿಂಗವಾದ ಯದ್‌ವೃತ್ತವಿಲ್ಲದಿದ್ದರೂ 'ನ' ಎಂದು ಸಾಕ್ಷಾದ್ ನಿಷೇಧದ ಸಮಭಿವ್ಯಾಹಾರವೇ ಇದೆ. ಪ್ರಕೃತ ಇವು ಯಾವುವೂ ಪ್ರಕೃತ ಸತ್ವಶ್ರುತಿಯಲ್ಲಿ ಇಲ್ಲ.

'ಆಪಶ್ಚನ' ಎಂಬಲ್ಲಿ 'ಚನ' ಎಂದು 'ಕಿಂಚನ' ಎಂಬಂತೆ 'ಅಪಿ' 'ಕೂಡ' ಎಂಬರ್ಥದ ಒಂದು ಅಖಂಡ ಪದ. 'ಅಬಭಿಮಾನಿದೇವತೆಗಳೂ ಕೂಡ' ಎಂದರ್ಥ. ಆದರೂ ಅದನ್ನು 'ಚ-ನ' ಎಂದು ಒಡೆದು, 'ಆಪಶ್ಚ ನ ಪ್ರಮಿನಂತಿ' ದೇವತೆಗಳೂ ಕೂಡ ನಾವು ಮಾಡುವ ನಿಮ್ಮ ಆರಾಧನೆಯನ್ನು ತಡೆಯುವುದಿಲ್ಲ ಎಂದು ಸ್ತುತಿ' ಎಂದು ಸಿದ್ಧಿಕಾರ ಹೇಳುತ್ತಾನೆ. ಸ್ತುತಿಪರವಾದ್ದರಿಂದ ವಿಶ್ವಸತ್ಯತ್ವದ ವಿಧಾನ ಇಲ್ಲಿ ಇಲ್ಲ ಎನ್ನುತ್ತಾನೆ. ಆದರೆ ಕೇವಲ ಸ್ತುತಿ ಪರವೆಂದಾದರೆ 'ನ ಪ್ರಮಿನಂತಿ' ಎಂದು ನಿಷೇಧಪರವೂ ಆಗದು. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದೂ ಕೇವಲಸ್ತುತಿ. ಬ್ರಹ್ಮಸತ್ಯತ್ವಪರವಲ್ಲ ಎಂದಾದೀತು. 'ತತ್‌ಸತ್ಯಂ' 'ಬ್ರಹ್ಮವು ಸತ್ಯ' ಎನ್ನುವುದೂ ಕೂಡ 'ನ ಸತ್ ತನ್ನಾಸದುಚ್ಯತೇ' 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ನಿಷೇಧಕ್ಕಾಗಿ ಬ್ರಹ್ಮಸತ್ಯತ್ವಾನುವಾದ ಎಂದಾದೀತು.

**ಸರ್ವಪ್ರತ್ಯಯವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ ।**
**ಪ್ರಪಂಚಸ್ಯ ಪ್ರವಿಲಯಃ ಶಬ್ದೇನ ಪ್ರತಿಪಾದ್ಯತೇ ॥**
**ಇತಿ ಮಂಡನೋಕ್ತ್ಯಾ ಸನ್‌ಘಟ ಇತ್ಯತ್ರಾಪಿ ಬ್ರಹ್ಮಸತ್ತಾಪ್ರತೀತೇಃ ।**

ಸರ್ವ 'ಪ್ರತ್ಯಯ'ಗಳಲ್ಲಿ ಜ್ಞಾನಗಳಲ್ಲಿ 'ಸನ್‌ಘಟಃ, ಸನ್‌ಪಟಃ' ಇತ್ಯಾದಿಯಾಗಿ ಸತ್‌ಸ್ವರೂಪ ಬ್ರಹ್ಮವಸ್ತುವೇ 'ವ್ಯವಸ್ಥಿತ'ವಾಗಿ ಅನುಸೂತ್ಯವಾಗಿ ಅಧಿಷ್ಠಾನತ್ವೇನ ಕಾಣುತ್ತದೆ. ಅದು ವಿಶಿಷ್ಟಬ್ರಹ್ಮವಲ್ಲ. ಏಕೆಂದರೆ ಸಮಸ್ತ ಪ್ರಪಂಚದ ಲಯಕ್ಕೆ ಅದು ಅಧಿಷ್ಠಾನ. ಇಂಥ ಶುದ್ಧಬ್ರಹ್ಮವೆ 'ಸನ್' ಶಬ್ದದಿಂದ ಪ್ರತಿಪಾದ್ಯವಾಗಿದೆ ಎಂದು ಮಂಡನಮಿಶ್ರನು ಹೇಳಿದಂತೆ 'ಸನ್‌ಘಟಃ' ಇತ್ಯಾದಿ ಸರ್ವ ಜ್ಞಾನಗಳಿಂದಲೂ ಬ್ರಹ್ಮವು ಪ್ರಾಪ್ತವೇ ಆಗಿದೆ. ಆದರಿಂದ 'ಅಸದ್ವಾ' ಇತ್ಯಾದಿ ಶ್ರುತಿಯು ನಿಷೇಧ ಮಾಡಿದೆ ಎನ್ನಲು ಬರುತ್ತದೆ.

**ಪರಾಗರ್ಥ ಪ್ರಮೇಯೇಷು ಯಾ ಫಲತ್ವೇನ ಸಮ್ಮತಾ ।**
**ಸಂವಿತ್ ಸೈವೇಹ ಮೇಯೋಽರ್ಥೋ ವೇದಾಂತೋಕ್ತಿಪ್ರಮಾಣತಃ ॥**
**ಇತಿ ಸುರೇಶ್ವರೋಕ್ತ್ಯಾ ಸದ್‌ಘಟಜ್ಞಾನಂ ಇತ್ಯತ್ರಾಪಿ ತತ್‌ಪ್ರತೀತೇಶ್ಚ ।**

'ಪರಾಗರ್ಥ' ಅಚೇತನಪದಾರ್ಥರೂಪವಾದ ಪ್ರಮೇಯಗಳ ವಿಷಯದಲ್ಲಿ 'ಫಲತ್ವೇನ' ಅಭಿವ್ಯಕ್ತ ಅಧಿಷ್ಠಾನಚೈತನ್ಯ ರೂಪದಿಂದ ಯಾವ ಜ್ಞಾನವು ಭಾಸಕವೆಂದು ಸರ್ವಸಮ್ಮತ ವಾಗಿದೆಯೋ ಆ ಜ್ಞಾನವೇ ವೇದಾಂತವಾಕ್ಯರೂಪ ಪ್ರಮಾಣಕಕ್ಕೆ ಮೇಯವಾದ ಪರಬ್ರಹ್ಮ ವಸ್ತುವಾಗಿದೆ' ಎಂದು ಸುರೇಶ್ವರ ವಾರ್ತಿಕವು ಹೇಳುವುದರಿಂದ 'ಘಟಜ್ಞಾನವು ಸತ್' ಎಂಬ ಜ್ಞಾನದಲ್ಲಿಯೂ ಸತ್ತಾಗಿ ಕಾಣಿಸಿಕೊಳ್ಳುವುದು ಜ್ಞಾನರೂಪವಾದ ಬ್ರಹ್ಮವೆ. ಆದರಿಂದ ಬ್ರಹ್ಮಸತ್ವವು ಪ್ರಾಪ್ತವಾದ್ದರಿಂದ 'ಅಸದ್ವಾ' ಎಂದು ಉಪನಿಷತ್ತಿನಲ್ಲಿ ನಿಷಿದ್ಧವಾಗಬಹುದು.

**'ಸತ್ ಸುಖಸ್ಫುರಣಂ' 'ಅಜ್ಞೋಽಸ್ಮಿ' ಇತ್ಯಾದೌ ತು ತತ್‌ಪ್ರತೀತೌ ನ ವಿವಾದಃ ।**
**ಶುದ್ಧಚಿತ ಏವ ಸುಖಸ್ಫುರಣತ್ವಾತ್, ಅಜ್ಞಾನಾದ್ಯಧ್ಯಾಸಾಧಿಷ್ಠಾನತ್ವಾಚ್ಚ ।**

**ಅಧಿಕಸ್ಫುರಣೇऽಪಿ ಚಿದಸ್ಫುರಣಾಭಾವಾತ್ ।**

'ಸುಖಾನುಭವವು ಸತ್ಯ' 'ನಾನು ಅಜ್ಞನಾಗಿದ್ದೇನೆ' ಎಂದು ಮುಂತಾದ ಅನುಭವಗಳಲ್ಲಿ ಸುಖಸ್ಫುರಣವೂ ಅಜ್ಞಾನಾಧಿಷ್ಠಾನವೂ ಬ್ರಹ್ಮವೇ ಎಂಬುದು ಅದ್ವೈತ ಸಿದ್ಧಾಂತವಾಗಿರುವುದರಿಂದ ಆ ಅನುಭವಗಳಲ್ಲಿ ಕಾಣುವ ಸತ್ವವು ಬ್ರಹ್ಮಸತ್ವವೇ ಎನ್ನುವುದರಲ್ಲಿ ವಿವಾದವಿಲ್ಲ. ಈ ಅನುಭವಗಳಲ್ಲಿ ಕಾಣುವುದು ವಿಶಿಷ್ಟಬ್ರಹ್ಮವೇ ಹೊರತು ಶುದ್ಧಚೈತನ್ಯ ಕಾಣುವುದಿಲ್ಲ ಎನ್ನಬಾರದು. ವಿಶಿಷ್ಟ ಚೆತನ್ಯವು ಕಾಣುವಾಗ ವಿಶೇಷಣವು ಅಧಿಕವಾಗಿ ಕಂಡರೂ ಶುದ್ಧಚೈತನ್ಯವು ವಿಶೇಷ್ಯವಾಗಿ ಕಾಣಿಸಲೇಬೇಕು. ವಿಶೇಷ್ಯ ಶುದ್ಧ ಚೈತನ್ಯವು ಬ್ರಹ್ಮವೆ. ಅದರ ಸತ್ವವು ಸುಖ ಅಜ್ಞಾನಾದಿ ಅನುಭವಗಳಲ್ಲಿ ಕಂಡುಬರುತ್ತದೆ. ಅದನ್ನು ಅಪಲಾಪ ಮಾಡಲಾಗದು.

**ಬ್ರಹ್ಮಶಬ್ದಾನುಲ್ಲೇಖೇऽಪಿ ಅಖಂಡಾರ್ಥನಿಷ್ಠವಾಕ್ಯಬೋಧ್ಯಂ ಯದ್ ಬ್ರಹ್ಮ, ತತ್‌ಸತ್ವಪ್ರತೀತೇಃ ।**

'ಸುಖಾದಿ ಅನುಭವಗಳಲ್ಲಿ ಬ್ರಹ್ಮಸತ್ವವು ಕಾಣಿಸುವ ಪಕ್ಷದಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿಗಳಲ್ಲಿ ಹೇಗೋ ಹಾಗೇ ಬ್ರಹ್ಮ ಶಬ್ದವೂ ಕಾಣಬೇಕು. ಬ್ರಹ್ಮಶಬ್ದದ ಉಲ್ಲೇಖವು ಸುಖಾದಿ ಅನುಭವಗಳಲ್ಲಿ ಇಲ್ಲ' ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. 'ಸತ್ಯಂ ಬ್ರಹ್ಮ' ಎಂದು ಬ್ರಹ್ಮಶಬ್ದದ ಉಲ್ಲೇಖವಿರುವಲ್ಲಿ 'ಬ್ರಹ್ಮತ್ವವಿಶಿಷ್ಟವು ಸತ್ಯ' ಎಂದರ್ಥವಲ್ಲ. ವಿಶಿಷ್ಟವು ಮಿಥ್ಯಾ. ಬ್ರಹ್ಮತ್ವದಿಂದ ಉಪಲಕ್ಷಿತವಾದ ಅಖಂಡ ಶುದ್ಧ ಚೈತನ್ಯವೇ ಸತ್ಯವೆಂದು ಆ ವಾಕ್ಯದಿಂದ ಲಕ್ಷಣೆಯಿಂದ ತಿಳಿದುಬರುತ್ತದೆ ಎನ್ನುತ್ತಾನೆ ಅದ್ವೈತಿ ಎಂದಮೇಲೆ ಬ್ರಹ್ಮಶಬ್ದೋಲ್ಲೇಖ ಮಾಡದೆ ಸುಖ ಅಜ್ಞಾನಾದಿ ವಿಶಿಷ್ಟವನ್ನು ಸತ್ಯ ಎನ್ನುವಾಗಲೂ ಲಕ್ಷಣಯಾ ಅಖಂಡ ಶುದ್ಧ ಚೈತನ್ಯವು ಸತ್ಯವೆಂದೇ ವಾಕ್ಯಾರ್ಥವನ್ನು ಹೇಳಬೇಕು.

ಬ್ರಹ್ಮಶಬ್ದದ ಉಲ್ಲೇಖವು ಬ್ರಹ್ಮಸತ್ವ ಪ್ರತೀತಿಯಲ್ಲಿ ಇರಲೇಬೇಕೆಂದು ಆಗ್ರಹಿಸಿದರೆ 'ಏಡಮೂಕ' ಕಿವುಡಮೂಗನಿಗೆ ದಾಹಾದಿ ಪ್ರತೀತಿಯೆ ಇಲ್ಲ ಎನ್ನಬೇಕಾದೀತು. ದಾಹವು ಸತ್ಯ ಎಂದು ಅವನಿಗೆ ಪ್ರತೀತಿ ಬರುತ್ತದೆ. ಆದರೆ ಅವನು ಏಡಮೂಕನಾಗಿರುವುದರಿಂದ 'ದಾಹ' ಎಂಬ ಶಬ್ದದ ಪರಿಜ್ಞಾನವೆ ಇಲ್ಲವೆಂದಮೇಲೆ ದಾಹಪ್ರತೀತಿಯಲ್ಲಿ 'ದಾಹ'ಶಬ್ದೋಲ್ಲೇಖ ಬರುವ ಸಂಭವವಿಲ್ಲ. 'ದಾಹ'ಶಬ್ದೋಲ್ಲೇಖವಿಲ್ಲದ್ದರಿಂದ ದಾಹಪ್ರತೀತಿಯೇ ಇಲ್ಲ ಎನ್ನುವ ಪ್ರಸಂಗವಿದೆ. ಹೀಗಾಗಿ ಎಲ್ಲ ಪ್ರತೀತಿಗಳಲ್ಲಿ ಬ್ರಹ್ಮಶಬ್ದೋಲ್ಲೇಖವಿಲ್ಲದಿದ್ದರೂ ಬ್ರಹ್ಮ ಸತ್ತಾಪ್ರತೀತಿಯು ಅದ್ವೈತ ರೀತಿಯಿಂದ ಇರಲೇಬೇಕು. ಹೀಗೆ ಬ್ರಹ್ಮಸತ್ವವು ಅಪ್ರಾಪ್ತವಲ್ಲವಾದ್ದರಿಂದ ಅದನ್ನು ಅನುವಾದಮಾಡಿ 'ಅಸದ್ವಾ ಇದಮಗ್ರ ಆಸೀತ್' ಎಂದು ಮುಂತಾಗಿ ಸತ್ವನಿಷೇಧ ಮಾಡಬಹುದು.

ಯದ್ಯಪಿ 'ಅಸದ್ವಾ' ಎಂಬ ವಾಕ್ಯದಲ್ಲಿ 'ಈ ಜಡಪ್ರಪಂಚವು ಸೃಷ್ಟಿಗೆ ಮೊದಲು ಇದು ಘಟ. ಈ ರೂಪ ಈ ನಾಮಗಳಿಂದ ಯುಕ್ತವಾಗಿದೆ ಎಂದು ಕಾಣಿಸಿಕೊಳ್ಳಲಿಲ್ಲ. ಸೃಷ್ಟಿಯ ಬಳಿಕವೆ

ನಾಮರೂಪಗಳಿಂದ ಯುಕ್ತವಾಗಿ ಕಾಣಿಸಿಕೊಂಡಿತು' ಎನ್ನುತ್ತಿದೆ ಉಪನಿಷತ್ತು, ಹೊರತು ಬ್ರಹ್ಮವು ಅಸತ್, ಸತ್ಯವಲ್ಲ, ಎನ್ನುವುದಿಲ್ಲ ಎಂದು ಅದ್ವೈತಿ ಹೇಳಬಹುದು. ಆದರೆ 'ಅಲಕ್ಷಣಂ ಅಚಿಂತ್ಯಂ ಅವ್ಯಪದೇಶ್ಯಂ' 'ಬ್ರಹ್ಮವು ಲಕ್ಷಣರಹಿತ, ವಿಚಾರಕ್ಕೆ ಅಯೋಗ್ಯ, ಹೆಸರಿಲ್ಲದ್ದು' ಎಂಬ ಸತ್ವನಿಷೇಧವನ್ನು ತೋರಿಸಬಹುದು. ಅಥವಾ

ತದಾಹುಃ ಕಿಂ ತದಾಸೀತ್
ತಸ್ಮೈ ಸ ಹೋವಾಚ
ನ ಸನ್ನಾಸನ್ನಸದಸತ್ ನ ಚಾನುಭಯ ತತ್ವಕಂ।
ವಿಮತಂ ತರ್ಕಪೀಡ್ಯತ್ವಾತ್ ಮರೀಚಿಷು ಯಥೋದಕಂ

'ಕೆಲವರು ಹೇಳುತ್ತಾರೆ— ಸೃಷ್ಟಿಗೆ ಮೊದಲು ಏನಿತ್ತೆಂದರೆ ಏನೂ ಇರಲಿಲ್ಲ, ಪ್ರಪಂಚವಾಗಲಿ ಬ್ರಹ್ಮವಾಗಲಿ ಸತ್ಯವೂ ಅಲ್ಲ ಅಸತ್ಯವೂ ಅಲ್ಲ. ಸತ್ತೂ ಅಸತ್ತೂ ಆಗಿರುವುದಲ್ಲ, ಸತ್ವ ಅಸತ್ವಗಳೆರಡರ ಅಭಾವವುಳ್ಳದ್ದೂ ಅಲ್ಲ. ವಿವಾದಗ್ರಸ್ತವಾಗಿದ್ದು ಯಾವ ತರ್ಕದಿಂದಲೂ ಸಿದ್ಧವಾಗುವುದಿಲ್ಲ. ಬಾಧಿತವೇ ಆಗುತ್ತದೆ. ಮರುಮರೀಚಿಕೆಯಂತಿದೆ' ಎಂದು. ಇಲ್ಲಿ ಬ್ರಹ್ಮನ ಸತ್ವನಿಷೇಧ ಮಾಡಲಾಗಿದೆ. ಇದನ್ನು ತೋರಿಸಬಹುದು. ಬ್ರಹ್ಮನಲ್ಲಿ ಪ್ರಮಾಣದಿಂದ ಸತ್ವಸಿದ್ಧಿ ಎನ್ನುತ್ತಾನೆ ಸಿದ್ಧಿಕಾರ. ಆದರೆ ಅಖಂಡಾರ್ಥವಾದಿಯಾದ ಅದ್ವೈತಿಯು ಸತ್ವೇನ ಬ್ರಹ್ಮಸಿದ್ಧಿಯನ್ನು ಹೇಳುವುದು ಸ್ವವ್ಯಾಹತವಾಗುವುದು.

**ಏವಮಾನಂದ ಶ್ರುತಿರಪಿ ಅದುಃಖಮಸುಖಂ ಸಮಂ ಇತ್ಯಾದಿ ನಿಷೇಧಾಯ ಪ್ರತ್ಯಕ್ಷಪ್ರಾಪ್ತಾನಂದಾನುವಾದಿನೀ ಸ್ಯಾತ್।**

ಸುಖಂ ಸುಪ್ತೋಽಸ್ಮಿ ಎಂದು ಸಾಕ್ಷಿ ಪ್ರತ್ಯಕ್ಷದಿಂದ ಪ್ರಾಪ್ತವಾದ ಆನಂದವನ್ನು 'ಅದುಃಖಮಸುಖಂ' ಎಂದು ನಿಷೇಧ ಮಾಡುವುದಕ್ಕಾಗಿ 'ಆನಂದಂ ಬ್ರಹ್ಮ' ಎಂದು ಅನುವಾದ ಮಾಡುತ್ತದೆ ಎಂದಾದೀತು.



**किञ्चैवं नेहनानेतिश्रुतिरेव विश्वं सत्यमित्यबाध्यत्वरूपबाधनिषेधाय विज्ञानवादादिप्राप्तविश्वबाधानुवादिनी किं न स्यात्? किञ्च धर्माधर्मस्वर्गनरकादेर्न प्रत्यक्षादिना प्राप्तिः। शब्दप्राप्तस्य शब्देन निषेधायानुवादे एतच्छाखास्थाग्नीषोमीयवाक्यस्य नहिंस्यादिति निषेधाय शाखान्तरोक्ताग्नीषोमीयहिंसानुवादित्वं स्यात्। सत्यं ज्ञानमित्यादेरपि इदं वा अग्रे नैव किञ्चनासीदिति निषेधाय**

**तत्सत्यमित्यादि वाक्योक्त ब्रह्मसत्तानुवादित्वं स्यात् । तस्मान्नानुवादिनी श्रुतिः । नापि व्यावहारिकसत्त्वपरा, वैय्यर्थ्यात् । नहि कोऽपि प्रपञ्चे व्यावहारिकसत्यतां नोपैति । अप्राप्ते च शास्त्रमर्थवत् । किञ्च व्यावहारिकशब्देनाबाध्योक्ताविष्टापत्तिः । बाध्योक्तौ श्रुतिश्चिरानुवृत्तदृढभ्रान्तिहेतुत्वेनात्यन्ताप्रमाणं स्यात् ।**

---

**विश्वं सत्यमिति ।।** यद्यपीयं श्रुतिः निषेधार्था न । तथापि न्यायमते तमःशब्दवत् सर्वमते प्रलयादिवच्च अर्थगत्या भवत्येव निषेधार्था इति भावः ।। **किञ्च धर्माधर्मेति ।।** यद्यपि धर्माधर्मादेः—

'सापेक्षत्वादनादित्वाद्वैचित्र्याद्विश्ववृत्तितः ।
प्रत्यात्मनियमाद्भुक्तेरस्ति हेतुरलौकिकः ।।

(इति न्यायकुसुमाञ्जलौ प्रथमस्तबके श्लोकः) इत्यनुमानतः प्राप्तिरस्ति । तथापि नेहनानेति यत्र तन्निषेधः न तत्र प्राप्तिः । नचानुमानविशेषेण ब्रह्मण्यपि प्रसक्तिः सम्भवतीति वाच्यम् । अनुमानमात्रस्य प्रसञ्जकत्वे अप्रसक्तस्य प्रतिषेधत्वस्योच्छेदप्रसङ्गः । नचैवं तव केवलो निर्गुणश्चेत्यादिना ब्रह्मणि हेयगुणादेर्निषेधो न स्यादिति वाच्यम् । सर्वकर्मेत्यादिश्रुतित एवापाततः हेयपापादिरूपकर्मप्राप्तिसम्भवादिति ।

नन्वत्रापि यस्मिन् द्यौः, अतो धर्माणि धारयन् इत्यादिश्रुतित एव प्राप्तिः सम्भवतीत्यत आह **शब्दप्राप्तस्येति ।।** तात्पर्यतः शब्दप्राप्तस्य चेत्यर्थः । (तात्पर्यवच्छब्दप्राप्तस्येत्यर्थः इति पाठः) **नानुवादिनीति ।।** न निष्प्रयोजनानुवादिनीत्यर्थः ।। **व्यावहारिकेति ।।** व्यवहारविषयेत्यर्थः ।। **श्रुतिरिति ।।** जगत्सत्यत्वश्रुतिः । चिरानुवृत्त जगत्सत्यत्वग्राहि भ्रमरूप प्रत्यक्ष-प्रवाह समानविषयक विजातीय शाब्दज्ञान जनकत्वेन तत्संवादितया प्रत्यक्षादि प्रामाण्य भ्रमापादकत्वेनात्यन्ताप्रामाण्यमित्यर्थः ।।

❖❖❖

**ಕಿಂಚೈವಂ ನೇಹನಾನೇತಿ ಶ್ರುತಿರೇವ 'ವಿಶ್ವಂ ಸತ್ಯಂ' ಇತ್ಯಬಾಧ್ಯತ್ವ ರೂಪಬಾಧನಿಷೇಧಾಯ ವಿಜ್ಞಾನವಾದಾದಿಪ್ರಾಪ್ತ ವಿಶ್ವಬಾಧಾನುವಾದಿನೀ ಕಿಂ ನ ಸ್ಯಾತ್?**

''ವಿಶ್ವಂ ಸತ್ಯಂ' ಎಂಬ ಶ್ರುತಿಯು 'ನೇಹನಾನಾ' ಎಂದು ವಿಶ್ವಸತ್ವನಿಷೇಧಕ್ಕಾಗಿ ಪ್ರತ್ಯಕ್ಷಪ್ರಾಪ್ತವಾದ ಸತ್ವವನ್ನು ಅನುವಾದಿಸುತ್ತದೆ' ಎಂದು ಅದ್ವೈತಿ ಹೇಳುತ್ತಿರುವುದು ತಿರುವು ಮುರುವು. ವಸ್ತುತಃ 'ನೇಹನಾನಾ' ಎಂಬ ಶ್ರುತಿಯೇ 'ವಿಶ್ವಂ ಸತ್ಯಂ' ಎಂದು ವಿಶ್ವಬಾಧವನ್ನು ನಿಷೇಧಿಸುವುದಕ್ಕಾಗಿ ಬೌದ್ಧ ಅದ್ವೈತವಾದಗಳಿಂದ ಪ್ರಾಪ್ತವಾದ ವಿಶ್ವಬಾಧವನ್ನು ಅನುವಾದ ಮಾಡುತ್ತದೆ, ಎಂದೇಕೆ ಹೇಳಬಾರದು?

ಯದ್ಯಪಿ 'ವಿಶ್ವಂ ಸತ್ಯ' ಎಂಬ ಶ್ರುತಿಯು ಸತ್ಯತ್ವಾರ್ಥಕ ಹೊರತು ಬಾಧಾಭಾವಾರ್ಥಕವಲ್ಲ. ಆದರೆ ನ್ಯಾಯಮತದಲ್ಲಿ ತಮಃಶಬ್ದವೂ ಎಲ್ಲ ಮತದಲ್ಲಿ ಪ್ರಳಯ ಮುಂತಾದ ಶಬ್ದವೂ ನೇರವಾಗಿ ಭಾವಪದಾರ್ಥಗಳನ್ನು ಹೇಳುವಂತೆ ಕಂಡರೂ ಅರ್ಥಾತ್ ಅಭಾವ ಪದಾರ್ಥಗಳಿಗೆ ವಾಚಕವಾಗುತ್ತವೆ. ಹಾಗೇ 'ಸತ್ಯ' ಶಬ್ದವು ನೇರವಾಗಿ 'ವಿದ್ಯಮಾನ' ಎಂಬರ್ಥ ಹೇಳಿದರೂ ಅರ್ಥಾತ್ ಅಬಾಧವನ್ನು ಹೇಳುತ್ತದೆ. ಅಭಾವವಾಚಿಯಾಗುತ್ತದೆ.

**ಕಿಂಚ ಧರ್ಮ-ಅಧರ್ಮ ಸ್ವರ್ಗನರಕಾದೇಃ ನ ಪ್ರತ್ಯಕ್ಷಾದಿನಾ ಪ್ರಾಪ್ತಿಃ ।**

**ಶಬ್ದಪ್ರಾಪ್ತಸ್ಯ ಶಬ್ದೇನ ನಿಷೇಧಾಯ ಅನುವಾದೇ ಏತಚ್ಛಾಖಾಸ್ಥ ಅಗ್ನೀಷೋಮೀಯ ವಾಕ್ಯಸ್ಯ ನಹಿಂಸ್ಯಾದಿತಿ ನಿಷೇಧಾಯ ಶಾಖಾಂತರೋಕ್ತ ಅಗ್ನೀಷೋಮೀಯ ಹಿಂಸಾನುವಾದಿತ್ವಂ ಸ್ಯಾತ್ ।**

ಧರ್ಮ ಅಧರ್ಮ ಸ್ವರ್ಗ ನರಕಾದಿಗಳು ಪ್ರತ್ಯಕ್ಷ ಅನುಮಾನಗಳಿಂದ ಪ್ರಾಪ್ತವಾಗುವುದಿಲ್ಲ. ಅವು ಪ್ರತ್ಯಕ್ಷಾದಿ ಯೋಗ್ಯವಲ್ಲ. ವೇದೈಕವೇದ್ಯವಾಗಿವೆ. ಶಬ್ದದಿಂದ ಅಂದರೆ ವೇದದಿಂದಲೆ ಪ್ರಾಪ್ತವಾಗಬಹುದೆಂದರೆ ವೇದಪ್ರಾಪ್ತವಾದುದನ್ನು ವೇದವೆ ನಿಷೇಧಮಾಡಿದರೆ ಅದು ಉನ್ಮತ್ತ ವಾಕ್ಯವಾದೀತು.

ಮತ್ತು ಈ ಶಾಖೆಯಲ್ಲಿರುವ 'ಅಗ್ನೀಷೋಮೀಯಂ ಪಶುಮಾಲಭೇತ' ಎಂಬ ವಾಕ್ಯವು 'ಮಾ ಹಿಂಸ್ಯಾತ್ ಸರ್ವಾಭೂತಾನಿ' ಎಂಬ ಅಹಿಂಸಾವಾಕ್ಯದಿಂದ ನಿಷೇಧ ಮಾಡಲು ಶಾಖಾಂತರದ ಅಗ್ನೀಷೋಮೀಯವಾಕ್ಯದಿಂದ ಪ್ರಾಪ್ತವಾದ ಅಗ್ನೀಷೋಮೀಯ ಪಶುಹಿಂಸಾವಿಧಿಯನ್ನು ಅನುವಾದ ಮಾಡುತ್ತದೆ ಎನ್ನಬೇಕಾದೀತು.

ಯದ್ಯಪಿ ಧರ್ಮಾಧರ್ಮಾದಿಗಳು ಅನುಮಾನದಿಂದ ಸಿದ್ಧವಾಗಬಹುದು. ಅವುಗಳನ್ನು 'ನೇಹನಾನಾ' ಶ್ರುತಿ ನಿಷೇಧಿಸಬಹುದು.

ಸಾಪೇಕ್ಷತ್ವಾದನಾದಿತ್ವಾದ್ ವೈಚಿತ್ರ್ಯಾದ್ ವಿಶ್ವವೃತ್ತಿತಃ ।
ಪ್ರತ್ಯಾತ್ಮನಿಯಮಾದ್ ಭುಕ್ತೇರಸ್ತಿ ಹೇತುರಲೌಕಿಕಃ ॥

ಎಂದು ನ್ಯಾಯಕುಸುಮಾಂಜಲಿಯಲ್ಲಿ ಧರ್ಮಧರ್ಮಾದಿ ವಿಷಯದಲ್ಲಿ ಅನುಮಾನಗಳಿವೆ ಎಂದು ಸಮರ್ಥಿಸಲಾಗಿದೆ. ಆದರೆ 'ನೇಹ ನಾನಾ' ಶ್ರುತಿಯು 'ಇಹ' ಬ್ರಹ್ಮನಲ್ಲಿ ಧರ್ಮಾದಿಗಳನ್ನು ನಿಷೇಧಿಸಲು ಬ್ರಹ್ಮನಲ್ಲಿ ಧರ್ಮಾದಿಗಳು ಅನುಮಾನದಿಂದ ಪ್ರಾಪ್ತವಾಗುವುದಿಲ್ಲ. ಬೇರೆ ಅನುಮಾನಗಳಿಂದ ಬ್ರಹ್ಮನಲ್ಲಿಯೂ ಧರ್ಮಾದಿಗಳನ್ನು ಹೇಳಬಹುದು ಎಂದರೆ ಹೀಗೆ ಅನುಮಾನದಿಂದ ಎಲ್ಲಕಡೆ ಪ್ರಸಕ್ತಿ ಹೇಳಬಹುದು, ಅಪ್ರಸಕ್ತನಿಷೇಧವೆಂಬುದೆ ಇಲ್ಲವಾದೀತು.

ಹಾಗಾದರೆ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂದು ಬ್ರಹ್ಮನಲ್ಲಿ ಹೇಯವಾದ ತ್ರಿಗುಣಗಳನ್ನು ಪಾಪಾದಿಕರ್ಮಗಳನ್ನು ನಿಷೇಧಿಸುವುದು ಹೇಗೆ? ಎಂದರೆ 'ಸರ್ವಕರ್ಮಾ' ಇತ್ಯಾದಿ ಶ್ರುತಿಗಳಿಂದಲೇ ಆಪಾತತಃ ಹೇಯವಾದ ಪಾಪಾದಿಕರ್ಮಗಳು ತ್ರಿಗುಣಗಳು ಬ್ರಹ್ಮನಲ್ಲಿ ಪ್ರಾಪ್ತವಾಗುವುದರಿಂದ ಶ್ರುತಿಯು ಅವುಗಳನ್ನು 'ನಿರ್ಗುಣಶ್ಚ' ಎಂದು ನಿಷೇಧಿಸುತ್ತಿದೆ ಎನ್ನಬಹುದು. ಯಸ್ಮಿನ್ದ್ಯೌಃ ಅತೋ ಧರ್ಮಾಣಿ ಧಾರಯನ್' 'ಧಾರಕಲೋಕಗಳನ್ನು ಧರಿಸುತ್ತಾನೆ' ಎಂದು ಶ್ರುತಿಯಲ್ಲಿಯೇ ಪ್ರಾಪ್ತಿ ಇದೆ ಎಂದರೆ ತಾತ್ಪರ್ಯಪೂರ್ವಕವಾಗಿ ವೇದವು ಹೇಳುವ ಈ ಬಗೆಯ ಪ್ರಮೇಯಗಳನ್ನು ವೇದವು ನಿಷೇಧಿಸುವುದಿಲ್ಲ.

**ಸತ್ಯಂ ಜ್ಞಾನಮಿತ್ಯಾದೇರಪಿ ಇದಂ ವಾ ಅಗ್ರೇ ನೈವ ಕಿಂಚನಾಸೀತ್ ಇತಿ ನಿಷೇಧಾಯ 'ತತ್ಸತ್ಯಂ' ಇತ್ಯಾದಿ ವಾಕ್ಯೋಕ್ತ ಬ್ರಹ್ಮಸತ್ತಾನುವಾದಿತ್ವಂ ಸ್ಯಾತ್ । ತಸ್ಮಾನ್ನಾನುವಾದಿನೀ ಶ್ರುತಿಃ ।**

'ಸತ್ಯಂಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯವೂ ಕೂಡ 'ಇದಂ ವಾ ಅಗ್ರೇ ನೈವ ಕಿಂಚನಾಸೀತ್ ' ಎಂದು ನಿಷೇಧಕ್ಕಾಗಿ 'ತತ್ಸತ್ಯಂ' ವಾಕ್ಯೋಕ್ತವಾದ ಬ್ರಹ್ಮವನ್ನು ಅನುವಾದ ಮಾಡುತ್ತದೆ ಎಂದಾದೀತು. ಆದರಿಂದ ವಿಶ್ವಸತ್ವ ಶ್ರುತಿಯು ವ್ಯರ್ಥ ಅನುವಾದಕವಲ್ಲ.

**ನಾಪಿ ವ್ಯಾವಹಾರಿಕಸತ್ತ್ವಪರಾ । ವೈಯ್ಯರ್ಥ್ಯಾತ್ । ನಹಿ ಕೋಽಪಿ ಪ್ರಪಂಚೇ ವ್ಯಾವಹಾರಿಕ ಸತ್ಯತಾಂ ನೋಪೈತಿ । ಅಪ್ರಾಪ್ತೇ ಚ ಶಾಸ್ತ್ರಮರ್ಥವತ್ ।**

ಜಗತ್ಸತ್ಯತ್ವ ಶ್ರುತಿಯು ವ್ಯಾವಹಾರಿಕಸತ್ವವನ್ನು ಹೇಳುವ ತಾತ್ಪರ್ಯ ಉಳ್ಳುದೆಂದರೆ ಅದು ವ್ಯರ್ಥ. ವ್ಯವಹಾರಕಾಲದಲ್ಲಿ ಪ್ರಪಂಚವು ಸತ್ಯವೆಂದು ಯಾರೂ ಒಪ್ಪದೇ ಇರುವುದಿಲ್ಲ ತಾನೆ? ಅದನ್ನು ಶ್ರುತಿಯು ಏಕೆ ಹೇಳಬೇಕು? ಶಾಸ್ತ್ರವು ಪ್ರಮಾಣಾಂತರದಿಂದ ಸಿದ್ಧವಾಗದಿರುವ ಪ್ರಮೇಯವನ್ನು ಹೇಳಿದರೆ ಮಾತ್ರ ಅದು ಶ್ರೋತೃಗಳ ಅಜ್ಞಾನ ಸಂಶಯ ವಿಪರ್ಯಯಗಳನ್ನು ನಿರಾಸಮಾಡಿ ಸಾರ್ಥಕವೆನಿಸುವುದು.

**ಕಿಂಚ ವ್ಯಾವಹಾರಿಕ ಶಬ್ದೇನ ಅಬಾಧ್ಯೋಕ್ತೌ ಇಷ್ಟಾಪತ್ತಿಃ । ಬಾಧ್ಯೋಕ್ತೌ ಶ್ರುತಿಶ್ಚಿರಾನುವೃತ್ತ ದೃಢಭ್ರಾಂತಿ ಹೇತುತ್ವೇನ ಅತ್ಯಂತಾಪ್ರಮಾಣಂ ಸ್ಯಾತ್ ।**

'ವ್ಯಾವಹಾರಿಕ' ಎಂದರೆ ಅಬಾಧ್ಯ ಎಂದರ್ಥ ಎಂದರೆ ಇಷ್ಟಾಪತ್ತಿ. ಪ್ರಪಂಚ ಸತ್ಯತ್ವವನ್ನು

ಅಬಾಧ್ಯವೆಂದೇ ನಾವು ಒಪ್ಪುತ್ತೇವೆ. ವ್ಯಾವಹಾರಿಕವೆಂದರೆ ಬಾಧ್ಯ, ಬ್ರಹ್ಮಜ್ಞಾನದಿಂದ ನಿವೃತ್ತವಾಗುವುದೆಂದರ್ಥ ಎಂದರೆ, ಬ್ರಹ್ಮಾಪರೋಕ್ಷಜ್ಞಾನ ಬರುವವರೆಗೂ ಬಹುಕಾಲ ಮುಂದುವರಿಯುತ್ತಲೇ ಇರುವ ದೃಢವಾದ ಪ್ರತ್ಯಕ್ಷಭ್ರಾಂತಿ ಪ್ರವಾಹಕ್ಕೆ ಸಮಾನವಿಷಯಕವಾಗಿದ್ದು ವಿಜಾತೀಯವಾಗಿರುವ ಪರೋಕ್ಷಜ್ಞಾನವನ್ನು ಶಾಸ್ತ್ರವು ಉಂಟುಮಾಡುತ್ತದೆ, ಮತ್ತು ಪ್ರತ್ಯಕ್ಷಭ್ರಾಂತಿಗೆ ಸಂವಾದಿಯಾಗಿ 'ಆ ಪ್ರತ್ಯಕ್ಷವು ಪ್ರಮಾಣ' ಎನ್ನುವ ದೀರ್ಘ ಭ್ರಾಂತಿಯನ್ನುಂಟು ಮಾಡುತ್ತದೆ. ಹೀಗೆ ಶಾಸ್ತ್ರವು ಅತಿದೀರ್ಘಕಾಲದ ದೃಢವಾದ ಮಹಾಭ್ರಾಂತಿಯನ್ನುಂಟು ಮಾಡುವುದರಿಂದ ಅತ್ಯಂತ ಅಪ್ರಮಾಣವೆನಿಸುತ್ತದೆ. ಆದರಿಂದ ಸತ್ಯಶ್ರುತಿಯು ಪ್ರತ್ಯಕ್ಷ ಭ್ರಾಂತಿಯಲ್ಲಿ ಕಾಣುವ ವ್ಯಾವಹಾರಿಕ ಸತ್ವವನ್ನು ಅನುವಾದಿಸುವುದಿಲ್ಲ ಎನ್ನಬೇಕು.



नच मिथ्यात्वश्रुतिविरोधात्तदिष्टम् । त्वत्पक्षे तस्या लक्षणया अखण्डचिन्मात्रपरत्वेन जगत्सत्त्वाविरोधित्वात् । असद्वा इत्यादिश्रुतिविरोधेन तत्सत्यमित्यादेरपि प्रातिभासिकसत्त्वपरत्वापाताच्च । सत्त्वश्रुतिविरोधेन मिथ्यात्वश्रुतिरेवाप्रमाणमित्यपि सुवचत्वाच्च । नच षड्विधतात्पर्यलिङ्गवत्त्वादद्वैतवाक्यं प्रबलम्, लिङ्गानि हि तात्पर्यज्ञापकानि, नत्वर्थतथात्वस्य । अस्ति चात्रापि वाक्यशेषे आपश्चन प्रमिनन्तीति प्रामाणिकत्वरूपा, न मोघामित्यर्थक्रियाकारित्वरूपा चोपपत्तिस्तात्पर्यलिङ्गम् । लिङ्गबहुत्वं तु त्वत्पक्षे प्रमाणबाहुल्यवद् व्यर्थमित्युक्तम् ।

यदिच सत्त्वश्रुतिः प्रत्यक्षप्राप्तार्थत्वान्न स्वार्थपरा तर्हि मिथ्यात्वश्रुतिरपि तद्विरुद्धार्थत्वात्तथा स्यात्, मानान्तर प्राप्तिवत् तद्विरोधस्याप्यतात्पर्य हेतुत्वात् । यदितु मिथ्यात्वश्रुतिः प्रत्यक्षागृहीतत्रिकालाबाध्यत्वनिषेधपरा तर्हि सत्त्वश्रुतिरपि तदगृहीततद्विधिपरास्तु ।

नच सुषुप्तौ निष्प्रपञ्चतायाः पुरुषार्थत्वदर्शनात्, फलवत्संनिधावफलं तदङ्गमितिन्यायेन निष्प्रपञ्चवाक्यानुसारेण

**सप्रपञ्चवाक्यं नेयमिति विवरणोक्तं युक्तम् । तस्या मूर्च्छायामपुरुषार्थत्वस्यापि दर्शनात् । मूर्च्छायां प्रपञ्चस्याज्ञानमेव न त्वभाव इति चेत् समं सुषुप्तावपि । यदि च मूर्च्छा दुःखयोगेनैवापुरुषार्थः, तर्हि सुषुप्तिरपि सुखयोगेनैव पुरुषार्थः ।**

**अस्ति च ''द्वितीयाद्वै भयं भवती''तिश्रुतिरिव ''तस्मादेकाकी न रमत'' इत्यपि श्रुतिः ।**

---

**त्वत्पक्षे तस्या इति ।।** यद्यपि लक्षणाबीजानुपपत्तिप्रयोजक-प्राथमिकशाब्दबोधेन सत्त्वश्रुतेर्विरोधोऽस्ति । तथापि तस्य मिथ्यात्वश्रुति-विषयत्वापातेन तद्विरोधोऽकिञ्चित्कर इति भावः । आपाततोऽपि विरोधस्य बाधकत्वे दूषणमाह **असद्वा इत्यादीति ।। लिङ्गबहुत्वमिति ।।** शतमप्यन्धानां न पश्यतीति न्यायादिति भावः ।। **तद्विरोधस्यापीति ।।** एतच्चोपलक्षणम् । सन् घटः इत्यादिप्रत्यक्षेण सत्तादात्म्यग्राहिणा सद्भिन्नत्वरूपमिथ्यात्वस्याप्राप्तेरित्यपि द्रष्टव्यम् ।। **तद्गृहीतेति ।।** अभ्युपेत्य चेदमुदितम् । वस्तुतस्तु प्रत्यक्षं त्रिकालाबाध्यत्वग्राहीत्युदितमिति ध्येयम् ।। **अफलमिति ।।** पृथक् फलसम्बन्धित्वेनाज्ञातमित्यर्थः । **समं सुषुप्तावपीति ।।** नच ''सुषुप्तिकाले सकलो विलीनः'' इति श्रुत्या सकलस्य विलयः प्रतीयत इति वाच्यम् । तत्र सकलशब्दस्य योग्यमनोवृत्तिपरत्वात् । अन्यथा बहुप्रमाणविप्लवापत्तेः ।

ननु तथापि द्वितीयस्य भयापादकत्वश्रवणेन तदभावस्य पुरुषार्थत्वं त्वयाप्येष्टव्यमित्याशङ्क्य तस्यापुरुषार्थत्वावेदकश्रुतेरपि सत्वान्न तस्य पुरुषार्थत्वमित्यभिप्रेत्याह **अस्ति चेति ।।**



ನಚ ಮಿಥ್ಯಾತ್ವಶ್ರುತಿವಿರೋಧಾತ್ ತದಿಷ್ಟಂ। ತ್ವತ್ಪಕ್ಷೇ ತಸ್ಯಾಃ ಲಕ್ಷಣಯಾ ಅಖಂಡಚಿನ್ಮಾತ್ರಪರತ್ವೇನ ಜಗತ್ಸತ್ತ್ವಾವಿರೋಧಿತ್ವಾತ್ ।

ವಿಶ್ವಸತ್ವಶ್ರುತಿಗೆ ಮಿಥ್ಯಾತ್ವಶ್ರುತಿಯ ವಿರೋಧವಿರುವುದರಿಂದ, ಅದರಿಂದ ಬಾಧಿತವಾಗಿರುವ ಸತ್ವಶ್ರುತಿಯು ಅಪ್ರಮಾಣವೆನಿಸುವುದು ನಮಗೆ ಇಷ್ಟವೆ ಎಂದರೆ, ಅದು ಸರಿಯಲ್ಲ. ಅದ್ವೈತ ಮತದಲ್ಲಿ ಮಿಥ್ಯಾತ್ವಶ್ರುತಿಯು ಲಕ್ಷಣಯಾ ಅಖಂಡಚಿನ್ಮಾತ್ರಪರವೆಂದು ಅಗೀಕರಿಸಿರುವುದರಿಂದ ಅದು ಸತ್ವಶ್ರುತಿಗೆ ವಿರೋಧ ಮಾಡುವುದಿಲ್ಲ. ವಿಶ್ವಸತ್ವವನ್ನು ನಿಷೇಧ ಮಾಡುವುದಿಲ್ಲ. ಸ್ಪಷ್ಟವಾಗಿ ಮಿಥ್ಯಾತ್ವವನ್ನು ಅದು ಹೇಳುತ್ತಿದ್ದರೆ ಮಾತ್ರ ಸತ್ವಶ್ರುತಿಗೆ ಅದು ವಿರೋಧಿಯಾಗುತ್ತಿತ್ತು.

ಯದ್ಯಪಿ ಲಕ್ಷಣಾಬೀಜವಾದ ಅನುಪಪತ್ತಿಗೆ ಪ್ರಯೋಜಕವಾಗಿ ಬರುವ ಪ್ರಾಥಮಿಕ ಬೋಧವು ದ್ವಿತೀಯಾಭಾವ ವಿಷಯಕವಾಗಿ ಬರುತ್ತದೆ. ಅದರ ವಿರೋಧ ಸತ್ವಪ್ರತ್ಯಕ್ಷಕ್ಕೆ ಇದೆ. ಆದರೂ ಅದು ದ್ವಿತೀಯವಾದ ಮಿಥ್ಯಾತ್ವಶ್ರುತಿಯ ಅಭಾವವನ್ನು ಕೂಡ ವಿಷಯೀಕರಿಸುವುದರಿಂದ ಮಿಥ್ಯಾತ್ವಶ್ರುತಿ ತನ್ನಿಂದ ತಾನೇ ಬಾಧಿತವಾಗಿ ಸತ್ವಶ್ರುತಿಯನ್ನು ಬಾಧಿಸಲು ಶಕ್ತವಾಗುವುದಿಲ್ಲ. ಅದರ ವಿರೋಧವೂ ಸತ್ವಶ್ರುತಿಯನ್ನು ಏನೂ ಮಾಡಲಾರದು.

**ಅಸದ್ವಾ ಇತ್ಯಾದಿ ಶ್ರುತಿವಿರೋಧೇನ ತತ್ಸತ್ಯಮಿತ್ಯಾದೇರಪಿ ಪ್ರಾತಿಭಾಸಿಕಸತ್ವ ಪರತ್ವಾಪಾತಾಚ್ಚ। ಸತ್ವಶ್ರುತಿವಿರೋಧೇನ, ಮಿಥ್ಯಾತ್ವಶ್ರುತಿರೇವ ಅಪ್ರಮಾಣಮಿತ್ಯಪಿ ಸುವಚತ್ವಾಚ್ಚ।**

'ಅಸದ್ವಾ' ಇತ್ಯಾದಿ ಶ್ರುತಿಯು ಅಖಂಡಚಿನ್ಮಾತ್ರಪ್ರತಿಪಾದಕವಾದರೂ ಸತ್ಯತ್ವಶ್ರುತಿಗೆ ಬಾಧಕವೆಂದು ಒಪ್ಪಿದರೆ 'ತತ್‌ಸತ್ಯಂ' ಇತ್ಯಾದಿ ಬ್ರಹ್ಮಸತ್ಯತ್ವಶ್ರುತಿಗೂ ಅದು ಬಾಧಕವಾದೀತು. ಬ್ರಹ್ಮಸತ್ಯತ್ವವು ಪ್ರಾತಿಭಾಸಿಕವಾದೀತು. ಬ್ರಹ್ಮಾದಿ ಸರ್ವಪ್ರಪಂಚವನ್ನೂ ಅಸತ್ತೆಂದು ಹೇಳುವ ಈ ಶ್ರುತಿಯಿಂದ ಸರ್ವಪ್ರಪಂಚವೂ ಅಸತ್ ಅಂದರೆ ಪ್ರಾತಿಭಾಸಿಕ ಎಂದಾದೀತು. ಮತ್ತು ಸತ್ವಶ್ರುತಿವಿರೋಧದಿಂದ ಮಿಥ್ಯಾತ್ವಶ್ರುತಿಯೂ ಬಾಧಿತವಾಗುವುದು, ಅಪ್ರಮಾಣವೆಂದಾಗುವುದು ಎಂದು ಅನಾಯಾಸವಾಗಿ ಹೇಳಲು ಬರುತ್ತದೆ.

**ನಚ ಷಡ್ವಿಧ ತಾತ್ಪರ್ಯಲಿಂಗ ವತ್ತ್ವಾತ್ ಅದ್ವೈತವಾಕ್ಯಂ ಪ್ರಬಲಮ್।**

**ಲಿಂಗಾನಿ ಹಿ ತಾತ್ಪರ್ಯಜ್ಞಾಪಕಾನಿ। ನತು ಅರ್ಥತಥಾತ್ವಸ್ಯ।**

ಷಡ್‌ವಿಧ ತಾತ್ಪರ್ಯಲಿಂಗಗಳಿರುವುದರಿಂದ ಅದ್ವೈತವಾಕ್ಯವು ಪ್ರಬಲ. ಅದೇ ಸತ್ವಶ್ರುತಿಯನ್ನು ಬಾಧಿಸುತ್ತದೆ ಎಂದರೆ ಅದು ಸರಿಯಲ್ಲ. ತಾತ್ಪರ್ಯ ಲಿಂಗಗಳು ತಾತ್ಪರ್ಯಕ್ಕೆ ಜ್ಞಾಪಕ ಹೊರತು ವಿಷಯಸತ್ವಕ್ಕೆ ಜ್ಞಾಪಕವಲ್ಲ. ಅದ್ವೈತಶ್ರುತಿಗೆ ಅದ್ವೈತದಲ್ಲಿ ತಾತ್ಪರ್ಯವಿದೆ ಎಂದು ಮಾತ್ರ ತಾತ್ಪರ್ಯ ಲಿಂಗವು ಹೇಳೀತು, ಹೊರತು ಅದ್ವೈತವು ಸತ್ಯವೇ ಸುಳ್ಳೆ ಎಂದೇನೂ ಹೇಳುವುದಿಲ್ಲ. ಅದ್ವೈತವು ಬೇರೆ ಪ್ರಮಾಣಗಳ ವಿರೋಧವಿಲ್ಲದಿದ್ದರೆ ಸತ್ಯ, ಇದ್ದರೆ ಮಿಥ್ಯಾ ಎಂದು ವಿಚಾರಮಾಡಿಯೇ ತಿಳಿಯಬೇಕಾಗುತ್ತದೆ.

**ಅಸ್ತಿ ಚಾತ್ರಾಪಿ ವಾಕ್ಯಶೇಷೇ 'ಆಪಶ್ಚನ ಪ್ರಮಿನಂತಿ' ಇತಿ ಪ್ರಾಮಾಣಿಕತ್ವರೂಪಾ।**

**'ನಮೋಘಂ' ಇತಿ ಅರ್ಥಕ್ರಿಯಾಕಾರಿತ್ವರೂಪಾ ಚ ಉಪಪತ್ತಿಃ ತಾತ್ಪರ್ಯಲಿಂಗಂ। ಲಿಂಗಬಹುತ್ವಂ ತು ತ್ವತ್‌ಪಕ್ಷೇ ಪ್ರಮಾಣಬಾಹುಲ್ಯವತ್ ವ್ಯರ್ಥಮಿತ್ಯುಕ್ತಂ।**

ಶ್ರುತಿ ಪ್ರಾಬಲ್ಯಕ್ಕೆ ಷಡ್ವಿಧ ತಾತ್ಪರ್ಯಲಿಂಗಗಳೇ ಬೇಕೆಂದರೂ, ಪ್ರಕೃತ ಸತ್ವಶ್ರುತಿಗೆ 'ಆಪಶ್ಚನ ಪ್ರಮಿನಂತಿ' 'ದೇವತೆಗಳು ಕೂಡ ಶ್ರೀಹರಿಯ ಜಗತ್ ಸೃಷ್ಟ್ಯಾದಿ ವ್ಯಾಪಾರಗಳನ್ನು ಸತ್ಯವೆಂದು ಅಂಗೀಕರಿಸಿರುವರು' ಎಂದು ದೇವತೆಗಳ ಅಂಗೀಕಾರವೆಂಬ ಅಲೌಕಿಕ ಪ್ರಮಾಣ ಗಳಿರುವುದರಿಂದ ಜಗತ್‌ಸತ್ಯತ್ವವು ಪ್ರಾಮಾಣಿಕವೆಂದು ಉಪಪತ್ತಿರೂಪ ತಾತ್ಪರ್ಯಲಿಂಗವಿದೆ. ಮತ್ತು 'ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ' 'ಶ್ರೀಹರಿ ಸೃಜಿಸಿದ ಈ ಜಗತ್ತು ಸತ್ಯವೇ ಹೊರತು, ಅರ್ಥಕ್ರಿಯಾಕಾರಿಯಾಗದ ವ್ಯರ್ಥಸೃಷ್ಟಿಯಲ್ಲ' ಎಂದು ಅರ್ಥಕ್ರಿಯಾಕಾರಿತ್ವರೂಪ ಉಪಪತ್ತಿ ಯನ್ನೂ ಶ್ರುತಿಯು ನೀಡುತ್ತಿದೆ.

ಉಪಪತ್ತಿ ಎಂಬ ಒಂದೇ ತಾತ್ಪರ್ಯಲಿಂಗವಿದ್ದಂತಾಯಿತು ಎಂದರೆ, ಅದ್ವೈತಿ ಹೀಗೆ ಹೇಳಬಾರದು, ಅದ್ವೈತಮತದಲ್ಲಿ ಪ್ರಮಾಣ ಬಹುತ್ವದಂತೆಯೇ ತಾತ್ಪರ್ಯಲಿಂಗಬಹುತ್ವವೂ ಅನುವಾದಕವಾಗಿ ವ್ಯರ್ಥವೇ ಆಗುವುದೆಂದು ಹಿಂದೆಯೇ ಹೇಳಿದ್ದೇವೆ. 'ಶತಮಪ್ಯಂಧಾನಾಂ ನ ಪಶ್ಯತಿ' 'ನೂರು ಮಂದಿ ಕುರುಡರು ಸೇರಿದರೂ ಒಂದು ಘಟವನ್ನು ನೋಡಲಾರರು' ಎನ್ನುವ ಗಾದೆಯಂತೆ, ಅನುವಾದಕವೆನಿಸಿ ಅಸಮರ್ಥವಾಗುವ ಆರು ತಾತ್ಪರ್ಯ ಲಿಂಗಗಳಿದ್ದರೂ ಪ್ರಮೇಯಸಿದ್ಧಿ ಅವುಗಳಿಂದಾಗುವುದಿಲ್ಲ.

**ಯದಿ ಚ ಸತ್ವಶ್ರುತಿಃ ಪ್ರತ್ಯಕ್ಷ ಪ್ರಾಪ್ತಾರ್ಥತ್ವಾತ್ ನ ಸ್ವಾರ್ಥಪರಾ, ತರ್ಹಿ ಮಿಥ್ಯಾತ್ವ ಶ್ರುತಿರಪಿ ತದ್‌ವಿರುದ್ಧಾರ್ಥತ್ವಾತ್ ತಥಾ ಸ್ಯಾತ್। ಮಾನಾಂತರಪ್ರಾಪ್ತಿವತ್ ತದ್‌ವಿರೋಧಸ್ಯಾಪಿ ಅತಾತ್ಪರ್ಯ ಹೇತುತ್ವಾತ್।**

ಸತ್ವಶ್ರುತಿಯು ಪ್ರತ್ಯಕ್ಷಪ್ರಾಪ್ತ ಸತ್ವವನ್ನು ಅನುವಾದ ಮಾಡುವುದರಿಂದ ತಾನು ಹೇಳುವ ವಿಷಯದಲ್ಲಿ ಅದಕ್ಕೆ ತಾತ್ಪರ್ಯವಿಲ್ಲ ಎನ್ನುವುದಾದರೆ ಮಿಥ್ಯಾತ್ವಶ್ರುತಿಯೂ ಕೂಡ ಪ್ರತ್ಯಕ್ಷ ಪ್ರಮಾಣಕ್ಕೆ ವಿರುದ್ಧವಾಗಿ ಮಿಥ್ಯಾತ್ವವನ್ನು ಹೇಳುವುದರಿಂದ ವಸ್ತುತಃ ಅದಕ್ಕೆ ಮಿಥ್ಯಾತ್ವದಲ್ಲಿ ತಾತ್ಪರ್ಯವಿರುವುದಿಲ್ಲ. ಶ್ರುತಿಗೆ ತಾನು ಹೇಳುವ ವಿಷಯದಲ್ಲಿ ಪ್ರಮಾಣಾಂತರದಿಂದ ಪ್ರಾಪ್ತಿ ಇದ್ದರೆ ಹೇಗೆ ತಾತ್ಪರ್ಯವಿರುವುದಿಲ್ಲವೋ ಹಾಗೇ ಪ್ರಾಮಾಣಾಂತರದಿಂದ ವಿರೋಧವಿದ್ದರೂ ತಾತ್ಪರ್ಯವಿರಲಾರದು.

'ಸನ್‌ಘಟಃ' ಎಂದು ಪ್ರತ್ಯಕ್ಷವು ಘಟದಲ್ಲಿ ಸತ್ತಾದಾತ್ಮ್ಯವನ್ನು ಹೇಳುತ್ತಿರುವಾಗ ಅದಕ್ಕೆ ವಿರುದ್ಧವಾಗಿ ಮಿಥ್ಯಾತ್ವಶ್ರುತಿಯು ಘಟದಲ್ಲಿ ಸದ್‌ಭಿನ್ನತ್ವವನ್ನು ಹೇಳಲಾರದು. ಮತ್ತು ಸತ್ತಾದಾತ್ಮ್ಯವಗಾಹಿಯಾದ ಪ್ರತ್ಯಕ್ಷವು ಸದ್‌ಭಿನ್ನತ್ವರೂಪ ಮಿಥ್ಯಾತ್ವವನ್ನು ಹೇಳದಿರುವುದರಿಂದ ಪ್ರಮಾಣಾಂತರ ಸಂವಾದ ರಹಿತವಾದ ಮಿಥ್ಯಾತ್ವವಿಷಯ ಮಿಥ್ಯಾತ್ವಶ್ರುತಿಗೆ ತಾತ್ಪರ್ಯವೂ ಇರಲಾರದು.

ಪ್ರಮಾಣಭೂತವಾದ ಆಗಮಕ್ಕೆ ತಾನು ಹೇಳುತ್ತಿರುವ ವಿಷಯದಲ್ಲಿ ತಾತ್ಪರ್ಯ ವಿರಬೇಕಾದರೆ ಅದು ಹೇಗೆ ಅನಧಿಗತವಾಗಿರಬೇಕೋ ಹಾಗೇ ಅದು 'ತಥಾಭೂತ' ಯಥಾರ್ಥವೂ ಆಗಿರಬೇಕು. ಅನಧಿಗತ ತಥಾಭೂತ ಅರ್ಥಪ್ರತಿಪಾದಕತ್ವವೇ ಆಗಮಕ್ಕೆ ಪ್ರಾಮಾಣ್ಯ, ಪ್ರಮಾಣಾಂತರದಿಂದ ಪ್ರಾಪ್ತವಾದರೆ ವಿಷಯವು 'ಅನಧಿಗತ'ವಾಗಲಾರದು. ಪ್ರಮಾಣಾಂತರಿಂದ ವಿರುದ್ಧವಾದರೂ ಅದು 'ತಥಾಭೂತ'ವೆಂದಾಗಲಾರದು.

**ಯದಿತು ಮಿಥ್ಯಾತ್ವಶ್ರುತಿಃ ಪ್ರತ್ಯಕ್ಷಾಗೃಹೀತ ತ್ರಿಕಾಲಾಬಾಧ್ಯತ್ವ ನಿಷೇಧಪರಾ, ತರ್ಹಿ ಸತ್ವಶ್ರುತಿರಪಿ ತದಗೃಹೀತ ತದ್‌ವಿಧಿಪರಾ ಅಸ್ತು ।**

ಮಿಥ್ಯಾತ್ವ ಶ್ರುತಿಯು ಪ್ರತ್ಯಕ್ಷದಿಂದ ಗೃಹೀತವಾಗದಿದ್ದ ತ್ರಿಕಾಲಾಬಾಧ್ಯತ್ವವನ್ನು ನಿಷೇಧಿಸುವುದರಿಂದ ಅದಕ್ಕೆ ಪ್ರಮಾಣಾಂತರ ಪ್ರತ್ಯಕ್ಷ ವಿರೋಧವಿಲ್ಲ ಎನ್ನುವುದಾದರೆ ಸತ್ವಶ್ರುತಿಯೂ ಪ್ರತ್ಯಕ್ಷಗೃಹೀತವಲ್ಲದ ತ್ರಿಕಾಲಾಬಾಧ್ಯತ್ವರೂಪ ಸತ್ವವನ್ನು ಇದೆ ಎನ್ನುವುದರಿಂದ ಪ್ರಮಾಣಾಂತರವಾದ ಪ್ರತ್ಯಕ್ಷದಿಂದ ಪ್ರಾಪ್ತಿಯೂ ಇಲ್ಲ. ಅನುವಾದಕತ್ವವಿಲ್ಲ, ಅದರಲ್ಲಿ ತಾತ್ಪರ್ಯವಿರಲು ಬಾಧಕವಿಲ್ಲ.

ಇದು ಅಭ್ಯುಪಗಮವಾದ. ವಸ್ತುತಃ ಪ್ರತ್ಯಕ್ಷದಿಂದ ತ್ರಿಕಾಲಾಬಾಧ್ಯತ್ವವು ಗೃಹೀತವಾಗಿದೆ. ಶ್ರುತಿಯು ಅದನ್ನು ಅನುವಾದಿಸಿ ದಾರ್ಢ್ಯ ಉಂಟುಮಾಡುತ್ತಿದೆ.

**ನಚ ಸುಷುಪ್ತೌ ನಿಷ್ಪ್ರಪಂಚತಾಯಾಃ ಪುರುಷಾರ್ಥತ್ವ ದರ್ಶನಾತ್ 'ಫಲವತ್ ಸನ್ನಿಧೌ ಅಫಲಂ ತದಂಗಂ' ಇತಿ ನ್ಯಾಯೇನ ನಿಷ್ಪ್ರಪಂಚ ವಾಕ್ಯಾನುಸಾರೇಣ ಸಪ್ರಪಂಚ ವಾಕ್ಯಂ ನೇಯಮಿತಿ ವಿವರಣೋಕ್ತಂ ಯುಕ್ತಂ। ತಸ್ಯಾ ಮೂರ್ಛಾಯಾಂ ಅಪುರುಷಾರ್ಥತ್ವಸ್ಯಾಪಿ ದರ್ಶನಾತ್ ।**

ಸುಪ್ತಿಯಲ್ಲಿ ಪ್ರಪಂಚವು ವಿಲಯಹೊಂದುವುದರಿಂದ 'ಸುಖಂ ಸುಪ್ತೋಸ್ಮಿ' ಎಂದು ಸುಖರೂಪವಾದ ಫಲವು ನಿಷ್ಪ್ರಪಂಚತ್ವಕ್ಕೆ ಇದೆ. ಸಪ್ರಪಂಚತ್ವಕ್ಕೆ ಜಾಗರದಲ್ಲಿ ಸುಪ್ತಿಸುಖರೂಪ ಫಲವಿಲ್ಲ. ಸಪ್ರಪಂಚತ್ವವು ಅಫಲ. ಅದರಿಂದ ವೇದದಲ್ಲಿ ನಿಷ್ಪ್ರಪಂಚ ವಾಕ್ಯವು ಸಫಲ. ಸಪ್ರಪಂಚ ವಾಕ್ಯವು ಅಫಲ. ಫಲವತ್ತಾದ ನಿಷ್ಪ್ರಪಂಚವಾಕ್ಯಸನ್ನಿಧಿಯಲ್ಲಿ ಅಫಲವಾದ ಸಪ್ರಪಂಚವಾಕ್ಯವು ಬರುವುದರಿಂದ ನಿಷ್ಪ್ರಪಂಚವಾಕ್ಯಕ್ಕೆ ಸಪ್ರಪಂಚವಾಕ್ಯವು ಅಂಗವಾಗಿರುತ್ತದೆ. ಅಂಗಿಯನುಸಾರ ಅಂಗವಾಕ್ಯವನ್ನು ಅಂಗಿಯ ಸ್ತುತಿಪರವಾಗಿ ಅರ್ಥೈಸಬೇಕು. ಇದು ಮೀಮಾಂಸಾ ನ್ಯಾಯ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂದು ಜ್ಯೋತಿಷ್ಟೋಮಯಾಗಕ್ಕೆ ಸ್ವರ್ಗಫಲ ಉಕ್ತವಾಗಿದೆ. 'ಪಂಚ ಪ್ರಯಾಜಾ ಇಜ್ಯಂತೇ' 'ಸಮಿಧೋ ಯಜತಿ' ಎಂದು ಮುಂತಾಗಿ ಪ್ರಯಾಜಾದಿಗಳಿಗೆ ಫಲವು ಉಕ್ತವಾಗಿಲ್ಲ. ಫಲವತ್ತಾದ ಜ್ಯೋತಿಷ್ಟೋಮ ಸನ್ನಿಧಿಯಲ್ಲಿ ಅಫಲವಾದ ಪ್ರಯಾಜಾದಿಗಳು ಶ್ರುತವಾದ್ದರಿಂದ ಪ್ರಯಾಜಾದಿಗಳು ಜ್ಯೋತಿಷ್ಟೋಮಕ್ಕೆ ಅಂಗ. ಎಂದು ಮೀಮಾಂಸಕರು ಹೇಳುತ್ತಾರೆ, ಎಂದು ವಿವರಣಗ್ರಂಥದಲ್ಲಿ ಹೇಳಿದೆ. ಇದು ಸರಿಯಲ್ಲ.

ನಿಷ್ಪ್ರಪಂಚತ್ವವು ಮೂರ್ಛಾವಸ್ಥೆಯಲ್ಲಿಯೂ ಇದೆ. 'ದುಃಖಮಾತ್ರ ಪ್ರತಿಸ್ಮೃತೇಃ' ಎಂಬ ವಚನಾನುಸಾರ ಮೂರ್ಛೆಯಲ್ಲಿ ದುಃಖಸ್ಮರಣ ಮಾತ್ರವಿರುತ್ತದೆ. ಆದರಿಂದ ನಿಷ್ಪ್ರಪಂಚಸ್ಥಿತಿಯು ಅಪುರುಷಾರ್ಥವಾಗಿರುವುದು ಕಂಡಿದೆ. ಅದನ್ನು ಫಲವತ್ತೆಂದು ಹೇಳಲಾಗದು. 'ಫಲವತ್ ಸನ್ನಿಧಾವಫಲಂ ತದಂಗಂ' ಎಂಬ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ.

**ಮೂರ್ಛಾಯಾಂ ಪ್ರಪಂಚಸ್ಯಾಜ್ಞಾನಮೇವ, ನತು ಅಭಾವಃ ಇತಿ ಚೇತ್ ಸಮಂ ಸುಷುಪ್ತಾವಪಿ । ಯದಿ ಚ ಮೂರ್ಛಾ ದುಃಖಯೋಗೇನೈವ ಅಪುರುಷಾರ್ಥಃ । ತರ್ಹಿ ಸುಷುಪ್ತಿರಪಿ ಸುಖಯೋಗೇನೈವ ಪುರುಷಾರ್ಥಃ ।**

'ಮೂರ್ಛೆಯಲ್ಲಿ ಪ್ರಪಂಚದ ಜ್ಞಾನವಿರುವುದಿಲ್ಲ ಹೊರತು ಪ್ರಪಂಚ ಲಯ ಹೊಂದುವುದಿಲ್ಲ. ಸುಷುಪ್ತಿಯಲ್ಲಿ ಪ್ರಪಂಚ ಲಯ ಹೊಂದುತ್ತದೆ.' ಎಂದು ನೀನು ಹೇಳಿದರೆ, ನಾನೂ ಹೇಳುತ್ತೇನೆ—'ಸುಷುಪ್ತಿಯಲ್ಲಿ ಪ್ರಪಂಚದ ಜ್ಞಾನವಿರುವುದಿಲ್ಲ, ಹೊರತು ಪ್ರಪಂಚ ಲಯ ಹೊಂದುವುದಿಲ್ಲ. ಮೂರ್ಛೆಯಲ್ಲಿ ಪ್ರಪಂಚ ಲಯ ಹೊಂದುತ್ತದೆ' ಎಂದು.

ಯದ್ಯಪಿ, 'ಸುಷುಪ್ತಿಕಾಲೇ ಸಕಲೋ ವಿಲೀನಃ' ಎಂದು ಶ್ರುತಿಯು ಸುಷುಪ್ತಿಕಾಲದಲ್ಲಿ ಸಕಲ ಪ್ರಪಂಚಲಯವನ್ನು ಹೇಳುವಂತೆ ಕಾಣುತ್ತದೆ. ಆದರೆ, ಅಲ್ಲಿ 'ಸಕಲ' ಎಂದರೆ ಸಕಲ ಪ್ರಪಂಚವಲ್ಲ, ಸಕಲ ಮನೋವೃತ್ತಿಯು ವಿವಕ್ಷಿತ. ಸುಷುಪ್ತಿಯಲ್ಲಿ ಮನೋವೃತ್ತಿಯು ಏನೂ ಇರುವುದಿಲ್ಲ ಎಂದರ್ಥ. ಪ್ರಪಂಚಲಯವನ್ನೇ ಗ್ರಹಿಸಿದರೆ ಬಹು ಪ್ರಮಾಣವಿರೋಧ ಉಂಟಾದೀತು.

'ಮೂರ್ಛೆಯಲ್ಲಿಯೂ ಪ್ರಪಂಚ ಲಯವಿದೆ ಎಂದು ಒಪ್ಪಿದರೂ ಅದರಲ್ಲಿ ದುಃಖವಿರುವುದರಿಂದ ಅದು ಅಪುರುಷಾರ್ಥವೆನಿಸಿತು. ಸ್ವತಃ ಅದು ಪುರುಷಾರ್ಥವೆ' ಎಂದರೆ, 'ಸುಷುಪ್ತಿಯಲ್ಲಿ ಪ್ರಪಂಚ ಲಯವಿದೆ ಎಂದೊಪ್ಪಿದರೂ ಅದರಲ್ಲಿ ಸುಖವಿರುವುದರಿಂದ ಅದು ಪುರುಷಾರ್ಥವೆನಿಸಿತು ಹೊರತು ಸ್ವತಃ ಅದು ಪುರುಷಾರ್ಥವಲ್ಲ' ಎಂದು ನಾನೂ ಹೇಳುತ್ತೇನೆ.

**ಅಸ್ತಿ ಚ 'ದ್ವಿತೀಯಾದ್ ವೈ ಭಯಂ ಭವತಿ' ಇತಿ ಶ್ರುತಿರಿವ 'ತಸ್ಮಾದೇಕಾಕೀ ನ ರಮತೇ' ಇತ್ಯಪಿ ಶ್ರುತಿಃ ।**

'ದ್ವಿತೀಯ ವಸ್ತು ಇದ್ದರೆ ಅದು ಭಯ ಉಂಟುಮಾಡುತ್ತದೆ' ಎಂದು ಶ್ರುತಿಯು ಹೇಳುತ್ತಿದೆ. ಆದರಿಂದ ದ್ವಿತೀಯಾಭಾವವೇ ಪುರುಷಾರ್ಥ ಎಂದು ನೀನೂ ಹೇಳಬೇಕು' ಎಂದರೆ, 'ಏಕಾಕಿಗೆ ಸುಖವಿಲ್ಲ' ಎಂದೂ ಶ್ರುತಿ ಇದೆ. ಆದರಿಂದ ದ್ವಿತೀಯಾಭಾವ ಪುರುಷಾರ್ಥವಲ್ಲ, ಎಂದು ನೀನು ಹೇಳಬೇಕೆ'ನ್ನುತ್ತೇನೆ.



ಪ್ರಮಾಣಭೂತವಾದ ಆಗಮಕ್ಕೆ ತಾನು ಹೇಳುತ್ತಿರುವ ವಿಷಯದಲ್ಲಿ ತಾತ್ಪರ್ಯ ವಿರಬೇಕಾದರೆ ಅದು ಹೇಗೆ ಅನಧಿಗತವಾಗಿರಬೇಕೋ ಹಾಗೇ ಅದು 'ತಥಾಭೂತ' ಯಥಾರ್ಥವೂ ಆಗಿರಬೇಕು. ಅನಧಿಗತ ತಥಾಭೂತ ಅರ್ಥಪ್ರತಿಪಾದಕತ್ವವೇ ಆಗಮಕ್ಕೆ ಪ್ರಾಮಾಣ್ಯ, ಪ್ರಮಾಣಾಂತರದಿಂದ ಪ್ರಾಪ್ತವಾದರೆ ವಿಷಯವು 'ಅನಧಿಗತ'ವಾಗಲಾರದು. ಪ್ರಮಾಣಾಂತರಿಂದ ವಿರುದ್ಧವಾದರೂ ಅದು 'ತಥಾಭೂತ'ವೆಂದಾಗಲಾರದು.

**ಯದಿತು ಮಿಥ್ಯಾತ್ವಶ್ರುತಿಃ ಪ್ರತ್ಯಕ್ಷಾಗೃಹೀತ ತ್ರಿಕಾಲಾಬಾಧ್ಯತ್ವ ನಿಷೇಧಪರಾ, ತರ್ಹಿ ಸತ್ವಶ್ರುತಿರಪಿ ತದಗೃಹೀತ ತದ್‌ವಿಧಿಪರಾ ಅಸ್ತು ।**

ಮಿಥ್ಯಾತ್ವ ಶ್ರುತಿಯು ಪ್ರತ್ಯಕ್ಷದಿಂದ ಗೃಹೀತವಾಗದಿದ್ದ ತ್ರಿಕಾಲಾಬಾಧ್ಯತ್ವವನ್ನು ನಿಷೇಧಿಸುವುದರಿಂದ ಅದಕ್ಕೆ ಪ್ರಮಾಣಾಂತರ ಪ್ರತ್ಯಕ್ಷ ವಿರೋಧವಿಲ್ಲ ಎನ್ನುವುದಾದರೆ ಸತ್ವಶ್ರುತಿಯೂ ಪ್ರತ್ಯಕ್ಷಗೃಹೀತವಲ್ಲದ ತ್ರಿಕಾಲಾಬಾಧ್ಯತ್ವರೂಪ ಸತ್ವವನ್ನು ಇದೆ ಎನ್ನುವುದರಿಂದ ಪ್ರಮಾಣಾಂತರವಾದ ಪ್ರತ್ಯಕ್ಷದಿಂದ ಪ್ರಾಪ್ತಿಯೂ ಇಲ್ಲ. ಅನುವಾದಕತ್ವವಿಲ್ಲ, ಅದರಲ್ಲಿ ತಾತ್ಪರ್ಯವಿರಲು ಬಾಧಕವಿಲ್ಲ.

ಇದು ಅಭ್ಯುಪಗಮವಾದ. ವಸ್ತುತಃ ಪ್ರತ್ಯಕ್ಷದಿಂದ ತ್ರಿಕಾಲಾಬಾಧ್ಯತ್ವವು ಗೃಹೀತವಾಗಿದೆ. ಶ್ರುತಿಯು ಅದನ್ನು ಅನುವಾದಿಸಿ ದಾರ್ಢ್ಯ ಉಂಟುಮಾಡುತ್ತಿದೆ.

**ನಚ ಸುಷುಪ್ತೌ ನಿಷ್ಪ್ರಪಂಚತಾಯಾಃ ಪುರುಷಾರ್ಥತ್ವ ದರ್ಶನಾತ್ 'ಫಲವತ್ ಸನ್ನಿಧೌ ಅಫಲಂ ತದಂಗಂ' ಇತಿ ನ್ಯಾಯೇನ ನಿಷ್ಪ್ರಪಂಚ ವಾಕ್ಯಾನುಸಾರೇಣ ಸಪ್ರಪಂಚ ವಾಕ್ಯಂ ನೇಯಮಿತಿ ವಿವರಣೋಕ್ತಂ ಯುಕ್ತಂ। ತಸ್ಯಾ ಮೂರ್ಛಾಯಾಂ ಅಪುರುಷಾರ್ಥತ್ವಸ್ಯಾಪಿ ದರ್ಶನಾತ್ ।**

ಸುಪ್ತಿಯಲ್ಲಿ ಪ್ರಪಂಚವು ವಿಲಯಹೊಂದುವುದರಿಂದ 'ಸುಖಂ ಸುಪ್ತೋಸ್ಮಿ' ಎಂದು ಸುಖರೂಪವಾದ ಫಲವು ನಿಷ್ಪ್ರಪಂಚತ್ವಕ್ಕೆ ಇದೆ. ಸಪ್ರಪಂಚತ್ವಕ್ಕೆ ಜಾಗರದಲ್ಲಿ ಸುಪ್ತಿಸುಖರೂಪ ಫಲವಿಲ್ಲ. ಸಪ್ರಪಂಚತ್ವವು ಅಫಲ. ಆದರಿಂದ ವೇದದಲ್ಲಿ ನಿಷ್ಪ್ರಪಂಚ ವಾಕ್ಯವು ಸಫಲ. ಸಪ್ರಪಂಚ ವಾಕ್ಯವು ಅಫಲ. ಫಲವತ್ತಾದ ನಿಷ್ಪ್ರಪಂಚವಾಕ್ಯಸನ್ನಿಧಿಯಲ್ಲಿ ಅಫಲವಾದ ಸಪ್ರಪಂಚವಾಕ್ಯವು ಬರುವುದರಿಂದ ನಿಷ್ಪ್ರಪಂಚವಾಕ್ಯಕ್ಕೆ ಸಪ್ರಪಂಚವಾಕ್ಯವು ಅಂಗವಾಗಿರುತ್ತದೆ. ಅಂಗಿಯನುಸಾರ ಅಂಗವಾಕ್ಯವನ್ನು ಅಂಗಿಯ ಸ್ತುತಿಪರವಾಗಿ ಅರ್ಥೈಸಬೇಕು. ಇದು ಮೀಮಾಂಸಾ ನ್ಯಾಯ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂದು ಜ್ಯೋತಿಷ್ಟೋಮಯಾಗಕ್ಕೆ ಸ್ವರ್ಗಫಲ ಉಕ್ತವಾಗಿದೆ. 'ಪಂಚ ಪ್ರಯಾಜಾ ಇಜ್ಯಂತೇ' 'ಸಮಿಧೋ ಯಜತಿ' ಎಂದು ಮುಂತಾಗಿ ಪ್ರಯಾಜಾದಿಗಳಿಗೆ ಫಲವು ಉಕ್ತವಾಗಿಲ್ಲ. ಫಲವತ್ತಾದ ಜ್ಯೋತಿಷ್ಟೋಮ ಸನ್ನಿಧಿಯಲ್ಲಿ ಅಫಲವಾದ ಪ್ರಯಾಜಾದಿಗಳು ಶ್ರುತವಾದ್ದರಿಂದ ಪ್ರಯಾಜಾದಿಗಳು ಜ್ಯೋತಿಷ್ಟೋಮಕ್ಕೆ ಅಂಗ. ಎಂದು ಮೀಮಾಂಸಕರು ಹೇಳುತ್ತಾರೆ, ಎಂದು ವಿವರಣಗ್ರಂಥದಲ್ಲಿ ಹೇಳಿದೆ. ಇದು ಸರಿಯಲ್ಲ.

ನಿಷ್ಪ್ರಪಂಚತ್ವವು ಮೂರ್ಛಾವಸ್ಥೆಯಲ್ಲಿಯೂ ಇದೆ. 'ದುಃಖಮಾತ್ರ ಪ್ರತಿಸ್ಮೃತೇಃ' ಎಂಬ ವಚನಾನುಸಾರ ಮೂರ್ಛೆಯಲ್ಲಿ ದುಃಖಸ್ಮರಣ ಮಾತ್ರವಿರುತ್ತದೆ. ಆದರಿಂದ ನಿಷ್ಪ್ರಪಂಚಸ್ಥಿತಿಯು ಅಪುರುಷಾರ್ಥವಾಗಿರುವುದು ಕಂಡಿದೆ. ಅದನ್ನು ಫಲವತ್ತೆಂದು ಹೇಳಲಾಗದು. 'ಫಲವತ್ ಸನ್ನಿಧಾವಫಲಂ ತದಂಗಂ' ಎಂಬ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ.

**ಮೂರ್ಛಾಯಾಂ ಪ್ರಪಂಚಸ್ಯಾಜ್ಞಾನಮೇವ, ನತು ಅಭಾವಃ ಇತಿ ಚೇತ್ ಸಮಂ ಸುಷುಪ್ತಾವಪಿ। ಯದಿ ಚ ಮೂರ್ಛಾ ದುಃಖಯೋಗೇನ್ನೈವ ಅಪುರುಷಾರ್ಥಃ। ತರ್ಹಿ ಸುಷುಪ್ತಿರಪಿ ಸುಖಯೋಗೇನ್ನೈವ ಪುರುಷಾರ್ಥಃ।**

'ಮೂರ್ಛೆಯಲ್ಲಿ ಪ್ರಪಂಚದ ಜ್ಞಾನವಿರುವುದಿಲ್ಲ ಹೊರತು ಪ್ರಪಂಚ ಲಯ ಹೊಂದುವುದಿಲ್ಲ. ಸುಷುಪ್ತಿಯಲ್ಲಿ ಪ್ರಪಂಚ ಲಯ ಹೊಂದುತ್ತದೆ.' ಎಂದು ನೀನು ಹೇಳಿದರೆ, ನಾನೂ ಹೇಳುತ್ತೇನೆ—'ಸುಷುಪ್ತಿಯಲ್ಲಿ ಪ್ರಪಂಚದ ಜ್ಞಾನವಿರುವುದಿಲ್ಲ, ಹೊರತು ಪ್ರಪಂಚ ಲಯ ಹೊಂದುವುದಿಲ್ಲ. ಮೂರ್ಛೆಯಲ್ಲಿ ಪ್ರಪಂಚ ಲಯ ಹೊಂದುತ್ತದೆ' ಎಂದು.

ಯದ್ಯಪಿ, 'ಸುಷುಪ್ತಿಕಾಲೇ ಸಕಲೋ ವಿಲೀನಃ' ಎಂದು ಶ್ರುತಿಯು ಸುಷುಪ್ತಿಕಾಲದಲ್ಲಿ ಸಕಲ ಪ್ರಪಂಚಲಯವನ್ನು ಹೇಳುವಂತೆ ಕಾಣುತ್ತದೆ. ಆದರೆ, ಅಲ್ಲಿ 'ಸಕಲ' ಎಂದರೆ ಸಕಲ ಪ್ರಪಂಚವಲ್ಲ, ಸಕಲ ಮನೋವೃತ್ತಿಯು ವಿವಕ್ಷಿತ. ಸುಷುಪ್ತಿಯಲ್ಲಿ ಮನೋವೃತ್ತಿಯು ಏನೂ ಇರುವುದಿಲ್ಲ ಎಂದರ್ಥ. ಪ್ರಪಂಚಲಯವನ್ನೇ ಗ್ರಹಿಸಿದರೆ ಬಹು ಪ್ರಮಾಣವಿರೋಧ ಉಂಟಾದೀತು.

'ಮೂರ್ಛೆಯಲ್ಲಿಯೂ ಪ್ರಪಂಚ ಲಯವಿದೆ ಎಂದು ಒಪ್ಪಿದರೂ ಅದರಲ್ಲಿ ದುಃಖವಿರುವುದರಿಂದ ಅದು ಅಪುರುಷಾರ್ಥವೆನಿಸಿತು. ಸ್ವತಃ ಅದು ಪುರುಷಾರ್ಥವೆ' ಎಂದರೆ, 'ಸುಷುಪ್ತಿಯಲ್ಲಿ ಪ್ರಪಂಚ ಲಯವಿದೆ ಎಂದೊಪ್ಪಿದರೂ ಅದರಲ್ಲಿ ಸುಖವಿರುವುದರಿಂದ ಅದು ಪುರುಷಾರ್ಥವೆನಿಸಿತು ಹೊರತು ಸ್ವತಃ ಅದು ಪುರುಷಾರ್ಥವಲ್ಲ' ಎಂದು ನಾನೂ ಹೇಳುತ್ತೇನೆ.

**ಅಸ್ತಿ ಚ 'ದ್ವಿತೀಯಾದ್ ವೈ ಭಯಂ ಭವತಿ' ಇತಿ ಶ್ರುತಿರಿವ 'ತಸ್ಮಾದೇಕಾಕೀ ನ ರಮತೇ' ಇತ್ಯಪಿ ಶ್ರುತಿಃ।**

'ದ್ವಿತೀಯ ವಸ್ತು ಇದ್ದರೆ ಅದು ಭಯ ಉಂಟುಮಾಡುತ್ತದೆ' ಎಂದು ಶ್ರುತಿಯು ಹೇಳುತ್ತಿದೆ. ಆದರಿಂದ ದ್ವಿತೀಯಾಭಾವವೇ ಪುರುಷಾರ್ಥ ಎಂದು ನೀನೂ ಹೇಳಬೇಕು' ಎಂದರೆ, 'ಏಕಾಕಿಗೆ ಸುಖವಿಲ್ಲ' ಎಂದೂ ಶ್ರುತಿ ಇದೆ. ಆದರಿಂದ ದ್ವಿತೀಯಾಭಾವ ಪುರುಷಾರ್ಥವಲ್ಲ, ಎಂದು ನೀನು ಹೇಳಬೇಕೆ'ನ್ನುತ್ತೇನೆ.



सन्ति च भेदज्ञानस्य मोक्षसाधनत्वे ''पृथगात्मानं प्रेरितारं च मत्वा जुष्टस्ततस्तेनामृतत्वमेती''त्याद्याः श्रुतयः । यदि चाद्वैतवाक्यस्य निषेधवाक्यत्वात्प्राबल्यं, तर्हि ''किति च'' इति वृद्धिसूत्रात् ''क्ङिति च'' इति तन्निषेधसूत्रस्य, अग्नीषोमीयवाक्यादहिंसावाक्यस्य, षोडशिग्रहणवाक्यादग्रहणवाक्यस्य, सत्यज्ञानादिवाक्यादसद्वा इत्यादिवाक्यस्य प्राबल्यापातेनाहिंसा पारमार्थिको धर्मः, अग्नीषोमीयहिंसा तु व्यावहारिको धर्म इत्यादि स्यात् । प्रत्यक्षप्राबल्यप्रस्तावे उक्तप्रकारेणाद्वैतवाक्यात् द्वैतवाक्यस्यानुपसंजातविरोधित्व शीघ्रगामित्व विशेषविषयत्व निरवकाशत्वादिना प्राबल्याच्च । नच स्मृतिसूत्रे शून्यवादिनिरासार्थे, तन्मते जगतोऽत्यन्तासत्त्वात्, मन्मते असद्विलक्षणत्वादिति वाच्यम् । अर्थक्रियाकारित्वादिना शशशृङ्गादिवैलक्षण्यस्य तन्मतेऽपि सत्त्वात् । प्रतिपन्नोपाधौ निषेधप्रतियोगित्वेन तद्वैलक्षण्यस्य त्वन्मतेऽप्यभावात् । सूत्रे स्वप्नवैलक्षण्योक्त्ययोगाच्च । व्यावहारिकसत्त्वेन स्वप्नवैलक्षण्यस्य तन्मतेऽपि सत्वात् ।

द्वे सत्त्वे समुपाश्रित्य बुद्धानां धर्मदेशना ।
लोके संवृतिसत्यत्वं सत्त्वं च परमार्थतः ।।

सत्त्वं तु द्विविधं प्रोक्तं सांवृतं पारमार्थिकम् ।
सांवृतं व्यावहार्यं स्यान्निवृत्तौ पारमार्थिकम् ।।

इति बौद्धोक्तेः । तस्माच्छ्रुत्यादिबाधो दुर्वारः । किञ्च त्वयापि तत्तत्प्रमाणसिद्धा एवार्थाः पक्षीकर्तव्याः । तैश्च ते सत्त्वेनैव सिद्धा इति तत्तन्मानबाधः । अग्निरासीत् वृष्टिर्भविष्यति रूप्यं मिथ्येत्यादिधीरपि स्वविषयसत्त्वं गृह्णाति, अन्यथा तदुचितप्रवृत्त्याद्ययोगादिति ।।

---

ननु, ''यस्मिन् सर्वाणि भूतान्यात्मैवाभूद्विजानतः । तत्र को मोहः कः शोक एकत्वमनुपश्यतः ।।'' ''यो वेदाहं ब्रह्मास्मीति स इदं सर्वं भवती''त्यादि-श्रुत्याऽऽद्वैतज्ञानस्य मोक्षसाधनत्वावगमादद्वैतवाक्यानुसारेणैव द्वैतवाक्यं नेयमित्यत आह **संतिचेति ।।** अयमर्थः । स्वात्मानं, प्रेरितारं परमात्मानं च भिन्नत्वेन ज्ञात्वा ततो ज्ञानात् भगवत्प्रीतिविषयः सन् तेन प्रीणनेन मोक्षं प्राप्नोतीति । यद्वा द्युभ्वाद्यधिकरणन्यायेनात्मशब्दमुख्यार्थं परमात्मानं पृथक् स्वस्माद्भिन्नं प्रेरयितृत्वादिगुणविशिष्टं च ज्ञात्वेति । नच स्वात्मानं कार्यकारणसंघातात् भिन्नं प्रेरितारमीश्वरं च ज्ञात्वेत्यर्थः किं न स्यादिति वाच्यम् । तथापि भेदज्ञानस्य मोक्षहेतुत्वानपायेन तद्विषयभेदस्यात्मवत् सत्यत्वानपायात् । मुख्यार्थे बाधकं विना त्यागायोगाच्चेति ।। अत्रादिपदात् ''जुष्टं यदा पश्यत्यन्यमीशमस्य महिमानमिति वीतशोकः'' ''अत्रान्तरं वेदविदो विदित्वा लीना ब्रह्मणि तत्परा योनिमुक्ताः'' इत्यादिश्रुतिपरिग्रहः । **क्ङितिचेति ।।** (पा.सू.१-१-५) अत्र निषेधकत्वं ''न धातुलोप आर्धधातुके'' (पा.सू.१-१-४) इति सूत्रस्थनञनुषङ्गेण ज्ञातव्यम् । ननु श्रुत्योः साम्येऽपि विवक्षितार्थसिद्धेः न श्रुतिबाधितत्वं इत्याशङ्क्य भेदश्रुतेः प्राबल्यमाह **प्रत्यक्षेति ।। सूत्रे इति ।।** वैधर्म्याच्च न स्वप्नादिवदिति सूत्र इत्यर्थः । **श्रुत्यादिबाध इति ।** मिथ्यात्वहेतूनामिति शेषः ।।



**ಸಂತಿ ಚ ಭೇದಜ್ಞಾನಸ್ಯ ಮೋಕ್ಷಸಾಧನತ್ವೇ ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ । ಇತ್ಯಾದ್ಯಾಃ ಶ್ರುತಯಃ ।**

'ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ ವಿಜಾನತಃ ।
ತತ್ರ ಕೋ ಮೋಹಃ ಕಃಶೋಕ ಏಕತ್ವಮನುಪಶ್ಯತಃ ।
ಯೋ ವೇದಾಹಂ ಬ್ರಹ್ಮಾಸ್ಮೀತಿ, ಸ ಇದಂ ಸರ್ವಂ ಭವತಿ ।
ಏಕಧೈವಾನು ದ್ರಷ್ಟವ್ಯಂ ।

ಇತ್ಯಾದಿ ಶ್ರುತಿಗಳಿಂದ ಅದ್ವೈತ ಜ್ಞಾನವೇ ಮೋಕ್ಷಸಾಧನವೆಂದು ತಿಳಿದು ಬರುವುದರಿಂದ ಅದ್ವೈತ ವಾಕ್ಯಾನುಸಾರವಾಗಿಯೇ ದ್ವೈತವಾಕ್ಯವನ್ನು ಸ್ತುತಿಪರವಾಗಿ ಅರ್ಥೈಸಬೇಕು' ಎಂದರೆ, ಹೇಳುತ್ತೇವೆ—ಭೇದಜ್ಞಾನವು ಮೋಕ್ಷಸಾಧನವೆನ್ನುವಲ್ಲಿಯೂ ಶ್ರುತಿಗಳಿವೆ—

'ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ
ಜುಷ್ಟಸ್ತತಸ್ತೇನಾಮೃತತ್ವಮೇತಿ' (ಶ್ವೇತಾ. 1.6)

'ಆತ್ಮಾನಂ ಪ್ರೇರಿತಾರಂ ಚ ಪೃಥಕ್ ಮತ್ವಾ' ತನ್ನನ್ನೂ ಪ್ರೇರಕನಾದ ಪರಮಾತ್ಮನನ್ನೂ ಪರಸ್ಪರ ಭಿನ್ನರೆಂದು ತಿಳಿದೇ 'ತತಃ ಜುಷ್ಟಃ' ಆ ಜ್ಞಾನದಿಂದ ಪರಮಾತ್ಮನಿಗೆ ಪ್ರೀತಿಪಾತ್ರನಾಗಿ 'ತೇನ ಅಮೃತತ್ವಮೇತಿ' 'ಆ ಪರಮಾತ್ಮನ ಅನುಗ್ರಹದಿಂದ ಮೋಕ್ಷವನ್ನು ಪಡೆಯುತ್ತಾನೆ'.

ಅಥವಾ ಹೀಗೆ ಅರ್ಥ—

'ಆತ್ಮಾ' ಎಂದರೆ ಪರಮಾತ್ಮ. ದ್ಯುಭ್ವಾದ್ಯಧಿಕರಣ ನ್ಯಾಯದಿಂದ ಆತ್ಮಶಬ್ದಕ್ಕೆ ಮುಖ್ಯಾರ್ಥವು ಪರಮಾತ್ಮನೆ ಎಂದು ಅದ್ವೈತಭಾಷ್ಯಕ್ಕೂ ಸಮ್ಮತವಾಗಿರುವುದರಿಂದ, 'ಆತ್ಮಾನಂ' ಪರಮಾತ್ಮನನ್ನು 'ಪ್ರೇರಿತಾರಂ' ತನಗೆ ಪ್ರೇರಕನೆಂದೂ ಅದರಿಂದಲೇ 'ಪೃಥಕ್' ತನಗಿಂತ ವಿಲಕ್ಷಣನೆಂದೂ ತಿಳಿದು 'ತತೋ ಜುಷ್ಟಃ ತೇನ ಅಮೃತತ್ವಮೇತಿ' 'ಆ ಜ್ಞಾನದಿಂದ ಪರಮಾತ್ಮನಿಂದ ಅನುಗೃಹೀತನಾಗಿ' ಆ ಅನುಗ್ರಹದಿಂದ ಮೋಕ್ಷವನ್ನು ಹೊಂದುತ್ತಾನೆ'.

ಅದ್ವೈತಿ ಈ ಮಂತ್ರಕ್ಕೆ ಹೀಗೆ ಅರ್ಥ ಮಾಡಬಹುದು— 'ಆತ್ಮಾನಂ' ತನ್ನನ್ನು 'ಪೃಥಕ್ ಪ್ರೇರಿತಾರಂ' ಶರೀರೇಂದ್ರಿಯಾದಿಗಳಿಗೆ ಭಿನ್ನನಾಗಿ ಪ್ರೇರಕನಾಗಿರುವೆನೆಂದೂ, 'ಪ್ರೇರಿತಾರಂ' ಪ್ರೇರಕನಾದ ಈಶ್ವರನೇ ತಾನಾಗಿರುವೆನೆಂದೂ, 'ಮತ್ವಾ' ತಿಳಿದು, 'ತತಃ ತೇನಾಮೃತತ್ವಮೇತಿ' ಬಳಿಕ ಜ್ಞಾನದಿಂದ ಮೋಕ್ಷ ಪಡೆಯುತ್ತಾನೆ ಎಂದು.

ಆದರೆ ಹೀಗೆ ಅರ್ಥ ಮಾಡಿದರೂ ದೇಹಾತ್ಮ ಭೇದಜ್ಞಾನಕ್ಕೆ ಮೋಕ್ಷ ಹೇತುತ್ವವನ್ನು ಒಪ್ಪಿದಂತಾಯಿತು. ಆ ಜ್ಞಾನಕ್ಕೆ ವಿಷಯವಾದ ಭೇದವು ಆತ್ಮನಂತೆ ಸತ್ಯವೆಂದು ಒಪ್ಪಿದಂತಾಯಿತು. ಆದರೂ ಆತ್ಮಶಬ್ದಕ್ಕೆ ಪರಮಾತ್ಮ ಎಂಬ ಮುಖ್ಯಾರ್ಥವನ್ನು ಬಾಧಕವಿಲ್ಲದಾಗ ಬಿಡುವುದು ಸರಿಯಲ್ಲ. ಮುಖ್ಯವಾದ ಬ್ರಹ್ಮಾತ್ಮಭೇದವನ್ನು ಬಿಟ್ಟು ಅಮುಖ್ಯವಾದ ದೇಹಾತ್ಮಭೇದವನ್ನು ಗ್ರಹಿಸುವುದೂ ಸರಿಯಲ್ಲ.

'ಇತ್ಯಾದ್ಯಾಃ ಶ್ರುತಯಃ' ಎಂಬಲ್ಲಿ ಆದಿಪದದಿಂದ ಈ ಶ್ರುತಿಗಳನ್ನಿಟ್ಟುಕೊಳ್ಳಬೇಕು—

ಸಮಾನೇ ವೃಕ್ಷೇ ಪುರುಷೋ ನಿಮಗ್ನೋ
ಅನೀಶಯಾ ಶೋಚತಿ ಮುಹ್ಯಮಾನಃ ।
ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ
ಅಸ್ಯಮಹಿಮಾನಮಿತಿ ವೀತಶೋಕಃ ॥ (ಶ್ವೇತಾ.4.7)

ಒಂದೇ ಶರೀರವೃಕ್ಷದಲ್ಲಿ ಪರಮಾತ್ಮನೊಂದಿಗೇ ಇದ್ದರೂ ಜೀವಾತ್ಮನು 'ಅನೀಶಯಾ ಶೋಚತಿ' ಅಸ್ವಾತಂತ್ರ್ಯದಿಂದ ಶೋಕಿಸುತ್ತಾನೆ. 'ಯದಾ ಪಶ್ಯತಿ ಅನ್ಯಮೀಶಂ' ಈಶನನ್ನು ತನಗಿಂತ ಭಿನ್ನ ವಿಲಕ್ಷಣನೆಂದು 'ಅಸ್ಯ ಮಹಿಮಾನಂ' ಅವನ ಮಹಿಮೆಯನ್ನು ಯಾವಾಗ ಸಾಕ್ಷಾತ್ಕರಿಸಿ

ಕೊಳ್ಳುವನೋ ಆಗಲೆ 'ವೀತ ಶೋಕಃ' 'ಶೋಕವನ್ನು ಕಳೆದುಕೊಂಡು ಮುಕ್ತನಾಗುವವನು' ಎಂದರ್ಥ. ಅದ್ವೈತಿಯು ಇಲ್ಲಿ 'ಅಸ್ಯಮಹಿಮಾನಂ ಏತಿ' ಎಂದು 'ಏತಿ' ಪದಾಧ್ಯಾಹಾರ ಮಾಡಿಕೊಂಡು 'ಅಸ್ಯಮಹಿಮಾ' ಎಂದರೆ 'ಪರಮಾತ್ಮನ ತಾದಾತ್ಮ್ಯ' ಎಂದುಕೊಂಡು ಬಲಾತ್ಕಾರದಿಂದ 'ಅಭೇದವನ್ನು ಹೊಂದುವನೆಂ'ದು ಅರ್ಥ ಮಾಡುತ್ತಾನೆ.

ಉದ್ಗೀತಮೇತತ್ ಪರಮಂ ತು ಬ್ರಹ್ಮ
ತಸ್ಮಿಂಸ್ತ್ರಯಂ ಸುಪ್ರತಿಷ್ಠಾಕ್ಷರಂ ಚ ।
ಅತ್ರಾಂತರಂ ವೇದವಿದೋ ವಿದಿತ್ವಾ
ಲೀನಾ ಬ್ರಹ್ಮಣಿ ತತ್ಪರಾ ಯೋನಿಮುಕ್ತಾಃ ॥ (ಶ್ವೇತಾ.1.7)

'ಆ ಪರಮಾತ್ಮನಲ್ಲಿಯೇ ಜೀವರ ಜನ್ಮಾದಿ'ತ್ರಯ'ವೂ 'ಸುಪ್ರತಿಷ್ಠಾ'ನಿಯಮನವೂ 'ಅಕ್ಷರಂ' ಮೋಕ್ಷವೂ ನಡೆಯುತ್ತವೆ ಎಂದು ಶಾಸ್ತ್ರದಲ್ಲಿ ಇದು ಕೊಂಡಾಡಲ್ಪಟ್ಟಿದೆ. ಅವನಿಗೂ ಜೀವರಿಗೂ ಬಲು ಅಂತರವಿದೆ ಎಂದು ವೇದಜ್ಞರು ವೇದತಾತ್ಪರ್ಯವನ್ನು ತಿಳಿದು ಬ್ರಹ್ಮನಲ್ಲಿ ಸೇರಿ ಪ್ರಕೃತಿ ಬಂಧದಿಂದ ಮುಕ್ತರಾಗುತ್ತಾರೆ'.

**ಯದಿಚ ಅದ್ವೈತವಾಕ್ಯಸ್ಯ ನಿಷೇಧವಾಕ್ಯತ್ವಾತ್ ಪ್ರಾಬಲ್ಯಂ, ತರ್ಹಿ—**

**(1) 'ಕಿತಿಚ' ಇತಿ ವೃದ್ಧಿಸೂತ್ರಾತ್ 'ಕಿಙಿತಿ ಚ' ಇತಿ ತನ್ನಿಷೇಧಸೂತ್ರಸ್ಯ,**

**(2) ಅಗ್ನೀಷೋಮೀಯ ವಾಕ್ಯಾತ್ ಅಹಿಂಸಾವಾಕ್ಯಸ್ಯ,**

**(3) ಷೋಡಶಿ ಗ್ರಹಣ ವಾಕ್ಯಾತ್ ಅಗ್ರಹಣವಾಕ್ಯಸ್ಯ,**

**(4) ಸತ್ಯಜ್ಞಾನಾದಿವಾಕ್ಯಾತ್ 'ಅಸದ್ವಾ' ಇತ್ಯಾದಿವಾಕ್ಯಸ್ಯ**

**ಪ್ರಾಬಲ್ಯಾಪಾತೇನ 'ಅಹಿಂಸಾ ಪಾರಮಾರ್ಥಿಕೋ ಧರ್ಮಃ, ಅಗ್ನೀಷೋಮೀಯ-ಹಿಂಸಾ ತು ವ್ಯಾವಹಾರಿಕೋ ಧರ್ಮಃ' ಇತ್ಯಾದಿ ಸ್ಯಾತ್ ।**

ನಿಷೇಧವಾಕ್ಯಗಳಿಗೇ ಪ್ರಾಬಲ್ಯವಿರುವ ಕಾರಣ ಅದ್ವೈತ ವಾಕ್ಯವು ನಿಷೇಧವಾಕ್ಯವಾದ್ದರಿಂದ ಪ್ರಬಲ ಎನ್ನುವುದಾದರೆ ಹೀಗೆ ಅತಿಪ್ರಸಕ್ತಿಗಳು—

(1) 'ಕಿಙಿತಿ ಚ' ಇಲ್ಲಿ ' ನ ಧಾತುಲೋಪ ಆರ್ಧಧಾತುಕೇ' ಎಂಬ ಸೂತ್ರದಿಂದ ನಞ್ ಅನುವೃತ್ತಿ ಮಾಡಬೇಕು. ಅದರಿಂದ ಇದು ನಿಷೇಧಸೂತ್ರ. 'ಸುಪ್ ತಿಙ್ ಕೃತ್ ತದ್ಧಿತಗಳಲ್ಲಿ ಎಲ್ಲಿಯಾದರೂ ಗಿತ್ ಪ್ರತ್ಯಯ, ಕಿತ್ ಪ್ರತ್ಯಯ 'ಙಿತ್‌ಪ್ರತ್ಯಯಗಳು ಬಂದಾಗ ಪೂರ್ವಕ್ಕೆ ಗುಣ ವೃದ್ಧಿಗಳು ಬರುವುದಿಲ್ಲ' ಎಂದು ವೃದ್ಧಿನಿಷೇಧ ಸೂತ್ರ. 'ಕಿತಿ ಚ' ಕಿತ್ತಾದ ತದ್ಧಿತ ಪರದಲ್ಲಿ ಬಂದಾಗ ಪೂರ್ವಕ್ಕೆ ವೃದ್ಧಿ' ಎಂದು ಕಿಙಿತಿ ನಿಷೇಧ ಸೂತ್ರಕ್ಕೆ ಅಪವಾದ. ಆದರೂ ಅಪವಾದ ಸೂತ್ರದಲ್ಲಿ ನಞ್ ಇಲ್ಲದ್ದರಿಂದ ಅಪವಾದಕ್ಕಿಂತ ನಿಷೇಧವೇ ಪ್ರಬಲ ಎಂದಾದೀತು. ಕಿತ್ತಾದ ತದ್ಧಿತಪರದಲ್ಲಿದ್ದರೂ ವೃದ್ಧಿ ಬಾರದೇ ಹೋದೀತು.

(2) 'ಮಾ ಹಿಂಸ್ಯಾತ್ ಸರ್ವಾ ಭೂತಾನಿ' ಎಂದು ಅಹಿಂಸಾವಾಕ್ಯವು ಉತ್ಸರ್ಗ. 'ಅಗ್ನೀಷೋಮೀಯಂ ಪಶುಮಾಲಭೇತ' ಎಂದು ಯಾಗೀಯ ಹಿಂಸೆ ಅಪವಾದ. ಆದರೂ ಅಪವಾದಕ್ಕಿಂತ ಉತ್ಸರ್ಗವಾದ ನಿಷೇಧವು ಪ್ರಬಲವಾದರೆ ಅಹಿಂಸೆಯು ಪಾರಮಾರ್ಥಿಕ ಧರ್ಮ, ಯಾಗೀಯ ಹಿಂಸೆಯು ವ್ಯಾವಹಾರಿಕ ಧರ್ಮ ಎಂದು ಮುಂತಾಗಿ ಉತ್ಸರ್ಗಾಪವಾದ ನಿಯಮ ಭಂಗವಾದೀತು.

(3) 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ' ಎನ್ನುವ ಷೋಡಶಿಗ್ರಹಣವಾಕ್ಯಕ್ಕಿಂತ 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ಎಂಬ ಅಗ್ರಹಣವಾಕ್ಯವು ನಿಷೇಧವಾಕ್ಯವಾದ್ದರಿಂದ ಪ್ರಬಲವೆಂದಿಟ್ಟು ಕೊಂಡರೆ ಸಮಬಲತ್ವಪ್ರಯುಕ್ತ ವಿಕಲ್ಪವೆನ್ನುವ ಸಿದ್ಧಾಂತವನ್ನು ಕೈಬಿಡಬೇಕಾದೀತು.

(4) 'ಸತ್ಯಂ ಜ್ಞಾನ ಮನಂತಂ ಬ್ರಹ್ಮ' ಎಂಬ ಬ್ರಹ್ಮಸತ್ಯತ್ವ ವಾಕ್ಯಕ್ಕಿಂತ 'ಅಸದ್ವಾ ಇದಮಗ್ರ ಆಸೀತ್' ಎಂಬ ನಿಷೇಧವಾಕ್ಯ ಪ್ರಬಲವೆಂದಿಟ್ಟುಕೊಂಡರೆ ಬೌದ್ಧಮತ ಪ್ರವೇಶ ಮಾಡಿದಂತಾದೀತು.

**ಪ್ರತ್ಯಕ್ಷ ಪ್ರಾಬಲ್ಯ ಪ್ರಸ್ತಾವೇ ಉಕ್ತಪ್ರಕಾರೇಣ ಅದ್ವೈತವಾಕ್ಯಾತ್ ದ್ವೈತವಾಕ್ಯಸ್ಯ ಅನುಪಸಂಜಾತವಿರೋಧಿತ್ವ ಶೀಘ್ರಗಾಮಿತ್ವ ವಿಶೇಷವಿಷಯತ್ವ ನಿರವಕಾಶತ್ವಾದಿನಾ ಪ್ರಾಬಲ್ಯಾಚ್ಚ ।**

ಈ ಪ್ರಕರಣದ ಆದಿಯಲ್ಲಿ—'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿಭಿಃ, 'ಅಸತ್ಯಮಪ್ರತಿಷ್ಠಂ ತೇ' ಇತ್ಯಾದಿ ಸ್ಮೃತಿಭಿಃ, 'ನಾಭಾವ ಉಪಲಬ್ಧೇಃ' 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಇತ್ಯಾದಿ ಸೂತ್ರೈಶ್ಚ ಮಿಥ್ಯಾತ್ವಹೇತೂನಾಂ ಶಬ್ದ ಬಾಧಃ' ಎಂದು ಮಿಥ್ಯಾತ್ವ ಹೇತುವಿಗೆ ಶ್ರುತಿ ಸ್ಮೃತಿ ಸೂತ್ರಗಳಿಂದ ಬಾಧವಿದೆ ಎಂದಿದ್ದಾರೆ.

ಅದಕ್ಕೆ 'ಸತ್ವಶ್ರುತಿಯು ಪ್ರತ್ಯಕ್ಷಪ್ರಾಪ್ತ ಸತ್ವಾನುವಾದಕವಾದ್ದರಿಂದ ದುರ್ಬಲ, ಅದರಿಂದ ಮಿಥ್ಯಾತ್ವ ಹೇತುವಿನಿಂದ ಶ್ರುತಿಯೇ ಬಾಧಿತವಾಗುತ್ತದೆ ಎಂದು ಅದ್ವೈತಿ ವಾದ ಮಾಡಿದಾಗ ಸತ್ವಶ್ರುತಿಯು ಅನುವಾದಕತ್ವೇನ ದುರ್ಬಲವಲ್ಲವೆಂದೂ ಅಭೇದಶ್ರುತಿಯು ನಿಷೇಧಕತ್ವೇನ ಪ್ರಬಲವಲ್ಲವೆಂದೂ ಇಷ್ಟರವರೆಗೆ ಸಮರ್ಥಿಸಿದ್ದಾರೆ.

ಈಗ ಅದ್ವೈತಿ ಹೇಳುತ್ತಾನೆ— 'ಸತ್ವಶ್ರುತಿಯು ದುರ್ಬಲವಲ್ಲವೆಂದ ಮಾತ್ರಕ್ಕೆ ಪ್ರಬಲ ವೆಂದಾಗುವುದಿಲ್ಲ. 'ಸಮಬಲ' ಎನ್ನುತ್ತೇನೆ. ಸತ್ವಶ್ರುತಿ ಮಿಥ್ಯಾತ್ವಶ್ರುತಿಗಳೆರಡೂ ಸಮಬಲವಾದರೆ ಒಂದು ಇನ್ನೊಂದನ್ನು ಬಾಧಿಸುವುದಿಲ್ಲ. ಮಿಥ್ಯಾತ್ವಾನುಮಾನಾಗಮಗಳಿಗೆ ಸತ್ವಶ್ರುತಿಯಿಂದ ಬಾಧವಿಲ್ಲ ಎನ್ನುವುದು ನನಗೆ ವಿವಕ್ಷಿತ. ನನ್ನ ವಿವಕ್ಷಿತ ಸಿದ್ಧಿಗೆ ತೊಂದರೆ ಇಲ್ಲ' ಎಂದು.

ಅದಕ್ಕೆ ಈಗ 'ಸತ್ವಶ್ರುತಿ ಮಿಥ್ಯಾತ್ವಶ್ರುತಿಗಳಿಗೆ ಸಾಮ್ಯವಿಲ್ಲ. ಭೇದ ಶ್ರುತಿಯು ಪ್ರಬಲವಾಗಿದೆ. ಪ್ರತ್ಯಕ್ಷ ಪ್ರಾಬಲ್ಯ ಪ್ರಸ್ತಾವದಲ್ಲಿ ಹೇಳಿದಂತೆ ದ್ವೈತವಾಕ್ಯವು ಅದ್ವೈತವಾಕ್ಯಕ್ಕಿಂತ

ಅನುಪಸಂಜಾತ ವಿರೋಧಿತ್ವ ಮುಂತಾದ ನ್ಯಾಯಗಳಿಂದ ಪ್ರಬಲವೆಂದೇ ಸಿದ್ಧವಾಗುತ್ತಿದೆ' ಎಂದು ಹೇಳಿ, ಮಿಥ್ಯಾತ್ವ ಹೇತುಗಳಿಗೆ ಸತ್ವಶ್ರುತಿ ಭೇದಶ್ರುತಿಗಳಿಂದ ಬಾಧವನ್ನು ಸಮರ್ಥಿಸುತ್ತಾರೆ. 'ಅಸತ್ಯಮಪ್ರತಿಷ್ಠಂ ತೇ' ಇತ್ಯಾದಿ ಸ್ಮೃತಿಗಳಿಂದಲೂ 'ನಾಭಾವ ಉಪಲಬ್ಧೇಃ' 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರಗಳಿಂದಲೂ ಮಿಥ್ಯಾತ್ವ ಹೇತುಗಳಿಗೆ ಬಾಧವಿದೆ ಎಂದು ಪ್ರಾರಂಭದಲ್ಲಿ ಹೇಳಿದ್ದರ ಮೇಲೆ ಅದ್ವೈತಿಯ ಆಕ್ಷೇಪಗಳನ್ನು ಎತ್ತಿಕೊಂಡು ಪರಿಹರಿಸುತ್ತಿದ್ದಾರೆ—

ಪ್ರತ್ಯಕ್ಷ ಪ್ರಾಬಲ್ಯವನ್ನು ಹೇಳುವಾಗ ಹೇಳಿದಂತೆ ಅದ್ವೈತ ವಾಕ್ಯಕ್ಕಿಂತ ದ್ವೈತವಾಕ್ಯವೇ ಪ್ರಬಲ. ಪ್ರಾಬಲ್ಯಕ್ಕೆ ಕಾರಣಗಳು ಇವು—

(1) ಅನುಪಸಂಜಾತವಿರೋಧಿತ್ವ—

'ಶ್ರುತೇರ್ಜಾತಾಧಿಕಾರಃ ಸ್ಯಾತ್' (ಜೈ.ಸೂ.3.3.1)

ಉಪಸಂಹಾರದಲ್ಲಿ, 'ಶ್ರುತೇಃ'ಮಂತ್ರವಾಚಿ ಋಗಾದಿ ಶಬ್ದ ಶ್ರವಣವಿರುವುದರಿಂದ ಉಚ್ಚೈಸ್ತ್ವಾದಿ ಧರ್ಮವು 'ಜಾತಾಧಿಕಾರಃ ಸ್ಯಾತ್' 'ಮಂತ್ರವಿಷಯವೇ ಆಗುವುದು' ಎಂದು ಪೂರ್ವಪಕ್ಷ ಸೂತ್ರಾರ್ಥ. ಉಪಕ್ರಮದಲ್ಲಿ ವೇದಶಬ್ದ ಶ್ರವಣವಿರುವುದರಿಂದ ಉಪಕ್ರಮಾನುಸಾರ ಉಚ್ಚೈಸ್ತ್ವಾದಿ ಧರ್ಮವು ವೇದವಿಷಯ ಎಂದು ಸಿದ್ಧಾಂತ. ಏಕೆಂದರೆ ಮೊದಲಿಗೆ ಉಪಕ್ರಮವು ಕಂಡುಬರುವ ಸಮಯದಲ್ಲಿ ಉಪಸಂಹಾರವಿನ್ನೂ ಗಮನಕ್ಕೆ ಬಂದಿರುವುದಿಲ್ಲ. ಅದರ ವಿರೋಧವು ಉಪಸ್ಥಿತವಾಗಿರುವುದಿಲ್ಲ. ಆದರಿಂದ ಉಪಕ್ರಮಕ್ಕೆ ಬಾಧಕವಿಲ್ಲದ್ದರಿಂದ ಅದೇ ಕಾರ್ಯಕಾರಿ ಯಾಗುತ್ತದೆ. ಬಳಿಕ ಉಪಸಂಹಾರ ಬರುವಾಗ ಅದಕ್ಕೆ ಹಿಂದೆ ಬಂದಿದ್ದ ಉಪಕ್ರಮದ ವಿರೋಧವು ಬಾಧಕವಾಗಿ ಉಪಸ್ಥಿತವಿರುತ್ತದೆ. ಅದರಿಂದ ಉಪಸಂಹಾರ ದುರ್ಬಲ. ಇದೇರೀತಿ ಅದ್ವೈತ ವಾಕ್ಯವು ದ್ವೈತ ನಿಷೇಧಕವಾದ್ದರಿಂದ ನಿಷೇಧ್ಯವಾದ ದ್ವೈತವಾಕ್ಯದ ಅನಂತರ ಬರುತ್ತದೆ. ಅದಕ್ಕೆ ಮೊದಲೇ ಬಂದಿದ್ದ ದ್ವೈತವಾಕ್ಯದ ವಿರೋಧವು ಬಾಧಕವಾಗಿ ಉಪಸ್ಥಿತವಿರುವುದರಿಂದ ಅದ್ವೈತವಾಕ್ಯವು ದುರ್ಬಲ.

(2) ಶ್ರುತಿಲಿಂಗ ವಾಕ್ಯಪ್ರಕರಣ ಸ್ಥಾನ ಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥವಿಪ್ರಕರ್ಷಾತ್ (ಜೈ.ಸೂ.3.3.14) ಎಂಬ ಸೂತ್ರದಲ್ಲಿ ನಿರ್ಣಯಿಸಿದಂತೆ ಶ್ರುತಿಲಿಂಗಗಳಿಗೆ ವಿರೋಧ ಬಂದಾಗ ಪ್ರತ್ಯಕ್ಷವಾಗಿರುವ ಶ್ರುತಿಯು ಸ್ವತಃ ಶೀಘ್ರವಾಗಿ ವಿನಿಯೋಗ ಮಾಡಿ ಬಿಡುತ್ತದೆ. ಲಿಂಗವು ಶ್ರುತಿಯನ್ನು ಅನುಮಾನ ಮಾಡಿಕೊಟ್ಟು ಆ ಅನುಮಿತ ಶ್ರುತಿಯ ಮೂಲಕ ವಿನಿಯೋಗ ಮಾಡುವಾಗ, ಅದಕ್ಕಿಂತ ಮೊದಲೇ ಶ್ರುತಿಯು ವಿನಿಯೋಗ ಮಾಡಿಬಿಟ್ಟಿರುತ್ತದೆ. ಹೀಗಾಗಿ ಲಿಂಗಕ್ಕಿಂತ ಶ್ರುತಿ ಪ್ರಬಲ. ಹಾಗೇ ದ್ವೈತ ಶ್ರುತಿಯು ಸ್ವತಃ ತಾನೇ ದ್ವೈತವನ್ನು ಹೇಳುತ್ತದೆ. ಅದ್ವೈತ ಶ್ರುತಿಯು ನಿಷೇಧಕವಾದ್ದರಿಂದ, ದ್ವೈತಶ್ರುತಿಯು ನಿಷೇಧ್ಯ ಸಮರ್ಪಣೆ ಮಾಡಿದ ಬಳಿಕವೇ ದ್ವೈತ ನಿಷೇಧ ರೂಪವಾದ ಅದ್ವೈತವನ್ನು ಹೇಳುತ್ತದೆ. ಹೀಗೆ ವಿಲಂಬವಿರುವ ಪ್ರಯುಕ್ತ ಅದ್ವೈತ ಶ್ರುತಿಯು ದುರ್ಬಲ.

(3) 'ಯದಾಹವನೀಯೇ ಜುಹೋತಿ' ಎಂದು ಸಾಮಾನ್ಯವಾಗಿ ಯಾಗಗಳನ್ನು ಆಹವನೀಯಾಗ್ನಿಯಲ್ಲಿ ಮಾಡುವುದು ವಿಹಿತವಾಗಿದೆ. 'ಪದೇ ಜುಹೋತಿ' ಎಂದು ವಿಹಿತವಾಗುವ ಪದಹೋಮವು ಸೋಮಕ್ರಯಣಕ್ಕಾಗಿ ಏಕಹಾಯನಿ ಗೋವನ್ನು ಒಯ್ಯುವಾಗ ಅದರ ಏಳನೆ 'ಪದ' ಹೆಜ್ಜೆಯಲ್ಲಿ ಹಿರಣ್ಯವನ್ನಿಟ್ಟು ಅದರಮೇಲೆ ಹೋಮ ಮಾಡಬೇಕೆಂದು ವಿಧಿ ಇದೆ. ಇದು ವಿಶೇಷವಿಧಿ. ಸಾಮಾನ್ಯವಿಧಿ ಶಾಸ್ತ್ರವು ಪದದ ವಿಷಯದಲ್ಲಿ 'ಪ್ರವೃತ್ತಿ' ಮಾಡಬೇಕೆಂದರೆ ಆಹವನೀಯ ವಿಧಾಯಕ ಸಾಮಾನ್ಯಶಾಸ್ತ್ರಕ್ಕೆ ಹೋಮವಿಶೇಷದಲ್ಲಿ ಸಾಮಾನ್ಯ ವಿಶೇಷಭಾವ ಸಂಬಂಧ ನಿಮಿತ್ತಕ ಲಕ್ಷಣಾ ಮಾಡಬೇಕಾಗುತ್ತದೆ. ಅದರಿಂದ ವಿಲಂಬ ಪ್ರವೃತ್ತಿಯ ಆಹವನೀಯಶಾಸ್ತ್ರಕ್ಕೆ ಶೀಘ್ರಪ್ರವೃತ್ತಿಯ ಪದಶಾಸ್ತ್ರದಿಂದ ಬಾಧ ಬರುತ್ತದೆ. ಹಾಗೇ ಘಟಃಸನ್ ಪಟಃಸನ್ ಎಂದು ವಿಶೇಷ ವಿಷಯಕವಾದ ದ್ವೈತವಾಕ್ಯದಿಂದ 'ಅದ್ವಿತೀಯಂ' ಎಂಬ ಸಾಮಾನ್ಯವಿಷಯಕ ಅದ್ವೈತ ವಾಕ್ಯಕ್ಕೇ ಬಾಧ ಬರುತ್ತದೆ.

(4) ದ್ವೈತವಾಕ್ಯವು ಪ್ರತ್ಯಕ್ಷಪ್ರಾಪ್ತಾನುವಾದಕವೆಂದು ಅದ್ವೈತಿ ಹೇಳುತ್ತಿರುವುದರಿಂದ ಪ್ರತ್ಯಕ್ಷವು ಹೇಗೆ ತಿಳಿಸುವುದೋ ಹಾಗೇ ಆ ಶ್ರುತಿಯು ಹೇಳಬೇಕು. ಅದು ನಿರವಕಾಶ. ಅದ್ವೈತ ವಾಕ್ಯವು ಅನುವಾದಕವಲ್ಲದ್ದರಿಂದ ಲಕ್ಷಣಾದಿನಾ ಅನ್ಯಾರ್ಥವನ್ನು ಹೇಳಬಹುದು. ಅದರಿಂದ ಅದು ಸಾವಕಾಶ, ನಿರವಕಾಶ ದ್ವೈತವಾಕ್ಯದಿಂದ ಬಾಧಿತವಾಗಬಹುದು.

**ನಚ ಸ್ಮೃತಿಸೂತ್ರೇ ಶೂನ್ಯವಾದಿ ನಿರಾಸಾರ್ಥೇ, ತನ್ಮತೇ ಜಗತೋಽತ್ಯಂತಾಸತ್ವಾತ್, ಮನ್ಮತೇ ಅಸದ್‌ವಿಲಕ್ಷಣತ್ವಾತ್ ಇತಿ ವಾಚ್ಯಂ। ಅರ್ಥಕ್ರಿಯಾಕಾರಿತ್ವಾದಿನಾ ಶಶಶೃಂಗಾದಿ ವೈಲಕ್ಷಣ್ಯಸ್ಯ ತನ್ಮತೇಽಪಿ ಸತ್ವಾತ್।**

'ಸ್ಮೃತಿ ಮತ್ತು ಸೂತ್ರಗಳು ಶೂನ್ಯವಾದಿ ನಿರಾಸಕ್ಕಾಗಿ ಹೊರಟಿವೆ ಹೊರತು ನನ್ನ ಅದ್ವೈತವನ್ನು ನಿರಾಸ ಮಾಡುವುದಕ್ಕಾಗಿ ಅಲ್ಲ. ಏಕೆಂದರೆ ಬೌದ್ಧಮತದಲ್ಲಿ ಜಗತ್ತು ಅತ್ಯಂತಾಸತ್ತಾಗಿದೆ. ನನ್ನ ಮತದಲ್ಲಿ ಸದಸದ್ವಿಲಕ್ಷಣವಾಗಿದೆ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಬೌದ್ಧನು ಪ್ರಪಂಚಕ್ಕೆ ಅರ್ಥಕ್ರಿಯಾಕಾರಿತ್ವರೂಪಸತ್ವವನ್ನು ಒಪ್ಪಿದ್ದಾನೆ. 'ಯತ್ ಸತ್ ತತ್ ಕ್ಷಣಿಕಂ' ಎಂದು ಸತ್ವದಿಂದಲೆ ಕ್ಷಣಿಕತ್ವವನ್ನು ಸಮರ್ಥಿಸುತ್ತಾನೆ. ಶಶಶೃಂಗಾದಿಗಳಲ್ಲಿ ಅರ್ಥಕ್ರಿಯಾಕಾರಿತ್ವವನ್ನು ಬೌದ್ಧನೂ ಒಪ್ಪಿಲ್ಲ. ಅರ್ಥಕ್ರಿಯಾಕಾರಿತ್ವದಿಂದ ಪ್ರಪಂಚದಲ್ಲಿ ಅಸದ್ವೈಲಕ್ಷಣ್ಯ ಬೌದ್ಧಮತದಲ್ಲೂ ಇದೆ.

**ಪ್ರತಿಪನ್ನೋಪಾಧೌ ನಿಷೇಧ ಪ್ರತಿಯೋಗಿತ್ವೇನ ತದ್ ವೈಲಕ್ಷಣ್ಯಸ್ಯ ತ್ವನ್ಮತೇಽಪ್ಯಭಾವಾತ್।**

ಸ್ವರೂಪೇಣ ಪ್ರತಿಪನ್ನೋಪಾಧಿಯಲ್ಲಿ ನಿಷೇಧ್ಯವಾಗುವುದೆಂದರೆ ಅದು ಅಸತ್ವವೆ. ಸ್ವರೂಪವೇ ಇಲ್ಲವೆಂದರ್ಥ. ಶಶಶೃಂಗದಂತೆ ಪ್ರತಿಪನ್ನೋಪಾಧಿಯೂ ಇಲ್ಲವೆಂದಂತಾಗುವುದು.

ಇದನ್ನು ಪ್ರಪಂಚದಲ್ಲಿ ಒಪ್ಪುವ ನಿನ್ನ ಮತದಲ್ಲಿಯೂ ಅಸದ್ ವೈಲಕ್ಷಣ್ಯವನ್ನು ಪ್ರಪಂಚದಲ್ಲಿ ಹೇಳಲಾಗದು.

**ಸೂತ್ರೇ ಸ್ವಪ್ನವೈಲಕ್ಷಣ್ಯೋಕ್ತ್ಯಯೋಗಾಚ್ಚ । ವ್ಯಾವಹಾರಿಕಸತ್ತ್ವೇನ ಸ್ವಾಪ್ನವೈಲಕ್ಷಣ್ಯಸ್ಯ ತನ್ಮತೇಽಪಿ ಸತ್ತ್ವಾತ್ ।**

ಶೂನ್ಯವಾದಿ ನಿರಾಸಕ್ಕಾಗಿಯೇ ಸೂತ್ರಗಳು ಹೊರಟಿದ್ದರೆ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂದು ಸೂತ್ರದಲ್ಲಿ ಪ್ರಪಂಚದಲ್ಲಿ ಸ್ವಪ್ನವೈಲಕ್ಷಣ್ಯವನ್ನು ಹೇಳಿದ್ದು ಕೂಡುತ್ತಿರಲಿಲ್ಲ. ಏಕೆಂದರೆ ವ್ಯಾವಹಾರಿಕ ಸತ್ವವನ್ನು ಪ್ರಪಂಚದಲ್ಲಿ ಅವನು ಒಪ್ಪಿದ್ದಾನೆ. ಆದರಿಂದ ಸ್ವಪ್ನವೈಲಕ್ಷಣ್ಯವನ್ನು ಒಪ್ಪಿರುವುದರಿಂದ ಅವನಿಗೆ ಈ ಸೂತ್ರದಲ್ಲಿ ಸ್ವಪ್ನವೈಲಕ್ಷಣ್ಯವನ್ನು ಸಾಧಿಸಿದರೆ ಸಿದ್ಧಸಾಧನವಾಗುವುದು. ಅದ್ವೈತಿ ಮಾತ್ರ ಪ್ರಪಂಚವನ್ನು ಸ್ವಪ್ನತುಲ್ಯವೆಂದಿರುವುದರಿಂದ ಅವನನ್ನು ನಿರಾಸಮಾಡಲೆಂದೇ, ಅವನು ಒಪ್ಪದಿರುವ ಸ್ವಪ್ನವೈಲಕ್ಷಣ್ಯವನ್ನು ವೈಧರ್ಮ್ಯಹೇತುವಿನಿಂದ ಅವನಿಗೆ ಸೂತ್ರವು ಸಾಧಿಸುತ್ತಿದೆ.

**ದ್ವೇ ಸತ್ತ್ವೇ ಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ ।**
**ಲೋಕೇ ಸಂವೃತಿ ಸತ್ಯತ್ವಂ ಸತ್ತ್ವಂ ಚ ಪರಮಾರ್ಥತಃ ॥**

**ಸತ್ತ್ವಂ ತು ದ್ವಿವಿಧಂ ಪ್ರೋಕ್ತಂ ಸಾಂವೃತಂ ಪಾರಮಾರ್ಥಿಕಂ ।**
**ಸಾಂವೃತಂ ವ್ಯಾವಹಾರ್ಯಂ ಸ್ಯಾತ್ ನಿವೃತ್ತೌ ಪಾರಮಾರ್ಥಿಕಂ ॥**

**ಇತಿ ಬೌದ್ಧೋಕ್ತೇಃ । ತಸ್ಮಾತ್ ಶ್ರುತ್ಯಾದಿಬಾಧೋ ದುರ್ವಾರಃ ।**

ಬೌದ್ಧರ ಧರ್ಮೋಪದೇಶವು ಎರಡು ಬಗೆಯ ಸತ್ವಗಳನ್ನು ಆಧರಿಸಿದೆ. ಲೋಕದಲ್ಲಿ ಸಂವೃತಿ ಸತ್ಯತ್ವ. ಪರಮಾರ್ಥದಲ್ಲಿ ಪಾರಮಾರ್ಥಿಕ ಸತ್ಯತ್ವ ಎಂದು.

ಸತ್ಯತ್ವವು ಎರಡು ಬಗೆಯಾಗಿದೆ. ಸಾಂವೃತ ಸತ್ಯತ್ವ ಮತ್ತು ಪಾರಮಾರ್ಥಿಕ ಸತ್ಯತ್ವ ಎಂದು. ವ್ಯವಹಾರದಲ್ಲಿ ಸಾಂವೃತ ಸತ್ಯತ್ವ. 'ಸಂವೃತಿ'ಯ ಎಂದರೆ ಅವಿದ್ಯೆಯ ನಿವೃತ್ತಿಯಾದಾಗ ಪಾರಮಾರ್ಥಿಕ ಸತ್ಯತ್ವ ಎಂದು.

ಹೀಗೆ ಬೌದ್ಧರು ಹೇಳಿರುವುದರಿಂದ ಮಿಥ್ಯಾತ್ವ ಹೇತುಗಳಿಗೆ ಸೂತ್ರಗಳಿಂದಲೂ ಬಾಧವಿದೆ.

ಅದರಿಂದ ಶ್ರುತಿಸ್ಮೃತಿ ಸೂತ್ರಗಳಿಂದ ಅದ್ವೈತಕ್ಕೆ ಬಾಧವು ಅಪರಿಹಾರ್ಯ.

**ಕಿಂಚ ತ್ವಯಾಪಿ ತತ್ತತ್ ಪ್ರಮಾಣಸಿದ್ಧಾ ಏವಾರ್ಥಾಃ ಪಕ್ಷೀಕರ್ತವ್ಯಾಃ । ತೈಶ್ಚ ತೇ ಸತ್ತ್ವೇನೈವ ಸಿದ್ಧಾ ಇತಿ ತತ್ತನ್ಮಾನ ಬಾಧಃ । 'ಅಗ್ನಿರಾಸೀತ್' 'ವೃಷ್ಟಿರ್ಭವಿಷ್ಯತಿ' 'ರೂಪ್ಯಂ ಮಿಥ್ಯಾ' ಇತ್ಯಾದಿ ಧೀರಪಿ ಸ್ವವಿಷಯಸತ್ತ್ವಂ ಗೃಹ್ಣಾತಿ । ಅನ್ಯಥಾ ತದುಚಿತ ಪ್ರವೃತ್ತ್ಯಾದ್ಯಯೋಗಾತ್ ಇತಿ ॥**

ನಿನಗೂ ಕೂಡ ಘಟಾದಿ ವಿಷಯದಲ್ಲಿ ಪ್ರತ್ಯಕ್ಷ, ಚಕ್ಷುರಿಂದ್ರಿಯಾದಿ ಅತೀಂದ್ರಿಯ ವಿಷಯಗಳಲ್ಲಿ ಅನುಮಾನ, ಧರ್ಮಾದಿ ವಿಷಯಗಳಲ್ಲಿ ಆಗಮಗಳು ಪ್ರಮಾಣ. ಆಯಾ ಪ್ರಮಾಣಗಳಿಂದ ಸಿದ್ಧವಾದ ವಿಷಯಗಳನ್ನು ಪಕ್ಷ ಮಾಡಿಯೇ ನೀನು ಮಿಥ್ಯಾತ್ವ ಸಾಧನೆ ಮಾಡಬೇಕು. ಆ ಪ್ರಮಾಣಗಳಿಂದ ವಿಷಯಗಳು ಸಿದ್ಧವಾಗುವಾಗ ಅವು ಸತ್ಯವೆಂದೇ ಸಿದ್ಧವಾಗುತ್ತವೆ. ಅವುಗಳನ್ನು ನೀನು ಮಿಥ್ಯೆ ಎಂದು ಸಾಧಿಸಲು ಹೊರಟರೆ ಆ ಪ್ರಮಾಣಗಳಿಂದಲೆ ನಿನ್ನ ಅನುಮಾನಗಳಿಗೆ ಬಾಧವು ಅಪರಿಹಾರ್ಯ.

ಅಗ್ನಿ ಹಿಂದೆ ಇತ್ತು, ಈಗ ನಾಶವಾಗಿದೆ, ಮಳೆ ಉಂಟಾಗಲಿದೆ, ಈಗ ಇಲ್ಲ, ಶುಕ್ತಿರಜತ ಮಿಥ್ಯಾ, ತ್ರೈಕಾಲಿಕಾಭಾವ ಪ್ರತಿಯೋಗಿ ಇತ್ಯಾದಿ ಜ್ಞಾನಗಳಿಂದ ಯದ್ಯಪಿ ಅಗ್ನಿ ಮುಂತಾದ ವಿಷಯಗಳು ಸತ್ಯವೆಂದು ಸಿದ್ಧವಾಗುವುದಿಲ್ಲ. ಆದರೆ ಅವುಗಳಲ್ಲಿ ಧ್ವಂಸ ಪ್ರತಿಯೋಗಿತ್ವ ಪ್ರಾಗಭಾವಪ್ರತಿಯೋಗಿತ್ವ ಅತ್ಯಂತಾಭಾವಪ್ರತಿಯೋಗಿತ್ವಗಳು ಧರ್ಮಿಸತ್ತಾನಿರಪೇಕ್ಷವಾಗಿ ಸತ್ಯ ವಾಗಿಯೇ ಇವೆ. ಸತ್ಯವೆಂದೇ ಅವು ಈ ಜ್ಞಾನಗಳಿಂದ ಸಿದ್ಧವಾಗುತ್ತವೆ. ಅವುಗಳಲ್ಲಿ ಮಿಥ್ಯಾತ್ವ ಸಾಧನೆ ಮಾಡಲು ಹೊರಟರೆ ಈ ಜ್ಞಾನಗಳಿಂದಲೆ ಬಾಧ ಅಪರಿಹಾರ್ಯ.



## ಅಸತಃ ಸಾಧಕತ್ವೇ ಬಾಧಕ ವಿವರಣಂ

किञ्चैतैरेव प्रयोगैः स्वप्रतिज्ञाहेतूदाहरणादिप्रापितानां साध्यसाधनव्याप्त्यादीनां मिथ्यात्वं न बोध्यते चेत् सर्वमिथ्यात्वासिद्धिः, बोध्यते चेत् परस्परव्याहतिः बाध स्वरूपासिद्धि व्याप्यत्वासिद्ध्यादिकं च स्यात् । परमार्थसत्त्वस्यैव साधकत्वे तन्त्रत्वात् । तथाहि । न तावद्धीमात्रं तत्र तन्त्रम् । तुच्छस्यापि तत्प्रसङ्गात् । नाप्यपरोक्षधीः अपरोक्षसत्त्वधीर्वा तन्त्रम् । नित्यातीन्द्रिये तदभावात् । ह्रदे प्रपञ्चे चापरोक्षभ्रान्तिसिद्धेन धूमेनात्यन्ताबाधेन च वह्नेः पारमार्थिकसत्त्वस्य चासिद्धेश्च । वह्नित्वेनाज्ञातस्यापि वह्नेर्दाहकत्वाच्च । अमृतत्वेन ज्ञातस्यापि विषस्यासञ्जीवकत्वाच्च । अत एव न त्रिचतुरकक्ष्यास्वबाधिता सत्त्वधीस्तन्त्रम् ।

---

**बोध्यते चेदिति** ।। यद्यपि न बोधन(बोध) मात्रेण व्याहतिः । सतोऽप्यसत्त्वेन बोधन सम्भवात् । तथापि प्रमारूपबोधमादाय व्याहतिर्द्रष्टव्या । असतः साधकत्वायोगात्, अस्मदनिष्टापादकत्वेन तादृशबोधनस्यैव मिथ्यात्वानुमानफलत्वेन त्वया स्वीकर्तव्यत्वादिति भावः ।

ननु पक्षादेः मिथ्यात्वबोधनेऽपि सत्यत्वस्याप्यङ्गीकारेण न व्याहत्यादिदोष इत्यत आह **परमार्थेति ।। साधकत्व इति** ।। परमार्थज्ञापकत्वे तदुत्पादकत्वे चेत्यर्थः ।

ननु व्यवसायद्वाराऽपरोक्षधीविषयत्वमसतोऽपीत्यत आह **अपरोक्षेति** ।। उपनायकसामग्रीं विनैव सत्त्वप्रकारकापरोक्षधीरित्यर्थः । उत्पादकत्वं साधकत्त्वमिति पक्षे दोषमाह **वह्नित्वेनेत्यादिना असञ्जीवकत्वाच्चेत्यन्तेन** ।

ननु वह्नित्वेन दाहिबुध्यभावेऽपि सत्त्वबुद्धिसामान्याभावो नास्त्येव, अन्ततो

योगिनामेव तत्र तथा बुद्धिसम्भवादित्यत आह **अमृतत्वेनेति ।।** ननु संसारकालीनबाधकाबाध्यधीस्तत्र तन्त्रमित्याशङ्क्याह **अत एवेति ।।**



**ಕಿಂಚ ಏತೈರೇವ ಪ್ರಯೋಗೈಃ ಸ್ವಪ್ರತಿಜ್ಞಾ ಹೇತು ಉದಾಹರಣಾದಿ ಪ್ರಾಪಿತಾನಾಂ ಸಾಧ್ಯಸಾಧನ ವ್ಯಾಪ್ತ್ಯಾದೀನಾಂ ಮಿಥ್ಯಾತ್ವಂ ನ ಬೋಧ್ಯತೇ ಚೇತ್ ಸರ್ವಮಿಥ್ಯಾತ್ವಾಸಿದ್ಧಿಃ। ಬೋಧ್ಯತೇ ಚೇತ್ ಪರಸ್ಪರ ವ್ಯಾಹತಿಃ ಬಾಧ ಸ್ವರೂಪಾಸಿದ್ಧಿ ವ್ಯಾಪ್ಯತ್ವಾಸಿಧ್ಯಾದಿಕಂ ಚ ಸ್ಯಾತ್। ಪರಮಾರ್ಥಸತ್ವಸ್ಯೈವ ಸಾಧಕತ್ವೇ ತಂತ್ರತ್ವಾತ್।**

ಮಿಥ್ಯಾತ್ವ ಸಾಧಕಾನುಮಾನಗಳು ವ್ಯಾಹತ್ಯಾದಿಗಳಿಂದ ದುರ್ಬಲವಾಗಿರುವುದರಿಂದ ಪ್ರಬಲವಾಗಿರುವ ಸತ್ವಸಾಧಕ ಪ್ರಮಾಣಗಳನ್ನು ಬಾಧಿಸಲು ಶಕ್ತವಾಗಲಾರವು. ಏಕೆಂದರೆ, ವಿಶ್ವಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾದ್ ಇತ್ಯಾದಿ ಈ ಪ್ರಯೋಗಗಳಿಂದಲೇ ಅವುಗಳಲ್ಲಿರುವ ಪ್ರತಿಜ್ಞಾ ಹೇತು ಉದಾಹರಣಾದಿವಾಕ್ಯಗಳಿಂದ ತಿಳಿದುಬರುವ ಸಾಧ್ಯ ಸಾಧನ ವ್ಯಾಪ್ತಿ ಮುಂತಾದವುಗಳಿಗೆ ಮಿಥ್ಯಾತ್ವವು ಬೋಧಿತವಾಗುವುದಿಲ್ಲವೆಂದರೆ ಸರ್ವಮಿಥ್ಯಾತ್ವವು ಸಿದ್ಧವಾಗಲಾರದು. ಸಾಧ್ಯ ಸಾಧನ ವ್ಯಾಪ್ತ್ಯಾದಿ ಸರ್ವಸಾಧಾರಣವಾಗಿಯೇ ಬ್ರಹ್ಮಅಸತ್ ಪ್ರಾತಿಭಾಸಿಕಾನ್ಯ ಸರ್ವತ್ವವನ್ನೇ ಪಕ್ಷತಾವಚ್ಛೇದಕ ಮಾಡಿ ಮಿಥ್ಯಾತ್ವ ಸಾಧನೆಗೆ ಹೊರಟ ಅದ್ವೈತಿ ಸಾಧ್ಯಸಾಧನ ವ್ಯಾಪ್ತ್ಯಾದಿ ವ್ಯತಿರಿಕ್ತಕ್ಕೇ ಮಿಥ್ಯಾತ್ವವನ್ನು ಸಾಧನೆ ಮಾಡಿದರೆ ಅನುಮಾನವು ಅರ್ಥಾಂತರ ಗ್ರಸ್ತವಾಗುತ್ತದೆ. ಸಾಧ್ಯಸಾಧನವ್ಯಾಪ್ತ್ಯಾದಿಗಳಿಗೂ ಮಿಥ್ಯಾತ್ವವು ಬೋಧಿತವಾಗುತ್ತದೆ ಎಂದರೆ ಪರಸ್ಪರವ್ಯಾಹತಿ ಉಂಟಾಗುತ್ತದೆ. ವಿಶ್ವದಲ್ಲಿ ಮಿಥ್ಯಾತ್ವವಿದೆ, ದೃಶ್ಯತ್ವಾದಿ ಹೇತುಗಳಿವೆ, ಅವುಗಳಿಗೆ ವ್ಯಾಪ್ತಿಪಕ್ಷಧರ್ಮತಾದಿಗಳಿವೆ ಎಂದು ಅದ್ವೈತಿಯು ಹೇಳುತ್ತಲೇ ವಿಶ್ವಾಂತರ್ಗತವಾದ ಈ ಸಾಧ್ಯಹೇತುವ್ಯಾಪ್ತ್ಯಾದಿಗಳಿಗೆ ಮಿಥ್ಯಾತ್ವಸಾಧನೆ ಮಾಡುವುದು ವ್ಯಾಹತ. ಸಾಧ್ಯಾದಿಗಳಿವೆ ಎಂದರೆ ಅವು ಮಿಥ್ಯೆ ಹೇಗೆ? 'ವಿಮತಂ ಮಿಥ್ಯಾ' ಎಂದು ಪ್ರತಿಜ್ಞೆಯಿಂದ ಸಾಧ್ಯಕ್ಕೆ, ಹೇತುವಿನಿಂದ ಹೇತುವಿಗೆ, ಉದಾಹರಣದಿಂದ ವ್ಯಾಪ್ತಿಗೆ, ಉಪನಯದಿಂದ ಅಬಾಧಿತತ್ವಕ್ಕೆ, ನಿಗಮನದಿಂದ ಅಸತ್‌ಪ್ರತಿಪಕ್ಷತ್ವಕ್ಕೆ ಹೀಗೆ ಎಲ್ಲಕ್ಕೂ ಅಸ್ತಿತ್ವವನ್ನು ಬೋಧಿಸುತ್ತಾನೆ. ಹೇತುವಾಕ್ಯಾರ್ಥದಿಂದ ಸಾಧ್ಯವ್ಯಾಪ್ತಿ ಮುಂತಾದ ಎಲ್ಲಕ್ಕೂ ಮಿಥ್ಯಾತ್ವವನ್ನು ಬೋಧಿಸುತ್ತಾನೆ. ಹೀಗೆ ಪಂಚಾವಯವ ಗಳಲ್ಲಿಯೆ ಪರಸ್ಪರವ್ಯಾಹತಿ ಬರುತ್ತದೆ.

ಯದ್ಯಪಿ ಬೋಧನಮಾತ್ರದಿಂದಲೇ ವ್ಯಾಹತಿ ಎನ್ನಲಾಗದು. ಭ್ರಮರೂಪ ಬೋಧವುಂಟು ಮಾಡಿದರೆ ವ್ಯಾಹತಿ ಇರುವುದಿಲ್ಲ. ಆದರೂ ಪ್ರಮಾರೂಪ ಬೋಧ ಉಂಟುಮಾಡಿದರೇ ವ್ಯಾಹತಿ ಬರುತ್ತದೆ. ಅಸತ್ತು ಸಾಧಕವಾಗದಿರುವುದರಿಂದ ನಮಗೆ ಅನಿಷ್ಟ ಆಪಾದನೆ ಮಾಡುವುದಕ್ಕೆ ಪ್ರಮಾರೂಪ ಬೋಧವನ್ನೇ ಉಂಟುಮಾಡಬೇಕು. ಪ್ರಮಾರೂಪ ಬೋಧವನ್ನೇ ತನ್ನ

ಅನುಮಾನಗಳ ಫಲವೆಂದು ಅವನು ಒಪ್ಪಿಕೊಳ್ಳಬೇಕು. ಹೀಗಾಗಿ ಅವನು ಪ್ರಮಾರೂಪ ಬೋಧವನ್ನುಂಟುಮಾಡಿ ವ್ಯಾಹತಿ ತಂದುಕೊಳ್ಳುತ್ತಾನೆ.

ಪಕ್ಷಸಾಧ್ಯಾದಿಗಳಿಗೆ ನಾನು ಮಿಥ್ಯಾತ್ವ ಬೋಧನೆ ಮಾಡುತ್ತಿದ್ದರೂ ಅವುಗಳಿಗೆ ವ್ಯಾವಹಾರಿಕ ಸತ್ವವನ್ನು ಅಂಗೀಕರಿಸಿರುವುದರಿಂದ ವ್ಯಾಹತಿ ಇಲ್ಲ' ಎನ್ನಬಾರದು. ವ್ಯಾವಹಾರಿಕ ಸತ್ವವೆಂಬುದು ಈ ಮಿಥ್ಯಾತ್ವಾನುಮಾನೋತ್ತರದಲ್ಲಿ ಹೇಳಬಹುದಾದ ಸಮಾಧಾನ. ಈಗ ಅನುಮಾನ ಪ್ರಯೋಗಕಾಲದಲ್ಲಿ ಅದು ಸಿದ್ಧವಾಗಿಲ್ಲ. ಈಗ ಪಾರಮಾರ್ಥಿಕ ಸತ್ವವೇ ಸಾಧಕತ್ವಕ್ಕೆ ಪ್ರಯೋಜಕ. ಅಂದರೆ, ಪರಮಾರ್ಥವಸ್ತುವಿನ ಉತ್ಪಾದನಕ್ಕೂ ಜ್ಞಾನಕ್ಕೂ ಸಾಧನವು ಪಾರಮಾರ್ಥಿಕಸತ್ವ ಉಳ್ಳದ್ದೇ ಆಗಿರಬೇಕು ಎಂದರ್ಥ.

ವಿಶ್ವಾಂತರ್ಗತವಾದ ವಿಶ್ವಮಿಥ್ಯಾತ್ವವನ್ನು ಮಿಥ್ಯಾ, ಅತ್ಯಂತಾಭಾವಪ್ರತಿಯೋಗಿ ಎಂದರೆ, ಮಿಥ್ಯಾತ್ವದ ಅಭಾವರೂಪವಾದ ಸಾಧ್ಯಾಭಾವವನ್ನು ಹೇಳುವುದರಿಂದ ಮಿಥ್ಯಾತ್ವಾನುಮಾನಕ್ಕೆ ಬಾಧದೋಷ. ವಿಶ್ವಾಂತರ್ಗತವಾದ್ದರಿಂದ ಹೇತುವೂ ಮಿಥ್ಯಾ ಆದರೆ ಹೇತ್ವಸಿದ್ಧಿದೋಷ. ಉದಾಹರಣದಿಂದ ಸಿದ್ಧವಾಗುವ ವ್ಯಾಪ್ತಿಯೂ ಮಿಥ್ಯಾ ಆದರೆ ವ್ಯಾಪ್ಯತ್ವಾಸಿದ್ಧಿ.

ಹೇತುವಿಗೆ ಮಿಥ್ಯಾತ್ವವನ್ನು ನಾನು ಹೇಳಿದರೂ ಸ್ವರೂಪಾಸಿದ್ಧಿಯಿಂದ ಅದು ಅಸಾಧಕವಾಗಬೇಕಿಲ್ಲ. ಮಿಥ್ಯಾಪದಾರ್ಥಕ್ಕೂ ಸಾಧಕತ್ವ ಕೂಡುತ್ತದೆ' ಎಂದರೆ, ಅದು ಸರಿಯಲ್ಲ. ಪರಮಾರ್ಥಸತ್ವವೇ ಸಾಧಕತ್ವಕ್ಕೆ ಪ್ರಯೋಜಕ.

**ತಥಾಹಿ 'ನ ತಾವತ್ ಧೀಮಾತ್ರಂ ತತ್ರ ತಂತ್ರಂ। ತುಚ್ಛಸ್ಯಾಪಿ ತತ್‌ಪ್ರಸಂಗಾತ್। ನಾಪಿ ಅಪರೋಕ್ಷಧೀಃ ಅಪರೋಕ್ಷ ಸತ್ವಧೀರ್ವಾ ತಂತ್ರಂ। ನಿತ್ಯಾತೀಂದ್ರಿಯೇ ತದಭಾವಾತ್। ಹ್ರದೇ ಪ್ರಪಂಚೇ ಚ ಅಪರೋಕ್ಷ ಭ್ರಾಂತಿ ಸಿದ್ಧೇನ ಧೂಮೇನ ಅತ್ಯಂತಾಬಾಧೇನ ಚ ವಹ್ನೇಃ ಪಾರಮಾರ್ಥಿಕ ಸತ್ವಸ್ಯ ಚ ಅಸಿದ್ಧೇಶ್ಚ। ವಹ್ನಿತ್ವೇನ ಅಜ್ಞಾತಸ್ಯಾಪಿ ವಹ್ನೇರ್ದಾಹಕತ್ವಾಚ್ಚ। ಅಮೃತತ್ವೇನ ಜ್ಞಾತಸ್ಯಾಪಿ ವಿಷಸ್ಯ ಅಸಂಜೀವಕತ್ವಾಚ್ಚ।**

ಪರಿಶೇಷದಿಂದ ಪಾರಮಾರ್ಥಿಕಸತ್ವವೇ ಸಾಧಕತ್ವಕ್ಕೆ ಪ್ರಯೋಜಕವೆಂದು ತಿಳಿಯಬೇಕು. ಮೊದಲಿಗೆ, ಸಾಧನದ ಜ್ಞಾನ ಮಾತ್ರವೇ ಸಾಧಕತ್ವಕ್ಕೆ ಪ್ರಯೋಜಕ ಎನ್ನಲಾಗದು. ಅತ್ಯಂತಾಸತ್ತಾದ ಶಶವಿಷಾಣಾದಿಗಳೂ ಸಾಧಕವಾಗಬೇಕಾದೀತು. ಅಪರೋಕ್ಷಜ್ಞಾನ ಅಥವಾ ಅಪರೋಕ್ಷ ಸತ್ವಜ್ಞಾನವೂ ಪ್ರಯೋಜಕವಲ್ಲ. ನಿತ್ಯಾತೀಂದ್ರಿಯ ಧರ್ಮಾಧರ್ಮಾದಿಗಳಲ್ಲಿ ಅದು ಬರುವುದಿಲ್ಲ. ವ್ಯವಸಾಯದ್ವಾರಾ ಅನುವ್ಯವಸಾಯ ರೂಪ ಅಪರೋಕ್ಷಜ್ಞಾನವು ಅಸತ್ತಿನ ವಿಷಯದಲ್ಲಿಯೂ ಬರಬಹುದು. ಆದರೆ ಅಪರೋಕ್ಷರೂಪ ಉಪನಾಯಕವಿಲ್ಲದಿದ್ದಾಗ ಸತ್ವಪ್ರಕಾರಕ ಅಪರೋಕ್ಷಜ್ಞಾನ ಬರುತ್ತಿದ್ದರೆ ಮಾತ್ರ ಸಾಧನವು ಸಾಧಕವಾಗುತ್ತದೆ ಎನ್ನಬೇಕು. ಹೀಗೆ ಹೇಳಿದರೂ

ನಿತ್ಯಾತೀಂದ್ರಿಯದಲ್ಲಿ ಅವ್ಯಾಪ್ತಿ ಇದ್ದೇ ಇದೆ. ಅಪರೋಕ್ಷಜ್ಞಾನವು ಸಾಧಕತ್ವಕ್ಕೆ ಪ್ರಯೋಜಕವೆಂದರೆ ವ್ಯಭಿಚಾರವಿದೆ— ನೀರಿನ ಮಡುವಿನಲ್ಲಿ ಅಪರೋಕ್ಷಭ್ರಾಂತಿಯಿಂದ ಹೊಗೆಯನ್ನು ಕಂಡರೆ ಅಲ್ಲಿ ವಹ್ನಿ ಸಿದ್ಧವಾಗುವುದಿಲ್ಲ. ಪ್ರಪಂಚದಲ್ಲಿ ಅಪರೋಕ್ಷಭ್ರಾಂತಿಯಿಂದ ಅತ್ಯಂತಾಬಾಧವನ್ನು ಕಂಡರೂ ಪಾರಮಾರ್ಥಿಕಸತ್ವವು ಸಿದ್ಧವಾಗುವುದಿಲ್ಲ ಎಂದು ಇದಕ್ಕೆ ವ್ಯತಿರೇಕವ್ಯಭಿಚಾರವೂ ಇದೆ.

ಸಾಧಕತ್ವವೆಂದರೆ ಉತ್ಪಾದಕತ್ವವೂ ಆಗಬಹುದು. ಅದಕ್ಕೂ ಪಾರಮಾರ್ಥಿಕ ಸತ್ವವೇ ಪ್ರಯೋಜಕ. ವಹ್ನಿತ್ವೇನ ಅಪರೋಕ್ಷಸತ್ವಭ್ರಾಂತಿ ಇಲ್ಲದಿದ್ದರೂ ವಹ್ನಿ ದಾಹವನ್ನುಂಟುಮಾಡುತ್ತದೆ.

'ವಹ್ನಿತ್ವೇನ ಅಪರೋಕ್ಷಜ್ಞಾನವಿಲ್ಲದಿದ್ದರೂ ಸತ್ವೇನ ಅಪರೋಕ್ಷವಿರಬಹುದು. ಕೊನೆಪಕ್ಷ ಯೋಗಿಗಳಿಗೆ ಅಂಥ ಅಪರೋಕ್ಷವಿರಬಹುದು. ಅದು ದಾಹಕತ್ವಕ್ಕೆ ಪ್ರಯೋಜಕವಾಗಬಹುದು' ಎಂದರೆ ಬೇರೆಕಡೆ ವ್ಯಭಿಚಾರ ಹೇಳಬಹುದು— ಅಮೃತವೆಂದು ವಿಷವನ್ನು ಅಪರೋಕ್ಷಭ್ರಾಂತಿಯಿಂದ ತಿಳಿದರೂ ವಿಷವು ಸಂಜೀವಿನಿಯಾಗುವುದಿಲ್ಲ' ಎಂದು.

**'ಅತ ಏವ ನ ತ್ರಿಚತುರ ಕಕ್ಷ್ಯಾಸು ಅಬಾಧಿತಾ ಸತ್ತ್ವಧೀಃ ತಂತ್ರಂ' ।**

ಪ್ರಪಂಚದಲ್ಲಿ ಅಪರೋಕ್ಷಭ್ರಾಂತಿಯಿಂದ ಸಿದ್ಧವಾದ ಅತ್ಯಂತಾಬಾಧಕ್ಕೂ ಕೂಡ ಬ್ರಹ್ಮಜ್ಞಾನ ಪರ್ಯಂತ ಬಾಧವಿಲ್ಲದ್ದರಿಂದ ಅದರಲ್ಲಿ ಸತ್ವಭ್ರಾಂತಿಯು ಸಂಸಾರಕಾಲದಲ್ಲಿ ಮೂರು ನಾಲ್ಕು ಬಾರಿ ಪರೀಕ್ಷೆ ಮಾಡಿದಾಗಲೂ ಅಬಾಧಿತವಾಗಿರುತ್ತದೆ. ಆದರೂ, 'ಅಬಾಧಿತ ಸತ್ವಪ್ರಕಾರಕಜ್ಞಾನ ವಿಷಯತ್ವವಿದೆ, ಪಾರಮಾರ್ಥಿಕಸತ್ವಸಿದ್ಧಿ ಇಲ್ಲ' ಎಂದು ವ್ಯಭಿಚಾರವಿದೆ. ಅದರಿಂದಲೆ ಮೂರುನಾಲ್ಕು ಪರೀಕ್ಷೆಗಳಲ್ಲಿಯೂ ಅಬಾಧಿತವಾದ ಸತ್ವಪ್ರಕಾರಕಜ್ಞಾನ ವಿಷಯತ್ವವು ಸಾಧಕತ್ವಕ್ಕೆ ಪ್ರಯೋಜಕ ಎಂದು ಹೇಳಲಾಗದು.



**'गौरोऽहं' 'नीलं नभ' इत्यादिभ्रान्तिसिद्धेन नीलत्वादिना आत्माकाशादेरपि अनित्यत्वस्पर्शवत्त्वाद्यापाताच्च । गौरोऽहमित्यादावपि तत्कक्ष्यासु प्रत्यक्षाबाधात् । यौक्तिकादिबाधस्य च त्वन्मते प्रकृतेऽपि भावात् ।**

**एतेन लोकप्रसिद्धिस्तन्त्रमितीष्टसिद्ध्युक्तं निरस्तम् ।**

**एतेनैव त्रिचतुरकक्ष्यास्वबाधिता वादिप्रतिवादिप्राश्निकानां सत्त्वधीस्तन्त्रमिति निरस्तम् । निपुणेन बौद्धेनोक्तधीविषयव्याप्त्यादिमत्त्वेन व्युत्पादितैः शून्याद्वैतादिहेतुभिस्तत्सिद्ध्यापातात् ।**

**एतेनैव यादृश्या तव सत्त्वसिद्धिस्तादृशी धीर्मम तन्त्रमिति खण्डनोक्तं निरस्तम् । यादृश्या शब्दे क्लृप्तदोषहीनया तव ब्रह्मणि सत्त्वसिद्धिस्तादृश्या प्रत्यक्षे क्लृप्तदोषरहितया मम जगति सत्त्वसिद्धेः । अन्यथा शुक्तिरूप्यादिप्रत्यक्षदृष्टान्तेन जगत्प्रत्यक्ष इव पूर्वपक्षिप्रतिपन्नश्रुत्यर्थदृष्टान्तेन त्वत्प्रतिपन्नेऽपि श्रुत्यर्थे दोषान्तरशङ्का, कालान्तर भाविबाधशङ्का च स्यात् । नापि परप्रसिद्धं सत्त्वं तन्त्रम् । तेन स्वार्थानुमानायोगात् । परार्थप्रयोगस्य च तत्पूर्वकत्वात् । परप्रसिद्धमात्रेण हेतुना वास्तवसाध्यासिद्धेश्च ।**

---

**अनित्यत्वेति ।।** प्रत्यक्ष रूपवत्त्वस्यानित्यत्व स्पर्शवत्त्व व्याप्यत्वात् । नच तमसि व्यभिचारान्न तस्य स्पर्शवत्त्वव्याप्यतेति वाच्यम् । तमसस्तेजोऽभावत्वपक्षे एवास्योपन्यासात् । नच दीपप्रभादौ व्यभिचारः । तस्याः गुणत्वोपगमादिति भावः ।। **एतेनेति ।।** गौरोऽहमित्यादिप्रतीतेः अनित्यत्वादिसाधकत्वापातेनेत्यर्थः । **लोकप्रसिद्धिरिति ।।** अबाधितत्वेन पृथग्जनप्रसिद्धिरित्यर्थः ।। **एतेनैवेति ।।** अतिप्रसङ्गेनैवेत्यर्थः । अतिप्रसङ्गमेवोपपादयति **निपुणेनेति ।। यादृश्येति ।।** अत्र धियेति शेषः ।। **अन्यथेति ।।** क्लृप्तदोषाभावनिश्चयेऽपि दोषान्तरशङ्कामात्रेण सत्त्वसिद्ध्यनङ्गीकार इत्यर्थः ।। **बाधशङ्का च स्यादिति ।।** तथाच ब्रह्मण्यपि सत्त्वसिद्धिः न स्यादिति भावः ।

ननु इदमनुमानं परार्थम् । तस्य चास्त्येव सत्त्वाभ्युपगम इत्याशङ्क्याह **नापीति ।। तेनेति ।।** त्वयापि साधकत्वेन एकं प्रयोजकमुक्तमिति भावः । ननु स्वार्थानुमानाभावे का क्षतिरित्यत आह **परार्थेति ।।** प्रयोगस्य ज्ञानपूर्वकत्वात् जगन्मिथ्यात्वे च प्रत्यक्षाभावात् तत्रानुमानमेव वाच्यमिति स्वार्थानुमानाभावे परार्थानुमानमपि न स्यादिति भावः । किञ्च व्याप्त्यादि किं सन्न वा । सच्चेत् तत्त्वेनानभ्युपगतमपि तवापि जनयेत् । असच्चेत् तत्त्वेनाभ्युपगतमपि परस्यापि न जनयेत् इति, अभ्युपगमानभ्युपगमयोः तत्रातन्त्रत्वादित्यभिप्रेत्याह

**परप्रसिद्धिमात्रेणेति ।।** तथाच अस्मत्पक्षे बाधकस्य त्वत्पक्षे साधकस्य वा कस्यचित् त्वया अनुपन्यासात् त्वां प्रति नास्माकं किञ्चित्प्रतिकर्तव्यमस्तीति भावः ।



**'ಗೌರೋಽಹಂ' 'ನೀಲಂ ನಭಃ' ಇತ್ಯಾದಿ ಭ್ರಾಂತಿಸಿದ್ಧೇನ ನೀಲತ್ವಾದಿನಾ ಆತ್ಮಾಕಾಶಾದೇರಪಿ ಅನಿತ್ಯತ್ವ ಸ್ಪರ್ಶವತ್ತ್ವಾದ್ಯಾಪಾತಾಚ್ಚ ।**

ಮೂರುನಾಲ್ಕು ಪರೀಕ್ಷೆಗಳಲ್ಲಿಯೂ ಅಬಾಧಿತವಾದ ಸತ್ವಪ್ರಕಾರಕ ಜ್ಞಾನವಿಷಯತ್ವವು ಸಾಧಕತ್ವಕ್ಕೆ ಪ್ರಯೋಜಕವೆಂದರೆ 'ನಾನು ಗೌರವರ್ಣದವನು', 'ಆಕಾಶ ನೀಲವಾಗಿದೆ' ಇತ್ಯಾದಿ ಭ್ರಾಂತಿಸಿದ್ಧವಾದ ಗೌರವರ್ಣನೀಲವರ್ಣಾದಿಗಳಿಂದ ಆತ್ಮನಿಗೆ ಅನಿತ್ಯತ್ವ ಮತ್ತು ಆಕಾಶಕ್ಕೆ ಸ್ಪರ್ಶವತ್ವ ಸಿದ್ಧಿಯಾದೀತೆಂದು ಅನಿಷ್ಟಾಪತ್ತಿ ಇದೆ. ಪ್ರತ್ಯಕ್ಷರೂಪವತ್ವವು ಅನಿತ್ಯತ್ವಕ್ಕೂ ಸ್ಪರ್ಶವತ್ವಕ್ಕೂ ವ್ಯಾಪ್ಯವಾಗಿದೆ.

ಯದ್ಯಪಿ ತಮಸಿನಲ್ಲಿ ಪ್ರತ್ಯಕ್ಷರೂಪವತ್ವವಿದೆ, ಸ್ಪರ್ಶವತ್ವವಿಲ್ಲ ಎಂದು ವ್ಯಭಿಚಾರವಿದೆ. ಆದರೂ ತಮಸ್ಸನ್ನು ತೇಜೋಽಭಾವರೂಪವೆನ್ನುವ ಪಕ್ಷದಲ್ಲಿ ತಮಸ್ಸಿನಲ್ಲಿ ವ್ಯಭಿಚಾರವಿಲ್ಲ. 'ದೀಪಪ್ರಭಾದಿಗಳಲ್ಲಿ, ಪ್ರತ್ಯಕ್ಷರೂಪವಿದ್ದರೂ ಸ್ಪರ್ಶವತ್ವವಿಲ್ಲವೆಂದು ವ್ಯಭಿಚಾರವೆ' ಎಂದರೆ ದೀಪ ಪ್ರಭೆಯಲ್ಲಿ ಸ್ಪರ್ಶವೂ ಇಲ್ಲ, ರೂಪವೂ ಇಲ್ಲ, ಅದನ್ನು ಗುಣವೆಂದು ಅಂಗೀಕರಿಸುತ್ತೇವೆ.

**'ಗೌರೋಹಂ' ಇತ್ಯಾದಾವಪಿ ತತ್‌ಕ್ಷ್ಯಾಸು ಪ್ರತ್ಯಕ್ಷಾಬಾಧಾತ್ । ಯೌಕ್ತಿಕಾದಿ-ಬಾಧಸ್ಯ ಚ ತ್ವನ್ಮತೇ ಪ್ರಕೃತೇಽಪಿ ಭಾವಾತ್ ।**

'ನಾನು ಗೌರವರ್ಣದವನೆಂ'ದು ಮುಂತಾದ ಸ್ಥಳದಲ್ಲಿ ಕೂಡ ಮೂರು ನಾಲ್ಕು ಪರೀಕ್ಷೆಗಳಲ್ಲಿ ಪ್ರತ್ಯಕ್ಷಕ್ಕೆ ಬಾಧವಿಲ್ಲ. ಆದರೂ ಸಾಧಕತ್ವವಿಲ್ಲ. 'ಪ್ರತ್ಯಕ್ಷ ಮಾತ್ರದಿಂದ ಅಬಾಧ ನನಗೆ ವಿವಕ್ಷಿತವಲ್ಲ, ಯಾವ ಬಾಧವೂ ಇರಕೂಡದು. 'ಆತ್ಮ ಆಕಾಶಗಳಲ್ಲಿ ರೂಪವಿಲ್ಲ ವಿಭುವಾದ್ದರಿಂದ' ಎಂದು 'ಅನುಮಾನ ಬಾಧವಿದೆ' ಎಂದರೆ ಅದು ಸರಿಯಲ್ಲ, ಪ್ರಪಂಚದಲ್ಲಿ, ಸತ್ವಪ್ರಕಾರಕಜ್ಞಾನಕ್ಕೂ ಕೂಡ ಅನುಮಾನ ಬಾಧವನ್ನು ನೀನೆ ಅಂಗೀಕರಿಸಿರುವೆ. ಅಂಗೀಕರಿಸಿರುವುದರಿಂದ ಬಾಧಸಾಮಾನ್ಯಾಭಾವ ನಿನ್ನ ಮತದಲ್ಲಿ ಇಲ್ಲದಿರುವುದರಿಂದ ದೃಶ್ಯತ್ವಾದಿ ಹೇತುಗಳಿಗೆ ಮಿಥ್ಯಾತ್ವಸಾಧಕತ್ವವಿಲ್ಲವಾದೀತು. ಕೇವಲ ಪ್ರತ್ಯಕ್ಷಬಾಧಾಭಾವವೇ ವಿವಕ್ಷಿತವೆನ್ನಬೇಕು. ವಿವಕ್ಷಿತವೆಂದರೆ 'ಗೌರೋಽಹಂ' ಇತ್ಯಾದಿ ಭ್ರಾಂತಿಸಿದ್ಧ ಗೌರತ್ವಾದಿಗಳಿಂದ ಆತ್ಮಾಕಾಶಗಳಿಗೆ ಅನಿತ್ಯತ್ವಾದಿ ಸಿದ್ಧವಾದೀತೆಂಬ ಆಪತ್ತಿ ನಿನಗೆ ಅಪರಿಹಾರ್ಯ.

**ಏತೇನ 'ಲೋಕಪ್ರಸಿದ್ಧಿಃ ತಂತ್ರಂ' ಇತಿ ಇಷ್ಟಸಿದ್ಧ್ಯುಕ್ತಂ ನಿರಸ್ತಂ ।**

'ಗೌರೋಹಂ' ಇತ್ಯಾದಿ ಪ್ರತೀತಿಗೆ ಬಾಧವಿಲ್ಲದಿರುವುದರಿಂದ ಅದು ಆತ್ಮನಿಗೆ ಅನಿತ್ಯತ್ವವನ್ನು ಆಕಾಶಕ್ಕೆ ಸ್ಪರ್ಶವತ್ವವನ್ನು ಸಾಧಿಸುತ್ತದೆ ಎಂದಾದೀತೆಂದು ಆಪತ್ತಿ ಅಪರಿಹಾರ್ಯವಾಗಿರುವುದ ರಿಂದಲೇ 'ಸತ್ವಪ್ರಕಾರಕ ಅಜ್ಞಲೋಕಪ್ರಸಿದ್ಧಿಯು ಸಾಧಕತ್ವಕ್ಕೆ ಪ್ರಯೋಜಕ' ಎಂದು ಇಷ್ಟಸಿದ್ಧಿಗ್ರಂಥದಲ್ಲಿ ಹೇಳಿದ್ದೂ ಅಯುಕ್ತವೆಂದಾಯಿತು. 'ಗೌರೋಹಂ' 'ನೀಲಂ ನಭಃ' ಇತ್ಯಾದಿ ಭ್ರಾಂತಿಸಿದ್ಧವಾದ ಗೌರತ್ವನೀಲತ್ವಾದಿಗಳೂ ಸತ್ವೇನ ಅಜ್ಞಲೋಕ ಪ್ರಸಿದ್ಧವೇ ಆಗಿವೆ.

**ಏತೇನೈವ 'ತ್ರಿಚತುರ ಕಕ್ಷ್ಯಾಸು ಅಬಾಧಿತಾ ವಾದಿಪ್ರತಿವಾದಿ ಪ್ರಾಶ್ನಿಕಾನಾಂ ಸತ್ವಧೀಃ ತಂತ್ರ' ಇತಿ ನಿರಸ್ತಂ। ನಿಪುಣೇನ ಬೌದ್ಧೇನೋಕ್ತ ಧೀವಿಷಯ ವ್ಯಾಪ್ಯಾದಿಮತ್ತ್ವೇನ ವ್ಯತ್ಪಾದಿತೈಃ ಶೂನ್ಯಾದ್ವೈತಾದಿ ಹೇತುಭಿಃ ತತ್‌ಸಿದ್ಧ್ಯಾಪಾತಾತ್।**

'ಮೂರು ನಾಲ್ಕು ಪರೀಕ್ಷೆಗಳಲ್ಲಿಯೂ ಅಬಾಧಿತವಾಗಿರುವ ವಾದಿ ಪ್ರತಿವಾದಿ ಮಧ್ಯಸ್ಥರ ಸತ್ವಪ್ರಕಾರಕ ಜ್ಞಾನವಿಷಯತ್ವವು ಸಾಧಕತ್ವಕ್ಕೆ ಪ್ರಯೋಕ' ಎನ್ನುವುದೂ ಈ ಅನಿಷ್ಟಾಪತ್ತಿಯಿಂದಲೆ ನಿರಸ್ತವಾಯಿತು. ಏಕೆಂದರೆ ವಾದನಿಪುಣನಾದ ಬೌದ್ಧನು 'ಶೂನ್ಯವು ಅದ್ವಿತೀಯವಾದ ತತ್ವ' ಎಂಬ ವಿಷಯದಲ್ಲಿ ಹೇತುಗಳನ್ನು ಅಬಾಧಿತಜ್ಞಾನ ವಿಷಯವ್ಯಾಪ್ಯಾದಿ ಉಳ್ಳವುಗಳೆಂದು ಸಮರ್ಥಿಸಿ ದಾಗ, ವಾದಿ ಪ್ರತಿವಾದಿ ಮಧ್ಯಸ್ಥರೆಲ್ಲರೂ ಅವುಗಳನ್ನು ಸದ್ಧೇತುಗಳೆಂದು ಒಪ್ಪಿಕೊಳ್ಳಬಹುದು. ಮೂರುನಾಲ್ಕು ಪರೀಕ್ಷೆಗಳಲ್ಲಿ ಅಬಾಧಿತವಾಗಿರುವ ಈ ಸತ್ವಪ್ರಕಾರಕಜ್ಞಾನವಿಷಯತ್ವವಿರುವುದ ರಿಂದ ಆ ಹೇತುಗಳಿಗೆ ಶೂನ್ಯಾದ್ವೈತ ಸಾಧಕತ್ವವಿದೆ ಎನ್ನಬೇಕಾದೀತು.

**ಏತೇನೈವ 'ಯಾದೃಶ್ಯಾ ತವ ಸತ್ವಸಿದ್ಧಿಃ ತಾದೃಶೀ ಧೀಃ ಮಮ ತಂತ್ರಂ' ಇತಿ ಖಂಡನೋಕ್ತಂ ನಿರಸ್ತಂ। ಯಾದೃಶ್ಯಾ ಶಬ್ದೇ ಕ್ಲೃಪ್ತದೋಷ ಹೀನಯಾ ತವ ಬ್ರಹ್ಮಣಿ ಸತ್ವಸಿದ್ಧಿಃ ತಾದೃಶ್ಯಾ ಪ್ರತ್ಯಕ್ಷೇ ಕ್ಲೃಪ್ತದೋಷರಹಿತಯಾ ಮಮ ಜಗತಿ ಸತ್ವಸಿದ್ಧೇಃ।**

ಖಂಡನಗ್ರಂಥಕಾರ ಹೇಳುತ್ತಾನೆ, 'ಅಹಂ ಗೌರಃ' 'ನೀಲಂ ಆಕಾಶಂ' ಎಂದು ಮುಂತಾದ ಪ್ರತೀತಿಗಳಿಂದ ವಿಲಕ್ಷಣವಾದ ಯಾವ ರೀತಿಯ ಪ್ರತೀತಿಯಿಂದ ನಿನಗೆ ಘಟಾದಿಗಳಿಗೆ ಸತ್ವವು ಸಿದ್ಧವಾಗುವುದೋ ಆ ರೀತಿಯ ಪ್ರತೀತಿಯು ನನಗೆ ಮಿಥ್ಯಾತ್ವಸಾಧಕತ್ವಕ್ಕೆ ಪ್ರಯೋಜಕ ಎನ್ನುತ್ತೇನೆ' ಎಂದು.

ಇದಕ್ಕೆ ನಾವು ಹೇಳುತ್ತೇವೆ 'ನಿನಗೆ ಶಬ್ದದಲ್ಲಿ ಕ್ಲೃಪ್ತವಾದ ಅರ್ಥಬಾಧಾದಿ ದೋಷರಹಿತ ವಾದ ಯಾವರೀತಿಯ ಪ್ರತೀತಿಯಿಂದ ಬ್ರಹ್ಮನಲ್ಲಿ ಪಾರಮಾರ್ಥಿಕ ಸತ್ವವು ಸಿದ್ಧವಾಗುವುದೋ, ಪ್ರತ್ಯಕ್ಷದಲ್ಲಿ ಕ್ಲೃಪ್ತವಾದ ದೂರಾದಿ ದೋಷರಹಿತವಾದ ಆ ರೀತಿಯ ಪ್ರತೀತಿಯಿಂದಲೇ ಪ್ರತ್ಯಕ್ಷದಿಂದ ನನಗೆ ಘಟಾದಿಗಳಲ್ಲಿ ಸತ್ವಸಿದ್ಧಿಯಾಗುವುದು. ಇದು ಪಾರಮಾರ್ಥಿಕಸತ್ವ ಪ್ರಕಾರಕ ಪ್ರತೀತಿ. ಇದರಿಂದಲೇ ಘಟಾದಿಸತ್ವ ಸಾಧಕತ್ವವು ಪ್ರತ್ಯಕ್ಷಾದಿಗಳಿಗೆ ಬರುತ್ತದೆ ಎನ್ನುತ್ತೇವೆ' ಎಂದು.

**ಅನ್ಯಥಾ ಶುಕ್ತಿರೂಪ್ಯಾದಿ ಪ್ರತ್ಯಕ್ಷ ದೃಷ್ಟಾಂತೇನ ಜಗತ್‌ಪ್ರತ್ಯಕ್ಷೇ ಇವ, ಪೂರ್ವಪಕ್ಷಿ**

**ಪ್ರತಿಪನ್ನ ಶ್ರುತ್ಯರ್ಥದೃಷ್ಟಾಂತೇನ ತ್ವತ್‌ಪ್ರತಿಪನ್ನೇಽಪಿ ಶ್ರುತ್ಯರ್ಥೇ ದೋಷಾಂತರಶಂಕಾ ಕಾಲಾಂತರಭಾವಿಬಾಧಶಂಕಾ ಚ ಸ್ಯಾತ್ ।**

'ಪ್ರತ್ಯಕ್ಷದಲ್ಲಿ ಕ್ಲಪ್ತವಾದ ದೂರಾದಿ ದೋಷಾಭಾವವಿದ್ದರೂ ಶುಕ್ತಿರೂಪ್ಯ ಪ್ರತ್ಯಕ್ಷ ದೃಷ್ಟಾಂತ ದಿಂದ ಜಗತ್‌ಪ್ರತ್ಯಕ್ಷದಲ್ಲಿ ಬೇರೇ ದೋಷವಿರುವುದು ಅನುಮಾನದಿಂದ ಸಿದ್ಧವಾಗುತ್ತದೆ. ಅದ್ವೈತ ಶ್ರುತಿಯು ಅಪೌರುಷೇಯವಾದ್ದರಿಂದ ಯಾವ ದೋಷವನ್ನೂ ಅನುಮಾನ ಮಾಡಲಾಗದು. ಹೀಗಾಗಿ ಶಬ್ದದಿಂದ ಬ್ರಹ್ಮನಲ್ಲಿ ಪಾರಮಾರ್ಥಿಕಸತ್ವವು ಸಿದ್ಧವಾಗುವುದು. ಪ್ರತ್ಯಕ್ಷದಿಂದ ಜಗತ್ತಿನಲ್ಲಿ ಪಾರಮಾರ್ಥಿಕಸತ್ವವು ಸಿದ್ಧವಾಗದು'—ಎಂದು ಅದ್ವೈತಿ ಹೇಳಿದರೆ, ನಾವು ಹೇಳುತ್ತೇವೆ—

ಶುಕ್ತಿರೂಪ್ಯ ಪ್ರತ್ಯಕ್ಷ ದೃಷ್ಟಾಂತ ಮಾತ್ರದಿಂದ ಜಗತ್‌ಪ್ರತ್ಯಕ್ಷದಲ್ಲಿಯೂ ದೋಷಾಂತರವನ್ನು 'ಪ್ರತ್ಯಕ್ಷತ್ವಾತ್' ಎಂಬ ಹೇತುವಿನಿಂದ ಅನುಮಾನ ಮಾಡುವಿಯಾದರೆ ಪೂರ್ವಪಕ್ಷಿಯು ಹೇಳುವ ಶ್ರುತ್ಯರ್ಥ ದೃಷ್ಟಾಂತ ಮಾತ್ರದಿಂದ 'ಶಬ್ದತ್ವಾತ್' ಎಂಬ ಹೇತುವಿನಿಂದಲೇ ನೀನು ಹೇಳುವ ಬ್ರಹ್ಮಸತ್ವರೂಪ ಶ್ರುತ್ಯರ್ಥದಲ್ಲಿ ದೋಷಾಂತರವನ್ನೂ ಭಾವಿಬಾಧಶಂಕೆಯನ್ನೂ ನಾವು ಅನುಮಾನ ಮಾಡುತ್ತೇವೆ. ಅದರಿಂದ ಪ್ರತ್ಯಕ್ಷದಂತೆ ಶ್ರುತಿಯಿಂದಲೂ ಬ್ರಹ್ಮನಲ್ಲಿ ಪಾರಮಾರ್ಥಿಕಸತ್ವಸಿದ್ಧಿಯು ಅಶಕ್ಯ ವೆಂದಾಗುವುದು.

**ನಾಪಿ ಪರಪ್ರಸಿದ್ಧಂ ಸತ್ವಂ ತಂತ್ರಂ । ತೇನ ಸ್ವಾರ್ಥಾನುಮಾನಾಯೋಗಾತ್ । ಪರಾರ್ಥ ಪ್ರಯೋಗಸ್ಯ ಚ ತತ್‌ಪೂರ್ವಕತ್ವಾತ್ । ಪರಪ್ರಸಿದ್ಧಮಾತ್ರೇಣ ಹೇತುನಾ ವಾಸ್ತವ ಸಾಧ್ಯಾಸಿದ್ಧೇಶ್ಚ ।**

'ವಾದದಲ್ಲಿ ಪರನಿಗೆ ಸಿದ್ಧವಾದ ಸತ್ವವೇ ವಾದಿಯು ನಾನು ಪ್ರಯೋಗಿಸುವ ಹೇತುವಿಗೆ ಸಾಧಕತ್ವ ಬರಲು ಪ್ರಯೋಜಕವಾಗುತ್ತದೆ. ಅದರಿಂದ ನಾನು ಅಸತ್ತಿಗೆ ಸಾಧಕತ್ವವಿದೆ ಎನ್ನುತ್ತೇನೆ' ಎಂದು ಅದ್ವೈತಿ ಹೇಳಿದರೆ ನಾವು ಹೇಳುತ್ತೇವೆ—ಪರನಿಗೆ ಸಿದ್ಧವಾದ ಸತ್ವವು ನಿನಗೆ ಸ್ವಾರ್ಥಾನುಮಾನ ಮಾಡುವಾಗ ಹೇತುವಿನಲ್ಲಿ ಸಾಧಕತ್ವಕ್ಕೆ ಪ್ರಯೋಜಕವಾಗದು.

'ನಾನು ಸ್ವಾರ್ಥಾನುಮಾನ ಮಾಡುವುದೇ ಇಲ್ಲ' ಎಂದರೆ, ನಿನಗೆ ಹೇತ್ವಾದಿಜ್ಞಾನ ಬರಲು ನೀನು ಸ್ವಾರ್ಥಾನುಮಾನ ಮಾಡಲೇಬೇಕು. ಪರಾರ್ಥಾನುಮಾನ ಪ್ರಯೋಗ ಮಾಡುವುದಕ್ಕೆ ಮೊದಲು ತಾನು ಸ್ವಾರ್ಥಾನುಮಾನ ಮಾಡಿರಬೇಕು.

'ಪರಪ್ರಸಿದ್ಧ' ವಾದ ಹೇತುವಿನಿಂದಲೆ ನಾನು ಸ್ವಾರ್ಥಾನುಮಾನ ಮಾಡುತ್ತೇನೆ' ಎಂದರೆ ಪರಪ್ರಸಿದ್ಧ ಸತ್ವಯುಕ್ತವಾದ ದೃಶ್ಯತ್ವಹೇತುವಿನಿಂದ ನಿನಗೆ ವಾಸ್ತವ ಸಾಧ್ಯವಾದ ಮಿಥ್ಯಾತ್ವ ಸಿದ್ಧವಾಗದು. ಸಿದ್ಧವಾಗುವುದಾದರೆ ಪರಪ್ರಸಿದ್ಧ ಹೇತುವಿನಿಂದ ನಿನಗೆ ಜಗತ್ತಿನಲ್ಲಿ ವಾಸ್ತವ ಸಪ್ತಭಂಗಿತ್ವ ಸಿದ್ಧವಾದೀತು.

ಮತ್ತು ವ್ಯಾಪ್ಯಾದಿಗಳು ಸತ್ ಆಗಿವೆಯೆ ಇಲ್ಲವೆ? 'ಸತ್ ಆಗಿವೆ' ಎನ್ನುವೆಯಾದರೆ 'ಸತ್'

ಎಂದು ಒಪ್ಪದಿರುವ ನಿನಗೂ ಅವು ಸಪ್ತಭಂಗ್ಯನುಮಾನ ಉಂಟು ಮಾಡುತ್ತವೆ. 'ಅಸತ್' ಆಗಿವೆ ಎನ್ನುವೆಯಾದರೆ ಅಸತ್ತೆಂದು ನೀನು ಒಪ್ಪಿದರೂ ಪರನಿಗೂ ಕೂಡ ಮಿಥ್ಯಾತ್ವಾನುಮಾನವನ್ನುಂಟು ಮಾಡಲಾರದು. ಇಲ್ಲಿ ಒಪ್ಪುವುದು ಬಿಡುವುದು ಸಾಧಕತ್ವಕ್ಕೆ ಪ್ರಯೋಜಕವಾಗುವುದಿಲ್ಲ. ಅದರಿಂದ ಪರಪ್ರಸಿದ್ಧ ಮಾತ್ರದಿಂದ ಸ್ವಾರ್ಥಾನುಮಾನ ಮಾಡುವುದು ಶಕ್ಯವಿಲ್ಲ. ನಮ್ಮ ಪಕ್ಷದಲ್ಲಿ ಬಾಧಕವನ್ನಾಗಲಿ ನಿನ್ನ ಪಕ್ಷದಲ್ಲಿ ಸಾಧಕವನ್ನಾಗಲಿ ಏನನ್ನೂ ನೀನು ಹೇಳಿದಂತಾಗುವುದಿಲ್ಲ. ಅದರಿಂದ ನಾವು ನಿನಗೆ ಪ್ರತಿಯಾಗಿ ಹೇಳಲು ಏನೂ ಇಲ್ಲ.



न च मिथ्यात्वमपि परीत्यैव न तु वास्तवमिति वाच्यम् । बौद्धरीत्या मिथ्याभूतस्यात्मन इव जगतो वस्तुतस्सत्त्वापातात् । मिथ्यात्वस्य तत्त्वावेदकश्रुति वेद्यत्वाच्च । तदुक्तं वार्तिके बौद्धं प्रति-

योऽपि तावत्परासिद्धः स्वयंसिद्धोऽभिधीयते ।
भवेत्तत्र प्रतीकारः स्वतोऽसिद्धे तु का क्रिया ।। इति ।

नापि व्यावहारिकं सत्त्वं तन्त्रम् । प्रपञ्चमिथ्यात्वसिद्धेः प्राक् तदसिद्ध्याऽन्योन्याश्रयापातात् । प्रातिभासिकेन हेतुव्याप्त्यादिना व्यावहारिकसाध्यसिद्ध्यदर्शनेन हेतुव्याप्त्यादेरनुमिति विषय समसत्ताकत्व नियमेन व्यावहारिकेण पारमार्थिकासिद्धेश्च । किञ्च व्यावहारिक सत्त्वस्याबाध्यत्वरूपसत्त्वविशेषत्वेऽस्मदिष्टसिद्धिः । सत्त्वेन व्यवहारमात्रत्वे चोक्तदोषाः । भ्रान्तेर्बहुकालानु वृत्तिश्चाप्रयोजिका । तथाच

व्यावहार्यं यदा सत्त्वमस्माकं तर्हि का क्षतिः ।
नचेदसत्साधकत्वं नास्तीत्यत्र किमागतम् ।।

तदुक्तं वार्तिके बौद्धं प्रति-

तस्माद्यन्नास्ति नास्त्येव यच्चास्ति परमार्थतः ।
तत्सत्यमन्यन्मिथ्यैव न सत्यद्वयकल्पना ।।

**तुल्यार्थत्वेऽपि तेनैव मिथ्यासंवृतिशब्दयोः ।**
**वञ्चनार्थमुपन्यासो लालावक्त्रासवादिवत् ।। इति ।**

---

यक्षानुरूपो बलिरिति न्यायेन आशङ्क्याह **नचेति ।। मिथ्यात्वस्येति ।।** यथा चैतत्तथोपपादितमधस्तात् ।। **का क्रियेति ।।** का प्रतिक्रियेत्यर्थः ।

ननु वस्त्वन्योन्याश्रयो नास्त्येव । ज्ञप्तौ तु व्यावहारिकसत्वस्य अज्ञातस्यैव प्रयोजकत्वात् नान्योन्याश्रय इत्यत आह **प्रातिभासिकेनेति ।।** यद्यपि कूटलिङ्गजन्यानुमितिस्थले यादृच्छिकसंवाददर्शनात् तत्र प्रातिभासिकेनापि व्याप्त्यादिना व्यावहारिक साध्यसिद्धिर्दृश्यत इति हेतुव्याप्त्यादेरनुमिति विषय समसत्ताकत्व नियमोऽसिद्धः । तथापि प्रामाणिकविभाजकोपाध्यवच्छिन्नानुमितिविषय समसत्ताकत्व नियमो न हेतुव्याप्त्यादेरसिद्ध इति द्रष्टव्यम् ।। **उक्तदोषा इति ।।** बुद्धिसत्त्वपक्षे उक्तदोषा अत्रानुसंधेया इत्यर्थः ।

ननु बहुकालानुवृत्ता सा साधिका । न त्वेककालीनेत्यत आह **भ्रान्तेरिति ।।** क्वचित् प्रातिभासिकेऽपि तथा संभवादिति भावः ।। **असत्साधकत्वमिति ।।** असतः साधकत्वमित्यर्थः ।। **तेनेति ।।** अभिन्नार्थत्वेनेत्यर्थः ।। एष उपन्यास इति संबन्धः ।। **लालावक्त्रासवादिवदिति ।।** लालावक्त्रासवशब्दयोरिवेत्यर्थः ।



**ನ ಚ ಮಿಥ್ಯಾತ್ವಮಪಿ ಪರರೀತ್ಯೈವ । ನ ತು ವಾಸ್ತವಂ ಇತಿ ವಾಚ್ಯಂ । ಬೌದ್ಧರೀತ್ಯಾ ಮಿಥ್ಯಾಭೂತಸ್ಯ ಆತ್ಮನ ಇವ, ಜಗತೋಽ ವಸ್ತುತಃ ಸತ್ತ್ವಾಪಾತಾತ್ । ಮಿಥ್ಯಾತ್ವಸ್ಯ ತತ್ತ್ವಾವೇದಕ ಶ್ರುತಿವೇದ್ಯತ್ವಾಚ್ಚ ।**

'ಪರಪ್ರಸಿದ್ಧ ಹೇತುವಿನಿಂದ ನನಗೆ ವಾಸ್ತವ ಸಾಧ್ಯಸಿದ್ಧವಾಗದೆನ್ನುತ್ತೀರಿ. ಆದರೆ ಹೇತುವಿನಂತೆ, 'ಯಕ್ಷಾನುರೂಪ ಅದಕ್ಕೆ ನೀಡುವ ಬಲಿ' ಎಂಬ ನ್ಯಾಯದಂತೆ ಸಾಧ್ಯವಾದ ಮಿಥ್ಯಾತ್ವವೂ ಪರರೀತಿಯಿಂದಲೇ ಹೊರತು ವಾಸ್ತವವಲ್ಲ. 'ವಾಸ್ತವಸಾಧ್ಯ ಸಿದ್ಧವಾಗದೆಂ'ದು ಆಪಾದಿಸಿದರೆ ನನಗೆ ಇಷ್ಟಾಪತ್ತಿ' ಎನ್ನುತ್ತಾನೆ ಅದ್ವೈತಿ. ನಾವು ಹೇಳಬೇಕು—

ಹಾಗಾದರೆ ಬೌದ್ಧರೀತ್ಯಾ ಮಿಥ್ಯಾಭೂತನಾದ ಆತ್ಮ ನಿನಗೆ ಮಿಥ್ಯಾ ಎಂದು

ಸಿದ್ಧನಾಗದಿರುವುದರಿಂದ ಸತ್ಯನಾಗುವಂತೆ, ಬೌದ್ಧರೀತ್ಯಾ ಬೌದ್ಧನಿಗೆ ಜಗನ್‌ಮಿಥ್ಯಾತ್ವ ಸಿದ್ಧವಾದರೂ ನಿನಗೆ ಜಗನ್‌ಮಿಥ್ಯಾತ್ವ ಸಿದ್ಧವಾಗದಿರುವುದರಿಂದ ಜಗತ್ತು ನಿನಗೆ ಸತ್ಯವಾಗಬೇಕಾದೀತು. 'ಮಿಥ್ಯಾತ್ವವು ಬೌದ್ಧರೀತಿಯಿಂದ ಬೌದ್ಧನಿಗೇ ಸಿದ್ಧವಾಗುವುದು' ಎಂದು ಹೇಳಿದರೆ ನಿನಗೆ ಮಿಥ್ಯಾತ್ವವು ತತ್ವಾವೇದಕ ಶ್ರುತಿವೇದ್ಯವಾಗಲಾರದು. ಆದರೆ ತತ್ವಾವೇದಕಶ್ರುತಿವೇದ್ಯವೆಂದೇ ನೀನು ಒಪ್ಪಿರುವೆ.

**ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ—**

**ಯೋಽಪಿ ತಾವತ್ ಪರಾಸಿದ್ಧಃ ಸ್ವಯಂಸಿದ್ಧೋಽಭಿಧೀಯತೇ ।**
**ಭವೇತ್ ತತ್ರ ಪ್ರತೀಕಾರಃ ಸ್ವತೋಽಸಿದ್ಧೇ ತು ಕಾ ಕ್ರಿಯಾ? ಇತಿ ।**

'ಯಾವ ಪ್ರಮೇಯವು ಪರನಿಗೆ ಅಸಿದ್ಧವಾಗಿದ್ದು ತನಗೆ ಸಿದ್ಧವಾಗಿರುವುದೋ ಅದನ್ನು ಪ್ರತಿವಾದಿ ಹೇಳಿದರೆ ಅದರ ಮೇಲೆ ಆಕ್ಷೇಪ ಮಾಡಲು ಶಕ್ಯವಾದೀತು. ತನಗೇ ಅದು ಅಸಿದ್ಧವೆಂದು ಅವನು ಹೇಳಿದರೆ ಅದರ ಮೇಲೆ ನೀನು ಏನು ಆಕ್ಷೇಪ ಮಾಡಬೇಕಾಗುತ್ತದೆ?' ಎಂದು ವಾರ್ತಿಕದಲ್ಲಿ ಬೌದ್ಧನಿಗೆ ಹೇಳುತ್ತಾರೆ.

**ನಾಪಿ ವ್ಯಾವಹಾರಿಕಂ ಸತ್ವಂ ತಂತ್ರಂ। ಪ್ರಾತಿಭಾಸಿಕೇನ ಹೇತುವ್ಯಾಪ್ತ್ಯಾದಿನಾ ವ್ಯಾವಹಾರಿಕಸಾಧ್ಯ ಸಿದ್ಧ್ಯದರ್ಶನೇನ ಹೇತುವ್ಯಾಪ್ತ್ಯಾದೇಃ ಅನುಮಿತಿ ವಿಷಯ ಸಮಸತ್ತಾಕತ್ವ ನಿಯಮೇನ ವ್ಯಾವಹಾರಿಕೇಣ ಪಾರಮಾರ್ಥಿಕಾಸಿದ್ಧೇಶ್ಚ।**

ವ್ಯಾವಹಾರಿಕ ಸತ್ವವು ಸಾಧಕತ್ವಕ್ಕೆ ಪ್ರಯೋಜಕವೆಂದೂ ಹೇಳಲಾಗದು. ಏಕೆಂದರೆ ಪ್ರಪಂಚ ಮಿಥ್ಯಾತ್ವ ಸಿದ್ಧವಾಯಿತೆಂದರೆ ಆಗ ವ್ಯಾವಹಾರಿಕಸತ್ವವೆಂಬುದು ಸಿದ್ಧವಾಗುವುದು. ಅದು ಸಾಧಕತ್ವಕ್ಕೆ ಪ್ರಯೋಜಕವೆಂದಾಗುವುದು. ಆಗಲೇ ವ್ಯಾವಹಾರಿಕಸತ್ತಾದ ದೃಶ್ಯತ್ವಾದಿ ಹೇತುವಿನಿಂದ ಮಿಥ್ಯಾತ್ವಸಿದ್ಧಿಯಾಗುವುದು. ಹೀಗೆ ಅನ್ಯೋನ್ಯಾಶ್ರಯತ್ವದೋಷ ಬರುವುದು.

ಪ್ರಾತಿಭಾಸಿಕವಾದ ಹೇತು ವ್ಯಾಪ್ತ್ಯಾದಿಗಳಿಂದ ವ್ಯಾವಹಾರಿಕಸಾಧ್ಯ ಸಿದ್ಧವಾಗುವುದು ಕಂಡಿಲ್ಲವಾದ್ದರಿಂದ ಹೇತುವ್ಯಾಪ್ತ್ಯಾದಿಗಳು ಅನುಮಿತಿ ವಿಷಯಕ್ಕೆ ಸಮಸತ್ತಾಕವಾಗಿರಬೇಕೆಂಬ ನಿಯಮವಿರುವಕಾರಣ, ವ್ಯಾವಹಾರಿಕ ದೃಶ್ಯತ್ವಹೇತುವಿನಿಂದ ಪಾರಮಾರ್ಥಿಕ ಮಿಥ್ಯಾತ್ವ ಸಿದ್ಧವಾಗದು.

'ವ್ಯಾವಹಾರಿಕ ಸತ್ವಸಿದ್ಧಿ ಮಿಥ್ಯಾತ್ವಸಿದ್ಧಿಗಳಿಗೆ ವಸ್ತ್ವನ್ಯೋನ್ಯಾಶ್ರಯವಿಲ್ಲ. ಜ್ಞಪ್ತಿಯಲ್ಲಿ ಅನ್ಯೋನ್ಯಾಶ್ರಯವನ್ನು ಹೇಳುವಂತಿಲ್ಲ. ವ್ಯಾವಹಾರಿಕ ಸತ್ವವು ಅಜ್ಞಾತವಾಗಿಯೇ ಸಾಧಕತ್ವಕ್ಕೆ ಪ್ರಯೋಜಕ' ಎಂದು ಅದ್ವೈತಿ ಹೇಳಿದರೆ ಅದು ಅಯುಕ್ತವೆ. ವ್ಯಾವಹಾರಿಕ ಸತ್ವವು ಜ್ಞಾತವಾಗಿಯಾಗಲಿ ಅಜ್ಞಾತವಾಗಿಯಾಗಲಿ ಪಾರಮಾರ್ಥಿಕ ಸಾಧ್ಯಸಿದ್ಧಿಗೆ ಸಾಧಕವಾಗಲಾರದು. ಸಾಧಕವಾಗುವುದಾದರೆ ಪ್ರಾತಿಭಾಸಿಕಸತ್ವವು ವ್ಯಾವಹಾರಿಕ ಸಾಧ್ಯಸಾಧನೆಯಲ್ಲಿ ಪ್ರಯೋಜಕ ವಾದೀತು.

ಯದ್ಯಪಿ ಕೂಟಲಿಂಗದಿಂದ ಅಂದರೆ ವಂಚನೆಗಾಗಿ ಹೇಳಿದ ಹೇತ್ವಾಭಾಸದಿಂದ ಅನುಮಿತಿ ಬಂದಾಗ ಕೆಲವೊಮ್ಮೆ ಯಾದೃಚ್ಛಿಕ ಸಂವಾದ ಕಂಡಿದೆ. ಅಲ್ಲಿ ಪ್ರಾತಿಭಾಸಿಕ ಹೇತುವ್ಯಾಪ್ತ್ಯಾದಿಗಳಿಂದ ವ್ಯಾವಹಾರಿಕಸಾಧ್ಯ ಸಿದ್ಧವಾಗುವುದು ಕಂಡಿದೆ. ಆದರಿಂದ ಹೇತುವ್ಯಾಪ್ತ್ಯಾದಿಗಳಿಗೆ ಅನುಮಿತಿ ವಿಷಯ ಸಮಸತ್ತಾಕತ್ವನಿಯಮ ಅಸಿದ್ಧ ಎಂದು ಆಕ್ಷೇಪ ಬರಬಹುದು.

ಆದರೆ ಕೂಟಲಿಂಗಜನ್ಯ ಅನುಮಿತಿಯು ಅಪ್ರಾಮಾಣಿಕವಾದ ಅಪ್ರಮಾಣಜನ್ಯ ಅನುಮಿತಿತ್ವ ವಿಶಿಷ್ಟವಾಗಿದೆ. ಪ್ರಾಮಾಣಿಕವಿಭಾಜಕೋಪಾಧಿಯಾದ ಅನುಮಿತಿತ್ವದಿಂದ ವಿಶಿಷ್ಟವಾದ ಅನುಮಿತಿಯ ವಿಷಯಕ್ಕೆ ಹೇತುವ್ಯಾಪ್ತ್ಯಾದಿಗಳು ಸಮಸತ್ತಾಕವೇ ಆಗಿರುತ್ತವೆ ಎಂದು ನಿಯಮ. ಈ ನಿಯಮಕ್ಕೆ ವ್ಯಭಿಚಾರವಿಲ್ಲ.

**ಕಿಂಚ ವ್ಯಾವಹಾರಿಕಸತ್ತ್ವಸ್ಯ ಅಬಾಧ್ಯತ್ವರೂಪಸತ್ತ್ವವಿಶೇಷತ್ವೇ ಅಸ್ಮದಿಷ್ಟಸಿದ್ಧಿಃ। ಸತ್ತ್ವೇನ ವ್ಯವಹಾರಮಾತ್ರತ್ವೇ ಚ ಉಕ್ತದೋಷಾಃ।**

ವ್ಯಾವಹಾರಿಕಸತ್ತ್ವವೆಂದರೆ ಅಬಾಧ್ಯತ್ವರೂಪಸತ್ತ್ವದಲ್ಲಿಯೇ ಒಂದು ಪ್ರಭೇದ ಎನ್ನುವುದಾದರೆ ನಮಗೆ ಅದು ಇಷ್ಟವೆ. ಸತ್ ಎಂದು ವ್ಯವಹಾರ ಮಾತ್ರ, ವಸ್ತುತಃ ಸತ್ತ್ವವಿಲ್ಲ ಎಂದರೆ 'ದೃಶ್ಯತ್ವಾದಿ ಹೇತುಗಳಿಗೆ ಸತ್ತ್ವವಿಲ್ಲ, ಸ್ವರೂಪಾಸಿದ್ಧಿ ಎಂದಾಗುವುದು. ವ್ಯಾಪ್ತಿ ಇಲ್ಲದ್ದರಿಂದ ವ್ಯಾಪ್ಯತ್ವಾಸಿದ್ಧಿ ದೋಷವೂ ಬರುವುದು' ಎಂದು ಹಿಂದೆ ಹೇಳಿದ ದೋಷಗಳೇ ಬರುವುವು.

**ಭ್ರಾಂತೇಃ ಬಹುಕಾಲಾನುವೃತ್ತಿಶ್ಚ ಅಪ್ರಯೋಜಿಕಾ। ತಥಾಚ—**

**ವ್ಯಾವಹಾರ್ಯಂ ಯದಾ ಸತ್ತ್ವಂ ಅಸ್ಮಾಕಂ ತರ್ಹಿ ಕಾ ಕ್ಷತಿಃ ?**
**ನಚೇದಸತ್ಸಾಧಕತ್ವಂ ನಾಸ್ತೀತ್ಯತ್ರ ಕಿಮಾಗತಂ ॥**

**ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ—**

**ತಸ್ಮಾದ್ ಯನ್ನಾಸ್ತಿ ನಾಸ್ತ್ಯೇವ ಯಚ್ಚಾಸ್ತಿ ಪರಮಾರ್ಥತಃ**
**ತತ್ ಸತ್ಯಮನ್ಯನ್ಮಿಥ್ಯೈವ ನ ಸತ್ಯದ್ವಯಕಲ್ಪನಾ।**
**ತುಲ್ಯಾರ್ಥತ್ವೇಽಪಿ ತೇನೈಷ ಮಿಥ್ಯಾಸಂವೃತಿಶಬ್ದಯೋಃ**
**ವಂಚನಾರ್ಥಮುಪನ್ಯಾಸೋ ಲಾಲಾವಕ್ತ್ರಾಸವಾದಿವತ್ ॥ ಇತಿ।**

'ಬಹುಕಾಲದವರೆಗೂ ಭ್ರಾಂತಿ ಮುಂದುವರಿಯುವುದೇ 'ವ್ಯಾವಹಾರಿಕಸತ್ತ್ವ'ದ ಅರ್ಥ. ಬ್ರಹ್ಮಜ್ಞಾನ ಬರುವ ಪರ್ಯಂತ ಭ್ರಾಂತಿಗೆ ಬಾಧವಿಲ್ಲದಿರುವುದರಿಂದ ವ್ಯಾವಹಾರಿಕಸತ್ತ್ವವು ಸಾಧಕತ್ವಕ್ಕೆ ಪ್ರಯೋಜಕವಾಗುವುದು. ಶುಕ್ತಿರೂಪ್ಯಾದಿ ಭ್ರಾಂತಿ ತತ್ಕಾಲದಲ್ಲಿಯೇ ಪರೀಕ್ಷೆಯಿಂದ ಬಾಧಿತವಾಗುತ್ತದೆ. ಅದು ಸಾಧಕತ್ವಕ್ಕೆ ಪ್ರಯೋಜಕವಾಗುವುದಿಲ್ಲ' ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. 'ಗೌರೋಹಂ' 'ನೀಲಂ ನಭಃ' ಇತ್ಯಾದಿ ಸ್ಥಳದಲ್ಲಿರುವ ದೀರ್ಘಭ್ರಾಂತಿಯು ಸಾಧಕವಲ್ಲ. ಆದರಿಂದ ಭ್ರಾಂತಿ ಬಹುಕಾಲ ಇರುವುದು ಸಾಧಕತ್ವಕ್ಕೆ ಅಪ್ರಯೋಜಕ. ತಥಾಚ ಈ ವಿಚಾರದ ಸಾರಾಂಶವಿಷ್ಟು—

ಸಾಧಕತ್ವಕ್ಕೆ ಪ್ರಯೋಜಕವಾದ ಸತ್ವವು ವ್ಯವಹಾರದಿಂದ ಸಿದ್ಧವಾದ ಅಬಾಧ್ಯತ್ವವೇ ಆಗಿದ್ದಲ್ಲಿ ನಮಗೆ ಅದು ಇಷ್ಟವೆ, ಅದರಿಂದ ನಮಗೇನು ನಷ್ಟವಾಗುವುದು? 'ನಚೇತ್' ಸತ್ವೇನ ವ್ಯವಹಾರವೇ ಹೊರತು ವಸ್ತುತಃ ಸತ್ವವಿಲ್ಲ ಎಂಬುದೇ ವ್ಯಾವಹಾರಿಕಸತ್ವ ಎಂದಾದರೆ, 'ಅಸತ್ತಿಗೆ ಸಾಧಕತ್ವವಿಲ್ಲ' ಎಂಬ ನಮ್ಮ ಆಕ್ಷೇಪಕ್ಕೆ ಏನು ಉತ್ತರಕೊಟ್ಟಂತಾಯಿತು? 'ವ್ಯಾವಹಾರಿಕಸತ್ವ' ಎಂದರೆ ವ್ಯವಹಾರ ಮಾತ್ರ, ವಸ್ತುತಃ ಸತ್ವವಿಲ್ಲ. ಅಸತ್ತೇ ಸಾಧಕ ಎಂದು ನಿನ್ನ ಪಕ್ಷವನ್ನು ತಿರುಗಿ ಉಚ್ಚರಿಸಿದಂತಾಯಿತಷ್ಟೆ. ಅದಕ್ಕೇನೂ ಸಮರ್ಥನೆ ನೀಡಿದಂತಾಗಿಲ್ಲ.

ಬೌದ್ಧನಿಗೆ ಕುಮಾರಿಲಭಟ್ಟರು ವಾರ್ತಿಕದಲ್ಲಿ ಹೇಳುತ್ತಾರೆ—

'ಅದರಿಂದ ಯಾವುದು ಇಲ್ಲವೋ ಅದು ಇಲ್ಲ, ಅಸತ್ತೇ ಆಗಿದೆ. ಯಾವುದು ಪಾರಮಾರ್ಥಿಕ ವಾಗಿ ಇದೆಯೋ ಅದು ಇದೆ, ಸತ್ಯವೇ ಆಗಿದೆ. ಇರುವುದು ಸತ್ಯ, ಇಲ್ಲದುದು ಮಿಥ್ಯಾ. ಸತ್ಯದಲ್ಲಿ ಎರಡು ಬಗೆ ಇಲ್ಲ.

ಪಾರಮಾರ್ಥಿಕಸತ್ಯಕ್ಕಿಂತ ಬೇರೆಯಾಗಿ ಸಾಂವೃತ ಸತ್ಯ, ಅಂದರೆ ವ್ಯಾವಹಾರಿಕ ಸತ್ಯ ಎಂಬುದೇ ಇಲ್ಲ. ವ್ಯವಹಾರ ಮಾತ್ರ ಇದೆ ಸತ್ವವಿಲ್ಲ ಎಂದು ನೀನೇ ಹೇಳುವುದರಿಂದ ಸಾಂವೃತಸತ್ವವು ಸತ್ವವಲ್ಲ. ಸತ್ವಾಭಾವ, ಅಸತ್ವ, ಅದನ್ನೆ ನೀನು 'ಮಿಥ್ಯಾ' ಶಬ್ದದಿಂದ ಹೇಳುತ್ತಿರುವೆ. ಜೊಲ್ಲನ್ನು 'ಅಧರಾಮೃತ'ವೆಂದು ಹೇಳಿದರೆ ಎರಡೂ ಒಂದೇ ವಸ್ತು. ಬೇರೆಯಾಗುವುದಿಲ್ಲ. ಬಾಲಕರಿಗೆ 'ಏಷಃ' ಇದು ವಂಚನೆಯಾಗುತ್ತದೆ. ಶಶವಿಷಾಣದಂತೆ ಮಿಥ್ಯಾಭೂತವಾದ ಜಗತ್ತನ್ನು 'ಸಾಂವೃತಸತ್ಯ' ಶಬ್ದದಿಂದ ಹೇಳುವುದು ಕೇವಲ ಶಿಷ್ಯರಿಗೆ ವಂಚನೆಯೆ ಸರಿ. ಏಕೆಂದರೆ 'ಮಿಥ್ಯಾ' 'ಸಂವೃತಿ' ಶಬ್ದಗಳಿಗೆ ಒಂದೇ ಅರ್ಥ.

'ತೇನ ಏಷಃ ವಂಚನಾರ್ಥಂ ಉಪನ್ಯಾಸಃ' 'ತೇನ' ಅರ್ಥ ಒಂದೇ ಆಗಿರುವುದರಿಂದ 'ಏಷಃ' ಬೇರೆಬೇರೆ ಶಬ್ದಗಳಿಂದ ಅದನ್ನು ನೀನು ಹೇಳುತ್ತಿರುವುದು 'ವಂಚನಾರ್ಥಂ' ವಂಚನಾರ್ಥ ಉಪನ್ಯಾಸ.

'ತುಲ್ಯಾರ್ಥತ್ವೇಪಿ ತೇನೈವ' ಎಂದು ಪ್ರಚಲಿತಪಾಠ. ಇದು ಆಮೋದಕ್ಕೆ ಅನುಗುಣವಾಗಿಲ್ಲ. 'ಏವ' ಎಂಬುದು 'ಏಷ' ಎಂದಾಗಬೇಕು. 'ಏಷ ಉಪನ್ಯಾಸ ಇತಿ ಸಂಬಂಧಃ' ಎಂದು ಆಮೋದದಲ್ಲಿ ಅನ್ವಯವನ್ನು ಹೇಳುತ್ತಾರೆ.



**अज्ञानादेः सिद्धिपर्यन्तसाधके स्वरूपेण परमार्थसति साक्षिणि व्यावहारिकसत्त्वाभावाच्च । न च साक्ष्यप्यविद्यावृत्तिप्रतिबिम्बित एवाज्ञानादिसाधकः । त्वयैव-**

**''चैत्ररागः स्वविषयानित्यज्ञानातिरेकिणा ।**

**तदध्यक्षेण संवेद्यः प्रत्यक्षत्वाद्धटादिवदि''ति**

**सुखादेर्नित्यधीवेद्यत्वोक्तेः । अज्ञानसुखादेर्ज्ञातैकसत्त्वाभावापाताच्च । अविद्यावृत्तिं प्रति तदप्रतिबिम्बितस्यैव साधकत्वाच्च । साक्षिगतसाधकताया अज्ञानाधीनत्वेऽपारमार्थिकतया प्रातीतिकस्याज्ञानसत्त्वस्य साक्षिणा सिद्धिं विनाऽयोगेनान्योन्याश्रयाच्च । एतेनैव तवासत इव मम सतोऽपि साधकत्वे विमतिरित्यानन्दबोधाद्युक्तं निरस्तम् ।**

---

न्यूनवृत्तित्वाच्च व्यावहारिकसत्त्वं न साधकत्वे तन्त्रम् इत्याह **अज्ञानादेरिति** ।। अत्र आदिपदग्राह्यदुःखादेरुत्पत्तिसाधकत्वमप्यस्तीति पर्यन्तेत्युक्तम् । **अविद्यावृत्तिप्रतिबिम्बित इति** ।। स च व्यावहारिक एवेति भावः ।। **स्वविषयेति** ।। अत्र स्वशब्दः चैत्ररागपरः । अन्यप्रत्यक्षवेद्यत्वेन बाधः स्यादित्यत उक्तम् **तदध्यक्षेणेति** ।। चैत्राध्यक्षेणेत्यर्थः । दृष्टान्ते साध्यवैकल्यपरिहाराय स्वविषयेति । चैत्रवृत्तिवेद्यत्वमादाय सिद्धसाधनवारणायाह **अनित्यज्ञानातिरेकिणेति** ।।

**घटादिवदिति** ।। चैत्रप्रत्यक्षवेद्यघटवदित्यर्थः ।। **अज्ञानसुखादेरिति** ।। वृत्तेः सामग्रीवैकल्येन विलम्बसम्भवादिति भावः । नन्वविद्योपहितचैतन्यस्यैव साक्षित्वाङ्गीकारे नोक्तदोष इत्यत आह **साक्षिगतेति** ।। अपारमार्थिकाविद्याविशिष्टस्य तदुपहितस्य वा साक्षित्वे साक्षिणोऽपारमार्थिकत्वम् । अपारमार्थिकसाक्षिभास्यत्वेन अविद्यायाः अपारमार्थिकत्वमिति अन्योन्याश्रय इत्यर्थः ।। **एतेनैवेति** ।। साक्षिणः स्वत एव साधकत्वाङ्गीकारेणेत्यर्थः ।



ಅಜ್ಞಾನಾದೇಃ ಸಿದ್ಧಿಪರ್ಯಂತಸಾಧಕೇ ಸ್ವರೂಪೇಣ ಪರಮಾರ್ಥಸತಿ ಸಾಕ್ಷಿಣಿ

**ವ್ಯಾವಹಾರಿಕಸತ್ವಾಭಾವಾಚ್ಚ। ನ ಚ ಸಾಕ್ಷ್ಯಪಿ ಅವಿದ್ಯಾವೃತ್ತಿಪ್ರತಿಬಿಂಬಿತ ಏವ ಅಜ್ಞಾನಾದಿಸಾಧಕಃ। ತ್ವಯೈವ—**

**ಚೈತ್ರರಾಗಃ ಸ್ವವಿಷಯಾನಿತ್ಯ ಜ್ಞಾನಾತಿರೇಕಿಣಾ।**
**ತದಧ್ಯಕ್ಷೇಣ ಸಂವೇದ್ಯಃ ಪ್ರತ್ಯಕ್ಷತ್ವಾದ್ ಘಟಾದಿವತ್॥**

**ಇತಿ ಸುಖಾದೇ ರ್ನಿತ್ಯಧೀ ವೇದ್ಯತ್ವೋಕ್ತೇಃ।**

ಸಾಧಕತ್ವಕ್ಕೆ ನ್ಯೂನವೃತ್ತಿಯಾದ್ದರಿಂದಲೂ ವ್ಯಾವಹಾರಿಕಸತ್ವವು ಸಾಧಕತ್ವಕ್ಕೆ ಪ್ರಯೋಜಕವಲ್ಲ. ಏಕೆಂದರೆ ಅಜ್ಞಾನ ದುಃಖಾದಿಗಳಿಗೆ ಸಾಕ್ಷಿಯು ಸಿದ್ಧಿಪರ್ಯಂತ ಸಾಧಕವಾಗಿದೆ. ಅಂದರೆ ಅಜ್ಞಾನಕ್ಕೆ ಸಿದ್ಧಿಸಾಧಕ. ದುಃಖಕ್ಕೆ ಕಾಮ ಸಂಕಲ್ಪ ವಿಚಿಕಿತ್ಸಾದಿಗೆ ಎಲ್ಲಕ್ಕೂ ಅಂದರೆ ಅವುಗಳ ಉತ್ಪತ್ತಿಗೂ ಸಾಧಕವು ಸಾಕ್ಷಿ. ಈ ಸಾಕ್ಷಿಯು ಸ್ವರೂಪೇಣ ಚೈತನ್ಯರೂಪವಾದ್ದರಿಂದ ಪರಮಾರ್ಥ ಸತ್ತಾಗಿದೆ. ಆದರಿಂದ ವ್ಯಾವಹಾರಿಕ ಸತ್ವವಿಲ್ಲ. ಹೀಗಾಗಿ ಸಾಧಕತ್ವಕ್ಕೆ ವ್ಯಾವಹಾರಿಕ ಸತ್ವವು ನ್ಯೂನವೃತ್ತಿ. ಪ್ರಯೋಜಕವಲ್ಲ.

ಸಾಕ್ಷಿಯೂ ಸ್ವರೂಪೇಣ ಅಜ್ಞಾನಾದಿ ಸಾಧಕವಲ್ಲ. ಅವಿದ್ಯೆಯು ಅವಿದ್ಯಾಕಾರದಿಂದ ಪರಿಣಾಮ ಹೊಂದುತ್ತದೆ. ಇದು ಅವಿದ್ಯಾವೃತ್ತಿ ಅದರಲ್ಲಿ ಸಾಕ್ಷಿಚೈತನ್ಯವು ಪ್ರತಿಬಿಂಬಿತವಾದಾಗಲೇ ಆದರಿಂದ ಅಜ್ಞಾನಾದಿ ಸಿದ್ಧಿ. ಪ್ರತಿಬಿಂಬಿತ ಚೈತನ್ಯವು ವ್ಯಾವಹಾರಿಕ ಅನಿತ್ಯ.—ಎಂದು ಅದ್ವೈತಿ ಇಲ್ಲಿ ಹೇಳುತ್ತಾನೆ. ಇದು ಸರಿಯಲ್ಲ. ಅದ್ವೈತಿಯೇ ಬೇರೆ ಕಡೆ ಹೇಳುತ್ತಾನೆ—

'ಚೈತ್ರನ ಇಚ್ಛೆಯು ಪಕ್ಷ. ಅದರಲ್ಲಿ, ಸ್ವವಿಷಯಕವಾದ, 'ಚೈತ್ರನು ಇಚ್ಛೆಯುಳ್ಳವನು, ಪ್ರಯತ್ನವಿರುವುದರಿಂದ' ಎಂಬ ಅನುಮಾನ ಜನ್ಯವಾದ ಅನಿತ್ಯಜ್ಞಾನಕ್ಕಿಂತ ಅತಿರಿಕ್ತವಾದ ನಿತ್ಯವಾದ ಚೈತ್ರನ ಸಾಕ್ಷಿಪ್ರತ್ಯಕ್ಷದಿಂದ ವೇದ್ಯವಾಗಿದೆ' ಎಂದು ಸಾಧ್ಯ. 'ಪ್ರತ್ಯಕ್ಷವಾದ್ದರಿಂದ' ಎಂದು ಹೇತು, 'ಘಟಾದಿಗಳಂತೆ' ಎಂದು ದೃಷ್ಟಾಂತ. ದೃಷ್ಟಾಂತದಲ್ಲಿ, ಘಟಾದಿ ವಿಷಯಕ ವೃತ್ತಿರೂಪ ಅನಿತ್ಯಜ್ಞಾನಕ್ಕಿಂತ ಅತಿರಿಕ್ತವಾದ ನಿತ್ಯವಾದ ತದಭಿವ್ಯಕ್ತ ಅಧಿಷ್ಠಾನ ಚೇತನ್ಯ ವೇದ್ಯತ್ವವಿದೆ. ಪ್ರತ್ಯಕ್ಷತ್ವರೂಪ ಹೇತುವೂ ಇದೆ'—ಹೀಗೆ ಅದ್ವೈತಿಯು ತಾನೇ ಸಾಕ್ಷಿಯನ್ನು ಅನಿತ್ಯ, ಜ್ಞಾನಾತಿರೇಕಿಯಾದ ನಿತ್ಯಜ್ಞಾನ ಎನ್ನುತ್ತಿದ್ದಾನೆ. ಅವಿದ್ಯಾವೃತ್ತಿ ಪ್ರತಿಬಿಂಬಿತತ್ವೇನ ಸಾಕ್ಷಿಯು ಅನಿತ್ಯವಾದರೂ ಸ್ವರೂಪೇಣ ನಿತ್ಯವೆಂದು ಅಭಿಪ್ರಾಯ. ಹೀಗೆ ಅದ್ವೈತಿಯೇ ಹೇಳುವುದರಿಂದ ಸಾಕ್ಷಿಯು ನಿತ್ಯವಾದ್ದರಿಂದ ಅದರಲ್ಲಿ ವ್ಯಾವಹಾರಿಕ ಸತ್ವವಿಲ್ಲ, ಪಾರಮಾರ್ಥಿಕಸತ್ವವೇ ಇದೆ.

**ಅಜ್ಞಾನ ಸುಖಾದೇಃ ಜ್ಞಾತೈಕ ಸತ್ತಾ ಭಾವಾಪಾತಾಚ್ಚ।**
**ಅವಿದ್ಯಾವೃತ್ತಿಂ ಪ್ರತಿ ತದಪ್ರತಿಬಿಂಬಿತಸ್ಯೈವ ಸಾಧಕತ್ವಾಚ್ಚ ॥**

ಅಜ್ಞಾನಸುಖಾದಿಗಳು ಅಸ್ತಿತ್ವದಲ್ಲಿ ಇರುವಾಗ ಜ್ಞಾತವಾಗಿಯೆ ಇರುತ್ತವೆ. ಇಲ್ಲದಿದ್ದರೆ ಅವು ಜ್ಞಾತವಾಗಬೇಕಾದರೆ ಅವು ಹುಟ್ಟಿದ ಬಳಿಕ ಅವೇ ಅವಿದ್ಯಾಕಾರವಾಗಿ ಪರಿಣಾಮಗೊಳ್ಳಬೇಕು. ಬಳಿಕ ಆ ಪರಿಣಾಮರೂಪ ಅವಿದ್ಯಾವೃತ್ತಿಯಲ್ಲಿ ಪ್ರತಿಬಿಂಬಿತವಾಗುವ ಸಾಕ್ಷಿಚೈತನ್ಯದಿಂದ ಅವು

ಗೃಹೀತವಾಗಬೇಕಾದರೆ ಅಷ್ಟರವರೆಗೆ ಅವು ಅಜ್ಞಾತವಾಗಿ ಇರಬೇಕಾಗುತ್ತದೆ. ಜ್ಞಾತೈಕಸತ್ತಾಗಿ ಇರಲಾರವು. ಇದು ದೋಷ.

ಮತ್ತು ಅವಿದ್ಯೆಯು ತಾನೇ ಅವಿದ್ಯಾಕಾರವಾಗಿ ಪರಿಣಮಿಸುವುದು ಎಂದರೆ ಆತ್ಮಾಶ್ರಯದೋಷ. ಇನ್ನೊಂದು ಅವಿದ್ಯೆಯು ಅವಿದ್ಯಾಕಾರವಾಗಿ ಪರಿಣಮಿಸುತ್ತದೆ ಎಂದರೆ ಆ ಅವಿದ್ಯೆಯೂ ಇನ್ನೊಂದು ಅವಿದ್ಯಾಕಾರವಾಗಿ ಪರಿಣಮಿಸುವುದೆಂದು ಅನವಸ್ಥಾ ದೋಷ. ಆದರಿಂದ ಅವಿದ್ಯಾವೃತ್ತಿಗೆ ಅವಿದ್ಯಾವೃತ್ತಿಪ್ರತಿಬಿಂಬಿತಸಾಕ್ಷಿವೇದ್ಯತ್ವವು ಕೂಡಲಾರದು. ಅಪ್ರತಿಬಿಂಬಿತವಾದ ಪಾರಮಾರ್ಥಿಕವಾದ ನಿತ್ಯವಾದ ಶುದ್ಧ ಚೈತನ್ಯರೂಪ ಸಾಕ್ಷಿವೇದ್ಯತ್ವವನ್ನೇ ಹೇಳಬೇಕು.

ಹೀಗಾಗಿ ಅವಿದ್ಯಾ ಸಾಧಕವಾದ ಶುದ್ಧ ಸಾಕ್ಷಿಯಲ್ಲಿ ಸಾಧಕತ್ವವಿದೆ. ವ್ಯಾವಹಾರಿಕ ಸತ್ವವಿಲ್ಲವೆಂದು ವ್ಯಭಿಚಾರವು ಅಪರಿಹಾರ್ಯ.

**ಸಾಕ್ಷಿಗತ ಸಾಧಕತಾಯಾಃ ಅಜ್ಞಾನಾಧೀನತ್ವೇ ಅಪಾರಮಾರ್ಥಿಕತಯಾ ಪ್ರಾತೀತಿಕಸ್ಯ ಅಜ್ಞಾನಸತ್ವಸ್ಯ ಸಾಕ್ಷಿಣಾ ಸಿದ್ಧಿಂ ವಿನಾ ಆಯೋಗೇನ ಅನ್ಯೋನ್ಯಾಶ್ರಯಾಚ್ಚ ।**

ಅಜ್ಞಾನಸ್ವರೂಪವು ಸಿದ್ಧವಾದರೆ ಮಾತ್ರ ತದಧೀನವಾಗಿ ಸಾಕ್ಷಿಗೆ ಸಾಧಕತ್ವಸಿದ್ಧಿ. ಸಾಕ್ಷಿಯಲ್ಲಿರುವ ಸಾಧಕತ್ವವು ಅಜ್ಞಾನಾಧೀನ, ವ್ಯಾವಹಾರಿಕ ಎಂದರೆ ಅಜ್ಞಾನದಲ್ಲಿರುವ, ಅಪಾರಮಾರ್ಥಿಕವಾದ್ದರಿಂದ ಪ್ರಾತೀತಿಕವಾದ ಸತ್ವವು ಸಾಕ್ಷಿಯಿಂದಲೇ ಸಿದ್ಧವಾಗಬೇಕು. ಸಾಕ್ಷಿಯಿಂದ ಸಿದ್ಧವಾಗದೆ ಅಜ್ಞಾನಕ್ಕೆ ಪ್ರಾತೀತಿಕಸತ್ವ ಬರಲಾರದು. ಹೀಗೆ ಅನ್ಯೋನ್ಯಾಶ್ರಯ. ಅಪಾರಮಾರ್ಥಿಕ ಅಜ್ಞಾನೋಪಹಿತವಾದರೆ ಸಾಕ್ಷಿ ಅಪಾರಮಾರ್ಥಿಕ. ಅಪಾರಮಾರ್ಥಿಕ ಸಾಕ್ಷಿಭಾಸ್ಯವಾದರೆ ಅಜ್ಞಾನ ಅಪಾರಮಾರ್ಥಿಕ ಎಂದೂ ಅನ್ಯೋನ್ಯಾಶ್ರಯ.

**ಏತೇನ 'ತವ ಅಸತ ಇವ ಮಮ ಸತೋಽಪಿ ಸಾಧಕತ್ವೇ ವಿಮತಿಃ' ಇತಿ ಆನಂದಬೋಧಾದ್ಯುಕ್ತಂ ನಿರಸ್ತಂ ।**

ಆನಂದಬೋಧಾದಿಗಳು ಹೇಳುತ್ತಾರೆ 'ನಾನು ಹೇಳುವ ಅಸತ್ತಿಗೆ ಸಾಧಕತ್ವವನ್ನು ನೀನು ಒಪ್ಪದಿದ್ದರೆ, ನೀನು ಹೇಳುವ ಸತ್‌ಗೆ ಸಾಧಕತ್ವವನ್ನು ನಾನೂ ಒಪ್ಪುವುದಿಲ್ಲ' ಎಂದು. ಈ ಆಕ್ಷೇಪಕ್ಕೆ ಸಮಾಧಾನ ಈಗ ಸಿಕ್ಕಿದಂತಾಯಿತು. ಏಕೆಂದರೆ ನಾನು ಸತ್ಯವಾದ ಸಾಕ್ಷಿಗೆ ಸ್ವತಃ ಸಾಧಕತ್ವವನ್ನು ಒಪ್ಪಿದಂತೆ ನೀನೂ ಅದನ್ನು ಒಪ್ಪಲೇಬೇಕು. ಇಲ್ಲದಿದ್ದರೆ ಆತ್ಮಾಶ್ರಯಾನವಸ್ಥಾದಿ ದೋಷ ನಿನಗೆ ಬರುತ್ತದೆ.



**नापि सत्तात्रयं द्वयं वा तन्त्रम् । अननुगमात् । प्रयोज्यवैजात्याभावेन तृणारणिमणिन्यायासंभवाच्च । नापि**

**सत्त्रयानुगतं सद्द्वयानुगतं वा सत्त्वसामान्यं तन्त्रम् । अपरमार्थसतोऽसत्त्वेन तत्र सत्त्वस्य विरुद्धत्वात् ।**

**तदुक्तं वार्तिके बौद्धं प्रति—**

**सत्यत्वं नच सामान्यं मृषार्थपरमार्थयोः ।**
**विरोधान्नहि सिंहत्वं सामान्यं वृषसिंहयोः ।। इति ।**

**अपरमार्थसतः अबाध्यत्वरूपसद्विशेषत्वे च शाबलेयस्य गोविशेषत्ववत् प्रपञ्चस्यापि ब्रह्मवत् तद्विशेषत्वात् सद्वैलक्षण्यं न स्यात् । किञ्च यद्यारोपितानारोपितानुगतं सामान्यं स्यात्तर्हि ब्राह्मणो यजेतेत्यादि सामान्यविधिं प्रति ब्राह्मण्यामब्राह्मणाज्जात आरोपित ब्राह्मण्यादिरपि नियोज्यः स्यात् । निषेधस्य तु आरोपितेनापि ब्राह्मण्येन हीनो विषयः स्यात् ।**

---

नन्वस्तु (तर्हि) साक्षिणि पारमार्थिकी सत्ता (पारमार्थिक्येव सत्ता) साधिका तथापि प्रपञ्चस्य मिथ्यात्वमक्षतमेवेत्याशङ्क्याह **नापीति ।।** प्रातिभासिकस्यासाधकत्वमेवेत्यभिप्रेत्याह **द्वयं वेति ।।** इदमुपलक्षणम् । सत्तानेकत्वे मानाभाव इत्यपि बोध्यम् ।। **सत्त्वस्येति ।।** अबाध्यत्वरूपस्येत्यर्थः । **नियोज्यः स्यादिति ।।** नचेष्टापत्तिः । ''चातुर्वर्ण्यमविशेषात्'' (जै.सू. अ.६ पा.१ अधि.७ सू.२५) इत्यधिकरणविरोधापत्तेः । तत्र ह्येवं विचारितम् । अग्निहोत्रादिषु किं चतुर्णां वर्णानामधिकारः उतापशूद्रमिति संशये विधिवाक्येषु विशेषाश्रवणाच्चतुर्णामिति पूर्वपक्षे अग्निहोत्रादि कर्मणामग्नि विद्या सापेक्षत्वादग्निविद्ययोश्चाधानोपनयन पूर्वकाध्ययन साध्यत्वात् तयोश्च वसन्ते ब्राह्मणो अग्नीनादधीत, ग्रीष्मे राजन्यः, शरदि वैश्यः, वसन्ते ब्राह्मणमुपनयीत, ग्रीष्मे राजन्यम्, शरदि वैश्यमिति त्रिष्वेव दर्शनात्, लब्धाग्निविद्यानां त्रैवर्णिकानां अधिकारिणां सत्त्वेन कर्मविधिभिः शूद्रेष्वपि तयोराक्षेपकल्पनायां प्रमाणाभावात् अपशूद्रमेवाधिकार इति सिद्धान्त इति ।।



**ನಾಪಿ ಸತ್ತಾತ್ರಯಂ ದ್ವಯಂ ವಾ ತಂತ್ರಂ। ಅನನುಗಮಾತ್। ಪ್ರಯೋಜ್ಯವೈಜಾತ್ಯಾಭಾವೇನ ತೃಣಾರಣಿಮಣಿನ್ಯಾಯಾಸಂಭವಾಚ್ಚ।**

'ಸಾಕ್ಷಿಯಲ್ಲಿ ಸಾಧಕತ್ವ ಕಂಡಿರುವುದರಿಂದ ಅದರಲ್ಲಿ ಸಾಧಕತ್ವಕ್ಕೆ ಪಾರಮಾರ್ಥಿಕ ಸತ್ವವೆ ಪ್ರಯೋಜಕವಾದಲ್ಲಿ ಅನ್ಯತ್ರ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಸತ್ವವು ಪ್ರಯೋಜಕ. ಹೀಗೆ ಮೂರು ಸತ್ವಗಳು ಪ್ರಯೋಜಕ ಎನ್ನೋಣ. ಪ್ರಾತಿಭಾಸಿಕ ಸತ್ವವು ಪ್ರಯೋಜಕವಲ್ಲವೆಂದರೆ ಪಾರಮಾರ್ಥಿಕ ವ್ಯಾವಹಾರಿಕವೆಂದು ಎರಡು ಸತ್ವಗಳು ಪ್ರಯೋಜಕವೆಂದಾಗಲಿ' ಎಂದು ಅದ್ವೈತಿ ಹೇಳಿದರೂ ಅದು ಯುಕ್ತವಾಗುವುದಿಲ್ಲ.

ಅನನುಗಮ ಉಂಟಾಗುತ್ತದೆ. ಪಾರಮಾರ್ಥಿಕಸತ್ವ ಪ್ರಯೋಜಕವಾಗುವಲ್ಲಿ ವ್ಯಾವಹಾರಿಕಸತ್ವವು ಪ್ರಯೋಜಕವಾಗುವುದಿಲ್ಲ ಎಂದು ವ್ಯಭಿಚಾರ ಉಂಟಾಗುತ್ತದೆ. ಇದಕ್ಕೆ 'ತೃಣ ಅರಣಿ ಮಣಿ ನ್ಯಾಯ'ದಿಂದ ವ್ಯಭಿಚಾರಪರಿಹಾರ ಎನ್ನುತ್ತೇನೆ' ಎಂದರೆ ಅದು ಸಾಧ್ಯವಿಲ್ಲ. ತೃಣಾದಿಗಳಿಗೆ ಮೂರಕ್ಕೂ ಬೇರೆಬೇರೆ ವಿಜಾತೀಯ ಕಾರ್ಯಗಳಿವೆ. ಆ ಕಾರ್ಯಗಳಿಗೆ ಅವು ವ್ಯಭಿಚರಿತವಾಗುವುದಿಲ್ಲ. ಪ್ರಕೃತ ಸತ್ತಾತ್ರಯಗಳಿಗೆ ಪ್ರಯೋಜ್ಯ ಕಾರ್ಯಗಳಲ್ಲಿ ವೈಜಾತ್ಯಗಳಿಲ್ಲ.

**ನಾಪಿ ಸತ್ ತ್ರಯಾನುಗತಂ ಸದ್ ದ್ವಯಾನುಗತಂ ವಾ ಸತ್ವಸಾಮಾನ್ಯಂ ತಂತ್ರಂ। ಅಪರಮಾರ್ಥಸತೋಽಸತ್ವೇನ ತತ್ರ ಸತ್ವಸ್ಯ ವಿರುದ್ಧತ್ವಾತ್। ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ—**

**ಸತ್ಯತ್ವಂ ನಚ ಸಾಮಾನ್ಯಂ ಮೃಷಾರ್ಥಪರಮಾರ್ಥಯೋಃ।**
**ವಿರೋಧಾನ್ನಹಿ ಸಿಂಹತ್ವಂ ಸಾಮಾನ್ಯಂ ವೃಷಸಿಂಹಯೋಃ ಇತಿ।**

ಸತ್‌ತ್ರಯಾನುಗತ ಸತ್ವಸಾಮಾನ್ಯವಾಗಲಿ ಸದ್‌ದ್ವಯಾನುಗತ ಸತ್ವಸಾಮಾನ್ಯವಾಗಲಿ ಸಾಧಕತ್ವಕ್ಕೆ ಪ್ರಯೋಜಕ ಎಂದರೆ, ಅದು ಸರಿಯಲ್ಲ. ಅಪರಮಾರ್ಥ ಸತ್ ಅಸತ್ತಾದ್ದರಿಂದ ಅಪರಮಾರ್ಥಸತ್ತಿನಲ್ಲಿ ಅಸತ್ತಿನಲ್ಲಿ ಸತ್ವವೇ ಇಲ್ಲ. ಅಸತ್ತಿನಲ್ಲಿ ಸತ್ವವು ವಿರುದ್ಧ.

ಇದು ಬೌದ್ಧರಿಗೆ ವಾರ್ತಿಕದಲ್ಲಿ ಹೀಗೆ ಉಕ್ತವಾಗಿದೆ— ಸತ್ಯ ಅಸತ್ಯಗಳಲ್ಲಿ ಅನುಗತವಾಗಿ ಒಂದು ಸತ್ವವಿರುವುದಿಲ್ಲ. ಏಕೆಂದರೆ ಅಸತ್ಯದಲ್ಲಿ ಸತ್ವವು ಇಲ್ಲ, ಅಲ್ಲಿ ಅದು ವಿರುದ್ಧವಾಗಿದೆ. ಇದಕ್ಕೆ ಉದಾಹರಣೆ ವೃಷಭ ಸಿಂಹಗಳಲ್ಲಿ ಸಿಂಹತ್ವ ಸಾಮಾನ್ಯವಿಲ್ಲ. ಏಕೆಂದರೆ ವೃಷಭದಲ್ಲಿ ಸಿಂಹತ್ವ ವಿರುದ್ಧವಾದ್ದರಿಂದ ಇಲ್ಲ.

**ಅಪರಮಾರ್ಥಸತಃ ಅಬಾಧ್ಯತ್ವರೂಪ ಸದ್‌ವಿಶೇಷತ್ವೇ ಚ ಶಾಬಲೇಯಸ್ಯ ಗೋವಿಶೇಷತ್ವವತ್, ಪ್ರಪಂಚಸ್ಯಾಪಿ ಬ್ರಹ್ಮವತ್ ತದ್ವಿಶೇಷತ್ವಾತ್ ಸದ್‌ವೈಲಕ್ಷಣ್ಯಂ ನ ಸ್ಯಾತ್।**

ಅಪರಮಾರ್ಥಸತ್ ಕೂಡ ಅಬಾಧ್ಯತ್ವರೂಪವಾದ ಸದ್‌ವಿಶೇಷತ್ವ ಉಳ್ಳದ್ದೆ ಎಂದರೆ,

ಚಿತ್ರವರ್ಣದ ಗೋವಿನ ಸಂತತಿಯು ಗೋವಿಶೇಷವೆನಿಸುವಂತೆ ಪ್ರಪಂಚವೂ ಕೂಡ ಸತ್ತಾದ ಬ್ರಹ್ಮದಂತೆ ಸದ್‌ವಿಶೇಷವೆನಿಸೀತು. ಆಗ ಪ್ರಪಂಚಕ್ಕೆ ಸದ್‌ವೈಲಕ್ಷಣ್ಯ ಬರಲಾರದು.

**ಕಿಂಚ ಯದಿ ಆರೋಪಿತಾನಾರೋಪಿತಾನುಗತಂ ಸಾಮಾನ್ಯಂ ಸ್ಯಾತ್ ತರ್ಹಿ ಬ್ರಾಹ್ಮಣೋ ಯಜೇತ ಇತ್ಯಾದಿ ಸಾಮಾನ್ಯವಿಧಿಂ ಪ್ರತಿ ಬ್ರಾಹ್ಮಣ್ಯಾಂ ಅಬ್ರಾಹ್ಮಣಾತ್ ಜಾತಃ ಆರೋಪಿತ ಬ್ರಾಹ್ಮಣ್ಯಾದಿರಪಿ ನಿಯೋಜ್ಯಃ ಸ್ಯಾತ್ ।**

ಆರೋಪಿತ ಮತ್ತು ಅನಾರೋಪಿತಗಳಲ್ಲಿ ಅನುಗತವಾಗಿ ಸಾಮಾನ್ಯಧರ್ಮವಿದೆ ಎಂದು ಒಪ್ಪುವಪಕ್ಷದಲ್ಲಿ 'ಬ್ರಾಹ್ಮಣನು ಯಾಗ ಮಾಡಬೇಕು' ಎಂದು ಸಾಮಾನ್ಯವಿಧಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಅಬ್ರಾಹ್ಮಣನಿಂದ ಜನಿಸಿದ ಪ್ರತಿಲೋಮ ಜಾತಿಯವನಲ್ಲಿ ಬ್ರಾಹ್ಮಣ್ಯಾರೋಪ ಇರುವುದರಿಂದ ಅವನೂ ಆ ಸಾಮಾನ್ಯವಿಧಿಗೆ 'ನಿಯೋಜ್ಯ' ಅಧಿಕಾರಿಯಾಗುವ ಆಪತ್ತಿ ಇದೆ. ಇದನ್ನು ಇಷ್ಟಾಪತ್ತಿ ಎನ್ನುವಂತಿಲ್ಲ.

'ಚಾತುರ್ವರ್ಣ್ಯಂ ಅವಿಶೇಷಾತ್' (ಜೈ.ಸೂ.6.1.25) ಎಂಬ ಮೀಮಾಂಸಾಧಿಕರಣದ ವಿರೋಧ ಬರುತ್ತದೆ. ಅಲ್ಲಿ ಹೀಗೆ ವಿಚಾರ ಮಾಡಿದ್ದಾರೆ—

ಅಗ್ನಿಹೋತ್ರಾದಿ ವಿಧಿಗಳಲ್ಲಿ ನಾಲ್ಕೂ ವರ್ಣದವರಿಗೆ ಅಧಿಕಾರವಿರುವುದೆ? ಅಥವಾ ಶೂದ್ರ ಹೊರತು ಇತರರಿಗೆ ಮಾತ್ರವೆ? ಎಂದು ಸಂಶಯ. ವಿಧಿ ವಾಕ್ಯದಲ್ಲಿ ಸಾಮಾನ್ಯವಾಗಿ ಹೇಳಿದೆ. ವಿಶೇಷವಾಗಿ ಹೇಳಿಲ್ಲ. ಅದರಿಂದ ನಾಲ್ಕೂ ವರ್ಣದವರಿಗೆ ಅಧಿಕಾರ ಎಂದು ಪೂರ್ವಪಕ್ಷ.

ಸಿದ್ಧಾಂತ—ಅಗ್ನಿಹೋತ್ರಾದಿ ವಿಹಿತಕರ್ಮ ಮಾಡಲು ಆಧಾನಸಿದ್ಧವಾದ ಅಗ್ನಿ ಇರಬೇಕು. ಕರ್ಮವಿಧಿ ವಿಧಾನಗಳ ಬಗ್ಗೆ ಅಧ್ಯಯನದಿಂದ ಸಂಪಾದಿಸಿದ ವಿದ್ಯೆ ಬೇಕು. ಈ ಅಗ್ನಿ ಮತ್ತು ವಿದ್ಯೆಗಳಿರುವುದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂರು ವರ್ಣಗಳಲ್ಲಿ ಮಾತ್ರ. ವಸಂತಕಾಲದಲ್ಲಿ ಬ್ರಾಹ್ಮಣನು, ಗ್ರೀಷ್ಮದಲ್ಲಿ ಕ್ಷತ್ರಿಯನು, ಶರತ್ಕಾಲದಲ್ಲಿ ವೈಶ್ಯನು ಅಗ್ನ್ಯಾಧಾನ ಮಾಡಬೇಕು ಎಂದು ಆಧಾನಸಿದ್ಧ ಅಗ್ನಿ ಮೂರು ವರ್ಣದವರಲ್ಲಿ ಮಾತ್ರ ಶ್ರುತಿಯಿಂದ ಸಿದ್ಧವಾಗಿದೆ. ವಸಂತಕಾಲದಲ್ಲಿ ಬ್ರಾಹ್ಮಣಕುಮಾರನಿಗೆ ಉಪನಯನ. ಗ್ರೀಷ್ಮಕಾಲದಲ್ಲಿ ಕ್ಷತ್ರಿಯಕುಮಾರನಿಗೆ ಉಪನಯನ, ಶರತ್ಕಾಲದಲ್ಲಿ ವೈಶ್ಯಕುಮಾರನಿಗೆ ಉಪನಯನವೆಂದು ಉಪನಯನಪೂರ್ವಕ ವೇದಾಧ್ಯಯನವೂ ಮೂರೇ ವರ್ಣಗಳಿಗೆ ವೇದದಲ್ಲಿ ವಿಹಿತವಾಗಿದೆ. ಕರ್ಮವಿಧಿ ಸಾಮಾನ್ಯವಾಗಿರುವುದರಿಂದ ಶೂದ್ರನಿಗೂ ಕರ್ಮಾಧಿಕಾರ ಬರುವುದಾದರೆ ಕರ್ಮಕ್ಕೆ ಆವಶ್ಯಕವಾದ ಅಗ್ನಿ ವಿದ್ಯೆಗಳೂ ಅವನಿಗೆ ಲಭಿಸುವುವೆಂದು ಕಲ್ಪಿಸಬೇಕಾಗುತ್ತದೆ. ಅದಕ್ಕೆ ಪ್ರಮಾಣವಿಲ್ಲ. ಹೀಗಾಗಿ ಮೂರುವರ್ಣದವರಿಗೆ ಮಾತ್ರ ವೇದೋಕ್ತ ಅಗ್ನಿಹೋತ್ರಾದಿ ಕರ್ಮಗಳಲ್ಲಿ ಅಧಿಕಾರ ಎಂದು.

'ಆರೋಪಿತವಾದ ಪ್ರಾತಿಭಾಸಿಕ ಬ್ರಾಹ್ಮಣ್ಯಉಳ್ಳವನಿಗೆ ಅಗ್ನಿಹೋತ್ರಾದಿ ವಿಧಿ ನಿಯೋಜ್ಯತ್ವವಿಲ್ಲದಿದ್ದರೂ ಆರೋಪಿತವಾದ ವ್ಯಾವಹಾರಿಕ ಬ್ರಾಹ್ಮಣ್ಯ ಉಳ್ಳವನಿಗೆ

ನಿಯೋಜ್ಯತ್ವವನ್ನು ಅಂಗೀಕರಿಸುತ್ತೇವೆ. ಆದರಿಂದ ಅವನಿಗೆ ನಿಯೋಜ್ಯತ್ವ ಬರಬೇಕಾದೀತೆಂದು ಆಪಾದನೆ ಮಾಡಿದರೆ 'ಇಷ್ಟಾಪತ್ತಿ' ಎಂದರೆ, ಹೇಳುತ್ತೇವೆ- ಪ್ರಾತಿಭಾಸಿಕ ಬ್ರಾಹ್ಮಣ್ಯಕ್ಕೆ ಕರ್ಮಾಧಿಕಾರ ಸಾಧಕತ್ವವೇಕೆ ಇಲ್ಲ ಎನ್ನುವೆ? ಪ್ರಾತಿಭಾಸಿಕವಾದ ಸ್ವಾಪ್ನಪದಾರ್ಥಕ್ಕೂ ಶುಭಾಶುಭ ಸೂಚಕತ್ವ ಅದ್ವೈತಮತದಲ್ಲಿಯೂ ಇದೆ. ಆದರಿಂದ ಪ್ರಾತಿಭಾಸಿಕ ಬ್ರಾಹ್ಮಣ್ಯಉಳ್ಳ ಪ್ರತಿಲೋಮನಿಗೂ ಅಧಿಕಾರಾಪತ್ತಿ ನೀಡುತ್ತೇವೆ. ಆರೋಪಿತ ಬ್ರಾಹ್ಮಣ್ಯಉಳ್ಳ ಪ್ರತಿಲೋಮ ಜಾತಿಯವನಿಗೆ ಕರ್ಮಾಧಿ ಕಾರ ನಿಷಿದ್ಧವಾಗಿದೆ. ಹೀಗಾಗಿ ಅವನಿಗೂ ಕರ್ಮವಿಧಿನಿಯೋಜ್ಯತ್ವವನ್ನು ಒಪ್ಪಿದರೆ ನಿಷೇಧದ ವಿರೋಧ ಬರುತ್ತದೆ.

**ನಿಷೇಧಸ್ಯ ತು ಆರೋಪಿತೇನಾಪಿ ಬ್ರಾಹ್ಮಣ್ಯೇನ ಹೀನೋ ವಿಷಯಃ ಸ್ಯಾತ್ ।**

ಆರೋಪಿತ ಬ್ರಾಹ್ಮಣ್ಯಉಳ್ಳವನಿಗೂ ನಿಯೋಜ್ಯತ್ವವನ್ನು ಒಪ್ಪಿದರೆ, ಆರೋಪಿತ ಬ್ರಾಹ್ಮಣ್ಯವೂ ಇಲ್ಲದ ಕ್ಷತ್ರಿಯಾದಿ ಜಾತಿಯವನಿಗೆ ಮಾತ್ರ ನಿಷೇಧ ಎಂದಾದೀತು.



**अस्तु वा तदनुगतं सामान्यं। तथापि तस्य तन्त्रत्वे स्वाप्नेनाद्वैतसाक्षात्कारेणाश्वमेधादिना च तत्फलस्य द्वैतश्रुत्यादिना च द्वैतस्य धूमाभासेन च वह्नेर्व्यावहारिकेण च विरुद्धधर्मेण पारमार्थिकस्य जीवेश्वरभेदस्य सिद्धिः स्यात्। अत एव धर्मितुल्यसत्त्वं वा असद्विलक्षणत्वं वा न तन्त्रम्। गौरवाच्च। ननु धूमाभासस्यासाधकत्वं नासत्त्वात्, किन्तु व्याप्त्यभावात्, बहुलोर्ध्वतादिवदाभासविवेकस्यापि व्याप्त्यर्थत्वादिति चेन्न। अस्याः कल्पनाया असतः साधकत्वसिद्धि सापेक्षत्वेनान्योन्याश्रयात्। आभासेऽप्यारोपित व्याप्तेरारोपिताभास विवेकस्य च सत्त्वाच्च। प्रकृतेऽपि दृश्यत्वस्यारोपितस्य ब्रह्मण्यपि सत्त्वेन व्याप्त्यर्थमेव हेत्वादिसत्त्वस्यापेक्षितत्वाच्च। हेत्वाद्यारोपस्य सर्वत्र सौलभ्येनासिद्ध्यादेरदोषत्वाच्च। आश्रयादेस्सत्त्वनियमाभावेऽपि व्याप्त्यादेस्तन्नियमाच्च।**

---

ननु व्यावहारिकब्राह्मण्यवत एव नियोज्यत्वाङ्गीकारात् नापशूद्राधिकरणविरोध

इत्यरुचेराह **अस्तुवेति ।।** **अश्वमेधादिना चेति ।।** अत्रापि स्वाप्नेनेत्यनुषज्यते ।। **सिद्धिः स्यादिति ।।** एतच्च षष्ठ्यन्तपदे सर्वत्र सम्बध्यते ।। **अत एवेति ।।** स्वाप्नेनेत्याद्युक्तदूषणग्रासादेवेत्यर्थः ।। **गौरवाच्चेति ।।** धर्मिसमसत्त्वस्य गुरुशरीरत्वेन असद्विलक्षणत्वस्य चाभावघटितत्वेन सत्त्वस्यैव लाघवेन तन्त्रत्वादिति भावः । यद्यप्यसद्वैलक्षण्यवत् सत्त्वमप्यभावघटितं, तथापि असद्वैलक्षण्यज्ञानार्थं सत्त्वरूपव्यावर्तकधर्मज्ञानस्यावश्यकत्वादुपस्थितिलाघवमिति ।।

नन्वेकहेलयोभयं सिध्यति । नत्वेकसिद्धिमपरमपेक्षते । येनान्योन्याश्रयः स्यात् । यथाशङ्कं क्रमेण वादी परं बोध्यते, वचसः क्रमभावित्वादित्यरुचेराह **आभासेऽपीति ।।**

नन्वसिद्धेर्न दोषत्वम्। वन्ध्यासुतो न वक्ता अचेतनत्वात् इत्यादावाश्रयस्यासत्त्वेपि अनुमानस्य निष्प्रत्यूहत्वादित्यत आह **आश्रयादेरिति ।।**



**ಅಸ್ತುವಾ ತದನುಗತಂ ಸಾಮಾನ್ಯಂ। ತಥಾಪಿ ತಸ್ಯ ತಂತ್ರತ್ವೇ ಸ್ವಾಪ್ನೇನ ಅದ್ವೈತಸಾಕ್ಷಾತ್ಕಾರೇಣ ಅಶ್ವಮೇಧಾದಿನಾ ಚ ತತ್ಫಲಸ್ಯ, ದ್ವೈತಶ್ರುತ್ಯಾದಿನಾ ಚ ದ್ವೈತಸ್ಯ ಧೂಮಾಭಾಸೇನ ಚ ವಹ್ನೇಃ, ವ್ಯಾವಹಾರಿಕೇಣ ಚ ವಿರುದ್ಧಧರ್ಮೇಣ ಪಾರಮಾರ್ಥಿಕಸ್ಯ ಜೀವೇಶ್ವರಭೇದಸ್ಯ ಸಿದ್ಧಿಃ ಸ್ಯಾತ್। ಅತ ಏವ ಧರ್ಮಿತುಲ್ಯಸತ್ತ್ವಂ ವಾ ಅಸದ್ ವಿಲಕ್ಷಣತ್ವಂ ವಾ ನ ತಂತ್ರಂ। ಗೌರವಾಚ್ಚ।**

ಅಥವಾ ಆರೋಪಿತ ಅನಾರೋಪಿತಗಳಲ್ಲಿ ಅನುಗತವಾಗಿ ಸಾಮಾನ್ಯಸತ್ವವನ್ನು ಒಪ್ಪೋಣ. ಆದರೂ ಆ ಸಾಮಾನ್ಯಸತ್ವವನ್ನು ಸಾಧಕತ್ವಕ್ಕೆ ಪ್ರಯೋಜಕವೆನ್ನುವಂತಿಲ್ಲ. ಪ್ರಯೋಜಕವೆಂದು ಒಪ್ಪಿದರೆ ಸ್ವಪ್ನದಲ್ಲಿ ಕಾಣುವ ಪ್ರಾತಿಭಾಸಿಕವಾದ ಅದ್ವೈತಸಾಕ್ಷಾತ್ಕಾರವು ಪಾರಮಾರ್ಥಿಕ ಐಕ್ಯಪ್ರಾಪ್ತಿಗೆ ಸಾಧಕವಾದೀತು. ಸ್ವಾಪ್ನ ಅಶ್ವಮೇಧಯಾಗದಿಂದ ಸ್ವರ್ಗಪ್ರಾಪ್ತಿಯಾದೀತು. ಸ್ವಾಪ್ನ ದ್ವೈತಶ್ರುತಿಯಿಂದ ದ್ವೈತಸಿದ್ಧಿಯಾದೀತು. ಪ್ರಾತಿಭಾಸಿಕ ಧೂಮಾಭಾಸದಿಂದ ವಹ್ನಿಸಿದ್ಧಿಯಾದೀತು. ವ್ಯಾವಹಾರಿಕವಾದ ವಿರುದ್ಧಧರ್ಮದಿಂದ ಪಾರಮಾರ್ಥಿಕವಾದ ಜೀವೇಶ್ವರಭೇದಸಿದ್ಧಿಯಾದೀತು.

ಧರ್ಮಿಸಮಾನಸತ್ವವು ಸಾಧಕತ್ವಕ್ಕೆ ಪ್ರಯೋಜಕವೆಂದರೂ, ಅಸದ್‌ವಿಲಕ್ಷಣಸತ್ವವು ಸಾಧಕತ್ವಕ್ಕೆ ಪ್ರಯೋಜಕವೆಂದರೂ ಈ ದೋಷಗಳಿದ್ದೇ ಇವೆ. ಮತ್ತು ಗೌರವದೋಷ ಅಧಿಕ. ಸತ್ವದಲ್ಲಿ ಎರಡು ಬಗೆ ಇಲ್ಲದ್ದರಿಂದ ಧರ್ಮಿಸಮಾನತ್ವ ಮತ್ತು ಅಸದ್ವಿಲಕ್ಷಣತ್ವ ವಿಶೇಷಣಗಳನ್ನು ಸತ್ವದಲ್ಲಿ ನೀಡುವುದು

ವ್ಯರ್ಥ. ಧರ್ಮಿಸಮಸತ್ತ್ವವು ಗುರು ಶರೀರವಾಗಿದೆ. ಅಸದ್ವಿಲಕ್ಷಣತ್ವವು ಅಭಾವಘಟಿತವಾಗಿದೆ. ಸತ್ವಮಾತ್ರವೆ ಪ್ರಯೋಜಕವೆಂದರೆ ಲಾಘವವಿದೆ.

ಯದ್ಯಪಿ ಅಸದ್‌ವೈಲಕ್ಷಣ್ಯದಂತೆ ಸತ್ವವೂ ಅಭಾವ ಘಟಿತವಾಗಿದೆ. ಆದರೂ ಅಸದ್ ವೈಲಕ್ಷಣ್ಯಜ್ಞಾನ ಬರಬೇಕಾದರೆ ಸತ್ವರೂಪ ವ್ಯಾವರ್ತಕ ಧರ್ಮಜ್ಞಾನವು ಆವಶ್ಯಕವಾಗುವುದರಿಂದ ಅಸದ್‌ವೈಲಕ್ಷಣ್ಯಕ್ಕಿಂತ ಸತ್ವಸಾಮಾನ್ಯವನ್ನು ಸಾಧಕತ್ವಪ್ರಯೋಜಕವೆಂದರೇ ಉಪಸ್ಥಿತಿ ಲಾಘವವಿದೆ.

**'ನನು ಧೂಮಾಭಾಸಸ್ಯ ಅಸಾಧಕತ್ವಂ ನ ಅಸತ್ವಾತ್ । ಕಿಂತು ವ್ಯಾಪ್ತ್ಯಭಾವಾತ್ । ಬಹುಲೋರ್ಧ್ವತಾದಿವತ್ ಆಭಾಸವಿವೇಕಸ್ಯಾಪಿ ವ್ಯಾಪ್ತ್ಯರ್ಥತ್ವಾತ್ ।' ಇತಿ ಚೇನ್ನ । ಅಸ್ಯಾಃ ಕಲ್ಪನಾಯಾಃ ಅಸತಃ ಸಾಧಕತ್ವಸಿದ್ಧಿಸಾಪೇಕ್ಷತ್ವೇನ ಅನ್ಯೋನ್ಯಾಶ್ರಯಾತ್ ।**

'ಧೂಮಾಭಾಸವು ಅಸಾಧಕವೆನಿಸಿದುದು ಅದು ಅಸತ್ತಾದ್ದರಿಂದ ಅಲ್ಲ. ವ್ಯಾಪ್ತಿ ಇಲ್ಲದ್ದರಿಂದ. ಧೂಮದಲ್ಲಿ ಬಹುತ್ವ ಊರ್ಧ್ವತ್ವ ಮುಂತಾದವುಗಳಂತೆ ಅನಾರೋಪಿತತ್ವವೂ ವ್ಯಾಪ್ತಿಸಿದ್ಧಿಗಾಗಿಯೇ ಧೂಮದಲ್ಲಿ ವಿಶೇಷಣವಾಗಿ ಆವಶ್ಯಕವಾಗಿದೆ' ಎಂದರೆ ಸರಿಯಲ್ಲ.

ಅಸತ್ತಿಗೆ ಸಾಧಕತ್ವ ಸಿದ್ಧವಾಯಿತೆಂದರೆ, 'ಹಾಗಾದರೆ ಧೂಮಾಭಾಸವೂ ವಹ್ನಿಸಾಧಕವಾಗಲಿ' ಎಂದು ಅತಿಪ್ರಸಂಗವನ್ನು ನಿವಾರಿಸುವುದಕ್ಕೆ ಬಹುತ್ವ ಊರ್ಧ್ವತ್ವಗಳಂತೆ ಅನಾರೋಪಿತತ್ವವೂ ವ್ಯಾಪ್ತಿಗೆ ಉಪಯೋಗಿಯಾಗಿ ಧೂಮದಲ್ಲಿ ವಿಶೇಷಣವಾಗಬೇಕು ಎಂದಾಗುತ್ತದೆ. ಧೂಮಾಭಾಸ ದಲ್ಲಿ ಅನಾರೋಪಿತತ್ವ ವಿಶೇಷಣವಿಲ್ಲದ್ದರಿಂದಲೆ ಅದು ಅಸಾಧಕವಾಯಿತು ಹೊರತು ಅದು ಅಸತ್ತಾದ್ದರಿಂದ ಅಲ್ಲ' ಎಂದು ಕಲ್ಪನೆ ಸಿದ್ಧವಾಗುತ್ತದೆ. ಈ ಕಲ್ಪನೆ ಸಿದ್ಧವಾದರೆ ಅನಾರೋಪಿತತ್ವ ವಿಶೇಷಣಾಭಾವದಿಂದಾಗಿಯೆ ಧೂಮಾಭಾಸವು ಅಸಾಧಕವಾಯಿತು, ಹೊರತು ಅಸತ್ತಾದ್ದರಿಂದ ಅಲ್ಲ, ಆದರಿಂದ ಅಸತ್ತಿಗೆ ಸಾಧಕತ್ವವನ್ನು ಒಪ್ಪಿದರೆ ಅತಿಪ್ರಸಂಗವಿಲ್ಲ ಎಂದು ಅಸತ್ತಿಗೆ ಸಾಧಕತ್ವ ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ.

**ಆಭಾಸೇಽಪಿ ಆರೋಪಿತವ್ಯಾಪ್ತೇಃ ಆರೋಪಿತಆಭಾಸವಿವೇಕಸ್ಯ ಚ ಸತ್ತ್ವಾಚ್ಚ । ಪ್ರಕೃತೇಽಪಿ ದೃಶ್ಯತ್ವಸ್ಯ ಆರೋಪಿತಸ್ಯ ಬ್ರಹ್ಮಣ್ಯಪಿ ಸತ್ವೇನ ವ್ಯಾಪ್ತ್ಯರ್ಥಮೇವ ಹೇತ್ವಾದಿಸತ್ವಸ್ಯಾಪೇಕ್ಷಿತತ್ವಾಚ್ಚ ।**

ಆಭಾಸದಲ್ಲಿಯೂ ಕೂಡ ಆರೋಪಿತವಾಗಿ ವ್ಯಾಪ್ತಿಯೂ ಆರೋಪಿತವಾಗಿ ಆಭಾಸ ವೈಲಕ್ಷಣ್ಯವೂ ಇರಬಹುದಾದ್ದರಿಂದ ಧೂಮಾಭಾಸದಲ್ಲಿ ವ್ಯಾಪ್ತಿಯೂ, ಅನಾರೋಪಿತ್ವವೂ ಆರೋಪಿತವಾಗಿ ಇರಬಹುದು, ಇಲ್ಲವೆನ್ನುವಂತಿಲ್ಲ. ಆದರಿಂದ ಸಾಧಕವಾಗಲಿ ಎನ್ನುವ ಆಪತ್ತಿ ಪರಿಹಾರವಾಗುವುದಿಲ್ಲ. ಪ್ರಕೃತ ಬ್ರಹ್ಮನಲ್ಲಿಯೂ ಆರೋಪಿತ ದೃಶ್ಯತ್ವವಿದೆ. ಅದು ಬ್ರಹ್ಮನಲ್ಲಿ ಮಿಥ್ಯಾತ್ವ ಸಾಧಕವಾಗಲಿಲ್ಲ ಏಕೆಂದರೆ ವ್ಯಾಪ್ತಿ ಇಲ್ಲ. ವ್ಯಾಪ್ತಿಗಾಗಿ ಸತ್ವವಿಶೇಷಣವನ್ನು ದೃಶ್ಯತ್ವಕ್ಕೆ ನೀಡಬೇಕು. ಸತ್ವವಿಶಿಷ್ಟವಾದ ದೃಶ್ಯತ್ವವು ಬ್ರಹ್ಮನಲ್ಲಿ ಬರಲಿಲ್ಲವೆಂದು ಬ್ರಹ್ಮನಲ್ಲಿ ಆರೋಪಿತ

ದೃಶ್ಯತ್ವವು ಮಿಥ್ಯಾತ್ವ ಸಾಧಕವಾಗಲಿಲ್ಲ ಎಂದು ವ್ಯಭಿಚಾರ ಪರಿಹಾರ ಮಾಡಬೇಕಾಗುತ್ತದೆ. ವ್ಯಭಿಚಾರ ಪರಿಹಾರಕ್ಕಾಗಿ ದೃಶ್ಯತ್ವದಲ್ಲಿ ಸತ್ವವಿಶೇಷಣ ಆವಶ್ಯಕವಾಗುತ್ತದೆ. ಅದರಿಂದ ಅಸತ್ತಿಗೆ ಸಾಧಕತ್ವವಿಲ್ಲ.

'ಅಸತ್ತಿಗೆ ಸಾಧಕತ್ವವಿದೆ ಎಂಬ ಒಂದು ಕಲ್ಪನೆ, ಧೂಮಾಭಾಸದಲ್ಲಿ ಸಾಧಕತ್ವವಿಲ್ಲದ್ದರಿಂದ ವ್ಯಭಿಚಾರಶಂಕೆ ಬಂದರೆ ಅದಕ್ಕೆ ಆಭಾಸವಿವಿಕ್ತತ್ವ ಎಂಬ ವಿಶೇಷಣ ಹಾಕಬೇಕು ಎಂಬ ಇನ್ನೊಂದು ಕಲ್ಪನೆಗಳು ಸಮೂಹಾಲಂಬನವಾಗಿ ಒಂದೇ ನಿರ್ಣಯದಲ್ಲಿ ಸಿದ್ಧವಾಗಬಹುದು. ಆದರೆ ಮಾತಿನಲ್ಲಿ ಹೇಳುವಾಗ ಮಾತ್ರ 'ಅಸತ್ತಿಗೆ ಸಾಧಕತ್ವವಿದೆ' ಎಂದು ಮೊದಲಿಗೆ ಹೇಳಬೇಕು. ಅದರ ಮೇಲೆ ವ್ಯಭಿಚಾರಶಂಕೆ ಬಂದಾಗ 'ಆಭಾಸವಿವಿಕ್ತತ್ವ ವಿಶೇಷಣವನ್ನು ವ್ಯಾಪ್ತಿಸಿದ್ಧಿಗಾಗಿ ಕೊಡಬೇಕು' ಎಂದು ಎರಡನೆ ಕಲ್ಪನೆಯನ್ನು ಹೇಳಬೇಕಾಗುತ್ತದೆ. ಹೀಗೆ ಮಾತಿನಲ್ಲಿ ಕ್ರಮವಿದೆ ಹೊರತು ಸಿದ್ಧಿಯಲ್ಲಿ ಕ್ರಮವಿಲ್ಲ. ಅದರಿಂದ ಅನ್ಯೋನ್ಯಾಶ್ರಯವಿಲ್ಲ' ಎಂದು ಅದ್ವೈತಿ ಇಲ್ಲಿ ಆಕ್ಷೇಪ ಮಾಡಬಹುದು. ಅದಕ್ಕೆ ಉತ್ತರವಾಗಿ ನಾವು ಈಗ ಹೇಳುತ್ತಿದ್ದೇವೆ—

ಬ್ರಹ್ಮನಲ್ಲಿಯೂ ದೃಶ್ಯತ್ವವು ಮಿಥ್ಯಾತ್ವಕ್ಕೆ ಸಾಧಕವೆ. ಏಕೆ ಸಾಧನೆ ಮಾಡಲಿಲ್ಲ? ಏಕೆ ಅಲ್ಲಿ ವ್ಯಭಿಚಾರ ಬಂದಿದೆ? ಎಂದರೆ ಸತ್ವವಿಶೇಷಣವನ್ನು ದೃಶ್ಯತ್ವ ಹೇತುವಿಗೆ ಕೊಟ್ಟಿಲ್ಲ. ಕೊಡಬೇಕು. ಆಗ ಬ್ರಹ್ಮನಲ್ಲಿ ಸತ್ವ ವಿಶಿಷ್ಟ ದೃಶ್ಯತ್ವ ಬರುವುದಿಲ್ಲ. ವ್ಯಭಿಚಾರ ಪರಿಹಾರವಾಗುತ್ತದೆ ಎನ್ನಬೇಕು. ಹೀಗೆ 'ಸತ್ ಸಾಧಕ'ವೆನ್ನುವ ಪಕ್ಷದಲ್ಲಿಯೂ ಹೇತುವಿಗೆ ಸತ್ವವಿಶೇಷಣ ಬೇಕೆನ್ನುವ ಕಲ್ಪನೆ ಆವಶ್ಯಕ. 'ಇಲ್ಲಿ ಅನ್ಯೋನ್ಯಾಶ್ರಯವಿಲ್ಲ. ಎರಡೂ ಸಿದ್ಧಿಗಳು ಒಂದೇ ನಿರ್ಣಯದಿಂದ ಆಗುತ್ತವೆ, ಮಾತಿನಿಂದ ಹೇಳುವಾಗ ಮಾತ್ರ ಆಶಂಕಾಕ್ರಮದಿಂದ ಕ್ರಮವಾಗಿ ಉಕ್ತವಾಗುತ್ತವೆ' ಎನ್ನಬಹುದು ಎಂದು.

**ಹೇತ್ವಾದ್ಯಾರೋಪಸ್ಯ ಸರ್ವತ್ರ ಸೌಲಭ್ಯೇನ ಅಸಿದ್ಧ್ಯಾದೇಃ ಅದೋಷತ್ವಾಚ್ಚ ।**
**ಆಶ್ರಯಾದೇಃ ಸತ್ವನಿಯಮಾಭಾವೇಽಪಿ ವ್ಯಾಪ್ತ್ಯಾದೇಸ್ತನ್ನಿಯಮಾಚ್ಚ ।**

ಅಸತ್ತಿಗೆ ಸಾಧಕತ್ವವನ್ನು ಒಪ್ಪುವ ಪಕ್ಷದಲ್ಲಿ ಅಸಿದ್ಧ್ಯಾದಿ ದೋಷವಲ್ಲವೆಂದಾದೀತು. ಹೇತು ಅಸಿದ್ಧವಾದ ಸ್ಥಳದಲ್ಲಿ ಸತ್ತಾದ ಹೇತು ಬಾರದಿದ್ದರೂ ಅಸತ್ತಾದ ಆರೋಪಿತ ಹೇತು ಸರ್ವತ್ರ ಸುಲಭವೇ ಇರುತ್ತದೆ. ಅಸಿದ್ಧಿ ಎಲ್ಲಿಯೂ ಇಲ್ಲ ಎನ್ನಬೇಕಾದೀತು.

ಯದ್ಯಪಿ ವಂಧ್ಯಾಸುತನು ವೃಕ್ಷ ಅಲ್ಲ, ಅಚೇತನನಾದ್ದರಿಂದ ಎಂಬ ಅನುಮಾನದಲ್ಲಿ ಆಶ್ರಯನಾದ ವಂಧ್ಯಾಸುತನು ಅಸಿದ್ಧನಾದರೂ ಅನುಮಾನ ದುಷ್ಟವಾಗಿಲ್ಲ. ಆದರೂ ಆಶ್ರಯಾದಿಗಳಿಗೆ ಸತ್ವ ನಿಯಮೇನ ಇರಬೇಕಿಲ್ಲ. ಧರ್ಮಿಸತ್ತಾನಿರಪೇಕ್ಷ ಸಾಧ್ಯಸ್ಥಳದಲ್ಲಿ ಧರ್ಮಿಯಾದ ಆಶ್ರಯ ಸತ್ತಾಗಬೇಕಿಲ್ಲ. ಆದರೆ ಅಲ್ಲಿಯೂ ವ್ಯಾಪ್ತ್ಯಾದಿಗಳು ಸತ್ಯವೇ ಆಗಿರಬೇಕೆಂದು ನಿಯಮವಿದೆ. ಅದರಿಂದ ಸತ್ಯವೇ ಸಾಧಕತ್ವಕ್ಕೆ ಪ್ರಯೋಜಕ.



नाप्यप्रातिभासिकत्वं तन्त्रम्, तुच्छेऽतिप्रसक्तेः। नाप्यप्रातिभासिकसत्त्वं तन्त्रम्, गौरवात्। व्यावहारिक तात्त्विकानुगत सत्त्व सामान्यस्याभावाच्च। नापि सद्विलक्षणत्वे सति प्रातिभासिकवैलक्षण्यं तन्त्रम्, अतिगौरवात्। अन्यथा प्रवृत्तौ न संसर्गग्रहो हेतुः, किन्तूपस्थितासंसर्गाग्रह इति भ्रान्तिर्न सिद्ध्येत्। किञ्चासतः साधकत्वं विप्रतिपन्नत्वात्साध्यम्। तत्साधकत्वं च न तावत्त्वन्मते सत्। अपसिद्धान्तात्। नाप्यसत्, प्रतिवादिनस्तत्साधकत्वे विप्रतिपत्त्याऽनवस्थानात्। नच सतः साधकत्वेऽप्ययं दोषः। त्वन्मते सतः साक्षिणः साधकत्वात्। उक्तं हि

साधकत्वं सतस्तेन साक्षिणा सिद्धिमिच्छता।
स्वीकृतं ह्यविशेषस्य साध्यासाधकता पुनः ।। इति।

औत्सर्गिकप्रामाण्येन सिद्धत्वाच्च। तवापि व्यवहारे उपायान्तराभावेन स्वच्छायावद्दुर्लंघ्य लोकमर्यादा सिद्धत्वाच्च। नच सिद्धिरप्यसतीत्युक्ते निस्तारः। अन्योन्याश्रयात्। अन्यथा प्रतीतिरप्यत्यन्तासतीति सुवचत्वेन प्रतीत्या असद्विलक्षणत्वं न सिद्ध्येत्।

एतेन सल्लक्षणयोगित्वायोगित्वे एव साधकत्वासाधकत्वयोस्तन्त्रे, नतु सत्त्वासत्त्वे इति खण्डनोक्तं निरस्तम्। हेतुव्याप्त्यादेरसत्त्वेऽसिद्ध्यव्याप्त्याद्यसल्लक्षणापाताच्च।

एतेन मिथ्यात्वाविशेषेऽपि स्वप्नवद्धेतुतदाभासव्यवस्थेति निरस्तम्। तद्वदेव वास्तवसाध्यासिद्ध्यापातात्। तस्मान्नासत्यात् सत्यसिद्धिः। तदुक्तं वार्तिके बौद्धं प्रति-

साधकं चेदवश्यं च परमार्थास्तिता भवेत्।
सिद्धिर्नापरमार्थेन परमार्थस्य युज्यते ।। इति।

**उक्तं च बौद्धधिकारे ''लोकस्यापि व्यतिक्रमे विचारस्य यादृच्छिकवाङ्मात्रत्वापत्तेः'' इति ॥**

---

**अन्यथेति ॥** गौरवस्यादोषत्व इत्यर्थः ॥ **नतावदिति ॥** अनभ्युपगमात् अभ्युपगमे वा (च) विवादपर्यवसानादिति भावः ॥ **अनवस्थानादिति ॥** तत्राप्यसदन्तरेण साधकत्वस्य साधनीयत्वादिति भावः । **सिद्धिरिति ॥** अज्ञानान्तःकरणादेरिति शेषः ॥ **अविशेषस्येति ॥** असत इत्यर्थः ॥ **सिद्धत्वाचेति ॥** सत्त्वस्येति शेषः । तथाच साधकत्वञ्च त्वयाप्यभ्युपगतं स्वतः प्रामाण्यबलाच्च तस्य सत्त्वमपि सिध्यतीति न तत्र प्रमाणान्तरमन्वेषणीयमिति भावः ॥ **व्यवहार इति ॥** अबाधितव्यवहार इत्यर्थः ॥ **सिद्धत्वाचेति ॥** अत्रापि सत्त्वस्येति शेषः ।

ननु यादृशो यक्षः तादृशो बलिरिति न्यायेन सिद्धिरप्यसत्येवास्तु इत्याशङ्क्याह **नचेति ॥ अन्योन्याश्रयादिति ॥** सिद्धेरसत्त्वे सिद्धे तदनुरूपतया साधकस्यासत्त्वसिद्धिः, तत्सिद्धौ च तदनुरूपतया सिद्धेरसत्त्वसिद्धिरिति ॥ **अन्यथेति ॥** सिद्धेरसत्त्वसिद्धावित्यर्थः । प्रतीतिरित्यस्यानन्तरं प्रपञ्चस्येति शेषः । **असद्विलक्षणत्वं न सिद्ध्येदिति ।** तदुक्तन्यायेनैव चासत्प्रतीतिसिद्ध प्रपञ्चस्यासत्त्वावश्यंभावादिति भावः ॥ **सल्लक्षणेति ॥** सद्धेतुलक्षणेत्यर्थः । **न तु सत्त्वासत्त्वे इति ॥** सत्त्वसिद्धेः पूर्वं सत्त्वस्थापकतया सल्लक्षणयोगित्वस्यावश्यवाच्यत्वेन तदेव तन्त्रमिति भावः । **तद्वदेवेति ॥** नचेष्टापत्तिः । मिथ्यात्वादेर्वास्तवस्यैव सिद्ध्यङ्गीकारादिति भावः ॥ **अवश्यंचेति ॥** साधनस्येति शेषः । **यादृच्छिकेति ।** अबुद्धि पूर्वकार्थ शून्य शब्दत्वापत्तेरित्यर्थः ।



ನಾಪಿ ಅಪ್ರಾತಿಭಾಸಿಕತ್ವಂ ತಂತ್ರಂ। ತುಚ್ಛೇ ಅತಿ ಪ್ರಸಕ್ತೇಃ।

ನಾಪಿ ಅಪ್ರಾತಿಭಾಸಿಕಸತ್ವಂ ತಂತ್ರಂ। ಗೌರವಾತ್।

ಸಾಧಕತ್ವಕ್ಕೆ ಪ್ರಾತಿಭಾಸಿಕತ್ವಾಭಾವವು ಪ್ರಯೋಜಕವೆನ್ನಲಾಗದು. ಸದ್ ವಿಲಕ್ಷಣತ್ವ ವಿಶಿಷ್ಟ ಅಸದ್ ವಿಲಕ್ಷಣತ್ವರೂಪ ಅನಿರ್ವಚನೀಯತ್ವವೇ ಪ್ರಾತಿಭಾಸಿಕತ್ವ. ಇದು ಅಸತ್ತಿನಲ್ಲಿ ಬರುವುದಿಲ್ಲ. ಆದರಿಂದ ಅಸತ್ತು ಅಪ್ರಾತಿಭಾಸಿಕವಾಗಿದೆ. ಅದು ಸಾಧಕವಲ್ಲ ಎಂದು ಉಭಯಸಮ್ಮತ. ಆದರಿಂದ ಅಸತ್ತಿನಲ್ಲಿ ಅತಿಪ್ರಸಕ್ತಿ.

'ಅಪ್ರಾತಿಭಾಸಿಕಸತ್ವವು ಸಾಧಕತ್ವಕ್ಕೆ ಪ್ರಯೋಜಕವೆಂದರೆ ಗೌರವ. ಅಬಾಧ್ಯತ್ವರೂಪ ಸತ್ವವು ಪ್ರಾತಿಭಾಸಿಕ ವ್ಯಾವಹಾರಿಕ ಎಂದು ಎರಡು ವಿಧವೆಂದು ಕಲ್ಪಿಸಿ ಪ್ರಾತಿಭಾಸಿಕವಲ್ಲದ ವ್ಯಾವಹಾರಿಕವಾದ ಸತ್ವವು ಪ್ರಯೋಜಕವೆಂದು ಕಲ್ಪಿಸುವುದು ಗೌರವಗ್ರಸ್ತ. ಸತ್ವವು ಪ್ರಯೋಜಕವೆಂದರೇ ಲಾಘವ.

**ವ್ಯಾವಹಾರಿಕ ತಾತ್ವಿಕ ಅನುಗತ ಸತ್ವಸಾಮಾನ್ಯಸ್ಯ ಅಭಾವಾಚ್ಚ ।**

'ಅಪ್ರಾತಿಭಾಸಿಕ ಸತ್ವಂ ತಂತ್ರಂ' ಎನ್ನುವಾಗ 'ಅಪ್ರಾತಿಭಾಸಿಕ' ಎಂದರೆ ಪ್ರಾತಿಭಾಸಿಕ ವ್ಯತಿರಿಕ್ತ' ಎಂದು ವಿಶೇಷಣ ವ್ಯರ್ಥ. ಅಬಾಧ್ಯತ್ವರೂಪಸತ್ವವು ಪ್ರಯೋಜಕವೆಂದರೆ ಸಾಕು ಎಂದು ಹಿಂದೆ ಹೇಳಿದೆ.

ಈಗ 'ಸತ್ವವೆಂದರೆ ವ್ಯಾವಹಾರಿಕ ತಾತ್ವಿಕ ವಸ್ತುಗಳಲ್ಲಿ ಅನುಗತವಾದ ಸತ್ವವು ನನಗೆ ವಿವಕ್ಷಿತ.' ಎಂದು ಅದ್ವೈತಿ ಹೇಳಿದರೆ 'ವ್ಯಾವಹಾರಿಕ ತಾತ್ವಿಕಗಳಲ್ಲಿ ಅನುಗತವಾದ ಸತ್ವವೆಂಬುದಿಲ್ಲ. ಆದರಿಂದ ಅದನ್ನು ಸಾಧಕತ್ವಕ್ಕೆ ಪ್ರಯೋಜಕ ಎನ್ನಬಾರದು' ಎನ್ನುತ್ತಿದ್ದಾರೆ.

**ನಾಪಿ ಅಸದ್‌ವಿಲಕ್ಷಣತ್ವೇ ಸತಿ ಪ್ರಾತಿಭಾಸಿಕವೈಲಕ್ಷಣ್ಯಂ ತಂತ್ರಂ । ಅತಿ ಗೌರವಾತ್ । ಅನ್ಯಥಾ ಪ್ರವೃತ್ತೌ ನ ಸಂಸರ್ಗ ಗ್ರಹೋ ಹೇತುಃ । ಕಿಂತು ಉಪಸ್ಥಿತಾಸಂಸರ್ಗಅಗ್ರಹ ಇತಿ ಭ್ರಾಂತಿಃ ನ ಸಿಧ್ಯೇತ್ ।**

'ಅಸದ್‌ವಿಲಕ್ಷಣತ್ವೇ ಸತಿ' ಎಂದು ಹೆಚ್ಚಿನ ವಿಶೇಷಣ ಕೊಟ್ಟಿರುವುದರಿಂದ, 'ಅಪ್ರಾತಿಭಾಸಿಕ ಸತ್ವಂ ತಂತ್ರಂ' ಎಂದು ಹೇಳಿದ್ದಕ್ಕಿಂತ ಹೆಚ್ಚಿನ ಗೌರವ, ಅತಿಗೌರವ ಈ ವಿಕಲ್ಪದಲ್ಲಿ ದೋಷ. ಕೇವಲ ಸತ್ವಂ, ಅಬಾಧ್ಯತ್ವಂ ತಂತ್ರಂ ಎಂದಿದ್ದರೆ ಸಾಕಾಗಿತ್ತು.

'ಅನ್ಯಥಾ' ಗೌರವದೋಷವನ್ನು ಪರಿಗಣಿಸದಿರುವುದಾದರೆ, ಪ್ರಾಭಾಕರನ ಅಖ್ಯಾತಿ ಪಕ್ಷವನ್ನು ನಾವು ಒಪ್ಪದಿರಲು ಕಾರಣವಿಲ್ಲ. ಅವನ ಅಖ್ಯಾತಿ ಪಕ್ಷದಲ್ಲಿ 'ಇದಂ ರಜತಂ' ಎಂಬಲ್ಲಿ 'ಇದಂ' ಎಂಬ ಜ್ಞಾನ ಬೇರೆ, 'ರಜತಂ' ಎಂಬ ಜ್ಞಾನ ಬೇರೆ. 'ಇದಂ' ಪದಾರ್ಥವಾದ ಶುಕ್ತಿಗೂ ರಜತಕ್ಕೂ ಅಭೇದ ಸಂಬಂಧವು ಒಂದು ಜ್ಞಾನದಲ್ಲಿ ಕಾಣುವುದಿಲ್ಲ. ರಜತಾರ್ಥಿಯು ಶುಕ್ತಿಯ ಗ್ರಹಣಕ್ಕೆ ಪ್ರವೃತ್ತಿ ಮಾಡುವುದು ಎರಡಕ್ಕೂ ಅಭೇದವನ್ನು ತಿಳಿದಿದ್ದರಿಂದಲ್ಲ, ಭೇದವನ್ನು ತಿಳಿಯದಿದ್ದುದರಿಂದ ಎಂದು ಪ್ರಾಭಾಕರ ಮೀಮಾಂಸಕನು ಹೇಳುತ್ತಾನೆ. ಉಪಸ್ಥಿತವಾದ ರಜತದ ಅಸಂಸರ್ಗವನ್ನು ಭೇದವನ್ನು ಇದಂ ಪದಾರ್ಥಶುಕ್ತಿಯಲ್ಲಿ ಗ್ರಹಣ ಮಾಡದಿರುವುದೇ ಪ್ರವೃತ್ತಿಗೆ ಹೇತು ಎನ್ನುತ್ತಾನೆ. ಇಲ್ಲಿ ನಾವು ಹೇಳುತ್ತೇವೆ—ವಿಶಿಷ್ಟ ಜ್ಞಾನ ಸ್ಥಳದಲ್ಲಿ ವಿಶೇಷಣ ವಿಶೇಷ್ಯಗಳಿಗೆ

ಸಂಸರ್ಗಗ್ರಹವೂ ಇದೆ, ಅಸಂಸರ್ಗ ಅಗ್ರಹವೂ ಇದೆ. ಆ 'ಅಸಂಸರ್ಗ ಅಗ್ರಹ'ದಲ್ಲಿ ಎರಡು ನಿಷೇಧಗಳಿವೆ. ಸಂಸರ್ಗಗ್ರಹವು ಪ್ರವೃತ್ತಿಹೇತು ಎಂದರೆ ಲಾಘವ. ಎರಡು ನಿಷೇಧಗಳಿಂದ ಕೂಡಿದ ಅಸಂಸರ್ಗ ಅಗ್ರಹವನ್ನು ಪ್ರವೃತ್ತಿಗೆ ಹೇತು ಎಂದರೆ ಗೌರವ ಎಂದು. ಪ್ರಕೃತ ಸಾಧಕತ್ವಕ್ಕೆ ಪ್ರಯೋಜಕವನ್ನು ನಿರ್ಧರಿಸುವಲ್ಲಿ ಗೌರವದೋಷವನ್ನು ಪರಿಗಣಿಸದೇ ಇರುವುದಾದರೆ ಪ್ರಾಭಾಕರನ ವಾದವನ್ನೇ ಪುರಸ್ಕರಿಸಿ ಭ್ರಮವೆಂಬುದೇ ಇಲ್ಲ ಎಂದೇಕೆ ಒಪ್ಪಬಾರದು?

**ಕಿಂಚ ಅಸತಃ ಸಾಧಕತ್ವಂ ವಿಪ್ರತಿಪನ್ನತ್ವಾತ್ ಸಾಧ್ಯಂ । ತತ್ಸಾಧಕತ್ವಂ ಚ ನ ತಾವತ್ ತ್ವನ್ಮತೇ ಸತ್ । ಅಪಸಿದ್ಧಾಂತಾತ್ । ನಾಪ್ಯಸತ್ । ಪ್ರತಿವಾದಿನಃ ತತ್ಸಾಧಕತ್ವೇ ವಿಪ್ರತಿಪತ್ತ್ಯಾ ಅನವಸ್ಥಾನಾತ್ । ನಚ ಸತಃ ಸಾಧಕತ್ವೇಽಪ್ಯಯಂ ದೋಷಃ । ತ್ವನ್ಮತೇ ಸತಃ ಸಾಕ್ಷಿಣಃ ಸಾಧಕತ್ವಾತ್ ।**

ಅಸತ್ತಿಗೆ ಸಾಧಕತ್ವವು ವಿವಾದಗ್ರಸ್ತವಾಗಿರುವುದರಿಂದ ನೀನು ಅದನ್ನು ನನಗೆ ಸಾಧನ ಮಾಡಬೇಕು. ಈ ಸಾಧಕತ್ವಸಾಧಕ ಪ್ರಮಾಣವು ನಿನ್ನ ಮತದಲ್ಲಿ ಸತ್ ಅಲ್ಲ. ಸತ್ ಎಂದು ಹೇಳಿದರೆ ನಿನಗೆ ಅಪಸಿದ್ಧಾಂತ. ನಿನ್ನ ಸಿದ್ಧಾಂತಕ್ಕೆ ವಿರುದ್ಧ. 'ಸಾಧಕಪ್ರಮಾಣವು ಅಸತ್' ಎಂದು ಹೇಳಿದರೆ ಪ್ರತಿವಾದಿಯಾಗಿರುವ ನನಗೆ ಆ ವಿಷಯದಲ್ಲಿ ವಿಪ್ರತಿಪತ್ತಿ ಇರುವುದರಿಂದ ಅದನ್ನು ನೀನು ಇನ್ನೊಂದು ಅಸತ್ತಾದ ಸಾಧನದಿಂದ ಸಾಧನ ಮಾಡಬೇಕು. ಅದರಲ್ಲಿಯೂ ವಿಪ್ರತಿಪತ್ತಿ ಯಿರುವುದರಿಂದ ಮತ್ತೊಂದು ಅಸತ್ತಾದ ಸಾಧನದಿಂದಲೇ ಸಾಧನ ಮಾಡಬೇಕೆಂದು ಅನವಸ್ಥೆ ಉಂಟಾಗುವುದು.

'ಸಾಧಕವು ಸತ್' ಎನ್ನುವ ಪಕ್ಷದಲ್ಲಿಯೂ ಈ ದೋಷ ಸಮಾನ ಎನ್ನಬಾರದು. ನಿನ್ನ ಮತದಲ್ಲಿ ಸಾಧಕವಾದ ಸಾಕ್ಷಿಯು ಸತ್. ಸಾಧಕವು ಸತ್ತೆಂದು ನಿನಗೆ ನಾನು ಸಾಧಿಸಬೇಕಿಲ್ಲ. ಇದನ್ನು ಶ್ರೀಮದಾಚಾರ್ಯರು ಹೇಳಿದ್ದಾರೆ—

**ಉಕ್ತಂ ಹಿ—**

**ಸಾಧಕತ್ವಂ ಸತಸ್ತೇನ ಸಾಕ್ಷಿಣಾ ಸಿದ್ಧಿಮಿಚ್ಛತಾ ।**
**ಸ್ವೀಕೃತಂ ಹ್ಯವಿಶೇಷಸ್ಯ ಸಾಧ್ಯಾಸಾಧಕತಾ ಪುನಃ ॥ ಇತಿ ।**

**ಔತ್ಸರ್ಗಿಕ ಪ್ರಾಮಾಣ್ಯೇನ ಸಿದ್ಧತ್ವಾಚ್ಚ । ತವಾಪಿ ವ್ಯವಹಾರೇ ಉಪಾಯಾಂತರಾಭಾವೇನ ಸ್ವಚ್ಛಾಭ್ಯಾವದ್ ದುರ್ಲಂಘ್ಯ ಲೋಕಮರ್ಯಾದಾಸಿದ್ಧತ್ವಾಚ್ಚ ।**

ಸಾಕ್ಷಿಯಿಂದ ಅಜ್ಞಾನ ಸಿದ್ಧಿಯನ್ನು ಒಪ್ಪಿರುವ ಅದ್ವೈತಿಯು ಸತ್ತಿಗೆ ಸಾಧಕತ್ವವನ್ನು ಒಪ್ಪಿಯೇ ಇದ್ದಾನೆ. ನಿರ್ವಿಶೇಷ ಚೈತನ್ಯಕ್ಕೆ ಅಜ್ಞಾನಸಾಧಕತ್ವ ಹೇಗೆ ಎಂಬುದನ್ನು ಅವನು ಸಾಧನೆ ಮಾಡಬೇಕಷ್ಟೆ. ನಿರ್ವಿಶೇಷವಾದ ಅಸತ್ ಶಶವಿಷಾಣ ಸಾಧಕವಾಗುವುದಿಲ್ಲ ಎಂದು ಅವನೇ ಒಪ್ಪಿದ್ದಾನೆ.

ಔತ್ಸರ್ಗಿಕವಾಗಿ ಜ್ಞಾನವು ಪ್ರಮಾಣವೇ ಆಗಿರುವುದರಿಂದ, 'ಧೂಮ ಜ್ಞಾನವು

ವಹ್ನಿಸಾಧಕವಾಗಿದೆ' ಎಂಬ ಜ್ಞಾನದಲ್ಲಿ ಪ್ರಾಮಾಣ್ಯಸಿದ್ಧವಿದೆ. ತನ್ನ ವಿಷಯವನ್ನು ಸತ್ ಎಂದೇ ಅದು ಗ್ರಹಿಸುತ್ತದೆ. 'ಸತ್ ಆದ ಧೂಮಜ್ಞಾನದ ಸಾಧಕತ್ವವು ಕೂಡ ಸತ್' ಎಂದು ಗ್ರಹಿಸುತ್ತ ಸತ್ತೇ ಸಾಧಕವೆಂದು ನಿರ್ಣಯಿಸುತ್ತದೆ. ಆದರಿಂದ 'ಸಾಧಕವು ಸತ್ ಎಂಬ ನಿಯಮವನ್ನು ಪ್ರತ್ಯೇಕವಾಗಿ ನಾವು ಸಾಧಿಸಬೇಕಿಲ್ಲ.

ಮತ್ತು ನಿನಗೂ ಕೂಡ ನಿನ್ನ ನೆರಳನ್ನು ದಾಟಿಹೋಗಲು ನಿನಗೆ ಶಕ್ಯವಾಗುವುದಿಲ್ಲ. ಹಾಗೇ ಪರ್ವತದಲ್ಲಿ ಸತ್ತಾಗಿರುವ ಧೂಮವೇ ವಹ್ನಿಸಾಧಕ ಹೊರತು ಅಸತ್ತಾದ ಬಾಷ್ಪಾರೋಪಿತ ಧೂಮ ಸಾಧಕವಲ್ಲ ಎಂಬ ಸರ್ವಲೋಕ ಪ್ರಸಿದ್ಧಿಯನ್ನು ದಾಟಲೂ ನಿನಗೆ ಶಕ್ಯವಿಲ್ಲ. ಏಕೆಂದರೆ ಲೋಕಪ್ರಸಿದ್ಧಿಯಿಂದ ಸಿದ್ಧವಾದ ಮಾರ್ಗವನ್ನು ಬಿಟ್ಟು ಬೇರೆ ಅಬಾಧಿತ ಮಾರ್ಗದಲ್ಲಿ ವ್ಯವಹಾರವು ಯಾರಿಗೂ ಶಕ್ಯವಿಲ್ಲ.

**ನಚ ಸಿದ್ಧಿರಪಿ ಅಸತೀ ಇತ್ಯುಕ್ತೇ ನಿಸ್ತಾರಃ । ಅನ್ಯೋನ್ಯಾಶ್ರಯಾತ್ ।**

'ಅಸತ್ತಿನಿಂದ ಸಿದ್ಧಿ ಇಲ್ಲ' ಎಂದು ಲೋಕ ಹೇಳಿದರೆ 'ಸಿದ್ಧಿ ಯಥಾರ್ಥವಲ್ಲ' ಎಂದು ಅರ್ಥ. ನಾನು ಅಸತ್ತಿನಿಂದಲೂ ಅಯಥಾರ್ಥವಾದ ಸಿದ್ಧಿಯಾಗುತ್ತದೆ ಯಕ್ಷಕ್ಕೆ ಅನುರೂಪ ಬಲಿ, ಎನ್ನುತ್ತಿದ್ದೇನೆ. ಅದರಿಂದ ಲೋಕ ಪ್ರಸಿದ್ಧಿಯನ್ನು ನಾನು ಮೀರಿದಂತಾಗುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಆದರೆ ಲೋಕಮರ್ಯಾದೆಯ ಉಲ್ಲಂಘನೆ ಪರಿಹಾರವಾಗುವುದಿಲ್ಲ. ಅಸತ್ತಿಗೆ ಸಾಧಕತ್ವ ಸಿದ್ಧವಾದರೆ ಲೋಕದ ಮಾತಿಗೆ ಬೇರೆ ಅರ್ಥ ಮಾಡಿ ಅದರ ವಿರೋಧ ಪರಿಹಾರ ಮಾಡಿಕೊಳ್ಳಬೇಕು. ಅದರ ವಿರೋಧಪರಿಹಾರ ಮಾಡಿಕೊಂಡರೆ ಅಸತ್ತಿಗೆ ಸಾಧಕತ್ವ ಸಿದ್ಧವಾಗುವುದು ಎಂದು ಅನ್ಯೋನ್ಯಾಶ್ರಯದೋಷ ಬರುವುದು.

**ಅನ್ಯಥಾ ಪ್ರತೀತಿರಪಿ ಅತ್ಯಂತಾಸತೀತಿ ಸುವಚತ್ವೇನ ಪ್ರತೀತ್ಯಾ ಅಸದ್ ವಿಲಕ್ಷಣತ್ವಂ ನ ಸಿಧ್ಯೇತ್ ।**

'ಅನ್ಯಥಾ' ಲೋಕಪ್ರಸಿದ್ಧಿಯನ್ನು ಕಡೆಗಣಿಸುವುದಾದರೆ, ಅಸತ್ತಿನ ಪ್ರತೀತಿಯನ್ನು ಕೂಡ, ಅದು ಸರ್ವಲೋಕಪ್ರಸಿದ್ಧವಾದರೂ 'ನೀನು ಹೇಳಿದ ಯಕ್ಷಾನುರೂಪ ಬಲಿ' ಎಂಬ ನ್ಯಾಯದಿಂದ ಶಶವಿಷಾಣದಂತೆ ಅಸತ್ ಎನ್ನುತ್ತ, 'ಪ್ರತೀತಿ ಇರುವುದರಿಂದ ಶುಕ್ತಿರಜತದಂತೆಯೇ ಪ್ರಪಂಚವೂ ಅಸದ್ವಿಲಕ್ಷಣ ಎಂದು ನೀನು ಎನ್ನುವುದು ಸರಿಯಲ್ಲ. ಅಸತ್ತಿಗೂ ಅಸತ್ತಾದ ಪ್ರತೀತಿ ಉಂಟು' ಎಂದು ಶೂನ್ಯವಾದಿಯು ಪ್ರಪಂಚವನ್ನು ಅಸತ್ತೆಂದು ಸಾಧಿಸಬಹುದು.

**ಏತೇನ— ಸಲ್ಲಕ್ಷಣಯೋಗಿತ್ವಾಯೋಗಿತ್ವೇ ಏವ ಸಾಧಕತ್ವ-ಅಸಾಧಕತ್ವಯೋಃ ತಂತ್ರೇ । ನತು ಸತ್ವಾಸತ್ವೇ ಇತಿ— ಖಂಡನೋಕ್ತಂ ನಿರಸ್ತಂ । ಹೇತುವ್ಯಾಪ್ತ್ಯಾದೇಃ ಅಸತ್ವೇ ಅಸಿಧ್ಯವ್ಯಾಪ್ತ್ಯಾದ್ಯಸಲ್ಲಕ್ಷಣಾಪಾತಾಚ್ಚ ।**

'ಸಾಧಕತ್ವ ಅಸಾಧಕತ್ವಗಳಿಗೆ ಸತ್ವ ಅಸತ್ವಗಳು ಪ್ರಯೋಜಕವಲ್ಲ.ಸದ್ದೇತುವಿನ ಲಕ್ಷಣಗಳಿದ್ದರೆ ಸಾಧಕ, ಇಲ್ಲದಿದ್ದರೆ ಅಸಾಧಕ.' ಎಂದು ಖಂಡನಗ್ರಂಥದಲ್ಲಿ ಹೇಳಿದ್ದೂ ಸರಿಯಲ್ಲ. ಹೇತುವಿಗೆ ಸತ್ವ

ಅಸತ್ವ ನಿರ್ಣಯ ಮಾಡಿಕೊಳ್ಳಲು ಮೊದಲಿಗೆ ಅದರಲ್ಲಿ ಸದ್ಧೇತುಲಕ್ಷಣವಿದೆಯೊ ಇಲ್ಲವೊ ಎಂದು ನೋಡಲೇಬೇಕೆಂದಮೇಲೆ 'ಸದ್ಧೇತುಲಕ್ಷಣವಿರುವುದು ಇಲ್ಲದಿರುವುದೇ ಸಾಧಕತ್ವ-ಅಸಾಧಕತ್ವಗಳಿಗೆ ನಿರ್ಣಾಯಕ'ವೆನ್ನುವುದು ಯುಕ್ತ ಎಂದು ಖಂಡನಕಾರನ ಅಭಿಪ್ರಾಯ. ಆದರೆ, ದೃಶ್ಯತ್ವ ಹೇತುವಿನಿಂದ ಮಿಥ್ಯಾತ್ವಸಾಧನೆಯಾಗುತ್ತದೆ ಎಂದು ಖಂಡನಕಾರನಿಗೆ ಸಮ್ಮತವೆ. ಪ್ರಪಂಚ ಮಿಥ್ಯಾತ್ವಸಾಧನೆಯಾದಾಗ ಪ್ರಪಂಚಾಂತರ್ಗತ ಹೇತುವ್ಯಾಪ್ತ್ಯಾದಿಗಳಿಗೂ ಮಿಥ್ಯಾತ್ವ ಬರುತ್ತದೆ. ಅವು ಅಸತ್ತಾಗುವುವು. ಆಗ ಅದರಲ್ಲಿರುವ ಸಲ್ಲಕ್ಷಣಗಳೂ ಅಸಲ್ಲಕ್ಷಣಗಳೇ ಆಗುವುವು. ಸಾಧಕವಾದ ಹೇತುಗಳು ಹೀಗೆ ಅಸಲ್ಲಕ್ಷಣಯೋಗಿಗಳೇ ಆಗುವುದರಿಂದ ಸಲ್ಲಕ್ಷಣಯೋಗಿತ್ವವೆ ಸಾಧಕತ್ವ ಪ್ರಯೋಜಕವೆನ್ನುವುದು ಅಯುಕ್ತವಾಗುವುದು.

**ಏತೇನ 'ಮಿಥ್ಯಾತ್ವಾವಿಶೇಷೇಪಿ ಸ್ವಪ್ನವತ್ ಹೇತುತದಾಭಾಸ ವ್ಯವಸ್ಥಾ' ಇತಿ ನಿರಸ್ತಂ । ತದ್ವದೇವ ವಾಸ್ತವ ಸಾಧ್ಯಾಸಿದ್ಧ್ಯಾಪಾತಾತ್ ।**

ಸ್ವಪ್ನದಲ್ಲಿ ಹೇತು ಹೇತ್ವಾಭಾಸಗಳೆರಡೂ ಮಿಥ್ಯಾ ಆದರೂ ಹೇತು ಹೇತುವೆ ಹೇತ್ವಾಭಾಸವಲ್ಲ. ಹೇತ್ವಾಭಾಸ ಹೇತ್ವಾಭಾಸವೆ ಹೇತುವಲ್ಲ ಎಂಬ ವ್ಯವಸ್ಥೆ ಇರುವಂತೆ ಪ್ರಪಂಚವು ಮಿಥ್ಯಾ ಆದರೂ ಹೇತು ಹೇತ್ವಾಭಾಸ ವ್ಯವಸ್ಥೆ ಕೂಡುತ್ತದೆ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಹೀಗೆ ಹೇಳಿದರೆ ಸ್ವಪ್ನದಂತೆಯೇ ಮಿಥ್ಯಾತ್ವರೂಪ ವಾಸ್ತವಸಾಧ್ಯ ಸಿದ್ಧವಾಗದೆ ಹೋದೀತು. ಮಿಥ್ಯಾತ್ವ ವಾಸ್ತವವೆಂದೇ ನಿನ್ನ ಮತ.

**ತಸ್ಮಾನ್ನಾಸತ್ಯಾತ್ ಸತ್ಯಸಿದ್ಧಿಃ । ತದುಕ್ತಂ ವಾರ್ತಿಕೇ ಬೌದ್ಧಂ ಪ್ರತಿ—**

**ಸಾಧಕಂ ಚೇದವಶ್ಯಂ ಚ ಪರಮಾರ್ಥಾಸ್ತಿತಾ ಭವೇತ್ ।**
**ಸಿದ್ಧಿರ್ನಾಪರಮಾರ್ಥೇನ ಪರಮಾರ್ಥಸ್ಯ ಯುಜ್ಯತೇ ॥ ಇತಿ ।**

**ಉಕ್ತಂ ಚ ಬೌದ್ಧಧಿಕ್ಕಾರೇ—**

**ಲೋಕಸ್ಯಾಪಿ ವ್ಯತಿಕ್ರಮೇ ವಿಚಾರಸ್ಯ ಯಾದೃಚ್ಛಿಕ ವಾಙ್ಮಾತ್ರತ್ವಾಪತ್ತೇಃ ॥ ಇತಿ ।**

ಹೀಗಾಗಿ ಅಸತ್ಯದಿಂದ ಸತ್ಯ ಸಿದ್ಧಿಸಲಾರದು. ಇದನ್ನು ವಾರ್ತಿಕದಲ್ಲಿ ಬೌದ್ಧನಿಗೆ ಹೇಳಿದ್ದಾರೆ—

ಹೇತ್ವಾದಿಗಳು ಸಾಧಕವಾಗಬೇಕಾದರೆ ಅವು ಪಾರಮಾರ್ಥಿಕ ಸತ್ಯವೇ ಆಗಿರಬೇಕು. ಅಪಾರಮಾರ್ಥಿಕದಿಂದ ಪಾರಮಾರ್ಥಿಕ ಸಿದ್ಧಿ ಕೂಡಲಾರದು.

ಬೌದ್ಧಧಿಕ್ಕಾರ ಗ್ರಂಥದಲ್ಲಿ ಹೇಳಿದ್ದಾರೆ—

'ಲೋಕಮರ್ಯಾದಾತಿಕ್ರಮ ಮಾಡಿದರೆ ವಿಚಾರ ಏನೂ ಅರ್ಥವಿಲ್ಲದ ಬರಿ ಮಾತಿನ ಗೊಂದಲ ಮಾತ್ರವೇ ಎಂದಾದೀತು' ಎಂದು.



## ಅಸತಃ ಸಾಧಕತ್ವಾಭಾವೇ ಬಾಧಕೋದ್ಧಾರಃ

**नन्वसत्यमपि प्रतिबिम्बं बिम्बस्य, स्वाप्नार्थश्च शुभाशुभयोः स्फटिकलौहित्यं चोपाधिसंनिधानस्य, रेखारोपितवर्णश्चार्थस्य, वर्णदैर्घ्यादिकं च नगो नाग इत्यादावर्थभेदस्य, शङ्काविषं च मरणस्य, सवितृसुषिरादि चारिष्टादेः साधकं दृष्टमिति चेन्न । प्रतिबिम्बस्वरूपस्य त्वन्मतेऽपि सत्यत्वात् । स्वाप्नस्य च मन्मते सत्यत्वात् ।**

**त्वन्मतेऽपि पुरुषं कृष्णं कृष्णदन्तं पश्यतीत्यादिश्रुत्या ज्ञानमेव सूचकम् । अन्वयव्यतिरेकाभ्यां च स्वाप्नकामिन्यादि ज्ञानमेवार्थक्रिया कारीत्युपपत्तेः । स्फटिक लौहित्यस्यापि प्रतिबिम्बत्वात् । रेखायाश्च वर्णे पदस्यार्थ इव सङ्केतितत्वेन रेखास्मारित वर्णस्यैवार्थ बोधकत्वात् । अत एव रेखां दृष्ट्वा वर्णमुच्चारयन्ति । नगो नाग इत्यादौ दीर्घत्वादिकं स्वरूपसदेवार्थविशेष धीहेतुश्चेद्दीर्घध्वनिसाहित्यरूपं वा तद्व्यक्तत्वरूपं वा दीर्घत्वं वर्णगतं सत्यमेव हेतुः । न ध्वनिगतं वर्णेष्वारोपितं हेतुः । ज्ञातं सद्धेतुश्चेत् वक्ष्यमाणरीत्या सवितृसुषिरादि ज्ञानमिवार्थानवच्छिन्नं सत्यं ज्ञानमेव हेतुः ।**

---

असत्यमिति शब्दस्य क्वचित्पुल्लिङ्गतयापि संबन्धः । **त्वन्मतेऽपीति** । अपिरत्र स्वमत समुच्चयार्थः । यद्यप्यत्र ज्ञानमादाय एकहेलयैव परिहारस्सुवचः । तथापि शिष्यबुद्धिवैशद्याय समाधानान्तरमपि क्रियत इति द्रष्टव्यम् । **इत्यादिश्रुत्येति** । अत्रादिपदात्

यदा कर्मसु काम्येषु स्त्रियं स्वप्नेऽभि पश्यति ।
समृद्धिं तत्र जानीयात् तस्मिन् स्वप्न निदर्शने ।।

इति श्रुतिपरिग्रहः । **प्रतिबिम्बत्वादिति** । मन्मत इति शेषः । **अत एवेति** । रेखायाः वर्णे संकेतितत्वादेवेत्यर्थः । ननु वर्णानां नित्यविभुद्रव्यत्वपक्षे गुणत्वपक्षे वा

दैर्घ्यादिः परिमाणस्यासंभवेन आरोपितमेव तदर्थविशेषसाधकमिति आशंक्याह **नगोनागइत्यादाविति ।** ननु ज्ञायमानकरणनिष्ठतया ज्ञानोपयोगित्वेन दैर्घ्यादिर्ज्ञानमावश्यकम् । तादृशज्ञानस्यैव उपयोगित्वनियमात् । तथाच उक्तस्य भानाभावेन ध्वनिगतमेव दैर्घ्यादिकमारोप्यत इति असतस्साधकत्वं तथापि दुर्निवारमिति वदन्तं प्रत्याह **ज्ञातमिति ।**



**ನನು ಅಸತ್ಯಮಪಿ ಪ್ರತಿಬಿಂಬಂ ಬಿಂಬಸ್ಯ, ಸ್ವಾಪ್ನಾರ್ಥಶ್ಚ ಶುಭಾಶುಭಯೋಃ, ಸ್ಫಟಿಕ ಲೌಹಿತ್ಯಂ ಚ ಉಪಾಧಿಸಂನಿಧಾನಸ್ಯ, ರೇಖಾರೋಪಿತವರ್ಣಶ್ಚ ಅರ್ಥಸ್ಯ, ವರ್ಣದೈರ್ಘ್ಯಾದಿಕಂ ಚ ನಗೋ ನಾಗ ಇತ್ಯಾದೌ ಅರ್ಥಭೇದಸ್ಯ, ಶಂಕಾವಿಷಂ ಚ ಮರಣಸ್ಯ, ಸವಿತೃಸುಷಿರಾದಿಶ್ಚ ಅರಿಷ್ಟಾದೇಃ ಸಾಧಕಂ ದೃಷ್ಟಮಿತಿ ಚೇನ್ನ। ಪ್ರತಿಬಿಂಬ-ಸ್ವರೂಪಸ್ಯ ತ್ವನ್ಮತೇಽಪಿ ಸತ್ಯತ್ವಾತ್ । ಸ್ವಾಪ್ನಸ್ಯ ಚ ಮನ್ಮತೇಽಪಿ ಸತ್ಯತ್ವಾತ್ ।**

ಅದ್ವೈತಿಯು ಅಸತ್ತಿಗೆ ಸಾಧಕತ್ವವಿದೆ ಎನ್ನಲು ಅನೇಕ ಉದಾಹರಣೆಗಳನ್ನು ತೋರಿಸುತ್ತಾನೆ (1) ಬಿಂಬಕ್ಕೆ ಸಾಧಕವು ಪ್ರತಿಬಿಂಬ ಅಸತ್ಯ. ಈ ಪ್ರದೇಶದಲ್ಲಿ ಬಿಂಬವಿದೆ ಪ್ರತಿಬಿಂಬವಿರುವುದರಿಂದ ಎಂದು ಅಸತ್ಯವಾದ ಪ್ರತಿಬಿಂಬವು ಬಿಂಬಕ್ಕೆ ಸಾಧಕವಾಗಿದೆ. (2) ಸ್ವಪ್ನದಲ್ಲಿ ಕಾಣುವ ಅಸತ್ಯಪದಾರ್ಥ ಸತ್ಯವಾದ ಶುಭ ಅಶುಭಗಳಿಗೆ ಸಾಧಕವಾಗಿದೆ. (3) ಸ್ಫಟಿಕದಲ್ಲಿ ಕಾಣುವ ಕೆಂಬಣ್ಣ ಅಸತ್ಯವಾದರೂ ಉಪಾಧಿ ಸನ್ನಿಧಾನಕ್ಕೆ ಸಾಧಕವಾಗಿದೆ. (4) ಲಿಪಿಯಲ್ಲಿ ಆರೋಪಿತವಾದ ವರ್ಣವು ಅರ್ಥಸಾಧಕವಾಗಿದೆ. (5) ವರ್ಣದಲ್ಲಿ ಆರೋಪಿತವಾದ ದೀರ್ಘತ್ವಾದಿಗಳು 'ನಗ' ಎಂದರೆ ಮರ, 'ನಾಗ' ಎಂದರೆ ಆನೆ ಎಂದು ಬೇರೆಬೇರೆ ಅರ್ಥಗಳಿಗೆ ಸಾಧಕವಾಗಿದೆ. (6) ಅಸತ್ಯವಾದ ಶಂಕಿತ ವಿಷವು ಮರಣಕ್ಕೆ ಸಾಧಕವಾಗಿದೆ. (7) ಸೂರ್ಯಮಂಡಲದಲ್ಲಿ ಆರೋಪಿತವಾದ ರಂಧ್ರವು ಅರಿಷ್ಟಸಾಧಕವಾಗಿದೆ.

ಅದ್ವೈತಿ ಹೇಳಿದ ಈ ಉದಾಹರಣೆಗಳು ಸಮರ್ಪಕವಲ್ಲ. (1) ಪ್ರತಿಬಿಂಬವು ಅಸತ್ಯ ಎಂಬುದನ್ನು ಅದ್ವೈತಿ ತಾನೆ ಒಪ್ಪಿಲ್ಲ. ನಯನರಶ್ಮಿಯು ದರ್ಪಣಕ್ಕೆ ತಾಗಿ ಹಿಮ್ಮೆಟ್ಟಿ ಬಂದು ಮುಖವನ್ನು ನೋಡುತ್ತದೆ. ಮುಖ ಹೊರತಾಗಿ ಬೇರೆ ಪ್ರತಿಬಿಂಬ ಒಂದು ಇಲ್ಲವೆ ಇಲ್ಲ. ಮುಖವೇ ಪ್ರತಿಬಿಂಬ. ಅದು ಮುಖಕ್ಕೇ ಸಾಧಕವಾಗಿದೆ. ತನಗೆ ತಾನೇ ಸಾಧಕ. 'ಇದು ವೃಕ್ಷ, ಶಿಂಶಪಾ ಆದ್ದರಿಂದ' ಎಂದು ವೃಕ್ಷಕ್ಕೆ ಶಿಂಶಪಾವೃಕ್ಷ ತಾನೆ ಸಾಧಕವೆಂಬಂತೆ ಬಿಂಬಕ್ಕೂ ಪ್ರತಿಬಿಂಬವಾದ ತಾನೇ ಸಾಧಕ ಎಂದು ಅದ್ವೈತಿಗೆ ಸಂಮತವಾಗಿದೆ. ಬಿಂಬಕ್ಕೆ ಪ್ರತಿಬಿಂಬದ ಐಕ್ಯ ಅವನ ಸಿದ್ಧಾಂತ. 'ಬಿಂಬ ಸತ್ಯ ಪ್ರತಿಬಿಂಬ ಅಸತ್ಯ' ಎಂದರೆ ಸತ್ಯ ಅಸತ್ಯಗಳಿಗೆ ಐಕ್ಯ ಸಂಭವವಿಲ್ಲ.

(2) ಸ್ವಾಪ್ನಪದಾರ್ಥವು ಸತ್ಯವೆಂದು ಅದ್ವೈತಿ ದ್ವೈತಿಗಳಿಬ್ಬರೂ ಅಂಗೀಕರಿಸಿದ್ದಾರೆ.

**ತ್ವನ್ಮತೇಽಪಿ 'ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ' ಇತ್ಯಾದಿಶ್ರುತ್ಯಾ ಜ್ಞಾನಮೇವ ಸೂಚಕಂ ।**

ಅದ್ವೈತಮತದಲ್ಲಿಯೂ 'ಅಥ ಸ್ವಪ್ನೇ ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ, ಸ ಏನಂ ಹಂತಿ' (ಐತ.2.4.7) ಸ್ವಪ್ನದಲ್ಲಿ ಕರಿಹಲ್ಲಿನ ಕರಿಬಣ್ಣದ ಪುರುಷನನ್ನು ಕಂಡರೆ ಅದರಿಂದ ತನಗೆ ಮರಣವನ್ನು ತಿಳಿಯಬೇಕು' ಇತ್ಯಾದಿ ಶ್ರುತಿಗಳಿಂದ ಸ್ವಾಪ್ನಪದಾರ್ಥದ ಜ್ಞಾನವೇ ಶುಭಾಶುಭಸೂಚಕ. ಆದಿ ಪದದಿಂದ,

ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿ ಪಶ್ಯತಿ
ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ (ಛಾಂ.5.2.1)

'ಕಾಮ್ಯಕರ್ಮಗಳಲ್ಲಿ ತೊಡಗಿದಾಗ ಸ್ವಪ್ನದಲ್ಲಿ ಸ್ತ್ರೀಯನ್ನು ಕಂಡರೆ ಈ ಸ್ವಪ್ನ ನಿದರ್ಶನದಿಂದ ಶ್ರೇಯೋಲಾಭವನ್ನು ತಿಳಿಯಬೇಕು' ಇತ್ಯಾದಿ ಶ್ರುತಿಗಳನ್ನಿಟ್ಟುಕೊಳ್ಳಬೇಕು.

ಇಲ್ಲಿ ಎಲ್ಲಕಡೆ 'ಲಿಂಗಜ್ಞಾನವೇ ಸಾಧ್ಯಸಾಧಕ ಹೊರತು ಲಿಂಗವು ಸ್ವರೂಪತಃ ಸಾಧಕವಲ್ಲ' ಎಂದು ಒಂದೇ ಮಾತಿನಿಂದ ಅಸತ್ತಿಗೆ ಸಾಧಕತ್ವವಿಲ್ಲವೆಂದು ಪರಿಹಾರ ನೀಡಬಹುದು. ಆದರೂ ಶಿಷ್ಯರಿಗೆ ಬೇರೆಬೇರೆ ರೀತಿಯಲ್ಲಿ ಸಾಧಕತ್ವಶಂಕಾ ಪರಿಹಾರವನ್ನು ಹೇಳಿ ವಿಶದೀಕರಿಸುತ್ತಾರೆ.

**ಅನ್ವಯ ವ್ಯತಿರೇಕಾಭ್ಯಾಂ ಚ ಸ್ವಾಪ್ನಕಾಮಿನ್ಯಾದಿ ಜ್ಞಾನಮೇವ ಅರ್ಥಕ್ರಿಯಾ-ಕಾರೀತ್ಯುಪಪತ್ತೇಃ ।**

ಜಾಗರದಲ್ಲಿಯೂ ಕಾಮಿನ್ಯಾದಿಗಳು ಸ್ವರೂಪತಃ ಅರ್ಥಕ್ರಿಯಾಕಾರಿಗಳಲ್ಲ. ಅವರ ಸಂಗದ ಅನುಭವದಿಂದಲೇ ಅರ್ಥಕ್ರಿಯಾ ಉಂಟಾಗುತ್ತದೆ ಎಂಬುದು ಅನ್ವಯ ವ್ಯತಿರೇಕದಿಂದ ಸಿದ್ಧವಾಗುವುದರಿಂದ ಸ್ವಾಪ್ನಕಾಮಿನ್ಯಾದಿಗಳಲ್ಲಿಯೂ ಅವರ ದರ್ಶನವೇ ಅರ್ಥಕ್ರಿಯಾಕಾರಿ ಎಂದು ಪರಿಹಾರವನ್ನು ಹೇಳಬೇಕು.

**ಸ್ಫಟಿಕಲೌಹಿತ್ಯಸ್ಯಾಪಿ ಪ್ರತಿಬಿಂಬತ್ವಾತ್ ।**

(3) ಕೆಂಪು ಹೂವಿನ ಬಳಿಯಲ್ಲಿ ಬಿಳಿಯಾದ ಸ್ಫಟಿಕವು ಕೆಂಪಾಗಿ ಕಾಣುವುದು. ಇಲ್ಲಿ ಹೂವಿನ ಪ್ರತಿಬಿಂಬಕ್ಕೆ ಸಾಮಗ್ರಿ, ಇಲ್ಲದ್ದರಿಂದ ಸ್ಫಟಿಕದಲ್ಲಿ ಕಾಣುವುದು ನನ್ನ ಮತದಲ್ಲಿ ಅನುಭವಾನುಸಾರ ಹೂವಿನ ಕೆಂಬಣ್ಣದ ಪ್ರತಿಬಿಂಬ. ಶುಕ್ತಿರಜತದಂತೆ ಸ್ಫಟಿಕದ ಈ ಕೆಂಬಣ್ಣವೂ ಅಸತ್ತೆನ್ನುವಂತಿಲ್ಲ. 'ಇಲ್ಲಿ ರಜತ ಮಿಥ್ಯಾ' ಎಂಬಂತೆ 'ಸ್ಫಟಿಕದಲ್ಲಿ ಕೆಂಬಣ್ಣ ಮಿಥ್ಯಾ' ಎಂದು ಬಾಧ ಬರುವುದಿಲ್ಲ. ಆದರೂ ಪ್ರತಿಬಿಂಬವೆಂದಮೇಲೆ ಅದು ಮಿಥ್ಯೆಯೆ ಎಂದು ಆಗ್ರಹಿಸಿದರೆ ಕನ್ನಡಿಯಲ್ಲಿ ಬೀಳುವ ಮುಖದ ಪ್ರತಿಬಿಂಬವೂ ಮಿಥ್ಯಾ ಎನ್ನಬೇಕಾದೀತು. ಆಗ ಪ್ರತಿಬಿಂಬನಾದ ಜೀವನಿಗೆ ಬ್ರಹ್ಮನ ಐಕ್ಯವಿಲ್ಲದೆ ಹೋದೀತು. ಸತ್ ಅಸತ್‌ಗಳಿಗೆ ಐಕ್ಯವಿಲ್ಲವೆಂದು ಸತ್ಯಾನೃತಗಳಿಗೆ ವಿವೇಕವನ್ನು ಹೇಳುವ ಅದ್ವೈತವಿಲ್ಲವಾದೀತು.

ಇಲ್ಲಿ ಹೂವಿನ ಪ್ರತಿಬಿಂಬವಿಲ್ಲದೆ ಹೇಗೆ ಅದರ ಕೆಂಬಣ್ಣದ ಪ್ರತಿಬಿಂಬ ಬೀಳುವುದು? ಎಂದರೆ, ಅನುಭವ ಬಲದಿಂದ ಬಣ್ಣದ ಪ್ರತಿಬಿಂಬ ಮಾತ್ರ ಬೀಳುವುದು. ಹೂವಿನ ಪ್ರತಿಬಿಂಬಕ್ಕೆ ದರ್ಪಣಾದಿ ಸಾಮಗ್ರಿ ಇಲ್ಲಿ ಇಲ್ಲದ್ದರಿಂದ ಹೂವಿನ ಪ್ರತಿಬಿಂಬ ಇಲ್ಲ ಎನ್ನಬೇಕು. ಹೀಗೆ ಕೆಂಬಣ್ಣವು ಪ್ರತಿಬಿಂಬವೇ ಆದರೂ ಪ್ರತಿಬಿಂಬವು ಸತ್ಯವೇ ಆಗಿರುವುದರಿಂದ ಅದು ಸತ್ಯವೆ.

**ರೇಖಾಯಾಶ್ಚ ವರ್ಣೇ, ಪದಸ್ಯ ಅರ್ಥೇ ಇವ ಸಂಕೇತಿತತ್ವೇನ ರೇಖಾಸ್ಮಾರಿತ ವರ್ಣಸ್ಯೈವ ಅರ್ಥಬೋಧಕತ್ವಾತ್। ಅತ ಏವ ರೇಖಾಂ ದೃಷ್ಟ್ವಾ ವರ್ಣಮುಚ್ಚಾರಯಂತಿ।**

(4) ರೇಖೆಯಲ್ಲಿ ಲಿಪಿಯಲ್ಲಿ ವರ್ಣವು ಆರೋಪಿತವಾಗಿದ್ದು ಮಿಥ್ಯೆಯಾಗಿದೆ ಎನ್ನಕೂಡದು. ರೇಖೆಗೂ ವರ್ಣಕ್ಕೂ ಭೇದಜ್ಞಾನವಿರುವುದರಿಂದ ಅಭೇದಾರೋಪ ಅಸಂಭವ. ಅರ್ಥಕ್ಕೆ ಪದವು ಸಂಕೇತವಾಗಿರುವಂತೆ ವರ್ಣಕ್ಕೆ ಲಿಪಿಯು ಸಂಕೇತ. ಅದರಿಂದ ಲಿಪಿಯನ್ನು ಕಂಡಾಗ ವರ್ಣ ಸ್ಮರಣೆಗೆ ಬರುತ್ತದೆ. ವರ್ಣವನ್ನು ಉಚ್ಚಾರಣ ಮಾಡುತ್ತಾರೆ. ವರ್ಣವು ಅರ್ಥವನ್ನು ಬೋಧಿಸುತ್ತದೆ ಹೊರತು ಅದ್ವೈತಿಯು ಹೇಳುವಂತೆ 'ಲಿಪಿಯಲ್ಲಿ ಆರೋಪಿತವಾದ ವರ್ಣವು ಅಸತ್ತಾಗಿದ್ದು ಅದೇ ಅರ್ಥಜ್ಞಾನಸಾಧಕವಾಗುತ್ತದೆ' ಎಂದು ಹೇಳಲು ಅವಕಾಶವಿಲ್ಲ.

**ನಗೋ ನಾಗ ಇತ್ಯಾದೌ ದೀರ್ಘತ್ವಾದಿಕಂ ಸ್ವರೂಪಸದೇವ ಅರ್ಥವಿಶೇಷ ಧೀಹೇತುಶ್ಚೇತ್ ದೀರ್ಘಧ್ವನಿಸಾಹಿತ್ಯರೂಪಂ ವಾ, ತದ್‌ವ್ಯಕ್ತತ್ವರೂಪಂ ವಾ ದೀರ್ಘತ್ವಂ ವರ್ಣಗತಂ ಸತ್ಯಮೇವ ಹೇತುಃ। ನ ಧ್ವನಿಗತಂ ವರ್ಣೇಷ್ವಾರೋಪಿತಂ ಹೇತುಃ। ಜ್ಞಾತಂ ಸತ್ ಹೇತುಶ್ಚೇತ್ ವಕ್ಷ್ಯಮಾಣರೀತ್ಯಾ ಸವಿತೃಸುಷಿರಾದಿಜ್ಞಾನಮಿವ ಅರ್ಥಾನವಚ್ಛಿನ್ನಂ ಸತ್ಯಂ ಜ್ಞಾನಮೇವ ಹೇತುಃ।**

(5) 'ನಗ' ಎಂದು ಹ್ರಸ್ವಾಕಾರವಿದ್ದರೆ ವೃಕ್ಷ ಎಂದರ್ಥ. 'ನಾಗ' ಎಂದು ದೀರ್ಘ ಆಕಾರವಿದ್ದರೆ ಆನೆ ಎಂದರ್ಥ. ಹೀಗೆ ದೀರ್ಘತ್ವಹ್ರಸ್ವತ್ವಗಳೇ ಸ್ವರೂಪಸತ್ತಾಗಿ ಅರ್ಥ ವಿಶೇಷಜ್ಞಾನಕ್ಕೆ ಹೇತು ಎನ್ನುವ ಪಕ್ಷದಲ್ಲಿ ವರ್ಣದಲ್ಲಿ ದೀರ್ಘತ್ವಾದಿಗಳಿಲ್ಲದಿರುವುದರಿಂದ, ದೀರ್ಘಧ್ವನಿಸಹಿತತ್ವ ವಾಗಲಿ ದೀರ್ಘಧ್ವನಿ ವ್ಯಕ್ತತ್ವವಾಗಲಿ ವರ್ಣಗಳಲ್ಲಿ ಸತ್ಯವಾಗಿಯೆ ಇದ್ದು ಅರ್ಥವಿಶೇಷಜ್ಞಾನ ಹೇತುವಾಗುತ್ತದೆ ಎನ್ನಲು ಬರುತ್ತದೆ. ವರ್ಣಗಳಲ್ಲಿ ದೀರ್ಘತ್ವಾರೋಪಮಾಡಿ ಆರೋಪಿತವಾದ ಅಸತ್ತಾದ ದೀರ್ಘತ್ವದಿಂದಲೆ ಅರ್ಥಪ್ರತೀತಿ ಎನ್ನಬೇಕಾಗಿಲ್ಲ. ವಸ್ತುತಃ ದೀರ್ಘತ್ವ ಹ್ರಸ್ವತ್ವಗಳು ಸ್ವರೂಪಸತ್ತಾಗಿ ಅರ್ಥಪ್ರತೀತಿಗೆ ಕಾರಣವಲ್ಲ. ದೀರ್ಘತ್ವವಿದ್ದರೂ ಅದರ ಜ್ಞಾನವಿಲ್ಲದವನಿಗೆ 'ನಾಗ' ಶಬ್ದದಿಂದ ಆನೆ ಎಂಬರ್ಥ ಪ್ರತೀತಿ ಬರುವುದಿಲ್ಲ. ಅಭ್ಯುಪಗಮವಾದದಿಂದ ಒಪ್ಪಿಕೊಂಡು ಸಮಾಧಾನವನ್ನು ಹೇಳಿದ್ದಾರೆ ದೀರ್ಘತ್ವಹ್ರಸ್ವತ್ವಗಳು ಜ್ಞಾತವಾಗಿ ಅರ್ಥಪ್ರತೀತಿಗೆ ಹೇತುವಾಗುವುವು ಎನ್ನುವ ಪಕ್ಷದಲ್ಲಿ ಯದ್ಯಪಿ ದೀರ್ಘತ್ವಾರೋಪಸ್ಥಳದಲ್ಲಿ ಆರೋಪಿತವಾದ ಅಸತ್ ದೀರ್ಘತ್ವವು ಅರ್ಥಪ್ರತೀತಿ ಸಾಧಕವಾಗುವುದು. ಆದರೆ ವಿಷಯ ಅನವಚ್ಛಿನ್ನವಾದ ಕೇವಲ

ಜ್ಞಾನವೇ ಸತ್ಯವಾಗಿದ್ದು ಪ್ರತೀತಿಗೆ ಸಾಧಕವೆನ್ನುತ್ತೇವೆ. ವಿಷಯವಾದ ಅಸತ್ತಾದ ದೀರ್ಘತ್ವಕ್ಕೆ ಕಾರಣತ್ವವನ್ನು ನಾವು ಒಪ್ಪುವುದಿಲ್ಲ. ಇದನ್ನು ಮುಂದೆ ಸವಿತೃಸುಷಿರ ಜ್ಞಾನಸ್ಥಳದಲ್ಲಿ ವಿಶದೀಕರಿಸುತ್ತೇವೆ.



**एतेन–**

**''यथा सत्यत्वाविशेषेऽपि चक्षुषा रूपज्ञानमेव जायते नतु रसज्ञानं तथैवासत्त्वाविशेषेऽपि वर्णदैर्घ्यादिना सत्यं ज्ञायते नतु धूमाभासादिना''**

**इति वाचस्पत्युक्तं निरस्तम् ।**

**शङ्काविषेऽपि शङ्कानिमित्तभयजन्या धातुव्याकुलतैव मरणहेतुः । नतु विषम् । स्वाप्नमन्त्रोऽपि फलसंवादी चेत् स्वप्नप्रतीतत्वेऽप्यात्मवत्सत्य एव स्वयंप्रतिभात वेदवददृष्टाद् भासते । भारतयुद्धादौ घटोत्कचादिभिः शक्तिविशेषात्सृष्टमर्थक्रियाकारि गजादिकं सत्यमेव । सवितृसुषिर रज्जुसर्पादि ज्ञानमेव चारिष्टभयादिहेतुर्नत्वर्थः । सत्यप्यर्थे तदज्ञाने भयाद्यभावात् । नचैवमनुमितिं प्रत्यपि हेतुव्याप्त्यादिज्ञानमेव कारणं नतु हेत्वादीति वाच्यम् । तज्ज्ञानमात्रस्य हेत्वाभासेऽपि सत्त्वात् । त्वन्मते वृत्तिरूपस्य तत्प्रतिबिम्बितचैतन्यरूपस्य वा ज्ञानस्यापि मिथ्यात्वाच्च । सत्यसर्पादेस्त्वभिसर्पणदंशनादिरेवार्थक्रिया नतु भयादिः ।**

---

**एतेनेति ।** उभयथापि सत एव हेतुत्वव्यवस्थापनेनेत्यर्थः । **तज्ज्ञानमात्रस्येति ।** व्याप्त्यादिज्ञानमात्रस्य आभासेऽपि सत्त्वात् ततोऽपि वास्तवार्थसिद्धिप्रसंग इति भावः । **मिथ्यात्वाच्चेति ।** तथापि नास्मत्प्रतिबन्दीति भावः ।

ननु सर्पज्ञानमेव चेद् भयादिहेतुः तर्हि सर्पस्य क्वापि सत्यत्वं न स्यात् । अर्थक्रियाकारित्वाभावादित्यत आह **सत्यसर्पादिस्त्विति** ।



**ಏತೇನ ಯಥಾ ಸತ್ಯತ್ವಾವಿಶೇಷೇಽಪಿ ಚಕ್ಷುಷಾ ರೂಪಜ್ಞಾನಮೇವ ಜಾಯತೇ, ನ ತು ರಸಜ್ಞಾನಂ, ತಥೈವ ಅಸತ್ವಾವಿಶೇಷೇಽಪಿ ವರ್ಣದೈರ್ಘ್ಯಾದಿನಾ ಸತ್ಯಂ ಜ್ಞಾಯತೇ, ನತು ಧೂಮಾಭಾಸಾದಿನಾ ಇತಿ ವಾಚಸ್ಪತ್ಯುಕ್ತಂ ನಿರಸ್ತಂ ।**

'ರೂಪಜ್ಞಾನರಸಜ್ಞಾನಗಳೆರಡೂ ಸತ್ಯತ್ವಾಂಶದಲ್ಲಿ ಸಮವೇ ಆದರೂ ಚಕ್ಷುಸ್ಸಿನಿಂದ ರೂಪಜ್ಞಾನವೇ ಬರುತ್ತದೆ, ರಸಜ್ಞಾನ ಬರುವುದಿಲ್ಲ ಹೇಗೋ ಹಾಗೇ ವರ್ಣ ದೀರ್ಘತ್ವಹ್ರಸ್ವತ್ವಗಳು ಮತ್ತು ಧೂಮಾಭಾಸ ಇವುಗಳೆರಡೂ ಅಸತ್ಯತ್ವಾಂಶದಲ್ಲಿ ಸಮಾನವೇ ಆದರೂ ವರ್ಣದೀರ್ಘತ್ವ ಹ್ರಸ್ವತ್ವಗಳಿಂದಲೇ ಸತ್ಯವಾದ ಅರ್ಥಪ್ರತೀತಿ ಬರುತ್ತದೆ, ಧೂಮಾಭಾಸದಿಂದ ಬರುವುದಿಲ್ಲ.' ಎಂದು ವಾಚಸ್ಪತಿ ಹೇಳಿದ್ದೂ ಕೂಡ ಅಸತ್ತಿಗೆ ಸಾಧಕತ್ವವಿಲ್ಲವೆಂದು ಸಮರ್ಥಿಸಿದ್ದರಿಂದಲೇ ನಿರಾಕೃತವಾಯಿತು.

**ಶಂಕಾವಿಷೇಽಪಿ ಶಂಕಾನಿಮಿತ್ತ ಭಯಜನ್ಯಾ ಧಾತುವ್ಯಾಕುಲತೈವ ಮರಣ ಹೇತುಃ । ನತು ವಿಷಂ । ಸ್ವಾಪ್ನಮಂತ್ರೋಽಪಿ ಫಲಸಂವಾದೀ ಚೇತ್ ಸ್ವಪ್ನಪ್ರತೀತತ್ವೇಽಪಿ ಆತ್ಮವತ್ ಸತ್ಯ ಏವ ಸ್ವಯಂಪ್ರತಿಭಾತ ವೇದವತ್ ಅದೃಷ್ಟಾದ್ ಭಾಸತೇ । ಭಾರತಯುದ್ಧಾದೌ ಘಟೋತ್ಕಚಾದಿಭಿಃ ಶಕ್ತಿವಿಶೇಷಾತ್ ಸೃಷ್ಟಂ ಅರ್ಥಕ್ರಿಯಾಕಾರಿ ಗಜಾದಿಕಂ ಸತ್ಯಮೇವ ।**

(6) ಶಂಕಿತ ವಿಷಸ್ಥಳದಲ್ಲಿಯೂ ಮಾನಸಿಕ ವಿಷಶಂಕಾ ನಿಮಿತ್ತವಾಗಿ ಶರೀರದ ರಸಾದಿಧಾತುಗಳು ಕೆಡುವುದೇ ಮರಣಕ್ಕೆ ಹೇತು. ಅದು ಸತ್ಯವೆ. ಶಂಕಾವಿಷಯವಾದ ವಿಷವು ಅಸತ್ಯ. ಅದು ಮರಣಕ್ಕೆ ಹೇತುವಲ್ಲ. ಅದರಿಂದ ಅಸತ್ತಿಗೆ ಸಾಧಕತ್ವ ಇಲ್ಲಿ ಸಿದ್ಧವಾಗುವುದಿಲ್ಲ. ಸ್ವಪ್ನದಲ್ಲಿ ಕಾಣುವ ಮಂತ್ರವೂ ಕೂಡ ಅದು ಫಲಜನಕವಾಗುವುದು ಕಂಡಿದ್ದರೆ ಅದು ಸ್ವಪ್ನದಲ್ಲಿ ಕಂಡಿದ್ದಾದರೂ ಸ್ವಪ್ನದಲ್ಲಿ ಕಾಣುವ ಆತ್ಮನಂತೆ ಸತ್ಯವೆ. ಅದೃಷ್ಟ ವಶದಿಂದ ಅದು ಸ್ವಪ್ನದಲ್ಲಿ ಕಾಣುತ್ತದೆ. ಭಾರತಯುದ್ಧಾದಿಗಳಲ್ಲಿ ಘಟೋತ್ಕಚಾದಿಗಳು ಅವರ ಮಾಯಾಶಕ್ತಿಯಿಂದ ಸೃಜಿಸುವ ಗಜಾದಿ ಸೈನ್ಯಗಳು ಶತ್ರುಮಾರಣ ರೂಪ ಅರ್ಥಕ್ರಿಯಾಕಾರಿಗಳೇ ಆಗಿರುವುದರಿಂದ ಸತ್ಯವೇ ಆಗಿವೆ.

**ಸವಿತೃಸುಷಿರ ರಜ್ಜುಸರ್ಪಾದಿ ಜ್ಞಾನಮೇವ ಚ ಅರಿಷ್ಟಭಯಾದಿಹೇತುಃ । ನ ತು ಅರ್ಥಃ । ಸತ್ಯಪಿ ಅರ್ಥೇ ತದಜ್ಞಾನೇ ಭಯಾದ್ಯಭಾವಾತ್ ।**

(7) ಸೂರ್ಯನಲ್ಲಿ ರಂಧ್ರ, ಹಗ್ಗದಲ್ಲಿ ಹಾವು ಮುಂತಾದ ಕಡೆ ಸತ್ಯವಾದ ಅವುಗಳ ಜ್ಞಾನವೇ ಅರಿಷ್ಟಭಯಾದಿಕಾರಣವಾಗಿವೆ. ಹೊರತು ಅಸತ್ಯವಾದ ರಂಧ್ರ ಹಾವುಗಳೇ ಅರಿಷ್ಟ ಭಯಗಳಿಗೆ

ಕಾರಣವಲ್ಲ. ಜ್ಞಾನವು ಹೇತುವಾಗುವ ಸ್ಥಳಗಳಲ್ಲಿ ವಿಷಯಸ್ವರೂಪ ಸತ್ತಾಗಿದ್ದರೂ ಅದರ ಜ್ಞಾನವಿಲ್ಲದಿದ್ದಲ್ಲಿ ಕಾರ್ಯಸಿದ್ಧಿಯಾಗುವುದಿಲ್ಲ. ಹಾವು ಸತ್ಯವಾಗಿದ್ದರೂ ಅದರ ಜ್ಞಾನ ಬಾರದೆ ಭಯ ಉಂಟಾಗುವುದಿಲ್ಲ.

**ನಚೈವಂ ಅನುಮಿತಿಂ ಪ್ರತ್ಯಪಿ ಹೇತುವ್ಯಾಪ್ತ್ಯಾದಿಜ್ಞಾನಮೇವ ಕಾರಣಂ, ನತು ಹೇತ್ವಾದಿ ಇತಿ ವಾಚ್ಯಂ। ತಜ್ಞಾನಮಾತ್ರಸ್ಯ ಹೇತ್ವಾಭಾಸೇಽಪಿ ಸತ್ವಾತ್। ತ್ವನ್ಮತೇ ವೃತ್ತಿರೂಪಸ್ಯ ತತ್ಪ್ರತಿಬಿಂಬತ ಚೈತನ್ಯರೂಪಸ್ಯ ವಾ ಜ್ಞಾನಸ್ಯಾಪಿ ಮಿಥ್ಯಾತ್ವಾಚ್ಚ।**

ಹೀಗೇ ಅನುಮಿತಿಗೂ ಕೂಡ ನೀವು ಹೇಳುವಂತೆ ಸತ್ಯವಾದ ಹೇತು ಮುಂತಾದವು ಕಾರಣವಲ್ಲ, ಆ ಹೇತು ವ್ಯಾಪ್ತಿಗಳ ಜ್ಞಾನವೇ ಕಾರಣವೆಂದಾಯಿತು' ಎಂದು ಸತ್ತಿಗೆ ಸಾಧಕತ್ವವನ್ನು ಅದ್ವೈತಿ ನಿರಾಕರಿಸಿದರೆ ಹೇಳುತ್ತಾರೆ, ಹೇತುವ್ಯಾಪ್ತ್ಯಾದಿಗಳ ಜ್ಞಾನಮಾತ್ರವು ಹೇತ್ವಾಭಾಸದಲ್ಲಿಯೂ ಸುಲಭವಾಗುವುದರಿಂದ ಅದೇ ಸಾಧಕವಲ್ಲ. ಹೇತ್ವಾದಿ ಯಥಾರ್ಥಜ್ಞಾನವೇ ಸಾಧಕ. ಅದರಿಂದ ಸತ್ಯವಾದ ಹೇತು ಮುಂತಾದುದೂ ಸಾಧಕ ಇಲ್ಲದಿದ್ದರೆ ಜ್ಞಾನವು ಯಥಾರ್ಥವೆನಿಸದು. ನಿನ್ನ ಮತದಲ್ಲಿ ಹೇತ್ವಾದಿಗಳೂ ಮಿಥ್ಯಾ ಅಸಾಧಕ. ಅವುಗಳ ಜ್ಞಾನವೂ ಮಿಥ್ಯಾ ಅಸಾಧಕ. ಜ್ಞಾನವು ವೃತ್ತಿರೂಪವೆಂದರೂ ಮಿಥ್ಯಾ. ತತ್ಪ್ರತಿಬಿಂಬಿತ ಚೈತನ್ಯರೂಪವೆಂದರೂ ಅದು ಶುದ್ಧವಲ್ಲವಾದ್ದರಿಂದ ಮಿಥ್ಯಾ. ಅದರಿಂದ ಕಾರ್ಯಸಿದ್ಧಿಯೇ ಇಲ್ಲವಾಗುವುದರಿಂದ ಅಸತ್ತಿಗೆ ಸಾಧಕತ್ವವನ್ನು ಎಷ್ಟು ಮಾತ್ರಕ್ಕೂ ಸಮರ್ಥಿಸಿಕೊಳ್ಳಲಾರೆ.

**ಸತ್ಯಸರ್ಪಾದೇಸ್ತು ಅಭಿಸರ್ಪಣ ದಂಶನಾದಿರೇವ ಅರ್ಥಕ್ರಿಯಾ। ನ ತು ಭಯಾದಿಃ।**

''ಸತ್ಯಸರ್ಪಸ್ಥಳದಲ್ಲಿ ಸರ್ಪವೇ ಭಯಹೇತುವಾಗಿರುವುದು ಕಂಡಿದೆ. ಅದರಿಂದ ಅಸತ್ಯ ಸರ್ಪಸ್ಥಳದಲ್ಲಿಯೂ ಅಸತ್ಯವಾದ ಸರ್ಪಕ್ಕೇ ಭಯಹೇತುತ್ವವನ್ನು ಒಪ್ಪಬೇಕು'' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಭಯವು ಸರ್ಪದಿಂದಾಗುವುದಿಲ್ಲ. ಅದರ ಜ್ಞಾನದಿಂದಾಗುತ್ತದೆ. ಸರ್ಪದ ಕಾರ್ಯ ಭಯವಲ್ಲ. ಬಳಿಗೆ ಹರಿದು ಬರುವುದು ಕಚ್ಚುವುದು ಸರ್ಪದ ಕಾರ್ಯ. ಅಸತ್ಯಸರ್ಪಸ್ಥಳದಲ್ಲಿ ಸರ್ಪವಿಲ್ಲ ಅದರ ಜ್ಞಾನ ಮಾತ್ರವಿದೆ. ಅದರ ಕಾರ್ಯವಾದ ಭಯವಿದೆ. ಸತ್ಯವಾದ ಸರ್ಪಜ್ಞಾನವು ಭಯರೂಪ ಕಾರ್ಯಕ್ಕೆ ಸಾಧಕವಾಗಿದೆ.



**नन्वर्थानवच्छिन्नस्य ज्ञानस्य हेतुत्वेऽतिप्रसंगः। अवच्छिन्नस्य हेतुत्वेऽर्थोऽपि हेतुः स्यादिति चेन्न। घटावच्छिन्नस्य घटात्यन्ताभावध्वंसादेर्घटदेशकालभिन्नदेशकालादित्वेऽपि अवच्छेद-**

कस्य घटस्य तदभाववत्, घटेच्छाब्रह्मज्ञानयोर्घटज्ञानवेदान्त-साध्यत्वेऽपि घटब्रह्मणोस्तदभाववत्, घटप्रागभावस्य घटं प्रति— विशेषदर्शनाभावस्य च भ्रमं प्रति— विहितनिषिद्धकरणाभावयोः प्रत्यवायादिं प्रति— स्वर्गकामनायाश्च यागं प्रति— अतीतादिस्मृत्यादेर्दुःखादिकं प्रति— असद्विषयक परोक्षज्ञानस्य च तद्व्यवहारं प्रति— हेतुत्वेऽपि अवच्छेदकस्य घटस्य विशेषदर्शनस्य विहितनिषिद्धकरणयोः स्वर्गस्यातीतादेरत्यन्तासतश्च तदभाववत्, चिकीर्षित घटबुद्धेर्घट हेतुत्वेऽपि घटस्य तदभाववत्, ब्रह्मज्ञानस्य तदज्ञान निवर्तकत्वेऽप्युदासीनस्वभावस्य ब्रह्मणस्तदभाववत्, ब्रह्मा-ज्ञानस्य जगत्प्रति परिणामिकारणत्वेऽपि ब्रह्मणस्तदभाववच्च अर्थावच्छिन्नस्य हेतुत्वेऽपि अवच्छेदकार्थस्य कुरूणां क्षेत्रे वसतीत्यत्र कुरूणामिव ताटस्थ्येनाहेतुत्वोपपत्तेः । तथाच—

रज्जुसर्पादिधीसाध्यभयादौ सर्पपूर्वकम् ।
फलेच्छासाध्ययागादौ फलवन्नैव कारणम् ।।

---

**अतिप्रसंग इति** । उदासीनतृणादिज्ञानादपि भयकम्पाद्यापत्तिरूप इत्यर्थः । **विहितनिषिद्धेति** । विहितनिषिद्धयोः ये करणे तदभावयोरित्यर्थः । **ताटस्थ्येनेति** । क्रियाऽनन्वयित्वेऽपि व्यावर्तकत्वेनेत्यर्थः । **सर्पपूर्वकमिति** । सर्पादिपूर्वकमित्यर्थः ।



**ನನು ಅರ್ಥಾನವಚ್ಛಿನ್ನಸ್ಯ ಜ್ಞಾನಸ್ಯ ಹೇತುತ್ವೇ ಅತಿಪ್ರಸಂಗಃ। ಅವಚ್ಛಿನ್ನಸ್ಯ ಹೇತುತ್ವೇ ಅರ್ಥೋಽಪಿ ಹೇತುಃ ಸಾತ್ ಇತಿ ಚೇನ್ನ ।**

ಜ್ಞಾನಕಾರ್ಯ ಸ್ಥಳದಲ್ಲಿ ಸರ್ಪರೂಪ ಅರ್ಥವಿಶಿಷ್ಟಜ್ಞಾನಕ್ಕೇ ಹೇತುತ್ವವನ್ನು ಹೇಳಬೇಕು. ಕೇವಲ ಜ್ಞಾನಕ್ಕೆ ಹೇತುತ್ವವನ್ನು ಹೇಳಿದರೆ ಉದಾಸೀನತೃಣಾದಿಜ್ಞಾನಕ್ಕೂ ಭಯಕಂಪಾದಿ ಜನಕತ್ವವನ್ನು ಹೇಳಬೇಕಾದೀತು. ಅರ್ಥವಿಶೇಷವಿಶಿಷ್ಟಜ್ಞಾನಕ್ಕೆ ಹೇತುತ್ವವನ್ನು ಹೇಳಿದಾಗ 'ವಿಶಿಷ್ಟಸ್ಯ

ಯದ್‌ಭವತಿ ತದ್ ವಿಶೇಷಣಸ್ಯಾಪಿ' ಎಂಬಂತೆ ಜ್ಞಾನದಲ್ಲಿ ವಿಶೇಷಣವಾದ ಸರ್ಪಕ್ಕೂ ಭಯಹೇತುತ್ವವನ್ನು ಒಪ್ಪಬೇಕು. ಆದರಿಂದ ಸತ್ಯಸರ್ಪಸ್ಥಳದಲ್ಲಿ ಸತ್ಯಸರ್ಪಕ್ಕೆ ಭಯಹೇತುತ್ವದಂತೆ ಅಸತ್ಯಸ್ಥಳದಲ್ಲಿಯೂ ಅಸತ್ಯವಾದ ಸರ್ಪಕ್ಕೆ ಭಯಹೇತುತ್ವವನ್ನು ಒಪ್ಪಲೇಬೇಕು' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ.

**ಘಟಾವಚ್ಛಿನ್ನಸ್ಯ ಘಟಾತ್ಯಂತಾಭಾವಧ್ವಂಸಾದೇಃ ಘಟದೇಶಕಾಲ ಭಿನ್ನ ದೇಶಕಾಲಾದಿತ್ವೇಽಪಿ ಅವಚ್ಛೇದಕಸ್ಯ ಘಟಸ್ಯ ತದಭಾವವತ್ .....ಅರ್ಥಾವಚ್ಛಿನ್ನಸ್ಯ ಹೇತುತ್ವೇಽಪಿ ಅವಚ್ಛೇದಕಾರ್ಥಸ್ಯ ತಾಟಸ್ಥ್ಯೇನ ಅಹೇತುತ್ವೋಪಪತ್ತೇಃ ।**

ಘಟವಿಶಿಷ್ಟವಾದ ಘಟಾತ್ಯಂತಾಭಾವ ಘಟಧ್ವಂಸಾದಿಗಳಿಗೆ ಘಟದೇಶ ಕಾಲಕ್ಕಿಂತ ಭಿನ್ನವಾದ ದೇಶಕಾಲಗಳಲ್ಲಿಯೇ ವೃತ್ತಿತ್ವ ನಿಯಮವಿದ್ದರೂ ವಿಶೇಷಣವಾದ ಘಟಕ್ಕೆ ಘಟದೇಶಕಾಲಭಿನ್ನ ದೇಶಕಾಲವೃತ್ತಿತ್ವ ನಿಯಮವಿಲ್ಲ. ಹಾಗೇ ಧೂಮರೂಪ ಅರ್ಥಾವಚ್ಛಿನ್ನವಾದ, ಅರ್ಥವಿಶಿಷ್ಟವಾದ ಜ್ಞಾನಕ್ಕೆ ವಹ್ನಿಜ್ಞಾನ ಹೇತುತ್ವವಿದ್ದರೂ ಅವಚ್ಛೇದಕವಾದ, ವಿಶೇಷಣವಾದ ಧೂಮಕ್ಕೆ ಕ್ರಿಯಾನ್ವಯ ವಿಲ್ಲದಿದ್ದರೂ ವ್ಯಾವೃತ್ತಿ ಉಂಟುಮಾಡುವುದೆಂಬ ತಾಟಸ್ಥ್ಯದಿಂದ ಅಹೇತುತ್ವವನ್ನು ಹೇಳಬಹುದು.

**'ಕುರೂಣಾಂ ಕ್ಷೇತ್ರೇ ವಸತಿ' ಇತ್ಯತ್ರ ಕುರೂಣಾಮಿವ... ।**

'ಕುರುಗಳ ಕ್ಷೇತ್ರದಲ್ಲಿ ವಾಸಮಾಡುತ್ತಾನೆ' ಎನ್ನುವಲ್ಲಿ ಈಗ ಕ್ಷೇತ್ರವು ಕುರುವಂಶದವರ ಆಡಳಿತದಲ್ಲಿಲ್ಲದಿದ್ದರೂ ತಾಟಸ್ಥ್ಯದಿಂದ ಉಪಲಕ್ಷಣವಾಗಿ ಕುರುಗಳ ಒಡೆತನ ವಿವಕ್ಷಿತವಾಗಿದೆ. ಹಾಗೇ ಅರ್ಥವೂ ಕೂಡ ಜ್ಞಾನದಲ್ಲಿ ತಾಟಸ್ಥ್ಯದಿಂದ ಉಪಲಕ್ಷಣವಾಗಿ ಸಂಬಂಧಿಸಿದೆ. ಜ್ಞಾನದಲ್ಲಿರುವ ಹೇತುತ್ವವು ತಟಸ್ಥವಾಗಿರುವ ವಿಷಯದಲ್ಲಿ ಇರುವುದಿಲ್ಲ.

**ಘಟೇಚ್ಛಾ ಬ್ರಹ್ಮಜ್ಞಾನಯೋಃ ಘಟಜ್ಞಾನ ವೇದಾಂತ ಸಾಧ್ಯತ್ವೇಽಪಿ ಘಟಬ್ರಹ್ಮಣೋಃ ತದಭಾವವತ್...**

ತಟಸ್ಥವಾಗಿ ಉಪಲಕ್ಷಣವಾಗಿದ್ದು ವಿಶೇಷ್ಯದಂತೆ ಸಾಧಕವಾಗದಿರುವ ವಿಶೇಷಣ ಸ್ಥಳಗಳನ್ನು ಇನ್ನೂ ಕೆಲವನ್ನು ತೋರಿಸುತ್ತಾರೆ—

ಘಟೇಚ್ಛೆಯು ಘಟಜ್ಞಾನದಿಂದ ಸಾಧ್ಯ. ಆದರೆ ಘಟೇಚ್ಛೆಯಲ್ಲಿ ಉಪಲಕ್ಷಣವಾಗಿ ಘಟರೂಪ ವಿಷಯವು ಇರುವುದರಿಂದ ಅವಚ್ಛೇದಕವಾದರೂ ಆ ಘಟದಲ್ಲಿ ಘಟಜ್ಞಾನ ಸಾಧ್ಯತ್ವವಿಲ್ಲ. ಘಟಜ್ಞಾನ ಅನ್ಯಥಾಸಿದ್ಧ. ಆದರಿಂದಲೇ ಸಾಕ್ಷಾತ್ತಾಗಿ ಘಟ ಉಂಟಾಗುವುದಿಲ್ಲ. ಘಟಜ್ಞಾನದಿಂದ ಘಟೇಚ್ಛೇ, ಘಟೇಚ್ಛೆಯಿಂದ ಘಟವಿಷಯದಲ್ಲಿ ಪ್ರಯತ್ನ, ಚೇಷ್ಟಾಗಳುಂಟಾ ದಾಗಲೇ ಘಟೋತ್ಪತ್ತಿ. ಹೀಗಾಗಿ ಘಟೇಚ್ಛೆಯಲ್ಲಿರುವಂತೆ ಘಟಜ್ಞಾನಸಾಧ್ಯತ್ವವು ಘಟದಲ್ಲಿ ಇಲ್ಲ.

ಬ್ರಹ್ಮಜ್ಞಾನವು ವೇದಾಂತದಿಂದ ಸಾಧ್ಯ. ನಿತ್ಯವಾದ ಬ್ರಹ್ಮವು ವೇದಾಂತ ಸಾಧ್ಯವಲ್ಲ. ಏಕೆಂದರೆ ಬ್ರಹ್ಮವು ಬ್ರಹ್ಮಜ್ಞಾನದಲ್ಲಿ ಕೇವಲ ಉಪಲಕ್ಷಣವಾಗಿ ವಿಷಯತಾಸಂಬಂಧದಿಂದ ಇದೆ.

**ಘಟಪ್ರಾಗಭಾವಸ್ಯ ಘಟಂ ಪ್ರತಿ ಹೇತುತ್ವೇಽಪಿ ಅವಚ್ಛೇದಕಸ್ಯ ಘಟಸ್ಯ ತದಭಾವವತ್... ।**

ಘಟಾವಚ್ಛಿನ್ನ ಪ್ರಾಗಭಾವವು ಘಟಕ್ಕೆ ಹೇತುವಾದರೂ ಅವಚ್ಛೇದಕವಾದ ಘಟವು ಅದರಲ್ಲಿ ಉಪಲಕ್ಷಣವಾಗಿರುವುದರಿಂದ ಘಟವು ಘಟಕ್ಕೆ ಹೇತುವಲ್ಲ. ಆತ್ಮಾಶ್ರಯ ದೋಷದಿಂದ ಘಟವು ಘಟಕ್ಕೆ ಕಾರಣವಾಗುವುದಿಲ್ಲ. ಆದರೆ ಘಟಪ್ರಾಗಭಾವದಲ್ಲಿ ಅದು ಉಪಲಕ್ಷಣವಾಗಿರುವುದೂ ಅದಕ್ಕೆ ಇನ್ನೊಂದು ಕಾರಣ.

**ವಿಶೇಷದರ್ಶನಾಭಾವಸ್ಯ ಚ ಭ್ರಮಂ ಪ್ರತಿ ಹೇತುತ್ವೇಽಪಿ ವಿಶೇಷ ದರ್ಶನಸ್ಯ ತದಭಾವವತ್.....**

ಸ್ಥಾಣುಪುರುಷ ಭ್ರಮ ಸ್ಥಳದಲ್ಲಿ ಪುರುಷತ್ವವ್ಯಾಪ್ಯ ಕರಚರಣಾದಿಮತ್ವರೂಪ ವಿಶೇಷ ದರ್ಶನಾಭಾವದಿಂದ ಸ್ಥಾಣುವಿನಲ್ಲಿ ಪುರುಷತ್ವ ಭ್ರಮ ಬರುತ್ತದೆ. ವಿಶೇಷ ದರ್ಶನ ಪ್ರತಿಯೋಗಿಕ ಅಭಾವದಲ್ಲಿ ಭ್ರಮಹೇತುತ್ವವಿದೆ. ಆದರೆ ಅವಚ್ಛೇದಕವಾದ ವಿಶೇಷ ದರ್ಶನ ರೂಪ ಪ್ರತಿಯೋಗಿಯಲ್ಲಿ ಭ್ರಮಹೇತುತ್ವವಿಲ್ಲ.

**ವಿಹಿತನಿಷಿದ್ಧಕರಣಾಭಾವಯೋಃ ಪ್ರತ್ಯವಾಯಾದಿಂ ಪ್ರತಿ ಹೇತುತ್ವೇಽಪಿ ಅವಚ್ಛೇದಕಯೋಃ ವಿಹಿತ ನಿಷಿದ್ಧಕರಣಯೋಃ ತದಭಾವವತ್...**

'ವಿಹಿತ–ನಿಷಿದ್ಧ ಕರಣ–ಅಭಾವಯೋಃ' ವಿಹಿತಕರಣಾಭಾವಕ್ಕೆ ಪ್ರತ್ಯವಾಯ ಫಲ. ಮತ್ತು ನಿಷಿದ್ಧಕರಣಾಭಾವಕ್ಕೆ ಪ್ರತ್ಯವಾಯಪರಿಹಾರಗಳು ಫಲ. ವಿಹಿತವಾದ ಸಂಧ್ಯಾವಂದನ ಮಾಡದಿದ್ದರೆ ಪಾಪ ಉಂಟಾಗುವುದು. ನಿಷಿದ್ಧವಾದ ಏಕಾದಶಿ ಭೋಜನ ಮಾಡದಿರುವುದರಿಂದ, ಉಪವಾಸ ಮಾಡುವುದರಿಂದ ಪಾಪ ಪರಿಹಾರವಾಗುವುದು. ವಿಹಿತಕರಣದ ಅಭಾವಕ್ಕೆ ಪಾಪಸಾಧನತ್ವವಿದೆ. ಆದರೆ ಈ ಅಭಾವದಲ್ಲಿ ಉಪಲಕ್ಷಣವಾಗಿರುವ ವಿಹಿತಕರಣಕ್ಕೆ ಪಾಪಸಾಧನತ್ವವಿಲ್ಲ. ನಿಷಿದ್ಧಕರಣಾಭಾವಕ್ಕೆ ಪಾಪಪರಿಹಾರದ ಸಾಧನತ್ವವಿದೆ. ಆದರೆ ಅದರಲ್ಲಿ ಉಪಲಕ್ಷಣವಾಗಿರುವ ನಿಷಿದ್ಧಕರಣಕ್ಕೆ ಪಾಪಪರಿಹಾರ ಸಾಧನತ್ವವಿಲ್ಲ.

**ಸ್ವರ್ಗಕಾಮನಾಯಾಶ್ಚ ಯಾಗಂ ಪ್ರತಿ ಹೇತುತ್ವೇಽಪಿ ಸ್ವರ್ಗಸ್ಯ ತದಭಾವವತ್...**

'ಸ್ವರ್ಗಕಾಮೋ ಯಜೇತ' ಎಂದು ಸ್ವರ್ಗಕಾಮನೆ ಉಳ್ಳವನು ಯಾಗ ಮಾಡಬೇಕೆಂದು ಹೇಳಿದ್ದರಿಂದ, ಸ್ವರ್ಗಕಾಮನೆಯು ಯಾಗಕ್ಕೆ ನಿಮಿತ್ತ. ಆದರೆ ಆ ಕಾಮನೆಯಲ್ಲಿ ಉಪಲಕ್ಷಣವಾಗಿ ಸ್ವರ್ಗವು ವಿಷಯತಾ ಸಂಬಂಧದಿಂದ ಇದ್ದರೂ ಅದಕ್ಕೆ ಯಾಗನಿಮಿತ್ತತ್ವವಿಲ್ಲ. ಯಾಗಫಲತ್ವವೆ ಇದೆ.

**ಅತೀತಾದಿ ಸ್ಮೃತ್ಯಾದೇಃ ದುಃಖಾದಿಕಂ ಪ್ರತಿ ಹೇತುತ್ವೇಽಪಿ ಅತೀತಾದೇಃ ತದಭಾವವತ್...**

ಅತೀತವಾದ ದುಃಖ ಪ್ರಸಂಗವು ಸ್ಮರಣೆಗೆ ಬಂದರೆ ದುಃಖವಾಗುತ್ತದೆ. ಅತೀತದ ಸ್ಮರಣೆ ದುಃಖಹೇತು. ಆದರೆ ಆ ಸ್ಮರಣೆಯಲ್ಲಿ ಉಪಲಕ್ಷಣವಾಗಿ ಅವಚ್ಛೇದಕವಾಗಿರುವ ಅತೀತವು ದುಃಖಹೇತುವಲ್ಲ. ದುಃಖಕ್ಕೆ ಅವ್ಯವಹಿತ ಪೂರ್ವದಲ್ಲಿ ಅದು ಇಲ್ಲದಿರುವುದರಿಂದ ಅದಕ್ಕೆ ದುಃಖ ಹೇತುತ್ವ ಕೂಡುವುದಿಲ್ಲ.

**ಅಸದ್‌ವಿಷಯಕ ಪರೋಕ್ಷಜ್ಞಾನಸ್ಯ ಚ ತದ್‌ವ್ಯವಹಾರಂ ಪ್ರತಿ ಹೇತುತ್ವೇಽಪಿ ಅತ್ಯಂತಾಸತಃ ತದಭಾವವತ್...।**

ಅಸತ್ತಾದ ಶಶವಿಷಾಣಾದಿಗಳ ವಿಷಯದಲ್ಲಿ ಪರೋಕ್ಷಜ್ಞಾನ ಬಂದರೆ ಅದು ವ್ಯವಹಾರಕ್ಕೆ ಹೇತುವಾಗುತ್ತದೆ. ಆದರೆ ಆ ಜ್ಞಾನದಲ್ಲಿ ಗೋಚರವಾಗುವ ಅತ್ಯಂತಾಸತ್ ಶಶವಿಷಾಣವು ನಿಸ್ಸ್ವರೂಪನಾದ್ದರಿಂದ ಜ್ಞಾನದಲ್ಲಿ ಅವಚ್ಛೇದಕವಾದರೂ ವ್ಯವಹಾರ ಹೇತುವಾಗುವುದಿಲ್ಲ.

**ಚಿಕೀರ್ಷಿತ ಘಟಬುದ್ಧೇಃ ಘಟಹೇತುತ್ವೇಽಪಿ ಘಟಸ್ಯ ತದಭಾವವತ್...**

ಮುಂದೆ ಮಾಡಬೇಕೆಂದಿರುವ ಘಟದ ಜ್ಞಾನಕ್ಕೆಘಟವು ಇಚ್ಛಾಪ್ರಯತ್ನದ್ವಾರಾ ಪರಂಪರಯಾ ಘಟೋತ್ಪತ್ತಿಗೆ ಪ್ರಯೋಜಕವಾಗುವುದರಿಂದ ಅದನ್ನು ಘಟಹೇತುವೆಂದು ಒಪ್ಪಿದರೂ ಘಟಜ್ಞಾನದಲ್ಲಿ ಅವಚ್ಛೇದಕವಾಗಿರುವ ಘಟವು ಘಟಕ್ಕೆ ಹೇತು ಎಂದು ಒಪ್ಪಲು ಸರ್ವಥಾ ಸಾಧ್ಯವಿಲ್ಲ, ಆತ್ಮಾಶ್ರಯ ದೋಷ ಬರುವುದರಿಂದ. ಘಟದೇಶಕಾಲಭಿನ್ನ ದೇಶಕಾಲ ಸಂಬಂಧಿತ್ವವು ಘಟಕ್ಕೆ ಬರುವುದೆಂದರೆ ಅದು ಸ್ವವ್ಯಾಹತ.

**ಬ್ರಹ್ಮಾಜ್ಞಾನಸ್ಯ ತದಜ್ಞಾನ ನಿವರ್ತಕತ್ವೇಽಪಿ ಉದಾಸೀನ ಸ್ವಭಾವಸ್ಯ ಬ್ರಹ್ಮಣಃ ತದಭಾವವತ್...।**

ಬ್ರಹ್ಮಜ್ಞಾನವು ಬ್ರಹ್ಮಾಜ್ಞಾನ ನಿವರ್ತಕವಾದರೂ ಬ್ರಹ್ಮಜ್ಞಾನದಲ್ಲಿ ಅವಚ್ಛೇದಕವಾದ ಉದಾಸೀನ ಸ್ವಭಾವವಾದ ಶುದ್ಧ ಬ್ರಹ್ಮವು ಅಜ್ಞಾನ ನಿವರ್ತಕವಾಗುವುದಿಲ್ಲ. ವೃತ್ತ್ಯುಪಹಿತ ಬ್ರಹ್ಮವೇ ಚರಮ ವೃತ್ತಿಯಲ್ಲಿ ಅವಚ್ಛೇದಕವಾಗಿದೆ. ಅದೇ ವೃತ್ತಿನಿವರ್ತಕವಾಗಿದೆ ಎಂದು ಅದ್ವೈತಿ ಹೇಳಬಹುದು. ಆದರೆ ವೃತ್ತಿಯು ವೃತ್ತಿವಿಷಯವೆಂದರೆ ಅದು ಸ್ವಪ್ರಕಾಶವೆಂದಾದೀತು. ಮತ್ತು ಮಿಥ್ಯಾ ಆಗಿರುವ ವೃತ್ತ್ಯುಪಹಿತ ವಿಷಯಕವಾದ ವೃತ್ತಿಯು ಅಪ್ರಮಾ ಎಂದಾದೀತು.

**ಬ್ರಹ್ಮಾಜ್ಞಾನಸ್ಯ ಜಗತ್‌ಪ್ರತಿ ಪರಿಣಾಮಿಕಾರಣತ್ವೇಽಪಿ ಬ್ರಹ್ಮಣಸ್ತದಭಾವವಚ್ಚ ।**

ಬ್ರಹ್ಮಾಜ್ಞಾನವು ಜಗತ್ತಿಗೆ ಪರಿಣಾಮಿಕಾರಣವಾದರೂ ಅದರಲ್ಲಿ ಉಪಲಕ್ಷಣವಾಗಿ ಅವಚ್ಛೇದಕವಾದ ಬ್ರಹ್ಮವು ಪರಿಣಾಮಿಕಾರಣವಲ್ಲ. ಪರಿಣಾಮಿಕಾರಣವೇ ಎಂದರೆ ಚೇತನದ ಪರಿಣಾಮವಾದ ಜಗತ್ತು ಜಡವಾಗಿರಲು ಶಕ್ಯವಿಲ್ಲ.

ತಥಾಚ—

ರಜ್ಜು ಸರ್ಪಾದಿ ಧೀಸಾಧ್ಯ ಭಯಾದೌ ಸರ್ಪಪೂರ್ವಕಂ ।
ಫಲೇಚ್ಛಾಸಾಧ್ಯಯಾಗಾದೌ ಫಲವನ್ನೈವ ಕಾರಣಂ ।

ಇದರ ಸಾರಾಂಶವಿಷ್ಟು—ಫಲೇಚ್ಛಾ ಸಾಧ್ಯವಾದ ಯಾಗಾದಿಗಳಲ್ಲಿ ಫಲವು ಹೇಗೋ ಹಾಗೇ ರಜ್ಜು ಸರ್ಪಾದಿ ಜ್ಞಾನಸಾಧ್ಯವಾದ ಭಯಾದಿಗಳಲ್ಲಿ ಸರ್ಪಾದಿ ಸರ್ವಥಾ ಕಾರಣವಲ್ಲ.



**नन्वथापि मिथ्यार्थे ज्ञानं प्रति व्यावृत्तिधीहेतुत्वरूप-व्यावर्तकत्वमस्तीत्यसतोऽपि हेतुतेति चेन्न । यतो व्यावृत्तिधी हेतु धीविषयत्वमेव व्यावर्तकत्वम् । सत्यपि दण्डे तदज्ञाने व्यावृत्त्यज्ञानात् ।**

**नन्वथाप्यवच्छेदकस्य मिथ्यात्वेऽवच्छिन्नस्यापि तन्नियमादसत्यस्य हेतुतेति चेन्न । तुच्छस्य ज्ञाने तुच्छाद्वैलक्षण्ये च तुच्छत्वस्य, प्रातिभासिकाद्वैलक्षण्ये च प्रातिभासिकत्वस्य, पञ्चम प्रकारायामात्म स्वरूपभूतायां वा अनिर्वचनीयाज्ञान निवृत्तौ च चतुर्थप्रकाररूपानिर्वचनीयत्वस्य, पारमार्थिकात्मस्वरूपे तद्भिन्ने वाऽनृतद्वैतस्याभावे ततो व्यावृत्तौ चानृतत्वस्यादर्शनात् । तत्रावच्छेदकानामसदादीनां ताटस्थ्येऽत्रापि विषयस्तथास्तु ।**



ननु कादाचित्कपदार्थघटितोपाधेः कादाचित्कत्ववत्, मिथ्यात्वावच्छिन्नस्य मिथ्यात्वमेवेत्यभिप्रेत्य मिथ्यात्वमेव किन्न स्यादिति शङ्कते **नन्वथापीति । अदर्शनादिति** । एतच्च षष्ठ्यन्तपदैः सर्वत्र संबध्यते ।



ನನ್ವಥಾಪಿ ಮಿಥ್ಯಾರ್ಥೇ ಜ್ಞಾನಂ ಪ್ರತಿ ವ್ಯಾವೃತ್ತಿಧೀಹೇತುತ್ವ ರೂಪ ವ್ಯಾವರ್ತಕತ್ವಮಸ್ತೀತಿ, ಅಸತೋಽಪಿ ಹೇತುತೇತಿ ಚೇನ್ನ । ಯತೋ ವ್ಯಾವೃತ್ತಿಧೀಹೇತುಧೀ ವಿಷಯತ್ವಮೇವ ವ್ಯಾವರ್ತಕತ್ವಂ । ಸತ್ಯಪಿ ದಂಡೇ ತದಜ್ಞಾನೇ ವ್ಯಾವೃತ್ತ್ಯಜ್ಞಾನಾತ್ ।

'ಅಸತ್ತು ಕೂಡ ಜ್ಞಾನದಲ್ಲಿ ವಿಷಯತಯಾ ಅವಚ್ಛೇದಕವಾಗಿ ಅದರಲ್ಲಿ ಇತರ ಜ್ಞಾನದಿಂದ ವ್ಯಾವೃತ್ತಿಜ್ಞಾನ ಉಂಟು ಮಾಡುತ್ತದೆ. ಹೀಗಾಗಿ ಅಸತ್ತಿಗೆ ವ್ಯಾವೃತ್ತಿಜ್ಞಾನಸಾಧಕತ್ವವಿದೆ. ಅಸತ್ತಿಗೆ ಸಾಧಕತ್ವವಿಲ್ಲ ಎನ್ನಲಾಗದು' ಎಂದರೆ ಹೇಳುತ್ತೇವೆ— ವ್ಯಾವೃತ್ತಿಜ್ಞಾನ ಉಂಟು ಮಾಡುವುದೆಂದರೆ ವ್ಯಾವೃತ್ತಿಜ್ಞಾನ ಉಂಟು ಮಾಡುವ ಜ್ಞಾನಕ್ಕೆ ವಿಷಯವಾಗುವುದೆಂದೇ ಅರ್ಥ. ದೇವದತ್ತನಲ್ಲಿ ವ್ಯಾವರ್ತಕವಾದ ದಂಡವು ವಸ್ತುತಃ ಇರುವ ಕಾರಣವೆ ಅವನಲ್ಲಿ ಅದಂಡಿಪುರುಷವ್ಯಾವೃತ್ತಿಜ್ಞಾನವು ಉಂಟಾಗುವುದಿಲ್ಲ. ದೇವದತ್ತನಲ್ಲಿ ದಂಡವಿರುವುದು ತಿಳಿದುಬರಬೇಕು. ಹಾಗೇ ಸರ್ಪಜ್ಞಾನದಲ್ಲಿ ಘಟಜ್ಞಾನಕ್ಕಿಂತ ವ್ಯಾವೃತ್ತಿ ತಿಳಿಯಬೇಕಾದರೆ ವ್ಯಾವರ್ತಕವಾದ ಸರ್ಪದ ಜ್ಞಾನ ಬರಬೇಕು. 'ಇದು ಸರ್ಪಜ್ಞಾನ' ಎಂದು ಅನುವ್ಯವಸಾಯ ಬರಬೇಕು. ಆಗ 'ಈ ಸರ್ಪಜ್ಞಾನವು ಘಟಜ್ಞಾನಕ್ಕಿಂತ ಭಿನ್ನ. ಸರ್ಪವಿಷಯವಾದ್ದರಿಂದ ಎಂದು ಜ್ಞಾನಬರುತ್ತದೆ. ಸರ್ಪವು ವ್ಯಾವರ್ತಕವೆನಿಸುತ್ತದೆ. ಸರ್ಪವು ಇಲ್ಲಿ ಸತ್ ಆಗಬಹುದು ಅಸತ್ತೂ ಆಗಬಹುದು. ಹೀಗೆ ಸರ್ಪವು ಜ್ಞಾತವಾಗಿಯೇ ವ್ಯಾವರ್ತಕ ವೆನಿಸುವುದರಿಂದ ಸರ್ಪಜ್ಞಾನವೇ ವ್ಯಾವರ್ತಕ ಹೊರತು ವಸ್ತುಸತ್ತಾಗಿ ಸರ್ಪವು ವ್ಯಾವರ್ತಕವಲ್ಲ. ಆದರಿಂದ ಅಸತ್ತಿಗೆ ಸಾಧಕತ್ವವಿಲ್ಲ.

**ನನ್ವಥಾಪಿ ಅವಚ್ಛೇದಕಸ್ಯ ಮಿಥ್ಯಾತ್ವೇ ಅವಚ್ಛಿನ್ನಸ್ಯಾಪಿ ತನ್ನಿಯಮಾತ್ ಅಸತ್ಯಸ್ಯ ಹೇತುತಾ ಇತಿಚೇನ್ನ। ತುಚ್ಛಸ್ಯ ಜ್ಞಾನೇ ತುಚ್ಛಾತ್ ವೈಲಕ್ಷಣ್ಯೇ ಚ ತುಚ್ಛತ್ವಸ್ಯ ಅದರ್ಶನಾತ್।**

'ಅನಿತ್ಯಪದಾರ್ಥ ಘಟಿತಧರ್ಮವು ಅನಿತ್ಯವೆನಿಸುವಂತೆ ಅಸತ್‌ವಿಷಯ ವಿಶಿಷ್ಟವಾದ ಜ್ಞಾನವೂ ಅಸತ್ತಾಗುತ್ತದೆ. ಅದಕ್ಕೆ ಸಾಧಕತ್ವವಿರುವುದರಿಂದ ಅಸತ್ ಸಾಧಕವೆ' ಎಂದು ಅದ್ವೈತಿ ಹೇಳಿದರೆ, ನಾವು ಹೇಳುತ್ತೇವೆ—ಅಸತ್ ವಿಷಯ ಜ್ಞಾನವು ಅಸತ್ತಾಗಿರುವುದು ಎಲ್ಲಿಯೂ ಕಂಡಿಲ್ಲ. ಅಸತ್‌ಪ್ರತಿಯೋಗಿಕವಾದ ವೈಲಕ್ಷಣ್ಯವು ಅಸತ್ತಾಗಿರುವುದನ್ನು ನೀನೂ ಒಪ್ಪಿಲ್ಲ. 'ಅಸದ್‌ವಿಷಯಕ ವಾದ ಜ್ಞಾನವೂ ಅಸತ್ತಾಗಿರುವುದು ಸ್ವಪ್ನದಲ್ಲಿ ಕಂಡಿದೆ' ಎಂದರೆ ಅದು ಸರಿಯಲ್ಲ. ಸ್ವಪ್ನದಲ್ಲಿ ಕಾಣುವ ಗಜಕ್ಕೆ ಬಾಧ ಬಂದರೂ ಗಜಜ್ಞಾನಕ್ಕೆ ಬಾಧವಿಲ್ಲದಿರುವುದರಿಂದ ಅದು ಅಸತ್ತಲ್ಲ.

**ಪ್ರಾತಿಭಾಸಿಕಾದ್ ವೈಲಕ್ಷಣ್ಯೇ ಚ ಪ್ರಾತಿಭಾಸಿಕತ್ವಸ್ಯ ಅದರ್ಶನಾತ್।**

ವ್ಯಾವಹಾರಿಕದಲ್ಲಿ ಪ್ರಾತಿಭಾಸಿಕಕ್ಕಿಂತ ವೈಲಕ್ಷಣ್ಯವನ್ನು ನೀನು ಒಪ್ಪುತ್ತಿರುವೆ. ಅದು ಪ್ರಾತಿಭಾಸಿಕ ಪ್ರತಿಯೋಗಿಕವಾದ್ದರಿಂದ ಪ್ರಾತಿಭಾಸಿಕ ಘಟಿತ ಧರ್ಮವಾಗಿದ್ದರೂ ಅದನ್ನು ಪ್ರಾತಿಭಾಸಿಕವೆಂದು ನೀನು ಒಪ್ಪುವುದಿಲ್ಲ. ವ್ಯಾವಹಾರಿಕ ಎನ್ನುತ್ತಿರುವೆ.

**ಪಂಚಮಪ್ರಕಾರಾಯಾಂ ಆತ್ಮಸ್ವರೂಪಭೂತಾಯಾಂ ವಾ ಅನಿರ್ವಚನೀಯಾಜ್ಞಾನ-ನಿವೃತ್ತೌ ಚ ಚತುರ್ಥಪ್ರಕಾರರೂಪ ಅನಿರ್ವಚನೀಯತ್ವಸ್ಯ ಅದರ್ಶನಾತ್।**

ಅವಿದ್ಯಾನಿವೃತ್ತಿಯು ಪಂಚಮಪ್ರಕಾರವೆಂದು ಅದ್ವೈತಿಗಳಲ್ಲಿ ಒಂದು ಮತ. ಸತ್ ಅಸತ್ ಸದಸತ್ ಈ ಮೂರು ಪ್ರಕಾರಗಳಿಗಿಂತ ವಿಲಕ್ಷಣವಾದುದು ಅನಿರ್ವಚನೀಯ. ಇದು ಸದಸದ್

ವಿಲಕ್ಷಣವೆಂಬ ನಾಲ್ಕನೆ ಪ್ರಕಾರ. ಅವಿದ್ಯೆಯು ನಾಲ್ಕನೆ ಪ್ರಕಾರವಾಗಿದೆ. ಅದರಿಂದ ಅದರ ನಿವೃತ್ತಿರೂಪ ಮೋಕ್ಷವು ಅದಕ್ಕಿಂತಲೂ ವಿಲಕ್ಷಣವಾಗಿರುವುದರಿಂದ ಪಂಚಮ ಪ್ರಕಾರವೇ ಆಗಬೇಕು, 'ಯಕ್ಷಾನುರೂಪೋ ಬಲಿಃ' ಎಂದು ನ್ಯಾಯ. ತೃತೀಯಪ್ರಕಾರ ವಿಲಕ್ಷಣವು ಚತುರ್ಥಪ್ರಕಾರವಾದರೆ, ಚತುರ್ಥಪ್ರಕಾರ ವಿಲಕ್ಷಣವು ಪಂಚಮಪ್ರಕಾರವೇ ಆಗಬೇಕು! ಎಂದು ಈ ಮತವು ಹೇಳುತ್ತದೆ. ಅವಿದ್ಯಾನಿವೃತ್ತಿಯು ಬ್ರಹ್ಮನಲ್ಲಿ ಆಗುವುದರಿಂದ ಅಧಿಕರಣಾತಿರಿಕ್ತವಾಗಿ ಅಭಾವವಿಲ್ಲದ್ದರಿಂದ 'ಆತ್ಮೈವಾಜ್ಞಾನ ಹಾನಿಃ' ಎಂದು ಇನ್ನೊಂದು ಮತ. ಅವಿದ್ಯಾನಿವೃತ್ತಿಯು ಆತ್ಮಸ್ವರೂಪವೆಂದು ಇವರು ಹೇಳುತ್ತಾರೆ. ಎರಡೂ ಮತದವರೂ ಕೂಡ ಅನಿರ್ವಚನೀಯ ಅವಿದ್ಯಾನಿವೃತ್ತಿಯಲ್ಲಿ ಚತುರ್ಥಪ್ರಕಾರರೂಪ ಅನಿರ್ವಚನೀಯತ್ವವನ್ನು ಒಪ್ಪುವುದಿಲ್ಲ. ಅದರಂತೇ ಅಸತ್ ಅವಚ್ಛೇದಕವಾದರೆ ಅವಚ್ಛಿನ್ನವೂ ಅಸತ್ತಾಗಬೇಕೆಂದು ನಿಯಮವಿಟ್ಟುಕೊಳ್ಳಬಾರದು.

**ಪಾರಮಾರ್ಥಿಕ ಆತ್ಮಸ್ವರೂಪೇ ತದ್‌ಭಿನ್ನೇ ವಾ ಅನ್ಯತದ್ವೈತಸ್ಯ ಅಭಾವೇ ತತೋ ವ್ಯಾವೃತ್ತೌ ಚ ಅನೃತತ್ವಸ್ಯ ಅದರ್ಶನಾತ್ ।**

ಅನೃತವಾದ ದ್ವೈತಪ್ರಪಂಚದ ಅಭಾವದಲ್ಲಿಯೂ ಅದರ ಭೇದದಲ್ಲಿಯೂ ಅನೃತತ್ವವು ಕಂಡಿಲ್ಲ. ದ್ವೈತಾಭಾವ ದ್ವೈತವ್ಯಾವೃತ್ತಿಗಳೆರಡೂ ಅಭಾವರೂಪವಾದ್ದರಿಂದ ಅಭಾವರೂಪ ಧರ್ಮವನ್ನು ಸತ್ಯವೆಂದು ಒಪ್ಪಿದರೆ ಅದ್ವೈತಕ್ಕೆ ಹಾನಿ ಇಲ್ಲ ಎಂದು ಮಂಡನ ಮತವಿದೆ. ಈ ಮತದಲ್ಲಿ ದ್ವೈತಾಭಾವ ದ್ವೈತವ್ಯಾವೃತ್ತಿಗಳು ಪಾರಮಾರ್ಥಿಕ ಆತ್ಮಸ್ವರೂಪವೆನ್ನುತ್ತಾರೆ, ಅಭಾವವನ್ನು ಅಧಿಕರಣ ಸ್ವರೂಪವೆನ್ನುವವರು ಇವರು. ಅದನ್ನು ಅತಿರಿಕ್ತವೆನ್ನುವವರು ಆತ್ಮಕ್ಕಿಂತ ಭಿನ್ನ ಎನ್ನುತ್ತಾರೆ. ಇಬ್ಬರೂ ಈ ಅನ್ಯತದ್ವೈತಾಭಾವ ಅನ್ಯತದ್ವೈತವ್ಯಾವೃತ್ತಿಗಳನ್ನು ಅನೃತ ವೆನ್ನುವುದಿಲ್ಲ. ಅದರಿಂದ ಅಸದ್‌ವಿಷಯಕಜ್ಞಾನವನ್ನು ಅಸತ್ತೆನ್ನಬಾರದು. ಅಸತ್ತಿಗೆ ಬಾಧವಿದ್ದರೂ ಅಸದ್‌ವಿಷಯಕಜ್ಞಾನಕ್ಕೆ ಬಾಧವಿರುವುದಿಲ್ಲ.

**ತತ್ರಾವಚ್ಛೇದಕಾನಾಂ ಅಸದಾದೀನಾಂ ತಾಟಸ್ಥ್ಯೇ ಅತ್ರಾಪಿ ವಿಷಯಃ ತಥಾಸ್ತು ।**

ತುಚ್ಛಜ್ಞಾನಾದಿಗಳಲ್ಲಿ ಅವಚ್ಛೇದಕವಾದ ಅಸತ್ ಪ್ರಾತಿಭಾಸಿಕ ಮುಂತಾದುವು ತಟಸ್ಥವಾಗಿದ್ದು ಉಪಲಕ್ಷಣವಾಗಿರುವುದರಿಂದ ಆ ತುಚ್ಛಜ್ಞಾನಾದಿಗಳು ಅಸತ್ ಪ್ರಾತಿಭಾಸಿಕ ಎಂದು ಮುಂತಾಗಿ ಕರೆಸಿಕೊಳ್ಳುವುದಿಲ್ಲ ಎನ್ನುವುದಾದರೆ ಪ್ರಕೃತ ಅವಚ್ಛೇದಕವಾದ ವಿಷಯವು ಮಿಥ್ಯಾ ಆದ ಮಾತ್ರಕ್ಕೆ ಅವಚ್ಛಿನ್ನವಾದ ಜ್ಞಾನವೂ ಮಿಥ್ಯಾ ಎನ್ನಲಾಗದು. ಜ್ಞಾನವು ಸತ್ಯವೇ. ಜ್ಞಾನಸಾಧ್ಯಕಾರ್ಯ ಸ್ಥಳದಲ್ಲಿ ಸತ್ಯವಾದ ಜ್ಞಾನಕ್ಕೇ ಸಾಧಕತ್ವ ಹೊರತು ಅಸತ್ತಾದ ವಿಷಯಕ್ಕೆ ಸಾಧಕತ್ವವಿಲ್ಲ.



**वस्तुतस्त्वर्थानवच्छिन्नमेव ज्ञानं हेतुः । न चातिप्रसंगः ।**

**विषयावच्छेदमनपेक्ष्य स्वत एव सर्पज्ञानस्यासर्पज्ञानाद् व्यावृत्तेः । तथाहि । सर्पज्ञानमसर्पज्ञानात्तावद् व्यावृत्तं । व्यावृत्तिश्च व्यावर्तकाधीना । नच विषयस्तत्संम्बन्धो वा व्यावर्तकः । स्वरूपातिरिक्त द्विष्ठ सम्बन्धाभावात् । असंबद्धस्य चाव्यावर्तकत्वात् ।**

**अथ संबंधांतरमंतरेण विशिष्टव्यहारजननयोग्यं स्वरूपमेव वा ज्ञानमात्रनिष्ठधर्मो वा संबंधः, तर्हि विषयमनन्तर्भाव्य ज्ञान एव विशेषः सिद्धः । किंच सर्पज्ञानमसर्पज्ञानाद्धर्म्यन्तरसंबंधमनपेक्ष्य विलक्षणम् । तज्जनकविलक्षण जन्यत्वात् यवांकुरात्कलमांकुरवत् । तज्जन्यविलक्षण जनकत्वात् यवबीजात्कलमबीजवत् । नच विलक्षण विषय संबंधेनैव हेत्वोरुपपत्तेरप्रयोजकत्वम् । तथात्वे हि यवबीज तदंकुर विलक्षण जन्यजनके कलमांकुरतद्बीजे अपि कदाचिद्यवांकुर तद्बीजाभ्यां कलमांकुरत्व तद्बीजत्व रूपस्वाभाविकवैलक्षण्यं विनोपलक्षणभूतचैत्रादि संबंधित्वमात्रेण विलक्षणे स्याताम् ।**

**साक्षात्कारोऽपि परोक्षज्ञानादन्यसंबंधित्वमात्रेण विलक्षणः स्यात् । गृहमपि संस्थानविशेषं विना विचित्रकाकहंसोपलक्षणत्वमात्रेण विचित्र कारणजं विचित्र कार्यकारि च स्यात् ।**

---

ननु असतोऽपि व्यावृत्तिधीहेतुज्ञानविषयत्वेन व्यावर्तकत्वे असज्ज्ञानमसज्ज्ञानव्यावर्तकमित्युक्तं स्यात् । एवञ्च व्यावर्तकासज्ज्ञानस्यापि व्यावर्तकासज्ज्ञानान्तरापेक्षत्वेन अनवस्था स्यादिति विषयस्यैव व्यावृत्तिधीहेतुत्वं वक्तव्यमिति असतः साधकत्वं दुर्वारमित्यपरितोषादाह **वस्तुतस्त्विति । स्वत एवेति ।** स्वनिष्ठवैलक्षण्यादेवेत्यर्थः । ननु विषयमनन्तर्भाव्य सम्बन्धः, परव्यावर्तकत्वं तु तेन संबन्धेन विषयस्यैवेत्यरुचेराह **किञ्चेति ।** सिद्धसाधनवारणायाह **धर्म्यन्तरेति । यवाङ्कुरादिति ।** अत्र यत्कार्यं यत्कार्यजनकविजातीयकारणजन्यं तत् तत्कार्यतो

विजातीयम् इति सामान्यव्याप्तिर्द्रष्टव्या । **तज्जन्येति ।** असर्पज्ञानजन्य-कार्यविजातीयकार्यजनकत्वादित्यर्थः । अत्रापि सामान्यव्याप्तिरभिमता ।



**ವಸ್ತುತಸ್ತು ಅರ್ಥಾನವಚ್ಛಿನ್ನಮೇವ ಜ್ಞಾನಂ ಹೇತುಃ। ನ ಚ ಅತಿಪ್ರಸಂಗಃ । ವಿಷಯಾವಚ್ಛೇದಮನಪೇಕ್ಷ್ಯ ಸ್ವತ ಏವ ಸರ್ಪಜ್ಞಾನಸ್ಯಾಸರ್ಪಜ್ಞಾನಾದ್‌ವ್ಯಾವೃತ್ತೇಃ।**

ಅಸತ್ತಿಗೆ ವ್ಯಾವೃತ್ತಿಜ್ಞಾನಹೇತುಜ್ಞಾನ ವಿಷಯತ್ವೇನ ವ್ಯಾವರ್ತಕತ್ವವನ್ನೇ ಹೇಳುವುದಾದರೆ ಅಸಜ್ಞಾನವು ಅಸಜ್ಞಾನಕ್ಕೆ ವ್ಯಾವರ್ತಕ ಎಂದಂತಾಯಿತು. ಇದರಿಂದ ವ್ಯಾವರ್ತಕ ಅಸಜ್ಞಾನಕ್ಕೂ ಇನ್ನೊಂದು ವ್ಯಾವರ್ತಕಅಸಜ್ಞಾನ ಬೇಕು ಎಂದಾಗುವುದರಿಂದ ಅನವಸ್ಥೆ. ಆದರಿಂದ ವಿಷಯಕ್ಕೇ ಅದು ಅಸತ್ತಾದರೂ ವ್ಯಾವೃತ್ತಿ ಜ್ಞಾನ ಜನಕತ್ವವನ್ನು ಒಪ್ಪಬೇಕು. ಅಸತ್ತಿಗೆ ಸಾಧಕತ್ವವಿರಲೇಬೇಕು' ಎಂದು ಅದ್ವೈತಿ ಹೇಳಿದರೆ ಹೇಳುತ್ತಾರೆ—ವಸ್ತುತಃ ವಿಷಯಕ್ಕೆ ವ್ಯಾವರ್ತಕತ್ವವನ್ನು ಒಪ್ಪುವುದೇ ಅನಾವಶ್ಯಕ. ಒಪ್ಪಿದರೆ ತಾನೆ ಸ್ವರೂಪೇಣ ವ್ಯಾವರ್ತಕವೆ? ಅಥವಾ ವ್ಯಾವರ್ತಕ ಜ್ಞಾನವಿಷಯತ್ವೇನ ವ್ಯಾವರ್ತಕತ್ವವೆ? ಎಂಬ ಪ್ರಶ್ನೆಗೆ ಅವಕಾಶ ಸಿಗುತ್ತದೆ? ವಸ್ತುತಃ ವಿಷಯಅನವಚ್ಛಿನ್ನವಾಗಿ ಜ್ಞಾನವು ತನ್ನಲ್ಲಿಯೇ ಸ್ವಾಭಾವಿಕವಾಗಿರುವ ವೈಲಕ್ಷಣ್ಯದಿಂದ ವ್ಯಾವರ್ತಕವಾಗುತ್ತದೆ, ಸಾಧಕವಾಗುತ್ತದೆ.

'ಹಾಗಾದರೆ ಘಟಾದಿಜ್ಞಾನವೂ ಸರ್ಪಜ್ಞಾನದಂತೆ ಭಯಕಾರಣವಾದೀತು' ಎಂದರೆ, ಈ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ, ವಿಷಯಾವಚ್ಛೇದವಿಲ್ಲದೆಯೆ ಸರ್ಪಜ್ಞಾನವು ಅಸರ್ಪ ಜ್ಞಾನಕ್ಕಿಂತ ಸ್ವತಃ ವಿಲಕ್ಷಣವಾಗಿದೆ. ಈ ವೈಲಕ್ಷಣ್ಯವು ಘಟಜ್ಞಾನದಲ್ಲಿಲ್ಲದ್ದರಿಂದ ಘಟಜ್ಞಾನವು ಭಯಕಾರಣವಾದೀತೆಂದು ಅತಿಪ್ರಸಕ್ತಿ ಇಲ್ಲ.

**ತಥಾಹಿ । ಸರ್ಪಜ್ಞಾನಂ ಅಸರ್ಪಜ್ಞಾನಾತ್ ವ್ಯಾವೃತ್ತಂ। ವ್ಯಾವೃತ್ತಿಶ್ಚ ವ್ಯಾವರ್ತಕಾಧೀನಾ । ನಚ ವಿಷಯಃ, ತತ್‌ಸಂಬಂಧೋ ವಾ ವ್ಯಾವರ್ತಕಃ । ಸ್ವರೂಪಾತಿರಿಕ್ತ ದ್ವಿಷ್ಠ ಸಂಬಂಧಾ ಭಾವಾತ್ । ಅಸಂಬದ್ಧಸ್ಯ ಚ ಅವ್ಯಾವರ್ತಕತ್ವಾತ್ ।**

ವಿಷಯಾವಚ್ಛೇದದ ಅಪೇಕ್ಷೆ ಇಲ್ಲದೆ ಜ್ಞಾನವು ಅನ್ಯಜ್ಞಾನದಿಂದ ಸ್ವತಃ ಸ್ವರೂಪ ವೈಲಕ್ಷಣ್ಯದಿಂದಲೇ ವ್ಯಾವೃತ್ತವಾಗುತ್ತದೆ, ಸಾಧಕವಾಗುತ್ತದೆ. ಹೇಗೆಂದರೆ, ಹೇಳುತ್ತೇವೆ—ಸರ್ಪಜ್ಞಾನವು ಅಸರ್ಪಜ್ಞಾನದಿಂದ ವ್ಯಾವೃತ್ತವಾಗಿದೆ ಎನ್ನುವುದರಲ್ಲಿ ವಿವಾದವಿಲ್ಲ. ವ್ಯಾವೃತ್ತಿಯು ವ್ಯಾವರ್ತಕಾಧೀನ ಎಂಬುದೂ ಸರ್ವಸಮ್ಮತ. ವ್ಯಾವರ್ತಕವು ಯಾವುದು? ವಿಷಯವಾಗಲಿ ಅದರ ಸಂಬಂಧವಾಗಲಿ ವ್ಯಾವರ್ತಕವಲ್ಲ. ಏಕೆಂದರೆ ಜ್ಞಾನಕ್ಕೆ ಮತ್ತು ವಿಷಯಕ್ಕೆ ಸ್ವರೂಪಾತಿರಿಕ್ತವಾಗಿದ್ದು ದ್ವಿಷ್ಠವಾದ ಸಂಬಂಧ ಒಂದು ಇಲ್ಲ. ಜ್ಞಾನದಿಂದ ಸಂಬದ್ಧವಾಗದ ವಿಷಯವೂ ವಿಷಯ ಸಂಬಂಧವೂ ವ್ಯಾವರ್ತಕವಾಗುವುದಿಲ್ಲ. ಹೀಗಾಗಿ ಜ್ಞಾನಸ್ವರೂಪವೇ ಸಂಬಂಧ ಎನ್ನಬೇಕು.

**ಅಥ ಸಂಬಂಧಾಂತರಂ ಅಂತರೇಣ ವಿಶಿಷ್ಟವ್ಯವಹಾರ ಜನನ ಯೋಗ್ಯಂ ಸ್ವರೂಪಮೇವ ವಾ ಜ್ಞಾನಮಾತ್ರನಿಷ್ಠಧರ್ಮೋ ವಾ ಸಂಬಂಧಃ । ತರ್ಹಿ ವಿಷಯಮನಂತರ್ಭಾವ್ಯ ಜ್ಞಾನ ಏವ ವಿಶೇಷಃ ಸಿದ್ಧಃ ।**

ಬೇರೆ ಸಂಬಂಧವಿಲ್ಲದೆಯೇ ವಿಶಿಷ್ಟವ್ಯವಹಾರಜನನ ಯೋಗ್ಯವಾದ ಜ್ಞಾನಸ್ವರೂಪವೇ ಸಂಬಂಧ ಅಥವಾ ಜ್ಞಾನನಿಷ್ಠವಾದ ಧರ್ಮವೇ ಸಂಬಂಧ ಎನ್ನುತ್ತೇವೆ, ಎಂದರೆ ಜ್ಞಾನದಲ್ಲಿ ವಿಷಯ ಘಟಿತವಾಗದಿರುವ ಜ್ಞಾನನಿಷ್ಠವಾಗಿರುವ ಒಂದು ವೈಲಕ್ಷಣ್ಯವು ಸಿದ್ಧವಾಯಿತು.

**ಕಿಂಚ ಸರ್ಪಜ್ಞಾನಂ ಅಸರ್ಪಜ್ಞಾನಾತ್ ಧರ್ಮ್ಯಂತರಸಂಬಂಧಮನಪೇಕ್ಷ್ಯ ವಿಲಕ್ಷಣಂ । ತಜ್ಜನಕ ವಿಲಕ್ಷಣ ಜನ್ಯತ್ವಾತ್ । ಯವಾಂಕುರಾತ್ ಕಲಮಾಂಕುರವತ್ । ತಜ್ಜನ್ಯ ವಿಲಕ್ಷಣ ಜನಕತ್ವಾತ್ । ಯವಬೀಜಾತ್ ಕಲಮಬೀಜವತ್ ।**

ಮತ್ತು 'ಸರ್ಪಜ್ಞಾನವು ಅಸರ್ಪಜ್ಞಾನಕ್ಕಿಂತ, ಬೇರೆ ವಸ್ತುವಿನ ಅವಲಂಬನೆ ಮಾಡದೆ, ಸ್ವತಃ ವೈಲಕ್ಷಣ್ಯ ಉಳ್ಳದ್ದಾಗಿದೆ. ಅಸರ್ಪಜ್ಞಾನಜನಕಕ್ಕಿಂತ ವಿಲಕ್ಷಣವಾದ ಕಾರಣದಿಂದ ಜನ್ಯವಾಗಿರುವುದರಿಂದ, ಗೋದಿಯ ಮೊಳಕೆಗಿಂತ ಭತ್ತದ ಮೊಳಕೆಯು ಹೇಗೆ ಸ್ವತಃ ವಿಲಕ್ಷಣವಾಗಿರುವುದೋ ಹಾಗೆ.

ಇನ್ನೊಂದು ಹೇತು—ಅಸರ್ಪಜ್ಞಾನದಿಂದ ಜನ್ಯವಾದ ಸುಖಕ್ಕಿಂತ ವಿಲಕ್ಷಣವಾದ ಭಯವನ್ನು ಹುಟ್ಟಿಸುವುದರಿಂದ, ಗೋದಿಯ ಬೀಜದಿಂದ ವಿಲಕ್ಷಣವಾದ ಭತ್ತದ ಬೀಜದಂತೆ,ಎಂದೂ ಅನುಮಾನ ಪ್ರಯೋಗ ಮಾಡಬಹುದು.

ಯಾವ ಕಾರ್ಯವು ಯಾವ ಕಾರ್ಯದ ಜನಕಕ್ಕಿಂತ ವಿಲಕ್ಷಣವಾದ ಕಾರಣದಿಂದ ಜನ್ಯವೋ ಅದು ಆ ಕಾರ್ಯಕ್ಕಿಂತ ವಿಲಕ್ಷಣವಾಗಿದೆ, ಮತ್ತು ಯಾವ ಕಾರ್ಯವು ಯಾವ ಕಾರ್ಯದ ಜನ್ಯಕ್ಕಿಂತ ವಿಲಕ್ಷಣವಾದ ಕಾರ್ಯಕ್ಕೆ ಜನಕವೋ ಅದು ಆ ಕಾರ್ಯಕ್ಕಿಂತ ವಿಲಕ್ಷಣವಾಗಿದೆ ಎಂದು ಸಾಮಾನ್ಯ ವ್ಯಾಪ್ತಿಗಳನ್ನು ಇಲ್ಲಿ ಗ್ರಹಿಸಬೇಕು.

**ನಚ ವಿಲಕ್ಷಣವಿಷಯಸಂಬಂಧೇನೈವ ಹೇತ್ವೋರುಪಪತ್ತೇಃ ಅಪ್ರಯೋಜಕತ್ವಂ । ತಥಾತ್ವೇ ಹಿ ಯವಬೀಜ ತದಂಕುರ ವಿಲಕ್ಷಣ ಜನ್ಯ ಜನಕೇ ಕಲಮಾಂಕುರ ತದ್‌ಬೀಜೇ ಅಪಿ ಕದಾಚಿತ್ ಯವಾಂಕುರ ತದ್‌ಬೀಜಾಭ್ಯಾಂ ಕಲಮಾಂಕುರತ್ವ ತದ್‌ಬೀಜತ್ವರೂಪ ಸ್ವಾಭಾವಿಕ ವೈಲಕ್ಷಣ್ಯಂ ವಿನಾ, ಉಪಲಕ್ಷಣಭೂತ ಚೈತ್ರಾದಿ ಸಂಬಧಿತ್ವ ಮಾತ್ರೇಣ ವಿಲಕ್ಷಣೇ ಸ್ಯಾತಾಂ ।**

'ವಿಲಕ್ಷಣವಿಷಯಗಳ ಸಂಬಂಧದಿಂದಲೇ ಹೇತುಗಳು ಉಪಪನ್ನವಾಗುತ್ತವೆ. ಅದರಿಂದ ಈ ಅನುಮಾನಗಳು ಅಪ್ರಯೋಜಕವಾಗುವುವು'—ಎಂದು ಹೇಳಬಾರದು. ವಿಲಕ್ಷಣವಿಷಯಗಳ ಸಂಬಂಧದಿಂದಲೆ ಹೇತುಗಳು ಉಪಪನ್ನವಾಗುವುದಾದರೆ, ಯವಬೀಜಕ್ಕಿಂತ ವಿಲಕ್ಷಣಜನ್ಯವಾದ ಬತ್ತದ ಮೊಳಕೆ, ಯವ ಮೊಳಕೆಗಿಂತ ವಿಲಕ್ಷಣಜನಕವಾದ ಭತ್ತದ ಬೀಜ ಇವೆರಡೂ ಸ್ವಾಭಾವಿಕ ವೈಲಕ್ಷಣ್ಯವನ್ನು ಅವಲಂಬಿಸದೆ ಉಪಲಕ್ಷಣಭೂತವಾದ ಚೈತ್ರ ಮೈತ್ರಾದಿಗಳ ಸಂಬಂಧಿತ್ವ

ಮಾತ್ರದಿಂದ ಯವದ ಮೊಳಕೆ ಬತ್ತದ ಮೊಳಕೆಗಿಂತ ವಿಲಕ್ಷಣವಾದೀತು. ಬತ್ತದ ಬೀಜ ಯವ ಬೀಜಕ್ಕಿಂತ ವಿಲಕ್ಷಣವಾದೀತು. ಇದನ್ನು ಇಷ್ಟಾಪತ್ತಿ ಎನ್ನಬಾರದು. ಚೈತ್ರಮೈತ್ರಾದಿಗಳ ಸಂಬಂಧಿತ್ವ ಗಳನ್ನು ತಿಳಿಯದಿದ್ದರೂ ಯವದ ಮೊಳಕೆ ಬತ್ತದ ಮೊಳಕೆಗಿಂತ, ಯವದ ಬೀಜವು ಬತ್ತದ ಬೀಜಕ್ಕಿಂತ ಸ್ವತಃ ವಿಲಕ್ಷಣ ಎಂಬುದನ್ನು ಅವುಗಳ ವಿಲಕ್ಷಣವಾದ ಕಾರ್ಯ ಮತ್ತು ಕಾರಣಗಳನ್ನು ನೋಡಿಯೇ ತಿಳಿಯುವುದು ಶಕ್ಯವಿದೆ.

**ಸಾಕ್ಷಾತ್ಕಾರೋಽಪಿ ಪರೋಕ್ಷಜ್ಞಾನಾತ್ ಅನ್ಯ ಸಂಬಂಧಿತ್ವಮಾತ್ರೇಣ ವಿಲಕ್ಷಣಃ ಸ್ಯಾತ್। ಗೃಹಮಪಿ ಸಂಸ್ಥಾನವಿಶೇಷಂ ವಿನಾ ವಿಚಿತ್ರ ಕಾಕಹಂಸೋಪಲಕ್ಷಣತ್ವಮಾತ್ರೇಣ ವಿಚಿತ್ರಕಾರಣಜಂ ವಿಚಿತ್ರಕಾರ್ಯಕಾರಿ ಚ ಸ್ಯಾತ್ ।**

'ಸಾಕ್ಷಾತ್ಕಾರವು ಮೋಕ್ಷಜನಕ, ಪರೋಕ್ಷಜ್ಞಾನವು ಮೋಕ್ಷಕ್ಕೆ ಅಜನಕ' ಎಂದು ಸ್ವಾಭಾವಿಕ ವೈಲಕ್ಷಣ್ಯವಿದೆ. ಇದನ್ನೊಪ್ಪದೆ, ಸಾಕ್ಷಾತ್ಕಾರತ್ವ ಪರೋಕ್ಷತ್ವರೂಪ ಸ್ವಾಭಾವಿಕ ವೈಲಕ್ಷಣ್ಯವಿಲ್ಲದೆ ಇದ್ದರೂ ಜ್ಞಾನಗಳಲ್ಲಿ ಕೆಲವು ಚೈತ್ರಸಂಬಂಧಿಗಳಾಗಿರುವುದರಿಂದ ಮೋಕ್ಷಜನಕವಾಗಿವೆ. ಇನ್ನು ಕೆಲವು ಮೈತ್ರಸಂಬಂಧಿಗಳಾದ್ದರಿಂದ ಮೋಕ್ಷಜನಕವಾಗಿಲ್ಲ ಎಂದು ಅನ್ಯಸಂಬಂಧ ಪ್ರಯುಕ್ತವೆ ಈ ವೈಲಕ್ಷಣ್ಯಗಳು ಕೂಡುತ್ತವೆ ಎನ್ನಬೇಕಾದೀತು. ಗೃಹವೂ ಕೂಡ ಅವಯವಸಂಯೋಗ ವೈಲಕ್ಷಣ್ಯವನ್ನು ಗಣನೆಗೆ ತಾರದೆ ಕೇವಲ ಕಾಗೆ ಹಂಸಗಳು ಉಪಲಕ್ಷಣವಾಗುವುದರಿಂದ ವಿಚಿತ್ರ ಕಾರಣಜನ್ಯ, ಹುಲ್ಲಿನಮನೆ ಕಾಂಕ್ರೀಟ್‌ಮನೆ ಎಂದೂ, ತಂಪು, ಉಷ್ಣವೆಂಬ ವಿಚಿತ್ರಕಾರ್ಯಕಾರಿ ಎಂದೂ ತಿಳಿಯಬೇಕಾದೀತು.



**अपिच ज्ञानस्य स्वकारणादुत्पत्तौ स्वकार्यकरणे च विषयः अभावस्य प्रतियोगीवोपलक्षणम् । अतीतादिज्ञाने असद्विषयक परोक्षज्ञाने च तथा दर्शनात् । नहि तत्रार्थः अनिर्वाच्योऽप्यस्ति । उपलक्षणेन चान्यो व्यावर्तक उपस्थाप्यः काकेन संस्थानविशेष इवेति स्वतो विशेषसिद्धिः ।**

**एवंच यथा प्रतियोगिनमनंतर्भाव्यैव घटस्याभावः अभावांतरात्, यथा च विषयमनंतर्भाव्यैव शिलोद्धरणकृतिर्माषोद्धरणकृतितः, यथा चातीतादिज्ञानमसद्विषयक परोक्षज्ञानांतरादितः, यथा च घटस्मृति-र्घटानुभवात्, यथा च घटस्य परोक्षज्ञानं तदपरोक्षज्ञानाद्विलक्षणम्,**

**अन्यथा तत्तत्कार्यसंकरः स्यात् । नचाभावाद्यवच्छेदकप्रतियोग्यादिविशेषादसंकरः । ध्वंसादेः कृतेरतीतादिज्ञानस्य च काले प्रतियोगिविषययोरसत्त्वात् । पूर्वक्षणेऽसतश्च नियतपूर्ववृत्तित्वरूपकारणत्वव्याघातात् । उपलक्षणभेदमात्रेण च विलक्षणकार्याद्ययोगात् । अत्यंतासतश्च कदाप्यभावात् । शिलोद्धरणार्थं माषोद्धारप्रयत्ने कृतेऽपि तदनिष्पत्तेश्च ।**

**तथा सर्पज्ञानमपि विषयमनंतर्भाव्यैव असर्पज्ञानाद्विलक्षणम् । उक्त- प्रमाणैरनुभवेन च सिद्धस्य तस्य जातिरूपस्य विशेषस्याख्यातुमशक्यत्वात् घटज्ञानमिति व्यवहारः क्षीरमाधुर्यं चाक्षुषज्ञानमितिवद्युक्तः ।**

---

ननु यवायवादि व्यावृत्तिबोधे यवत्वमेव प्रयोजकम्। नतु चैत्रसम्बन्धित्वम्, तस्य अयवेऽपि सत्त्वात्, यवेऽपि क्वचिदसत्त्वात् । चैत्रसम्बन्धित्वाज्ञानेऽपि यवत्वज्ञाने अयवादिव्यावृत्तिबुद्धेश्च । सर्पज्ञाने तु सर्प एव प्रयोजकः । अन्यथा सर्पज्ञानान्वयव्यतिरेकानुविधानं न स्यादिति यो ब्रूयात् तं प्रत्याह **अपि चेति ।**

ननु उपलक्षणं द्विविधम् । प्रत्याय्यव्यावृत्त्यन्यूनानतिरिक्तवृत्ति, तन्न्यूनवृत्ति चेति । तदुभयमपि विद्यमानाविद्यमानभेदेन द्विविधम् । तत्र प्रथमे न व्यावर्तकान्तरोपस्थापकत्वम्, स्वत एव स्वज्ञानद्वारा व्यावृत्तिबोधसमर्थत्वात् । नहि दण्डो घटकारणमित्यत्रापि दण्डत्वेन व्यावर्तकान्तरमुपस्थाप्यते । न वा स्वज्ञानं विनैव व्यावृत्तिर्बोध्यते । ज्ञानान्वयव्यतिरेकानुविधानस्य आनुभविकत्वात् । द्वितीये तु व्यावर्तकान्तरोपस्थापकत्वनियमः । स्वाभाववत्यधिकरणे कदापि स्वसम्बन्धज्ञानाभावेन व्यावृत्त्यबोधकत्वात् । अन्यथाऽतिप्रसङ्गात्। अत एव बुद्धिरपि प्रथमे उपलक्षणप्रकारिकैव । द्वितीये तु उपलक्ष्यप्रकारिका । प्रकारसम्बन्धश्च क्वचिद्विद्यमानः । क्वचिदविद्यमान इत्यन्यदेतत् । नचैवं प्रथमस्य विशेषणाभेदः।

विशेष्यान्वितानन्वितत्वेन भेदात्। तथाच येन केनचित् सम्बन्धेन उपलक्षणस्यैव प्रकारत्वात् न स्वतः विशेषसिद्धिरित्याशङ्कानिरासपूर्वकमुपसंहारव्याजेन दृष्टान्तान्तरमुखेन युक्त्यन्तरसिद्धमर्थमाह **एवञ्चेति** । ननु नोपलक्षणस्य कारणत्वं अपितु उपलक्ष्यधर्मिण एवेत्यत आह **उपलक्षणेति** ।। तत्तदुपलक्षणस्य अकारणत्वे धर्मिण एकत्वात् कार्यवैचित्र्यं न स्यादित्यर्थः ।। **अत्यन्तासतश्चेति** ।। तथाचासति सत्त्वगर्भकारणत्वमाशंकामेव नार्हतीति भावः ।। **शिलोद्धरणार्थमिति** ।। तथा च कृत्योः समानविषयत्वेऽपि कार्यानिष्पत्तेः कृतिगत एव विशेष आदरणीय इति भावः ।। **असर्पज्ञानाद्विलक्षणमिति** ।। यद्यपि सर्पज्ञानस्यासर्पज्ञानाद्वैजात्ये सर्पासर्पविषयकसमूहालम्बने जातिसङ्करापत्तिः सर्पासर्पज्ञानहेतुद्वयप्रयोज्य जाति द्वयस्यावश्यंभावात् । तथाप्युपाधिसाङ्कर्यवज्जातिसांकर्यं न दोष इति भावः । ननु तादृग्वैलक्षण्यसत्त्वे कथं घटज्ञानमित्येव व्यवहारः, न तु तद्वैलक्षण्य पुरस्कारेणेत्यत आह **उक्तप्रमाणैरिति** ।। **आख्यातुमिति** ।। स्वमात्रप्रवृत्तिनिमित्तकपदेनेतिशेषः ।



**ಅಪಿಚ ಜ್ಞಾನಸ್ಯ ಸ್ವಕಾರಣಾದುತ್ಪತ್ತೌ ಸ್ವಕಾರ್ಯಕರಣೇ ಚ ವಿಷಯಃ ಅಭಾವಸ್ಯ ಪ್ರತಿಯೋಗೀವ ಉಪಲಕ್ಷಣಂ । ಅತೀತಾದಿ ಜ್ಞಾನೇ, ಅಸದ್ ವಿಷಯಕ ಪರೋಕ್ಷಜ್ಞಾನೇ ಚ ತಥಾ ದರ್ಶನಾತ್ । ನಹಿ ತತ್ರಾರ್ಥಃ ಅನಿರ್ವಾಚ್ಯೋಽಪ್ಯಸ್ತಿ । ಉಪಲಕ್ಷಣೇನ ಚ ಅನ್ಯೋ ವ್ಯಾವರ್ತಕಃ ಉಪಸ್ಥಾಪ್ಯಃ ಕಾಕೇನ ಸಂಸ್ಥಾನವಿಶೇಷ ಇವ ಇತಿ ಸ್ವತೋ ವಿಶೇಷಸಿದ್ಧಿಃ ।**

'ಯವಬೀಜ–ಕಲಮಾಂಕುರಗಳು, ಸಾಕ್ಷಾತ್ಕಾರ–ಪರೋಕ್ಷಜ್ಞಾನಗಳು ಚೈತ್ರಮೈತ್ರಾದಿ ಸಂಬಂಧಿತ್ವಪ್ರಯುಕ್ತ ವಿಲಕ್ಷಣವೆನ್ನಬೇಕಾದೀತು' ಎಂದು ಆಪಾದನೆ ಸರಿಯಲ್ಲ. ಚೈತ್ರಮೈತ್ರ ಸಂಬಂಧಿತ್ವ ಮತ್ತು ವೈಲಕ್ಷಣ್ಯಗಳಿಗೆ ಅನ್ವಯವ್ಯತಿರೇಕವಿಲ್ಲ. ಸರ್ಪ ಅಸರ್ಪವಿಷಯತ್ವ ಮತ್ತು ವೈಲಕ್ಷಣ್ಯಗಳಿಗೆ ಅನ್ವಯವ್ಯತಿರೇಕವಿದೆ. ಆದರಿಂದ ವಿಷಯಪ್ರಯುಕ್ತವೇ ಜ್ಞಾನಗಳಲ್ಲಿ ವೈಲಕ್ಷಣ್ಯವೆಂದು ಹೇಳಬಹುದು' ಎಂದು ಅದ್ವೈತಿ ಹೇಳಬಹುದು. ಆದರೆ ಜ್ಞಾನವು ತನ್ನ ಕಾರಣದಿಂದ ತಾನು ಹುಟ್ಟುವುದಕ್ಕೂ ತನ್ನ ಕಾರ್ಯವನ್ನು ತಾನು ಮಾಡುವುದಕ್ಕೂ ವಿಷಯವು ಅಭಾವಕ್ಕೆ ಪ್ರತಿಯೋಗಿಯಂತೆ ಉಪಲಕ್ಷಣವಾಗಿ ಜ್ಞಾನಸ್ವರೂಪದಲ್ಲಿ ಅಂತರ್ಗತವಾಗದೆ ತಟಸ್ಥವಾಗಿ ಪ್ರಯೋಜಕವಾಗುವುದು. ವರ್ತಮಾನ ಘಟಾದಿಜ್ಞಾನಕ್ಕೆ ಘಟಾದಿ ವಿಷಯವು ಜ್ಞಾನಕಾಲದಲ್ಲಿ ಇದ್ದರೂ ಅತೀತ ಭವಿಷ್ಯ ವಿಷಯಕ ಜ್ಞಾನದಲ್ಲಿ ವಿಷಯವು ಜ್ಞಾನಕಾಲದಲ್ಲಿ ಇರುವುದಿಲ್ಲ. ಅತೀತಾದಿಯು ಜ್ಞಾನದಲ್ಲಿ ಪ್ರಕಾರವಾಗಿದ್ದು ಅಂತರ್ಗತವಾಗದೆ ಕೇವಲ ಉಪಲಕ್ಷಣವಾಗಿಯೇ

ಜ್ಞಾನೋತ್ಪತ್ತಿಗೂ ಜ್ಞಾನದಿಂದಾಗುವ ಕಾರ್ಯಕ್ಕೂ ನಿಯಾಮಕವಾಗುತ್ತದೆ. ಈ ಸ್ಥಳಗಳಲ್ಲಿ ಜ್ಞಾನದ ವಿಷಯವು ಅನಿರ್ವಚನೀಯವಾಗಿಯೂ ಇರುವುದಿಲ್ಲ. ಅದರಿಂದ ವ್ಯಾವೃತ್ತಿ ಸಿದ್ಧಿಗೆ ಉಪಲಕ್ಷಣವು ಬೇರೇ ಒಂದು ವ್ಯಾವರ್ತಕವನ್ನು ತಿಳಿಸಬೇಕಾಗುತ್ತದೆ. ಹುಲ್ಲಿನ ಮನೆ ಮೇಲೆ ಕುಳಿತ ಕಾಗೆ ಹುಲ್ಲನ್ನು ಕೆದರಿದ್ದುದನ್ನು ಕಂಡರೆ ಮಾತ್ರ ಇತರ ಗೃಹದಿಂದ ವ್ಯಾವೃತ್ತಿ ಜ್ಞಾನ ಉಂಟಾಗುತ್ತದೆ. ಹೀಗೆ ಜ್ಞಾನದಲ್ಲಿ ಅದರ ಸ್ವರೂಪಾಂತರ್ಗತವಾದ ವ್ಯಾವರ್ತಕಧರ್ಮರೂಪ ಉಪಲಕ್ಷ್ಯತಾವಚ್ಛೇದಕವು ಉಪಲಕ್ಷಣಕ್ಕಿಂತ ಬೇರೆಯೇ ಇರುವುದು ಸಿದ್ಧವಾಗುತ್ತದೆ.

ಅದ್ವೈತಿ ಹೇಳುತ್ತಾನೆ—ಉಪಲಕ್ಷಣಗಳು ಎರಡು ಬಗೆ. ತಾನು ತಿಳಿಸುವ ವ್ಯಾವೃತ್ತಿಗೆ ಅನ್ಯೂನ ಅನತಿರಿಕ್ತ ವೃತ್ತಿಯಾದುದು ಮತ್ತು ವ್ಯಾವೃತ್ತಿಗೆ ನ್ಯೂನವೃತ್ತಿಯಾದುದು ಎಂದು. ಈ ಎರಡು ಉಪಲಕ್ಷಣಗಳು ಪುನಃ ವಿದ್ಯಮಾನ ಅವಿದ್ಯಮಾನ ಎಂದು ಎರಡು ಬಗೆ.

ವ್ಯಾವೃತ್ತಿ ಬುದ್ಧಿಕಾಲದಲ್ಲಿ ಉಪಲಕ್ಷಣ ವಿದ್ಯಮಾನವಾಗಿದ್ದರೆ ಅದು ಇನ್ನೊಂದು ವ್ಯಾವರ್ತಕವನ್ನು ಉಪಸ್ಥಾಪನ ಮಾಡುವುದಿಲ್ಲ. ತಾನೇ ತನ್ನ ಜ್ಞಾನದ್ವಾರಾ ವ್ಯಾವೃತ್ತಿ ಬುದ್ಧಿ ಉಂಟುಮಾಡಲು ಸಮರ್ಥವಾಗಿದೆ. 'ದಂಡವು ಘಟಕಾರಣ' ಎಂಬಲ್ಲಿ ಉಪಲಕ್ಷಣವಾದ ದಂಡತ್ವವು ಬೇರೆ ವ್ಯಾವರ್ತಕವನ್ನು ಉಪಸ್ಥಾಪನ ಮಾಡುವುದಿಲ್ಲ. ತನ್ನ ಜ್ಞಾನರೂಪದ್ವಾರವಿಲ್ಲದೆ ತಾನೇ ವ್ಯಾವೃತ್ತಿ ಬುದ್ಧಿಯನ್ನು ಉಂಟುಮಾಡುವುದೂ ಇಲ್ಲ. ಉಪಲಕ್ಷಣ ಜ್ಞಾನವಿದ್ದರೆ ವ್ಯಾವೃತ್ತಿ ಬುದ್ಧಿ ಉಂಟಾಗುವುದು, ಇಲ್ಲದಿದ್ದರೆ ಇಲ್ಲ ಎಂದು ಅನ್ವಯವ್ಯತಿರೇಕವಿರುವುದು ಅನುಭವ ಸಿದ್ಧವಿದೆ.

ವ್ಯಾವೃತ್ತಿ ಬುದ್ಧಿ ಉಂಟಾಗುವ ಕಾಲದಲ್ಲಿ ಅವಿದ್ಯಮಾನವಾದ ಉಪಲಕ್ಷಣವು ಬೇರೆ ವ್ಯಾವರ್ತಕವನ್ನು ಉಪಸ್ಥಾಪನ ಮಾಡಲೇಬೇಕೆಂದು ನಿಯಮ. ಏಕೆಂದರೆ ತಾನಿಲ್ಲದ ಸ್ಥಳದಲ್ಲಿ ತನ್ನ ಸಂಬಂಧ ಜ್ಞಾನವಿಲ್ಲದಿರುವುದ ರಿಂದ ವ್ಯಾವೃತ್ತಿ ಬುದ್ಧಿಯನ್ನು ಅದು ಉಂಟುಮಾಡುವುದಿಲ್ಲ. ಹೀಗೆ ಹೇಳದಿದ್ದರೆ ಅತಿಪ್ರಸಂಗವಿದೆ. ಅದರಿಂದ ವ್ಯಾವೃತ್ತಿ ಬುದ್ಧಿಯು ಉಪಲಕ್ಷಣವು ವಿದ್ಯಮಾನವಾಗಿರುವ ಸ್ಥಳದಲ್ಲಿ ಉಪಲಕ್ಷಣ ಪ್ರಕಾರಕವಾಗಿಯೇ ಇರುತ್ತದೆ. ಉಪಲಕ್ಷಣವು ಅವಿದ್ಯಮಾನವಾದ ಸ್ಥಳದಲ್ಲಿ ಉಪಲಕ್ಷ್ಯಪ್ರಕಾರಕ ವಾಗಿರುತ್ತದೆ. ಪ್ರಕಾರದ ಸಂಬಂಧ ವಿದ್ಯಮಾನವಿರಬಹುದು. ಅವಿದ್ಯಮಾನವೂ ಇರಬಹುದು. ಅದನ್ನು ತಿಳಿಯಬೇಕಾಗಿಲ್ಲ.

ವಿದ್ಯಮಾನವಾದ ಉಪಲಕ್ಷಣವೆಂದರೆ ವಿಶೇಷಣವೇ ಎನ್ನಬಾರದು. ವಿಶೇಷಣವು ವಿಶೇಷ್ಯಾನ್ವಯಿಯಲ್ಲಿ ಅನ್ವಯಿಯಾಗಿರುತ್ತದೆ. ಉಪಲಕ್ಷಣವು ವಿಶೇಷ್ಯಾನ್ವಯಿಯಲ್ಲಿ ಅನ್ವಯ ಹೊಂದುವುದಿಲ್ಲ ಎಂದು ಅವುಗಳಿಗೆ ಭೇದವಿದೆ.

ಹೀಗಾಗಿ ಯಾವುದಾದರೊಂದು ಸಂಬಂಧದಿಂದ ಉಪಲಕ್ಷಣವೇ ಪ್ರಕಾರವಾಗುವುದರಿಂದ ಉಪಲಕ್ಷ್ಯದಲ್ಲಿ ಸ್ವಾಭಾವಿಕ ವೈಲಕ್ಷಣ್ಯವು ವ್ಯಾವೃತ್ತಿಬುದ್ಧಿ ಜನಕವಾಗಿ ಬೇರೆ ಕಾಣುವುದಿಲ್ಲ. ಅದರಿಂದ ಅದು ಸಿದ್ಧವಾಗುವುದಿಲ್ಲ' ಎಂದು.

ಇದಕ್ಕೆ ಉತ್ತರವಾಗಿ ನಾವು ಹೇಳುತ್ತೇವೆ. ಪ್ರಾಗಭಾವ ಧ್ವಂಸಗಳಿಗೆ ವ್ಯಾವರ್ತಕವಾದ ಉಪಲಕ್ಷಣವು ಅವಿದ್ಯಮಾನವಾಗಿದೆ. ಪೂರ್ವಕ್ಷಣದಲ್ಲಿ ಇಲ್ಲದುದು ವ್ಯಾವೃತ್ತಿಬುದ್ಧಿಗೆ ಕಾರಣವಾಗುವುದಿಲ್ಲ. 'ಜ್ಞಾನದ್ವಾರಾ ಕಾರಣವಾಗುತ್ತದೆ' ಎಂದರೆ ಅದು ಸರಿಯಲ್ಲ. ಜ್ಞಾನದಿಂದ ಅನ್ಯಥಾಸಿದ್ಧವಾಗುವುದರಿಂದ ಕಾರಣವೇ ಆಗುವುದಿಲ್ಲ.

ಹಾಗಾದರೆ ವ್ಯಾವೃತ್ತಿಬುದ್ಧಿಯಲ್ಲಿ ಅವ್ಯಾವರ್ತಕವಾದ ಉಪಲಕ್ಷಣವು ಏಕೆ ಪ್ರಕಾರವಾಗಿ ಕಾಣುತ್ತದೆ? ಎಂದರೆ ವ್ಯಾವರ್ತಕವು ವ್ಯಾವರ್ತ್ಯದಲ್ಲಿಯೇ ಇರುವ ಸ್ವಾಭಾವಿಕ ವೈಲಕ್ಷಣ್ಯವಾಗಿದ್ದು ಅದು ಅಖಂಡ ಜಾತಿಸ್ವರೂಪ ವಾದ್ದರಿಂದ ಅದನ್ನು ಶಬ್ದದಿಂದ ಹೇಳಲು ಬರುವುದಿಲ್ಲ. ಅದು ಔಪಾಧಿಕ ಧರ್ಮವಾಗಿದ್ದಲ್ಲಿ ಉಪಾಧಿಯ ಮೂಲಕ ಅದನ್ನು ಹೇಳಲು ಬರುತ್ತಿತ್ತು. ಹೀಗಾಗಿ ಕ್ಷೀರಮಾಧುರ್ಯದ ಸ್ವರೂಪವೇನೆಂದರೆ ಹೇಳಲಾಗದುದರಿಂದ 'ಕ್ಷೀರದ ಮಾಧುರ್ಯ'ವೆಂದೇ ವ್ಯವಹಾರ ಮಾಡುತ್ತೇವೆ. ಇಲ್ಲಿ ಮಾಧುರ್ಯಸ್ವರೂಪದಲ್ಲಿ ಕ್ಷೀರವು ಅಂತರ್ಗತವಾದ ಉಪಾಧಿ ಯಲ್ಲ. ಆದರೂ ವ್ಯವಹಾರದಲ್ಲಿ ಅದು ಪ್ರಕಾರವಾಗಿ ಕಾಣುತ್ತದೆ.

**ಏವಂ ಚ ಯಥಾ ಪ್ರತಿಯೋಗಿನಂ ಅನಂತರ್ಭಾವ್ಯೈವ ಘಟಸ್ಯಾಭಾವಃ ಅಭಾವಾಂತರಾತ್ ವಿಲಕ್ಷಣಃ, ತಥಾ ಸರ್ವಜ್ಞಾನಮಪಿ ವಿಷಯಮನಂತರ್ಭಾವ್ಯೈವ ಅಸರ್ವಜ್ಞಾನಾತ್ ವಿಲಕ್ಷಣಂ ।**

ಏವಂಚ ಹೇಗೆ ಘಟದ ಅಭಾವವು ತನ್ನೊಳಗೆ ಪ್ರತಿಯೋಗಿಯನ್ನು ಸೇರಿಸಿಕೊಳ್ಳದೆಯೆ ಬೇರೆ ಅಭಾವದಿಂದ ವಿಲಕ್ಷಣವೆಂದು ಕಾಣುವುದೋ ಹಾಗೇ ಸರ್ವಜ್ಞಾನವೂ ಕೂಡ ತನ್ನೊಳಗೆ ವಿಷಯವನ್ನು ಸೇರಿಸಿಕೊಳ್ಳದೆಯೇ ಅಸರ್ವಜ್ಞಾನಕ್ಕಿಂತ ವಿಲಕ್ಷಣವಾಗಿ ಕಂಡುಬರುತ್ತದೆ.

**ಯಥಾ ಚ ವಿಷಯಮನಂತರ್ಭಾವ್ಯೈವ ಶಿಲೋದ್ಧರಣಕೃತಿಃ ಮಾಷೋದ್ಧರಣ ಕೃತಿತಃ ವಿಲಕ್ಷಣಾ, ತಥಾ ಸರ್ವಜ್ಞಾನಮಪಿ ವಿಷಯಮನಂತರ್ಭಾವ್ಯೈವ ಅಸರ್ವಜ್ಞಾನಾತ್ ವಿಲಕ್ಷಣಂ ।**

ಹೇಗೆ ಕಲ್ಲನ್ನು ಎತ್ತುವ ಪ್ರಯತ್ನವು ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೆ ಉದ್ದಿನಕಾಳನ್ನೆತ್ತುವ ಪ್ರಯತ್ನಕ್ಕಿಂತ ವಿಲಕ್ಷಣವೆಂದು ಕಾಣುವುದೋ ಹಾಗೇ ಸರ್ವಜ್ಞಾನವು ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೆ ಅಸರ್ವಜ್ಞಾನಕ್ಕಿಂತ ವಿಲಕ್ಷಣವಾಗಿ ತೋರುವುದು.

**ಯಥಾ ಚ ಅತೀತಾದಿ ಜ್ಞಾನಂ ಅಸದ್ವಿಷಯಕ ಪರೋಕ್ಷಜ್ಞಾನಾಂತರಾದಿತಃ, ವಿಷಯಮನಂತರ್ಭಾವ್ಯೈವ ವಿಲಕ್ಷಣಂ ತಥಾ ಸರ್ವಜ್ಞಾನಮಪಿ ।**

ಹೇಗೆ ಅತೀತ ಭವಿಷ್ಯಜ್ಞಾನವು ಅಸದ್‌ವಿಷಯಕ ಪರೋಕ್ಷಜ್ಞಾನಾಂತರಕ್ಕಿಂತ ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೇ ವಿಲಕ್ಷಣವೆನಿಸುವುದೋ ಹಾಗೇ ಸರ್ವಜ್ಞಾನವೂ ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೇ ಅಸರ್ವಜ್ಞಾನಕ್ಕಿಂತ ವಿಲಕ್ಷಣವಾಗಿ ತೋರುತ್ತದೆ.

**ಯಥಾ ಚ ಘಟಸ್ಮೃತಿಃ ಘಟಾನುಭವಾತ್, ಯಥಾ ಚ ಘಟಸ್ಯ ಪರೋಕ್ಷಜ್ಞಾನಂ ತದಪರೋಕ್ಷಜ್ಞಾನಾದ್ ವಿಲಕ್ಷಣಂ,ಅನ್ಯಥಾ ತತ್ತತ್ ಕಾರ್ಯಸಂಕರಃ ಸ್ಯಾತ್ ।**

ಹೇಗೆ ಘಟಸ್ಮೃತಿಯು ಘಟಾನುಭವಕ್ಕಿಂತ, ಘಟದ ಪರೋಕ್ಷಜ್ಞಾನವು ಘಟದ ಅಪರೋಕ್ಷಜ್ಞಾನಕ್ಕಿಂತ, ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೇ ಬೇರೆ ಜ್ಞಾನಗಳಿಗಿಂತ ವ್ಯಾವರ್ತಕವಾಗಿರುವುದೋ ಹಾಗೆ ಸರ್ಪಜ್ಞಾನವು ಅಸರ್ಪಜ್ಞಾನಕ್ಕಿಂತ, ವಿಷಯವನ್ನು ತನ್ನೊಳಗೆ ಸೇರಿಸಿಕೊಳ್ಳದೇ ತನ್ನ ಸ್ವಾಭಾವಿಕ ವೈಲಕ್ಷಣ್ಯದಿಂದಲೇ ವ್ಯಾವೃತ್ತವಾಗುವುದು. ಇಲ್ಲದಿದ್ದರೆ ಕೇವಲ ಉಪಲಕ್ಷಣವಾದ, ಜ್ಞಾನಸ್ವರೂಪದೊಳಗೆ ಸೇರಿರದ, ವಿಷಯದಿಂದಲೆ ವ್ಯಾವೃತ್ತವಾದರೆ ಘಟಜ್ಞಾನ ಪಟಜ್ಞಾನಗಳಿಗೆ ವಿಲಕ್ಷಣ ಕಾರ್ಯಕಾರಿತ್ವ ವಿಲಕ್ಷಣಕಾರಣ ಜನ್ಯತ್ವಗಳು ಉಪಪನ್ನವಾಗಲಾರವು. ಅವುಗಳ ಸಾಂಕರ್ಯವೇ ಬಂದೀತು.

**ನಚ ಅಭಾವಾದ್ಯವಚ್ಛೇದಕ ಪ್ರತಿಯೋಗ್ಯಾದಿ ವಿಶೇಷಾದ್ ಅಸಂಕರಃ । ಧ್ವಂಸಾದೇಃ, ಕೃತೇಃ, ಅತೀತಾದಿ ಜ್ಞಾನಸ್ಯ ಚ ಕಾಲೇ ಪ್ರತಿಯೋಗಿ ವಿಷಯಯೋಃ ಅಸತ್ತ್ವಾತ್ ।**

'ಅಭಾವಾದಿಗಳಲ್ಲಿ ಅವಚ್ಛೇದಕವಾದ ಪ್ರತಿಯೋಗ್ಯಾದಿ ವಿಶೇಷಗಳ ಬಲದಿಂದಲೇ ತತ್ತತ್ ಕಾರ್ಯಗಳಲ್ಲಿ ಸಾಂಕರ್ಯವಿಲ್ಲವಾಗುವುದು' ಎನ್ನಬಾರದು. ಧ್ವಂಸಪ್ರಾಗಭಾವಗಳ ಕಾಲದಲ್ಲಿ ಅವುಗಳ ಪ್ರತಿಯೋಗಿಗಳು ಅಸ್ತಿತ್ವದಲ್ಲಿ ಇರುವುದಿಲ್ಲ. ಘಟ ತಯಾರಿಸುವ ಪ್ರಯತ್ನಕಾಲದಲ್ಲಿ ಅದರ ವಿಷಯವಾದ ಘಟ ಇನ್ನೂ ತಯಾರಾಗಿರುವುದಿಲ್ಲ. ಅತೀತಾದಿ ಜ್ಞಾನಕಾಲದಲ್ಲಿ ಆ ಅತೀತಾದಿ ವಿಷಯಗಳೂ ಇರುವುದಿಲ್ಲ ಎಂದಮೇಲೆ, ಅವುಗಳ ಬಲದಿಂದ ಆಯಾ ಕಾರ್ಯಗಳಲ್ಲಿ ಸಾಂಕರ್ಯವಾಗದಿರುವುದು ಹೇಗೆ ಸಾಧ್ಯ ?

**ಪೂರ್ವಕ್ಷಣೇ ಅಸತಶ್ಚ ನಿಯತಪೂರ್ವವೃತ್ತಿತ್ವರೂಪಕಾರಣತ್ವವ್ಯಾಘಾತಾತ್ । ಉಪಲಕ್ಷಣ ಭೇದಮಾತ್ರೇಣ ಚ ವಿಲಕ್ಷಣಕಾರ್ಯಾದ್ಯಯೋಗಾತ್ ಅತ್ಯಂತಾಸತಶ್ಚ ಕದಾಪ್ಯಭಾವಾತ್ ।**

ಈ ಅಭಾವಾವಚ್ಛೇದಕವಾದ ಪ್ರತಿಯೋಗಿ, ಜ್ಞಾನಾವಚ್ಛೇದಕವಾದ ವಿಷಯ— ಇವುಗಳಿಗೆ ಅಭಾವಕಾರ್ಯ ಜ್ಞಾನಕಾರ್ಯಗಳಿಗೆ ಪೂರ್ವಕ್ಷಣದಲ್ಲಿ ಅಸ್ತಿತ್ವವಿಲ್ಲವೆಂದಮೇಲೆ ಪೂರ್ವಕ್ಷಣ ವೃತ್ತಿತ್ವರೂಪ ಕಾರಣತ್ವವಿದೆ ಎನ್ನುವುದು ವ್ಯಾಹತವಾಗುವುದು.

ಹೀಗೆ ಅಕಾರಣವಾದ ಉಪಲಕ್ಷಣಗಳು ಬೇರೆ ಬೇರೆಯಾದ ಮಾತ್ರಕ್ಕೆ ಕಾರ್ಯಗಳು ಬೇರೆಬೇರೆಯಾಗಲು ಕಾರಣವಿಲ್ಲ. ಅತ್ಯಂತಾಸತ್ ಆದ ಉಪಲಕ್ಷಣ ಎಂದೂ ಅಸ್ತಿತ್ವದಲ್ಲಿಲ್ಲವೆಂದ ಮೇಲೆ ಹೇಗೆ ಕಾರಣವಾದೀತು? ಆದರೂ ಕೇವಲ ಉಪಲಕ್ಷಣಭೇದದಿಂದ ಉಪಲಕ್ಷ್ಯವಾದ ಅಭಾವಗಳೂ ಜ್ಞಾನಾದಿಗಳೂ ಬೇರೆಬೇರೆಯಾಗಿದ್ದು ಕಾರ್ಯಗಳಲ್ಲಿ ಸಾಂಕರ್ಯವಿಲ್ಲದಂತೆ ಮಾಡುವುದಾದರೆ ಕಾಕಹಂಸ ಮುಂತಾದ ಉಪಲಕ್ಷಣಗಳು ಗೃಹಗಳಲ್ಲಿ ಅವಯವ ಸಂಯೋಗ ವೈಲಕ್ಷಣ್ಯವನ್ನು ತಿಳಿಸದೇ ಸ್ವತಃ ವ್ಯಾವೃತ್ತಿಜ್ಞಾನ ಉಂಟು ಮಾಡಬೇಕಾದೀತು.

**ಶಿಲೋದ್ಧರಣಾರ್ಥಂ ಮಾಷೋದ್ಧಾರಪ್ರಯತ್ನೇ ಕೃತೇಽಪಿ ತದನಿಷ್ಪತ್ತೇಶ್ಚ । ತಥಾ ಸರ್ಪಜ್ಞಾನಮಪಿ ವಿಷಯಮನಂತರ್ಭಾವ್ಯೈವ ಅಸರ್ಪಜ್ಞಾನಾದ್ ವಿಲಕ್ಷಣಂ । ಉಕ್ತಪ್ರಮಾಣೈಃ ಅನುಭವೇನ ಚ ಸಿದ್ಧಸ್ಯ ತಸ್ಯ ಜಾತಿರೂಪಸ್ಯ ವಿಶೇಷಸ್ಯ ಆಖ್ಯಾತು ಮಶಕ್ಯತ್ವಾತ್ ಘಟಜ್ಞಾನಮಿತಿ ವ್ಯವಹಾರಃ ಕ್ಷೀರಮಾಧುರ್ಯಂ ಚಾಕ್ಷುಷಜ್ಞಾನಂ ಇತಿವದ್ ಯುಕ್ತಃ ।**

ಕಲ್ಲನ್ನು ಎತ್ತುವುದಕ್ಕೆ ಉದ್ದಿನಕಾಳುಗಳನ್ನೆತ್ತಲು ಮಾಡುವಂಥ ಯತ್ನವನ್ನು ಮಾಡಿದರೆ ಉದ್ಧರಣರೂಪವಿಷಯಗಳು ಸಮಾನವಾದರೂ ಕಾರ್ಯಸಿದ್ಧಿಯಾಗುವುದಿಲ್ಲ. ಅದರಿಂದ ಕಲ್ಲನ್ನೆತ್ತುವ ಯತ್ನ ಮತ್ತು ಉದ್ದಿನಕಾಳನ್ನೆತ್ತುವ ಯತ್ನಗಳಲ್ಲಿಯೇ ಸ್ವತಃ ವೈಲಕ್ಷಣ್ಯವಿದೆ. ಇದು ಅನುಭವಸಿದ್ಧ. ಈ ವೈಲಕ್ಷಣ್ಯಕ್ಕೆ ವಿಷಯಗಳು ಕಾರಣವಲ್ಲ. ಸ್ವತಃಯತ್ನಗಳಲ್ಲಿ ವಿಶೇಷಗಳಿವೆ. ಹಾಗೇ ಸರ್ಪಜ್ಞಾನದಲ್ಲಿ ಅಸರ್ಪಜ್ಞಾನಗಳಿಂದ ವೈಲಕ್ಷಣ್ಯವು ಸ್ವತಃ ಸಿದ್ಧವಿದೆ.

ಹೀಗೆ ಉಕ್ತವಾದ ಅನುಮಾನ ಪ್ರಮಾಣಗಳಿಂದಲೂ ಅನುಭವದಿಂದಲೂ ಸಿದ್ಧವಾಗಿರುವ ಈ ಸ್ವಾಭಾವಿಕ ವೈಲಕ್ಷಣ್ಯವು ಜಾತಿರೂಪವಾಗಿದೆ. ಔಪಾಧಿಕವಲ್ಲದ್ದರಿಂದ ನಿರ್ವಚನ ಮಾಡಲು ಬರುವುದಿಲ್ಲ. ಆದರೂ ಉಪಲಕ್ಷಣವಾದ ವಿಷಯ ಘಟಿತವಾಗಿ 'ಘಟಜ್ಞಾನಂ' ಎಂದು ವ್ಯವಹಾರವನ್ನು ಮಾಡುತ್ತೇವೆ. ಇದು ಕ್ಷೀರಮಾಧುರ್ಯ ಕ್ಷೀರವನ್ನು ಹೇಳಲು ಬಾರದುದರಿಂದ 'ಕ್ಷೀರಮಾಧುರ್ಯ' ಎಂದು ಉಪಲಕ್ಷಣ ಕ್ಷೀರಯುಕ್ತವಾಗಿಯೇ ವ್ಯವಹಾರ ಮಾಡುವಂತೆ, ಮತ್ತು ಚಕ್ಷುರ್ಜನ್ಯಜ್ಞಾನಗತವಾದ ಸ್ವಾಭಾವಿಕ ಜಾತಿವಿಶೇಷವನ್ನು ಹೇಳಲು ಶಕ್ಯವಾಗದಿರುವುದರಿಂದ ಚಾಕ್ಷುಷಜ್ಞಾನಂ ಎಂದು ಉಪಲಕ್ಷಣವಾದ ಚಾಕ್ಷುಷತ್ವಯುಕ್ತವಾಗಿಯೇ ವ್ಯವಹಾರ ಮಾಡುವಂತೆ.



किंच त्वन्मते तत्तद्वृत्तेस्तत्तदाकारत्वेन चैतन्यस्य च तत्तत्प्रतिबिंबितत्वेन वा तदभिव्यक्तत्वेन वा, मम तु तत्तज्ज्ञानस्य तत्तदीयस्वभावत्वेन वा तत्तव्यवहारजननशक्तत्वेन वा स्वत एव वैलक्षण्यम् । नहि गवयाकाररेखाया घटीयस्वभावस्य तदभावस्य वा दाहशक्तेर्वा यत्कार्यं तद्धेतुकोटौ गवयादेर्निवेशः । तस्माद्रज्जौ सर्पज्ञानस्य भ्रमत्वेनाधिकजन्यत्वेपि सर्पज्ञानत्वेन तद्धेतुजन्यत्वात् स्वत एवासर्पज्ञानात् वैलक्षण्यमिति न कोऽपि दोषः । तदुक्तम् ।

सर्पभ्रमादावपि हि ज्ञानमस्त्येव तादृशम् ।
तदेवार्थक्रियाकारि तत्सदेवार्थकारकम् ।। इति ।।

**अन्तर्भावितसत्त्वं चेत्कारणं तदसत्ततः ।**
**नांतर्भावितसत्त्वं चेत्कारणं तदसत्ततः ।।**

**इत्यादिखंडनोक्ताऽसत्कारणता अस्यैव श्लोकस्याकारप्रक्षेपेण पठितुं शक्यत्वात्,**

**अंतर्भावितसत्त्वं चेदधिष्ठानमसत्ततः ।**
**नांतर्भावितसत्त्वं चेदधिष्ठानमसत्ततः ।।**

**इत्यपि पठितुं शक्यत्वाच्च स्वव्याहता ।**

**कथमसतः सज्जायेतेत्यादिश्रुत्या, नासतोऽदृष्टत्वादित्यादिसूत्रेण असद्भ्यः शशविषाणादिभ्यः सदुत्पत्त्यदर्शनादित्यादि स्वीयभाष्येण च विरुद्धा, अन्यत्र निरस्ता च । तस्माद्धेतुव्याप्त्यादीनामसत्त्वेऽसिद्ध्यादि दुर्वारमिति ।।**

---

किञ्चान्यं प्रति साधने यथा तथास्तु । आवयोस्तु सिद्धमेव स्वस्वमतानुसारेणेत्याह **किञ्चेति ।। घटीयस्वभावस्येति ।।** पूर्वोक्तयुक्त्यवष्टंभेन प्रसाध्याङ्गक एवायं दृष्टान्त इति मंतव्यम् । **दाहशक्तेरिति ।।** शक्तेरतीन्द्रियत्वेन दाहानुमेयत्वेऽपि तदनुमितशक्तेरेव प्रयोजकत्वम् । अन्यथा आत्माश्रयादिति भावः । ननु सर्पप्रमायां भवतु नाम यथाकथञ्चिद्वैजात्यम् । सर्पभ्रमे तु अधिकहेतुजन्यत्वेनैव इतरव्यावृत्त्युपपत्तौ स्वतो विशेषो नाङ्गीकार्य इत्याशङ्कामुपसंहारव्याजेन परिहरति **तस्मादिति ।।** असर्पज्ञानाद्विलक्षणमित्यर्थः ।। **तत्सदेवेति ।।** अत्र तच्छब्दो हेत्वर्थः ।। **अन्तर्भावितसत्त्वंचेदिति ।।** अत्र कारणं कारणत्वं, तदन्तर्भावितसत्वं चेत् सत्ताविशिष्टं वर्तते यदि तदा कारणत्वपर्याप्त्यधिकरणमसदेव प्राप्तम् । विशिष्टस्यासत्त्वात् । अंशतः आत्माश्रयः (आत्माश्रयादिति पाठः) नचेत् तथापि कारणमसदेव प्राप्तम् । सत्तायाः उपलक्षणत्वादित्यर्थः । यद्वा कारणत्वं यदि सत्ताघटितं तर्ह्यसदेव कारणं प्राप्तम् । विशिष्टे सत्ताघटितवृत्त्यभावात् ।

पूर्ववदात्माश्रयात् । नचेत्कारणत्वं सत्ताघटितं तदा कारणमसत्प्राप्तम् । सत्ताघटितकारणत्वस्यासति प्रवृत्तौ दोषाभावादित्यर्थः । अथवा कारणं सत्ताघटितं चेत् तदा तत्कारणत्वमसत्प्राप्तम् । स्वघटिते स्वावृत्तेः । शेषं पूर्ववत् । यद्वा कारणत्वं यदि सत्तायामस्ति तदा असतः कारणत्वापत्तिः । सत्तायास्तत्राभावात् । न चेत् तदा सत्त्वमसत्प्राप्तम् । अर्थक्रियाकारित्वाभावादित्यर्थः । तथाच तदलीकत्वे असदेव कारणत्वं प्राप्तमित्यर्थः । **अस्यैव श्लोकस्येति** ।

**अन्तर्भावितसत्त्वं चेदकारणमसत्ततः ।**

**नान्तर्भावितसत्वं चेदकारणमसत्ततः ।।**

इति पठितुं शक्यत्वादित्यर्थः । ननु अस्माभिः सतः साधकत्वं खंडनीयम् । नत्वसतः साधकत्वमपि साधनीयम्, इत्यत आह **अन्तर्भावितेति** । ननु प्रतिबंदीमात्रं न दूषणमित्यत आह **अन्यत्रेति** ।। किमतो यद्येवम् अत आह **तस्मादिति** ।।



**ಕಿಂಚ ತ್ವನ್ಮತೇ ತತ್ತದ್ ವೃತ್ತೇಃ ತತ್ತದಾಕಾರತ್ವೇನ ಚೈತನ್ಯಸ್ಯ ಚ ತತ್ತತ್ ಪ್ರತಿಬಿಂಬಿತತ್ವೇನ ವಾ ತದಭಿವ್ಯಕ್ತತ್ವೇನ ವಾ, ಮಮ ತು ತತ್ತಜ್ಜ್ಞಾನಸ್ಯ ತತ್ತದೀಯ ಸ್ವಭಾವತ್ವೇನ ವಾ ತತ್ತದ್ ವ್ಯವಹಾರ ಜನನ ಶಕ್ತತ್ವೇನ ವಾ ಸ್ವತ ಏವ ವೈಲಕ್ಷಣ್ಯಂ ।**

ಇದು ನಮಗೆ ವಾದಿಪ್ರತಿವಾದಿಗಳಿಗೆ ಇಬ್ಬರಿಗೂ ಇಷ್ಟವೇ ಇರುವುದರಿಂದ ವಿವಾದಕ್ಕೆ ಅವಕಾಶವಿಲ್ಲ ಎಂದು ಹೇಳುತ್ತಾರೆ—ಅದ್ವೈತ ಮತದಲ್ಲಿ ಘಟಾಕಾರಾದಿ ಆಯಾ ವೃತ್ತಿಗೆ ಆಯಾ ಆಕಾರದಿಂದಲೆ ಸ್ವತ ವೈಲಕ್ಷಣ್ಯವಿದೆ. ಚೈತನ್ಯಕ್ಕೆ ಆಯಾ ವೃತ್ತಿಯಲ್ಲಿ ಉಂಟಾದ ಪ್ರತಿಬಿಂಬಿತತ್ವದಿಂದ ವೈಲಕ್ಷಣ್ಯ. ಅಥವಾ ಆಯಾ ವೃತ್ತಿಯಿಂದ ಉಂಟಾದ ಅಭಿವ್ಯಕ್ತತ್ವದಿಂದ ಸ್ವತಃ ವೈಲಕ್ಷಣ್ಯವಿದೆ ಹೊರತು ಘಟಾದಿಗಳಿಗೆ ಅದರಲ್ಲಿ ಪ್ರವೇಶವಿಲ್ಲ. ನಮ್ಮ ಮತದಲ್ಲಿಯೂ ಘಟಾದಿ ಆಯಾ ಜ್ಞಾನಕ್ಕೆ ಆಯಾ ಸ್ವಭಾವದಿಂದಲೇ ವೈಲಕ್ಷಣ್ಯ. ಆಯಾ ವ್ಯವಹಾರ ಜನನಶಕ್ತಿಯಿಂದಲೆ ವೈಲಕ್ಷಣ್ಯ ಹೊರತು ಅದರೊಳಗೆ ಘಟಾದಿಗಳಿಗೆ ಪ್ರವೇಶವಿಲ್ಲ ಎನ್ನುವುದು ಸಂಮತ.

**ನಹಿ ಗವಯಾಕಾರರೇಖಾಯಾ ಘಟೀಯಸ್ವಭಾವಸ್ಯ ತದಭಾವಸ್ಯ ವಾ ದಾಹಶಕ್ತೇರ್ವಾ ಯತ್ಕಾರ್ಯಂ ತದ್ಧೇತುಕೋಟೌ ಗವಯಾದೇಃ ನಿವೇಶಃ । ತಸ್ಮಾತ್ ರಜ್ಜೌ**

**ಸರ್ಪಜ್ಞಾನಸ್ಯ ಭ್ರಮತ್ವೇನ ಅಧಿಕಜನ್ಯತ್ವೇಪಿ ಸರ್ಪಜ್ಞಾನತ್ವೇನ ತದ್ಧೇತು ಜನ್ಯತ್ವಾತ್ ಸ್ವತ ಏವ ಅಸರ್ಪಜ್ಞಾನಾತ್ ವೈಲಕ್ಷಣ್ಯಂ ಇತಿ ನ ಕೋಽಪಿ ದೋಷಃ । ತದುಕ್ತಮ್—**

**ಸರ್ಪಭ್ರಮಾದಾವಪಿ ಹಿ ಜ್ಞಾನಮಸ್ತ್ಯೇವ ತಾದೃಶಂ ।**
**ತದೇವಾರ್ಥಕ್ರಿಯಾಕಾರಿ ತತ್ ಸದೇವಾರ್ಥಕಾರಕಂ ।। ಇತಿ ।।**

ಗವಯಾಕಾರ ರೇಖಾದಿಂದ 'ಅಯಂ ಗವಯಃ' ಎಂಬ ಜ್ಞಾನಬಂದಾಗ ಆ ಜ್ಞಾನಕ್ಕೆ ಗವಯಾಕಾರ ರೇಖೆ ಮಾತ್ರ ಕಾರಣ ಹೊರತು ಸ್ವಯಂ ಗವಯಕ್ಕೂ ಕಾರಣತ್ವೇನ ಅಲ್ಲಿ ಪ್ರವೇಶವಿಲ್ಲ. ಘಟೀಯ ಸ್ವಭಾವ ಉಳ್ಳ ಘಟಾಭಾವದ ಕಾರ್ಯಕ್ಕೆ ಘಟಾಭಾವ ಕಾರಣವಾಗುತ್ತದೆ ಹೊರತು ಘಟವೂ ಕೂಡ ಕಾರಣವಾಗಿ ಅಲ್ಲಿ ಪ್ರವೇಶಿಸುವುದಿಲ್ಲ. ವಹ್ನಿಯ ದಾಹಶಕ್ತಿಯಿಂದಾಗುವ ದಾಹಕಾರ್ಯದ ಕಾರಣವು ಅದರಿಂದ ಅನುಮಿತವಾದ ದಾಹಶಕ್ತಿಯೆ ಹೊರತು ದಾಹವೂ ಕೂಡ ಕಾರಣವೆನ್ನಲಾಗುವುದಿಲ್ಲ ಇಲ್ಲದಿದ್ದರೆ ಆತ್ಮಾಶ್ರಯ. ಈ ಸ್ವಾಭಾವಿಕ ವೈಲಕ್ಷಣ್ಯವನ್ನು ಶಬ್ದದಿಂದ ತಿಳಿಸಲಾಗದಿರುವುದರಿಂದ ಬೇರೆ ಉಪಾಯವಿಲ್ಲದೆ ಅಕಾರಣವಾದ ಉಪಲಕ್ಷಣ ಘಟಾದಿಗಳನ್ನೇ ಸೇರಿಸಿ 'ಘಟಜ್ಞಾನ' ಎಂದು ಮುಂತಾಗಿ ವ್ಯವಹಾರ ಮಾಡುತ್ತೇವೆ. ಹೊರತು ಘಟಾದಿಗಳು ಅವುಗಳ ಜ್ಞಾನಕಾರ್ಯದಲ್ಲಿ ಕಾರಣವಾಗುವುದಿಲ್ಲ.

ಆದರಿಂದ, ರಜ್ಜುಸರ್ಪಜ್ಞಾನವೂ ಸರ್ಪಜ್ಞಾನವೆ. ಅದು ಭ್ರಮವಾದ್ದರಿಂದ ಅದರ ಕಾರಣ ಸಾಮಗ್ರಿಯಲ್ಲಿ ದೋಷವು ಅಧಿಕವಾಗಿ ಸೇರಿದೆ. ಆದರೆ ಅದರಿಂದ ಸರ್ಪಪ್ರಮಾಜ್ಞಾನದಿಂದ ವ್ಯಾವೃತ್ತವಾದೀತು ಹೊರತು ಅದರಿಂದಲೇ ಅಸರ್ಪಜ್ಞಾನದಿಂದ ವ್ಯಾವೃತ್ತವಾಗುವುದಿಲ್ಲ. ಹೀಗಾಗಿ ಸರ್ಪಭ್ರಮವೂ ಸರ್ಪಜ್ಞಾನವೇ ಆಗಿದ್ದು ಅಸರ್ಪಜ್ಞಾನ ಕಾರಣಕ್ಕಿಂತ ಭಿನ್ನವಾದ ಸರ್ಪಜ್ಞಾನ ಕಾರಣದಿಂದಲೇ ಜನಿಸುವುದರಿಂದ ಅಸರ್ಪಜ್ಞಾನಕ್ಕಿಂತ ಸ್ವತಃ ಸ್ವಾಭಾವಿಕವಾಗಿ ವಿಲಕ್ಷಣವಾಗಿರುತ್ತದೆ. ಆದರಿಂದ ಏನೂ ದೋಷವಿಲ್ಲ.

ಪ್ರಕೃತ್ಯಧಿಕರಣ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ— 'ಸರ್ಪಪ್ರಮಾಗಳಲ್ಲಿರುವಂತೆ ಸರ್ಪಭ್ರಮಾದಿಸ್ಥಳಗಳಲ್ಲಿಯೂ ಕೂಡ ವಿಷಯಕೃತ ವೈಲಕ್ಷಣ್ಯವಿಲ್ಲದೆ ಸ್ವತಃ ವಿಲಕ್ಷಣವೇ ಆಗಿರುವ ಸರ್ಪಜ್ಞಾನವಿದೆ. ಅದೇ ಅರ್ಥಕ್ರಿಯಾಕಾರಿಯಾಗಿದೆ. ಹೊರತು ವಿಷಯವಾದ ಸರ್ಪವು ಅರ್ಥಕ್ರಿಯಾಕಾರಿಯಲ್ಲ. ಸರ್ಪಜ್ಞಾನವು ಅಬಾಧಿತವಾದ್ದರಿಂದ ಸತ್ ಆಗಿದೆ. ಆದರಿಂದ ಸತ್ತೇ ಸಾಧಕ ಹೊರತು, ಅಸತ್ತು ಸಾಧಕವಾಗುವುದಿಲ್ಲ' ಎಂದು.

**ಅಂತರ್ಭಾವಿತ ಸತ್ವಂ ಚೇತ್ ಕಾರಣಂ ತದಸತ್ತತಃ ।**
**ನಾಂತರ್ಭಾವಿತಸತ್ವಂ ಚೇತ್ ಕಾರಣಂ ತದಸತ್ತತಃ ।।**

**ಇತ್ಯಾದಿ ಖಂಡನೋಕ್ತಾ ಅಸತ್‌ಕಾರಣತಾ ಅಸ್ಯೈವ ಶ್ಲೋಕಸ್ಯ ಅಕಾರಪ್ರಶ್ಲೇಷೇಣ ಪಠಿತುಂ ಶಕ್ಯತ್ವಾತ್ ಸ್ವವ್ಯಾಹತಾ ।**

ಖಂಡನಕಾರನ ಈ ಶ್ಲೋಕದಲ್ಲಿ 'ಕಾರಣ' ಅಂದರೆ ಕಾರಣತ್ವ, ಭಾವಪ್ರಧಾನ ನಿರ್ದೇಶ. ಈ

ಕಾರಣತ್ವವು 'ಅಂತರ್ಭಾವಿತ ಸತ್ವ' ಅಂದರೆ ಸತ್ತಾವಿಶಿಷ್ಟವಾಗಿದೆ ಎಂದರೆ ಅದು ಸತ್ ಆಗುವುದಿಲ್ಲ. ಏಕೆಂದರೆ ಅದರಲ್ಲಿ ಸತ್ವ ಬರುವುದಿಲ್ಲ. ವಿಶಿಷ್ಟಘಟಕ ವಿಶೇಷಣವಾದ ಸತ್ವವು ಸತ್ತಾಶ್ರಯವಾದರೆ ಮಾತ್ರ ವಿಶಿಷ್ಟವು ಸತ್ತಾಶ್ರಯವಾಗಿ ಸತ್ತೆನಿಸುತ್ತದೆ. ಸತ್ವವು ಸತ್ತಾಶ್ರಯವಾಗಲಾರದು. ಆತ್ಮಾಶ್ರಯದೋಷ ಬರುತ್ತದೆ. ಹೀಗೆ ಸತ್ತಾವಿಶಿಷ್ಟ ಕಾರಣತ್ವವು ಸತ್ ಆಗುವುದಿಲ್ಲವೆಂದರೆ ಅಸತ್ತಾಯಿತು!

ಕಾರಣತ್ವವು 'ನಾಂತರ್ಭಾವಿತಸತ್ವ' ಸತ್ತಾವಿಶಿಷ್ಟವಲ್ಲದಿದ್ದರೆ ಸತ್ವವು ಕೇವಲ ಉಪಲಕ್ಷಣ ವಾಗುವುದರಿಂದ ಸತ್ವರೂಪ ವಿಶೇಷಣರಹಿತವಾಗಿ ಅಸತ್ತೇ ಆಗುವುದು.

ಕಾರಣತ್ವವು ಸತ್ತಾಘಟಿತವಾದರೆ ಸತ್ತಾಘಟಿತದಲ್ಲಿ ಆತ್ಮಾಶ್ರಯದೋಷದಿಂದ ಸತ್ವಬಾರದಿರುವುದರಿಂದ ಕಾರಣತ್ವವು ಅಸತ್ತಾಗುವುದು. ಸತ್ತಾಘಟಿತವಲ್ಲದಿದ್ದರೂ ಕೂಡ ಸತ್ತಾಬಾರದಿರುವುದರಿಂದ ಕಾರಣತ್ವ ಮಾತ್ರ ಬರುವುದರಿಂದ ಕಾರಣ ಅಸತ್ತಾಗುವುದು.

ಕಾರಣವು ಸತ್ತಾವಿಶಿಷ್ಟವಾದರೆ ಸತ್ವವು ಸ್ವವಿಶಿಷ್ಟಕಾರಣದಲ್ಲಿ ಬಾರದಿರುವುದರಿಂದ ಕಾರಣವು ಅಸತ್ತಾಗುವುದು.

ಕಾರಣತ್ವವು ಸತ್ತಾದಲ್ಲಿ ಇರುವುದಾದರೆ, ಸತ್ತಾದಲ್ಲಿ ಸತ್ತಾ ಇಲ್ಲದಿರುವುದರಿಂದ ಅಸತ್ತಾಗುವ ಕಾರಣ ಕಾರಣತ್ವವು ಅಸತ್ತಿನಲ್ಲಿ ಬಂದಂತಾಗುತ್ತದೆ. ಅಸತ್ತಿಗೆ ಕಾರಣತ್ವಾಪತ್ತಿ . ಕಾರಣತ್ವವು ಸತ್ತಾದಲ್ಲಿ ಇಲ್ಲವೆಂದರೆ ಆಗ ಸತ್ತಾ ಅರ್ಥಕ್ರಿಯಾಕಾರಿ ಆಗುವುದಿಲ್ಲ. ಏಕೆಂದರೆ ಕಾರಣತ್ವವೆ ಇಲ್ಲ. ಅರ್ಥಕ್ರಿಯಾಕಾರಿಯಾಗದ ಸತ್ತಾ ಅಸತ್ತೇ ಆಗುವುದು. ಸತ್ತಾ ಅಸತ್ತಾದರೆ, ಸತ್ತಾವಿಶಿಷ್ಟಕಾರಣತ್ವವು ಅಸತ್ತೇ ಆಗುತ್ತದೆ.'

ಇಲ್ಲಿ ಖಂಡನಕಾರನು ಸತ್ವದಲ್ಲಿ ಸತ್ವವಿಶಿಷ್ಟದಲ್ಲಿ, ಸತ್ವವಿಲ್ಲವೆಂದಿಟ್ಟುಕೊಂಡು ಅಸತ್ತಿಗೆ ಸಾಧಕತ್ವವನ್ನು ಸಾಧಿಸಲು ಯತ್ನಿಸಿದ್ದಾನೆ. ಅದು ತಪ್ಪು. ದೇಶಕಾಲಗಳಲ್ಲಿ ದೇಶಕಾಲಗಳು, ಪ್ರಮೇಯತ್ವದಲ್ಲಿ ಪ್ರಮೇಯತ್ವ, ಅಭಿಧೇಯತ್ವದಲ್ಲಿ ಅಭಿಧೇಯತ್ವ ದೃಶ್ಯತ್ವದಲ್ಲಿ ದೃಶ್ಯತ್ವ ಗಳಿರುವುದರಿಂದ ಅದೇರೀತಿ ಸತ್ವದಲ್ಲಿಯೂ ಸತ್ವವಿರಬಹುದು. ಆತ್ಮಾಶ್ರಯ ದೋಷವಿಲ್ಲ. ಮತ್ತು ಸತ್ತಾ ಎಂದರೆ ಒಂದು ಜಾತಿ ಎಂದಿಟ್ಟುಕೊಂಡು ಸತ್ತಾದಲ್ಲಿ ಸತ್ತಾ ಇಲ್ಲ ಎಂದೂ ಹೇಳುತ್ತಾನೆ. ಸತ್ತಾ ಎಂದರೆ ಅದು ಜಾತಿಯಲ್ಲ. ಅಬಾಧ್ಯತ್ವವೆ ಸತ್ತಾ ಎಂದು ಅವನೇ ಒಪ್ಪಿದ್ದಾನೆ. ಅದರಿಂದ ಸತ್ತಾದಲ್ಲಿ ಸತ್ತಾ ಇರಬಹುದು. ಮತ್ತು ಸತ್ತಾ ಇಲ್ಲದಿದ್ದರೆ ಅಸತ್ತೆನಿಸುವುದೂ ತಪ್ಪು. ಬ್ರಹ್ಮನಲ್ಲಿ ಸತ್ತಾ ಇಲ್ಲದಿದ್ದರೂ ಬ್ರಹ್ಮ ಸ್ವರೂಪಸತ್ಯವೆಂದು ಅವನೇ ಹೇಳುತ್ತಾನೆ.

'ಕಾರಣ'ಶಬ್ದಕ್ಕೆ ಅಕಾರವನ್ನು ಸೇರಿಸಿದರೆ ಖಂಡನಕಾರನ ಈ ಇಡೀ ಶ್ಲೋಕವು ಅಸತ್ತಿಗೆ ಅಸಾಧಕತ್ವವನ್ನು ಸಾಧಿಸುತ್ತದೆ ಅದರಿಂದ ಸ್ವವ್ಯಾಹತಿ ಎಂದು ವ್ಯಾಸರಾಜರು ಹೇಳುತ್ತಾರೆ. ಅಕಾರವನ್ನು ಸೇರಿಸಿದರೆ ಶ್ಲೋಕ ಹೀಗಾಗುವುದು—

**ಸರ್ಪಜ್ಞಾನಸ್ಯ ಭ್ರಮತ್ವೇನ ಅಧಿಕಜನ್ಯತ್ವೇಪಿ ಸರ್ಪಜ್ಞಾನತ್ವೇನ ತದ್ಧೇತು ಜನ್ಯತ್ವಾತ್ ಸ್ವತ ಏವ ಅಸರ್ಪಜ್ಞಾನಾತ್ ವೈಲಕ್ಷಣ್ಯಂ ಇತಿ ನ ಕೋऽಪಿ ದೋಷಃ । ತದುಕ್ತಮ್—**

**ಸರ್ಪಭ್ರಮಾದಾವಪಿ ಹಿ ಜ್ಞಾನಮಸ್ತ್ಯೇವ ತಾದೃಶಂ ।**
**ತದೇವಾರ್ಥಕ್ರಿಯಾಕಾರಿ ತತ್ ಸದೇವಾರ್ಥಕಾರಕಂ ॥ ಇತಿ ॥**

ಗವಯಾಕಾರ ರೇಖಾದಿಂದ 'ಅಯಂ ಗವಯಃ' ಎಂಬ ಜ್ಞಾನಬಂದಾಗ ಆ ಜ್ಞಾನಕ್ಕೆ ಗವಯಾಕಾರ ರೇಖೆ ಮಾತ್ರ ಕಾರಣ ಹೊರತು ಸ್ವಯಂ ಗವಯಕ್ಕೂ ಕಾರಣತ್ವೇನ ಅಲ್ಲಿ ಪ್ರವೇಶವಿಲ್ಲ. ಘಟೀಯ ಸ್ವಭಾವ ಉಳ್ಳ ಘಟಾಭಾವದ ಕಾರ್ಯಕ್ಕೆ ಘಟಾಭಾವ ಕಾರಣವಾಗುತ್ತದೆ ಹೊರತು ಘಟವೂ ಕೂಡ ಕಾರಣವಾಗಿ ಅಲ್ಲಿ ಪ್ರವೇಶಿಸುವುದಿಲ್ಲ. ವಹ್ನಿಯ ದಾಹಶಕ್ತಿಯಿಂದಾಗುವ ದಾಹಕಾರ್ಯದ ಕಾರಣವು ಅದರಿಂದ ಅನುಮಿತವಾದ ದಾಹಶಕ್ತಿಯೆ ಹೊರತು ದಾಹವೂ ಕೂಡ ಕಾರಣವೆನ್ನಲಾಗುವುದಿಲ್ಲ ಇಲ್ಲದಿದ್ದರೆ ಆತ್ಮಾಶ್ರಯ. ಈ ಸ್ವಾಭಾವಿಕ ವೈಲಕ್ಷಣ್ಯವನ್ನು ಶಬ್ದದಿಂದ ತಿಳಿಸಲಾಗದಿರುವುದರಿಂದ ಬೇರೆ ಉಪಾಯವಿಲ್ಲದೆ ಅಕಾರಣವಾದ ಉಪಲಕ್ಷಣ ಘಟಾದಿಗಳನ್ನೇ ಸೇರಿಸಿ 'ಘಟಜ್ಞಾನ' ಎಂದು ಮುಂತಾಗಿ ವ್ಯವಹಾರ ಮಾಡುತ್ತೇವೆ. ಹೊರತು ಘಟಾದಿಗಳು ಅವುಗಳ ಜ್ಞಾನಕಾರ್ಯದಲ್ಲಿ ಕಾರಣವಾಗುವುದಿಲ್ಲ.

ಅದರಿಂದ, ರಜ್ಜುಸರ್ಪಜ್ಞಾನವೂ ಸರ್ಪಜ್ಞಾನವೆ. ಅದು ಭ್ರಮವಾದ್ದರಿಂದ ಅದರ ಕಾರಣ ಸಾಮಗ್ರಿಯಲ್ಲಿ ದೋಷವು ಅಧಿಕವಾಗಿ ಸೇರಿದೆ. ಆದರೆ ಅದರಿಂದ ಸರ್ಪಪ್ರಮಾಜ್ಞಾನದಿಂದ ವ್ಯಾವೃತ್ತವಾದೀತು ಹೊರತು ಅದರಿಂದಲೇ ಅಸರ್ಪಜ್ಞಾನದಿಂದ ವ್ಯಾವೃತ್ತವಾಗುವುದಿಲ್ಲ. ಹೀಗಾಗಿ ಸರ್ಪಭ್ರಮವೂ ಸರ್ಪಜ್ಞಾನವೇ ಆಗಿದ್ದು ಅಸರ್ಪಜ್ಞಾನ ಕಾರಣಕ್ಕಿಂತ ಭಿನ್ನವಾದ ಸರ್ಪಜ್ಞಾನ ಕಾರಣದಿಂದಲೇ ಜನಿಸುವುದರಿಂದ ಅಸರ್ಪಜ್ಞಾನಕ್ಕಿಂತ ಸ್ವತಃ ಸ್ವಾಭಾವಿಕವಾಗಿ ವಿಲಕ್ಷಣವಾಗಿರುತ್ತದೆ. ಅದರಿಂದ ಏನೂ ದೋಷವಿಲ್ಲ.

ಪ್ರಕೃತ್ಯಧಿಕರಣ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ— 'ಸರ್ಪಪ್ರಮಾಗಳಲ್ಲಿರುವಂತೆ ಸರ್ಪಭ್ರಮಾದಿಸ್ಥಳಗಳಲ್ಲಿಯೂ ಕೂಡ ವಿಷಯಕೃತ ವೈಲಕ್ಷಣ್ಯವಿಲ್ಲದೆ ಸ್ವತಃ ವಿಲಕ್ಷಣವೇ ಆಗಿರುವ ಸರ್ಪಜ್ಞಾನವಿದೆ. ಅದೇ ಅರ್ಥಕ್ರಿಯಾಕಾರಿಯಾಗಿದೆ. ಹೊರತು ವಿಷಯವಾದ ಸರ್ಪವು ಅರ್ಥಕ್ರಿಯಾಕಾರಿಯಲ್ಲ. ಸರ್ಪಜ್ಞಾನವು ಅಬಾಧಿತವಾದ್ದರಿಂದ ಸತ್ ಆಗಿದೆ. ಅದರಿಂದ ಸತ್ತೇ ಸಾಧಕ ಹೊರತು, ಅಸತ್ತು ಸಾಧಕವಾಗುವುದಿಲ್ಲ' ಎಂದು.

**ಅಂತರ್ಭಾವಿತ ಸತ್ವಂ ಚೇತ್ ಕಾರಣಂ ತದಸತ್ತತಃ ।**
**ನಾಂತರ್ಭಾವಿತಸತ್ವಂ ಚೇತ್ ಕಾರಣಂ ತದಸತ್ತತಃ ॥**

**ಇತ್ಯಾದಿ ಖಂಡನೋಕ್ತಾ ಅಸತ್‌ಕಾರಣತಾ ಅಸ್ಯೈವ ಶ್ಲೋಕಸ್ಯ ಅಕಾರಪ್ರಶ್ಲೇಷೇಣ ಪರಿತುಂ ಶಕ್ಯತ್ವಾತ್ ಸ್ವವ್ಯಾಹತಾ ।**

ಖಂಡನಕಾರನ ಈ ಶ್ಲೋಕದಲ್ಲಿ 'ಕಾರಣ' ಅಂದರೆ ಕಾರಣತ್ವ, ಭಾವಪ್ರಧಾನ ನಿರ್ದೇಶ. ಈ

ಕಾರಣತ್ವವು 'ಅಂತರ್ಭಾವಿತ ಸತ್ವ' ಅಂದರೆ ಸತ್ತಾವಿಶಿಷ್ಟವಾಗಿದೆ ಎಂದರೆ ಅದು ಸತ್ ಆಗುವುದಿಲ್ಲ. ಏಕೆಂದರೆ ಅದರಲ್ಲಿ ಸತ್ವ ಬರುವುದಿಲ್ಲ. ವಿಶಿಷ್ಟಘಟಕ ವಿಶೇಷಣವಾದ ಸತ್ವವು ಸತ್ತಾಶ್ರಯವಾದರೆ ಮಾತ್ರ ವಿಶಿಷ್ಟವು ಸತ್ತಾಶ್ರಯವಾಗಿ ಸತ್ತೆನಿಸುತ್ತದೆ. ಸತ್ವವು ಸತ್ತಾಶ್ರಯವಾಗಲಾರದು. ಆತ್ಮಾಶ್ರಯದೋಷ ಬರುತ್ತದೆ. ಹೀಗೆ ಸತ್ತಾವಿಶಿಷ್ಟ ಕಾರಣತ್ವವು ಸತ್ ಆಗುವುದಿಲ್ಲವೆಂದರೆ ಅಸತ್ತಾಯಿತು!

ಕಾರಣತ್ವವು 'ನಾಂತರ್ಭಾವಿತಸತ್ವ' ಸತ್ತಾವಿಶಿಷ್ಟವಲ್ಲದಿದ್ದರೆ ಸತ್ವವು ಕೇವಲ ಉಪಲಕ್ಷಣ ವಾಗುವುದರಿಂದ ಸತ್ವರೂಪ ವಿಶೇಷಣರಹಿತವಾಗಿ ಅಸತ್ತೇ ಆಗುವುದು.

ಕಾರಣತ್ವವು ಸತ್ತಾಘಟಿತವಾದರೆ ಸತ್ತಾಘಟಿತದಲ್ಲಿ ಆತ್ಮಾಶ್ರಯದೋಷದಿಂದ ಸತ್ವಬಾರದಿರುವುದರಿಂದ ಕಾರಣತ್ವವು ಅಸತ್ತಾಗುವುದು. ಸತ್ತಾಘಟಿತವಲ್ಲದಿದ್ದರೂ ಕೂಡ ಸತ್ತಾಬಾರದಿರುವುದರಿಂದ ಕಾರಣತ್ವ ಮಾತ್ರ ಬರುವುದರಿಂದ ಕಾರಣ ಅಸತ್ತಾಗುವುದು.

ಕಾರಣವು ಸತ್ತಾವಿಶಿಷ್ಟವಾದರೆ ಸತ್ವವು ಸ್ವವಿಶಿಷ್ಟಕಾರಣದಲ್ಲಿ ಬಾರದಿರುವುದರಿಂದ ಕಾರಣವು ಅಸತ್ತಾಗುವುದು.

ಕಾರಣತ್ವವು ಸತ್ತಾದಲ್ಲಿ ಇರುವುದಾದರೆ, ಸತ್ತಾದಲ್ಲಿ ಸತ್ತಾ ಇಲ್ಲದಿರುವುದರಿಂದ ಅಸತ್ತಾಗುವ ಕಾರಣ ಕಾರಣತ್ವವು ಅಸತ್ತಿನಲ್ಲಿ ಬಂದಂತಾಗುತ್ತದೆ. ಅಸತ್ತಿಗೆ ಕಾರಣತ್ವಾಪತ್ತಿ . ಕಾರಣತ್ವವು ಸತ್ತಾದಲ್ಲಿ ಇಲ್ಲವೆಂದರೆ ಆಗ ಸತ್ತಾ ಅರ್ಥಕ್ರಿಯಾಕಾರಿ ಆಗುವುದಿಲ್ಲ. ಏಕೆಂದರೆ ಕಾರಣತ್ವವೆ ಇಲ್ಲ. ಅರ್ಥಕ್ರಿಯಾಕಾರಿಯಾಗದ ಸತ್ತಾ ಅಸತ್ತೇ ಆಗುವುದು. ಸತ್ತಾ ಅಸತ್ತಾದರೆ, ಸತ್ತಾವಿಶಿಷ್ಟಕಾರಣತ್ವವು ಅಸತ್ತೇ ಆಗುತ್ತದೆ.'

ಇಲ್ಲಿ ಖಂಡನಕಾರನು ಸತ್ವದಲ್ಲಿ ಸತ್ವವಿಶಿಷ್ಟದಲ್ಲಿ, ಸತ್ವವಿಲ್ಲವೆಂದಿಟ್ಟುಕೊಂಡು ಅಸತ್ತಿಗೆ ಸಾಧಕತ್ವವನ್ನು ಸಾಧಿಸಲು ಯತ್ನಿಸಿದ್ದಾನೆ. ಅದು ತಪ್ಪು. ದೇಶಕಾಲಗಳಲ್ಲಿ ದೇಶಕಾಲಗಳು, ಪ್ರಮೇಯತ್ವದಲ್ಲಿ ಪ್ರಮೇಯತ್ವ, ಅಭಿಧೇಯತ್ವದಲ್ಲಿ ಅಭಿಧೇಯತ್ವ ದೃಶ್ಯತ್ವದಲ್ಲಿ ದೃಶ್ಯತ್ವ ಗಳಿರುವುದರಿಂದ ಅದೇರೀತಿ ಸತ್ವದಲ್ಲಿಯೂ ಸತ್ವವಿರಬಹುದು. ಆತ್ಮಾಶ್ರಯ ದೋಷವಿಲ್ಲ. ಮತ್ತು ಸತ್ತಾ ಎಂದರೆ ಒಂದು ಜಾತಿ ಎಂದಿಟ್ಟುಕೊಂಡು ಸತ್ತಾದಲ್ಲಿ ಸತ್ತಾ ಇಲ್ಲ ಎಂದೂ ಹೇಳುತ್ತಾನೆ. ಸತ್ತಾ ಎಂದರೆ ಅದು ಜಾತಿಯಲ್ಲ. ಅಬಾಧ್ಯತ್ವವೆ ಸತ್ತಾ ಎಂದು ಅವನೇ ಒಪ್ಪಿದ್ದಾನೆ. ಅದರಿಂದ ಸತ್ತಾದಲ್ಲಿ ಸತ್ತಾ ಇರಬಹುದು. ಮತ್ತು ಸತ್ತಾ ಇಲ್ಲದಿದ್ದರೆ ಅಸತ್ತೆನಿಸುವುದೂ ತಪ್ಪು. ಬ್ರಹ್ಮನಲ್ಲಿ ಸತ್ತಾ ಇಲ್ಲದಿದ್ದರೂ ಬ್ರಹ್ಮ ಸ್ವರೂಪಸತ್ಯವೆಂದು ಅವನೇ ಹೇಳುತ್ತಾನೆ.

'ಕಾರಣ'ಶಬ್ದಕ್ಕೆ ಅಕಾರವನ್ನು ಸೇರಿಸಿದರೆ ಖಂಡನಕಾರನ ಈ ಇಡೀ ಶ್ಲೋಕವು ಅಸತ್ತಿಗೆ ಅಸಾಧಕತ್ವವನ್ನು ಸಾಧಿಸುತ್ತದೆ ಅದರಿಂದ ಸ್ವವ್ಯಾಹತಿ ಎಂದು ವ್ಯಾಸರಾಜರು ಹೇಳುತ್ತಾರೆ. ಅಕಾರವನ್ನು ಸೇರಿಸಿದರೆ ಶ್ಲೋಕ ಹೀಗಾಗುವುದು—

**ಅಂತರ್ಭಾವಿತ ಸತ್ವಂ ಚೇತ್ ಅಕಾರಣಮಸತ್ ತತಃ ।**
**ನಾಂತರ್ಭಾವಿತ ಸತ್ವಂ ಚೇತ್ ಅಕಾರಣಮಸತ್ ತತಃ ॥**

ಇದಕ್ಕೆ ಹೀಗೆ ಅರ್ಥ—ಕಾರಣವು 'ಅಂತರ್ಭಾವಿತಸತ್ವ'ವಾದರೆ ಅಂದರೆ ಸತ್ವ ವಿಶಿಷ್ಟವಾಗಿದ್ದರೆ ಅಸತ್ ಕಾರಣವಲ್ಲವೆಂದಾಗುವುದು, ಕಾರಣವು ಸತ್ವವಿಶಿಷ್ಟವಾಗಿರುವುದರಿಂದ, ಮತ್ತು ಅಸತ್ತಿಗೆ ಸತ್ವವಿಲ್ಲದಿರುವುದರಿಂದ.

ಕಾರಣತ್ವವು 'ನಾಂತರ್ಭಾವಿತಸತ್ವ'ವಾದರೆ, ಅಂದರೆ ಸತ್ವಾವಿಶಿಷ್ಟಕ್ಕೇ ಕಾರಣತ್ವವೆಂದಾದರೆ ಅಸತ್ ಅಕಾರಣವೇ ಆಗುವುದು. ಏಕೆಂದರೆ ಕಾರಣತ್ವಕ್ಕೆ ನಿಯಮೇನ ಸತ್ವ ಬೇಕು. ಅಥವಾ ಸತ್ವವು ಕಾರಣತಾವಚ್ಛೇದಕವಾಗಿರಬೇಕು. ಕಾರಣಸಾಮಗ್ರಿಯಲ್ಲಿ ದಂಡತ್ವವು ಸೇರದಿದ್ದರೂ ಅದಿಲ್ಲದಿದ್ದರೆ ಕಾರಣವು ಕಾರಣವೆನಿಸಲಾರದು. ಅದಿಲ್ಲದ ಅದಂಡವೂ ಕಾರಣವಾಗದು.

ಅಕಾರವನ್ನು ಹೀಗೂ ಸೇರಿಸಬಹುದು—

**ಅಂತರ್ಭಾವಿತ ಸತ್ವಂ ಚೇತ್ ಅನಸತ್ಕಾರಣಂ ತತಃ ।**
**ನಾಂತರ್ಭಾವಿತ ಸತ್ವಂ ಚೇತ್ ಅನಸತ್ಕಾರಣಂ ತತಃ ॥**

ಇಲ್ಲಿ ಇಷ್ಟು ವ್ಯತ್ಯಾಸ—ಹಿಂದಿನ ಶ್ಲೋಕಪಾಠದಲ್ಲಿ 'ಅಸತ್ ಕಾರಣವಲ್ಲ' ಎಂದು ಹೇಳಿದಂತಾಗುತ್ತದೆ. ಈಗಿನ ಪಾಠದಲ್ಲಿ 'ಅನಸತ್' ಎಂದರೆ ಸತ್ತೇ ಕಾರಣ ಎಂದು ಹೇಳಿದಂತಾಗುತ್ತದೆ.

**ಅಂತರ್ಭಾವಿತ ಸತ್ವಂ ಚೇತ್ ಅಧಿಷ್ಠಾನಮಸತ್ತತಃ ।**
**ನಾಂತರ್ಭಾವಿತಸತ್ವಂ ಚೇತ್ ಅಧಿಷ್ಠಾನಮಸತ್ತತಃ ॥**
**ಇತ್ಯಪಿ ಪಠಿತುಂ ಶಕ್ಯತ್ವಾಚ್ಚ ಸ್ವವ್ಯಾಹತಾ ।**

ಖಂಡನಕಾರನ ಶ್ಲೋಕದಲ್ಲಿ 'ಕಾರಣ'ಪದದ ಸ್ಥಾನದಲ್ಲಿ 'ಅಧಿಷ್ಠಾನ' ಶಬ್ದವನ್ನು ಹಾಕಿದರೂ ಅಧಿಷ್ಠಾನ ಅಸತ್ತೆಂದು ಹೇಳಿದಂತಾಗುತ್ತದೆ. ಬೌದ್ಧಮತವನ್ನೇ ಪುನರುಚ್ಚರಿಸಿದಂತಾಗುತ್ತದೆ. ಹೀಗೆ ವ್ಯಾಹತಿ ಬರುತ್ತದೆ.

'ನಾವು ಅಸತ್ತಿಗೆ ಸಾಧಕತ್ವವನ್ನು ಸಾಧಿಸಬೇಕಿಲ್ಲ, ಸತ್ತಿಗೆ ಸಾಧಕತ್ವವನ್ನು ಖಂಡಿಸಿದರೆ ಸಾಕು' ಎಂದು ಖಂಡನಕಾರ ಹೇಳಿದರೆ, 'ನಾವು ಹೀಗೆ ನಿನ್ನ ಶ್ಲೋಕವನ್ನೇ ಸ್ವಲ್ಪ ಪಾಠ ವ್ಯತ್ಯಾಸ ಮಾಡಿ ಸತ್ತಾದ ಅಧಿಷ್ಠಾನಕ್ಕೇ ಸಾಧಕತ್ವವನ್ನು ಖಂಡಿಸಿ ತೋರಿಸುತ್ತೇವೆ. ಅದರಿಂದ ಸ್ವವ್ಯಾಹತಿ' ಎನ್ನಬೇಕು.

**'ಕಥಮಸತಃ ಸಜ್ಜಾಯೇತ' ಇತ್ಯಾದಿಶ್ರುತ್ಯಾ 'ನಾಸತೋಽದೃಷ್ಟತ್ವಾತ್' ಇತ್ಯಾದಿ ಸೂತ್ರೇಣ, 'ಅಸದ್ಭ್ಯಃ ಶಶವಿಷಾಣಾದಿಭ್ಯಃ ಸದುತ್ಪತ್ತ್ಯದರ್ಶನಾತ್' ಇತ್ಯಾದಿ ಸ್ವೀಯ ಭಾಷ್ಯೇಣ ಚ ವಿರುದ್ಧಾ, ಅನ್ಯತ್ರ ನಿರಸ್ತಾ ಚ ।**

ಖಂಡನೋಕ್ತವಾದ ಅಸತ್ಕಾರಣತ್ವವು 'ಅಸತ್ತಿನಿಂದ ಸತ್ಪ್ರಪಂಚ ಹೇಗೆ ಉತ್ಪನ್ನ

ವಾದೀತು?' ಎಂಬ ಶ್ರುತಿಗೆ ವಿರುದ್ಧ. 'ಅಸತ್ತಿನಿಂದ ಸತ್ ಹುಟ್ಟುವುದು ಕಂಡಿಲ್ಲ' ಎನ್ನುವ ಬ್ರಹ್ಮಸೂತ್ರಕ್ಕೂ ವಿರುದ್ಧ. 'ಅಸತ್ತಾದ ಶಶವಿಷಾಣಾದಿಗಳಿಂದ ಸತ್ ಹುಟ್ಟುವುದು ಕಂಡಿಲ್ಲ' ಎನ್ನುವ ಶಾಂಕರ ಭಾಷ್ಯಕ್ಕೂ ವಿರುದ್ಧ.

'ನಾವು ಅಧಿಷ್ಠಾನದಲ್ಲಿ ಸತ್ವವನ್ನು ಒಪ್ಪದಿದ್ದರೂ ಅದರಲ್ಲಿ ಸ್ವರೂಪ ಸತ್ವವಿದೆ ಎನ್ನುತ್ತೇವೆ. ಅದರಿಂದ ಅದು ಅಸತ್ತಾಗುವುದಿಲ್ಲ' ಎಂದು ಖಂಡನಕಾರ ಹೇಳಿದರೆ, ನಾವೂ ಕೂಡ ಸ್ವರೂಪವೇ ಆದ ಅಬಾಧ್ಯತ್ವರೂಪ ಸತ್ವವನ್ನು ಪ್ರಪಂಚದಲ್ಲಿ ಒಪ್ಪುತ್ತೇವೆ ಎನ್ನಬೇಕು. ತಾರ್ಕಿಕರೂ ಕೂಡ ಸಮವಾಯಕ್ಕೆ ಸತ್ತಾಜಾತಿಯನ್ನು ಒಪ್ಪದಿದ್ದರೂ ಸ್ವರೂಪಸತ್ತಾದಿಂದ ಸತ್ ಎಂಬ ವ್ಯವಹಾರವನ್ನು ಒಪ್ಪಿದ್ದಾರೆ.

'ನಾವು ಅಸತ್ತೆಂದರೆ ಸದ್‌ವಿಲಕ್ಷಣ ಎನ್ನುತ್ತೇವೆ. ಅತ್ಯಂತಾಸತ್ತೆನ್ನುವುದಿಲ್ಲ' ಎಂದರೆ ಅದೂ ವ್ಯಾಹತ, ಸ್ವರೂಪೇಣ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವನ್ನು ಹೇಳುವುದರಿಂದ ನಿಃಸ್ವರೂಪತ್ವರೂಪ ಅತ್ಯಂತಾ ಸತ್ವವನ್ನೇ ಅದ್ವೈತಿಯು ಒಪ್ಪಿದಂತಾಯಿತು. ಅದಕ್ಕಿಂತ ವ್ಯತಿರಿಕ್ತವಾಗಿ ಅತ್ಯಂತಾಸತ್ವ ಬೇರೆ ಇಲ್ಲ.

**ತಸ್ಮಾತ್ ಹೇತುವ್ಯಾಪ್ತ್ಯಾದೀನಾಂ ಅಸತ್ವೇ ಅಸಿದ್ಧ್ಯಾದಿ ದುರ್ವಾರಮಿತಿ ॥**

ಅಸತ್ತಿಗೆ ಸಾಧಕತ್ವವಿಲ್ಲದ್ದರಿಂದ ಹೇತುವ್ಯಾಪ್ತ್ಯಾದಿಗಳು ಅಸತ್ತಾದರೆ ಅಸಿದ್ಧ್ಯಾದಿ ದೋಷಗಳು ಅಪರಿಹಾರ್ಯ.



## ದೃಗ್ ದೃಶ್ಯಸಂಬಂಧಾನುಪಪತ್ತಿಭಂಗಃ

अनुकूलतर्कहीनाश्च मिथ्यात्वहेतवः ।

अत्र केचिन्मायिभिक्षवः—

अन्यच्चेत्संविदो नीलं न तद्भासेत संविदि ।
भासते चेत् कुतः सर्वो न भासेतैकसंविदि ।।
नियामकं न संबंधं पश्यामो नीलतद्धियोः ।

इत्यादिवदद्भिरात्मख्यातिवादिभिरुक्तं ग्राह्यलक्षणाभावाख्यं तर्कं भिक्षित्वाहुः—

'दृश्यस्य सत्यत्वे न तावज्ज्ञानं तदसंबद्धं प्रकाशकं अतिप्रसंगात् । नापि संबद्धम्, आत्मगुणस्य ज्ञानस्य ज्ञेयेन संयोगसमवाययोरयोगात् । अन्यस्य च संबंधस्याभावात् । विषयविषयिभावस्य चाद्विष्ठत्वेनासंबंधत्वात्, दुर्निरूपत्वाच्च ।

तथाहि, बिषयत्वं किं ज्ञानजन्यफलाधारत्वं ? ज्ञानजन्य हानादिबुद्धि गोचरत्वं वा? ज्ञानकर्मत्वं वा? ज्ञानाकारार्पकत्वं वा? दृश्यमानत्वे सति तत्त्वं वा? ज्ञानजन्यव्यवहारयोग्यत्वं वा? यत्संनिकृष्टकरणेन यज्ज्ञानमुत्पद्यते स तस्य विषय इति वा? यस्यां संविदि योऽर्थोऽवभासते स तस्या विषय इति वा? संबंधातरमंतरेण यो यज्ज्ञानावच्छेदकः स तस्य विषय इति वा?

आद्येऽपि फलं न तावज्ज्ञातता, अनंगीकारात् । अतीतादावसंभवाच्च । नापि हानादिः । गगनादौ तदयोगात् । कलधौतमलादेरपि तज्ज्ञानविषयत्वापाताच्च । नाप्यभिज्ञाभिलपने । तयोर्ज्ञेयानिष्ठत्वात् ।

न द्वितीयः । हानादिबुद्धीनां तदजन्यत्वात् । गोचरताया एवाद्याप्यनिरूपणाच्च ।

न तृतीयः । ईश्वरज्ञानस्यातीतादिज्ञानस्य च कर्मकारका-जन्यत्वात् ।

न चतुर्थः । ज्ञानतदाकारयोरभेदेन सर्वेषां ज्ञानहेतूनां विषयत्वापातात् ।

न पंचमः । दृश्यमानताया एवाद्याप्यनिरूपणात् ।

न षष्ठः । योग्यतायां योग्यतांतराभावात् ।

न सप्तमः । नित्येश्वरज्ञानस्य निर्विषयत्वापातात् ।

अष्टमेऽपि संविदीति न तावदधिकरणसप्तमी । ज्ञानस्य ज्ञेयं प्रत्यनधिकरणत्वात् । नापि विषयसप्तमी । तस्यैव निरुच्यमानत्वात् । संविदो विषयत्वम्, अर्थस्य विषयित्वमिति वैपरीत्यापाताच्च । नापि सतिसप्तमी । भासमानताया एवाद्याप्यनिरूपणात् ।

न नवमः । मत्समवेतं रूपज्ञानमित्यत्र रूपज्ञानात्मसमवायस्य संबंधांतरं विनैव रूपज्ञानावच्छेदकस्य तद्विषयत्वापातात् ।

तस्मात् सत्यत्वे दृश्यत्वानुपपत्तेर्दृग्दृश्ययोराध्यासिक एव संबंध इति ।

---

**भिक्षित्वेति** । युक्त्याभासोपन्यासेऽपि न परस्य स्वातन्त्र्यमिति भावः । **प्रकाशकमिति** । प्रकाशरूपमित्यर्थः । नन्वयमुत्कर्षसम इत्यत आह **दुर्निरूपत्वाच्चेति** । **संबन्धांतरमंतरेणेति** । एतच्च देवदत्तस्य घटज्ञानमित्यत्र देवदत्तस्यापि विषयत्ववारणाय । **तदजन्यत्वादिति** । हानादि बुद्ध्यजनक

त्वादित्यर्थः । **गोचरताया इति ।** विषयतातिरिक्ताया इति शेषः । **ज्ञानतदाकारयोरिति ।** इदमुपलक्षणम् । अतीतघटादेरविषयत्वं स्यादित्यपि बोध्यम् । **योग्यतायामिति ।** आत्माश्रयादनवस्थापत्तेर्वेति भावः । **नतावदिति ।** सुब् विभक्तेरुत्सर्गतः प्रकृत्यर्थगतस्वार्थबोधकत्वनियमादिति भावः । **भासमानताया इति ।** सप्तमीप्रयुक्तदोषापगमेऽपि योऽर्थोऽवभासते इत्यत्र भासमानताया विषयतारूपत्वेन आत्माश्रयादिति भावः ।



**ಅನುಕೂಲತರ್ಕ ಹೀನಾಶ್ಚ ಮಿಥ್ಯಾತ್ವಹೇತವಃ । ಅತ್ರ ಕೇಚಿನ್ಮಾಯಿಭಿಕ್ಷವಃ—**

**ಅನ್ಯಚ್ಚೇತ್ ಸಂವಿದೋ ನೀಲಂ ನ ತದ್ ಭಾಸೇತ ಸಂವಿದಿ ।**
**ಭಾಸತೇ ಚೇತ್ ಕುತಃ ಸರ್ವೋ ನ ಭಾಸೇತೈಕ ಸಂವಿದಿ ॥**

**ನಿಯಾಮಕಂ ನ ಸಂಬಂಧಂ ಪಶ್ಯಾಮೋ ನೀಲತದ್ಧಿಯೋಃ । ಇತ್ಯಾದಿ ವದದ್ಭಿಃ ಆತ್ಮಖ್ಯಾತಿವಾದಿಭಿರುಕ್ತಂ ಗ್ರಾಹ್ಯಲಕ್ಷಣಾಭಾವಾಖ್ಯಂ ತರ್ಕಂ ಭಿಕ್ಷಿತ್ವಾ ಆಹುಃ ।**

ದೃಶ್ಯತ್ವಾದಿ ಮಿಥ್ಯಾತ್ವಹೇತುಗಳಿಗೆ ಅನುಕೂಲತರ್ಕವಿಲ್ಲ. ಅದಕ್ಕೆ ವಿಜ್ಞಾನವಾದಿ ಬೌದ್ಧರು ಆತ್ಮಖ್ಯಾತಿಯನ್ನು ವಿಜ್ಞಾನ ಸ್ವರೂಪ ಆತ್ಮನೆ ನೀಲಾದಿವಿಷಯರೂಪದಿಂದ ಎಲ್ಲ ಜ್ಞಾನಗಳಲ್ಲಿಯೂ ಗೋಚರನಾಗುತ್ತಾನೆ ಹೊರತು ವಿಜ್ಞಾನಕ್ಕಿಂತ ಬೇರೆಯಾಗಿ ಅದಕ್ಕೆ ವಿಷಯವೆಂಬುದಿಲ್ಲ. ಅದು ಅಸತ್, ಮಿಥ್ಯಾ ಎಂದು, 'ಗ್ರಾಹ್ಯಲಕ್ಷಣ' ವಿಷಯಸ್ವರೂಪವು ಆತ್ಮ ವ್ಯತಿರಿಕ್ತವಾಗಿ ಇಲ್ಲ' ಎಂದು ತರ್ಕಾಭಾಸವನ್ನು ಹೇಳುತ್ತಾರೆ. ಅದನ್ನು ಕೇಳಿ, ಕೆಲವು ಮಾಯಾವಾದಿ ಭಿಕ್ಷುಗಳು ಬೌದ್ಧಭಿಕ್ಷುಗಳಲ್ಲಿ ತರ್ಕಾಭಾಸದ ಭಿಕ್ಷೆಯನ್ನು ಬೇಡಿ ಪಡೆಯುತ್ತಾರೆ. ತರ್ಕಾಭಾಸವನ್ನೂ ಕೂಡ ಸ್ವತಃ ಹೇಳುವ ಸಾಮರ್ಥ್ಯ ಅವರಿಗೆ ಇಲ್ಲ ಎಂದು ಇದರಿಂದ ತಿಳಿದುಬರುತ್ತದೆ. ಈ ತರ್ಕಾಭಾಸವು ಸಂಕ್ಷೇಪವಾಗಿ ಹೀಗಿದೆ—

ಜ್ಞಾನಕ್ಕಿಂತ ಬೇರೆಯಾಗಿ ಸತ್ಯವಾಗಿ ನೀಲಾದಿ ವಿಷಯಪ್ರಪಂಚ ಇರುವುದಾದರೆ ಅದು ಜ್ಞಾನದಲ್ಲಿ ಗೋಚರಿಸಲಾರದು. 'ಘಟವು ನೀಲ' ಎಂದು ಜ್ಞಾನದಲ್ಲಿ ಜ್ಞಾನವ್ಯತಿರಿಕ್ತವಾದ ನೀಲಘಟರೂಪ ಸತ್ಯಪದಾರ್ಥ ಒಂದು ಕಾಣುತ್ತದೆ ಎನ್ನುವುದಾದರೆ ಸರ್ವಪ್ರಪಂಚವೇ ಆ ಒಂದು ಜ್ಞಾನದಲ್ಲಿ, ಏಕೆ ಗೋಚರವಾಗದು? ಇದಕ್ಕೆ ನಿಯಾಮಕವಾಗಿ ಜ್ಞಾನ ಮತ್ತು ವಿಷಯಗಳಿಗಿರುವ ಸಂಬಂಧವನ್ನು ನಾವು ಕಂಡಿಲ್ಲ. ಅದರಿಂದ ವಿಷಯಕ್ಕೆ ಜ್ಞಾನದಲ್ಲಿ ಆರೋಪಿತತ್ವವೇ ಸಂಬಂಧ. ನೀಲಾದಿ ವಿಷಯಗಳು ನೀಲಾದಿ ಜ್ಞಾನದಲ್ಲಿ ಆರೋಪಿತವಾಗಿರುತ್ತವೆ, ಮಿಥ್ಯಾ ಆಗಿರುತ್ತವೆ ಎನ್ನಬೇಕೆಂದು, ದೃಗ್-ದೃಶ್ಯಗಳ ಸಂಬಂಧವು ವಿಷಯ ಸತ್ಯತ್ವ ಪಕ್ಷದಲ್ಲಿ ಅನುಪಪನ್ನವಾಗುವು

ದೆಂದು, ವಿಷಯದ ಲಕ್ಷಣವಾದ ವಿಷಯತ್ವವು ನಿರ್ವಚನ ಮಾಡಲು ಬರುವುದಿಲ್ಲವೆಂದು ವಿಜ್ಞಾನವಾದಿಗಳು ಹೇಳುವ ಒಂದು ಬಾಧಕತರ್ಕವನ್ನು ಹಾಗೇ ಏನೂ ವ್ಯತ್ಯಾಸಮಾಡದೆ ಮಾಯಾವಾದಿಗಳು ವಮನ ಮಾಡುತ್ತಾರೆ.

**ದೃಶ್ಯಸ್ಯ ಸತ್ಯತ್ವೇ ನ ತಾವತ್ ಜ್ಞಾನಂ ತದಸಂಬದ್ಧಂ ಪ್ರಕಾಶಕಂ । ಅತಿಪ್ರಸಂಗಾತ್ । ನಾಪಿ ಸಂಬದ್ಧಂ । ಆತ್ಮಗುಣಸ್ಯ ಜ್ಞಾನಸ್ಯ ಜ್ಞೇಯೇನ ಸಂಯೋಗಸಮವಾಯಯೋರ ಯೋಗಾತ್ । ಅನ್ಯಸ್ಯ ಚ ಸಂಬಂಧಸ್ಯ ಅಭಾವಾತ್ । ವಿಷಯವಿಷಯಿಭಾವಸ್ಯ ಚ ಅದ್ವಿಷ್ಠತ್ವೇನ ಅಸಂಬಂಧತ್ವಾತ್ । ದುರ್ನಿರೂಪತ್ವಾಚ್ಚ ।**

'ದೃಶ್ಯ'ವು, ಅಂದರೆ ವಿಷಯವು ಸತ್ಯವೆನ್ನುವ ಪಕ್ಷದಲ್ಲಿ 'ದೃಕ್ಕು'ಜ್ಞಾನವು ವಿಷಯಕ್ಕೆ ಸಂಬಂಧಿಸದೆಯೇ ತದ್‌ವಿಷಯಕಜ್ಞಾನರೂಪವಾಗದು. ಆಗುವುದಾದರೆ ಅತಿಪ್ರಸಕ್ತಿ ಉಂಟಾಗುವುದು. ನೀಲಘಟಜ್ಞಾನದಲ್ಲಿ ಶುಕ್ಲಪಟವು ಗೋಚರವಾದೀತು ಎಂದು. ಜ್ಞಾನವು ವಿಷಯಸಂಬದ್ಧವಾಗುವುದು ಎನ್ನುವುದಾದರೆ ಅದು ಅಶಕ್ಯ. ಆತ್ಮನ ಗುಣವಾದ ಜ್ಞಾನಕ್ಕೆ ವಿಷಯದಿಂದ ಸಂಯೋಗವಾಗಲಿ ಸಮವಾಯವಾಗಲಿ ಕೂಡುವುದಿಲ್ಲ. ಬೇರೊಂದು ಸಂಬಂಧವಿಲ್ಲ. ವಿಷಯ ವಿಷಯಿಭಾವವೆಂಬ ಬೇರೇ ಸಂಬಂಧವನ್ನು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ. ವಿಷಯತ್ವ-ವಿಷಯಿತ್ವಗಳೇ ವಿಷಯ–ವಿಷಯಿಭಾವ ಹೊರತು ಒಂದು ಬೇರೆ ಸಂಬಂಧವಲ್ಲ. ವಿಷಯತ್ವವು ವಿಷಯಿಯಲ್ಲಿ ಇಲ್ಲ. ವಿಷಯಿತ್ವವು ವಿಷಯದಲ್ಲಿ ಇಲ್ಲ. ಎರಡರಲ್ಲಿ ಇಲ್ಲದುದು ಎರಡರ ಸಂಬಂಧವಾಗದು.

'ವಿಷಯ–ವಿಷಯಿಭಾವವು ಸಂಯೋಗಾದಿಗಳಂತೆ ಒಂದು ಸಂಬಂಧವಾಗಿರುತ್ತದೆ ಎಂದಾಗ, ಹಾಗಾದರೆ ಸಂಯೋಗಾದಿಗಳಂತೆ ಅದು ದ್ವಿಷ್ಠವೂ ಆಗಬೇಕು ಎಂದು ಆಪಾದಿಸುವುದು ಉತ್ಕರ್ಷಸಮ ಜಾತ್ಯುತ್ತರವಾಗುವುದು'. ಹೀಗೆ ಆಕ್ಷೇಪ ಬಂದರೆ 'ವಿಷಯತ್ವ ನಿರ್ವಚನ ಮಾಡಲು ಬರುವುದಿಲ್ಲ' ಎಂದು ಬೇರೇ ದೋಷವನ್ನು ಹೇಳುತ್ತಾನೆ ವಿಜ್ಞಾನವಾದಿ ಮತ್ತು ಅದ್ವೈತಿ. ವಿಷಯತ್ವವೆಂದರೇನೆಂದೂ ವಿಷಯಿತ್ವವೇನೆಂದೂ ನಿರೂಪಿಸಲಾಗುವುದಿಲ್ಲ ಎನ್ನುತ್ತಾನೆ. ಇದೇ ದೃಗ್–ದೃಶ್ಯ ಸಂಬಂಧದ ಅನುಪಪತ್ತಿ.

**ತಥಾಹಿ, ವಿಷಯತ್ವಂ ಕಿಂ (1) ಜ್ಞಾನಜನ್ಯಫಲಾಧಾರತ್ವಂ? (2)ಜ್ಞಾನಜನ್ಯಹಾನಾದಿ ಬುದ್ಧಿಗೋಚರತ್ವಂ ವಾ? (3) ಜ್ಞಾನಕರ್ಮತ್ವಂ ವಾ? (4) ಜ್ಞಾನಾಕಾರಾರ್ಪಕತ್ವಂ ವಾ? (5) ದೃಶ್ಯಮಾನತ್ವೇ ಸತಿ ತತ್ತ್ವಂ ವಾ? (6) ಜ್ಞಾನಜನ್ಯ ವ್ಯವಹಾರ ಯೋಗ್ಯತ್ವಂ ವಾ? (7) ಯತ್‌ಸನ್ನಿಕೃಷ್ಟಕರಣೇನ ಯಜ್ಜ್ಞಾನಮುತ್ಪದ್ಯತೇ ಸ ತಸ್ಯ ವಿಷಯ ಇತಿ ವಾ? (8) ಯಸ್ಯಾಂ ಸಂವಿದಿ ಯೋಽರ್ಥೋಽವಭಾಸತೇ ಸ ತಸ್ಯ ವಿಷಯ ಇತಿ ವಾ? (9) ಸಂಬಂಧಾತರಮಂತರೇಣ ಯೋ ಯಜ್ಜ್ಞಾನಾವಚ್ಛೇದಕಃ ಸ ತಸ್ಯ ವಿಷಯ ಇತಿ ವಾ ?**

ಮೊದಲಿಗೆ, ವಿಷಯತ್ವವನ್ನು ನಿರೂಪಿಸಲು ಶಕ್ಯವಾಗುವುದಿಲ್ಲ. ಏಕೆಂದರೆ, ವಿಷಯತ್ವವು (1)ಜ್ಞಾನಜನ್ಯ ಫಲಾಶ್ರಯತ್ವವೆ? (2) ಜ್ಞಾನಜನ್ಯ ಹಾನ ಉಪಾದಾನ ಪ್ರವೃತ್ತಿ ಗೋಚರತ್ವವೆ? (3) ಜ್ಞಾನಕರ್ಮತ್ವವೆ? (4) ಜ್ಞಾನಾಕಾರ ಅರ್ಪಕತ್ವವೆ? (5) ಜ್ಞಾನದಲ್ಲಿ ದೃಶ್ಯವಾಗಿದ್ದು ಜ್ಞಾನಕ್ಕೆ ಆಕಾರವನ್ನು ಕೊಡುವುದೆ? (6) ಜ್ಞಾನಜನ್ಯ ವ್ಯವಹಾರಯೋಗ್ಯತ್ವವೆ? (7)ಯಾವುದರಿಂದ ಸಂಪರ್ಕವನ್ನು ಹೊಂದಿದ ಕರಣದಿಂದ ಯಾವ ಜ್ಞಾನವು ಹುಟ್ಟುವುದೋ ಅದು ಆ ಜ್ಞಾನಕ್ಕೆ ವಿಷಯವೆಂದೆ? (8) ಯಾವ ಜ್ಞಾನದಲ್ಲಿ ಯಾವ ವಸ್ತುವು ಕಾಣುವುದೋ ಅದು ಆ ಜ್ಞಾನದಲ್ಲಿ ವಿಷಯವೆಂದೆ? (9) ಬೇರೆ ಸಂಬಂಧವಿಲ್ಲದೆ ಯಾವುದು ಯಾವ ಜ್ಞಾನದಲ್ಲಿ ವಿಶೇಷಣ ವೆನಿಸುವುದೋ ಅದು ಆ ಜ್ಞಾನಕ್ಕೆ ವಿಷಯ ಎಂದೆ? ಎಂದು ಒಂಬತ್ತು ವಿಕಲ್ಪಗಳನ್ನು ಮಾಡುತ್ತಾನೆ. ಯಾವುದೂ ಸರಿಯಲ್ಲ ಎನ್ನುತ್ತಾನೆ. ಹೀಗೆ ವಿಷಯತ್ವವನ್ನು ನಿರ್ವಚನ ಮಾಡುವುದು ಶಕ್ಯವಲ್ಲದ್ದರಿಂದ ಅದು ಸತ್ಯವಲ್ಲ, ಅನಿರ್ವಚನೀಯ, ಮಿಥ್ಯಾ ಎಂದು ತನ್ನ ದೃಶ್ಯತ್ವಹೇತುವಿಗೆ ಅನುಕೂಲತರ್ಕವನ್ನು ಅದ್ವೈತಿ ಹೇಳುತ್ತಾನೆ. ವಿಚಾರಮಾಡಿದರೆ ಅದಿಲ್ಲ ಎನ್ನುತ್ತಾರೆ ಶ್ರೀವ್ಯಾಸರಾಜರು. ಅನುಕೂಲ ತರ್ಕಹೀನವೇ ದೃಶ್ಯತ್ವಾದಿಹೇತು ಎನ್ನುತ್ತಾರೆ.

**ಆದ್ಯೇಽಪಿ ಫಲಂ ನ ತಾವತ್ ಜ್ಞಾತತಾ। ಅನಂಗೀಕಾರಾತ್, ಅತೀತಾದೌ ಅಸಂಭವಾಚ್ಚ। ನಾಪಿ ಹಾನಾದಿಃ। ಗಗನಾದೌ ತದಯೋಗಾತ್। ಕಲಧೌತಮಲಾದೇರಪಿ ತಜ್ಞಾನ ವಿಷಯತ್ವಾಪಾತಾಚ್ಚ। ನಾಪಿ ಅಭಿಜ್ಞಾ-ಅಭಿಲಪನೇ। ತಯೋರ್ಜ್ಞೇಯಾ-ನಿಷ್ಠತ್ವಾತ್।**

(1) 'ಜ್ಞಾನಜನ್ಯ ಫಲಾಧಾರತ್ವ'ವೇ ವಿಷಯತ್ವ ಎನ್ನುತ್ತ ಮೊದಲನೇ ಪಕ್ಷದಲ್ಲಿ ಫಲವು ಮೀಮಾಂಸಕರು ಹೇಳುವ ಜ್ಞಾತತಾ ಎಂಬ ಜ್ಞಾನ ಫಲವಲ್ಲ. ಅದನ್ನು ನಾವು ಅಂಗೀಕರಿಸುವುದಿಲ್ಲ. ಅತೀತಾದಿಗಳಲ್ಲಿ ಜ್ಞಾತತಾರೂಪ ಜ್ಞಾನಫಲವಿರುವುದೂ ಶಕ್ಯವಿಲ್ಲ. ಜ್ಞಾನಫಲವು ಹಾನ ಉಪಾದಾನಗಳೆಂದರೆ ಗಗನಾದಿಗಳಲ್ಲಿ ಹಾನ ಉಪಾದಾನಗಳೂ ಕೂಡುವುದಿಲ್ಲ. 'ಕಲಧೌತ ಮಲ'ದ ಬೆಳ್ಳಿಯ ಕಿಟ್ಟದ ಜ್ಞಾನ ಬಂದಾಗ ಬೆಳ್ಳಿಯನ್ನು ಅದರಲ್ಲಿ ಸೇರಿರುವ ಕಿಟ್ಟದೊಂದಿಗೇ ಎತ್ತಿಕೊಳ್ಳುವುದರಿಂದ ಬೆಳ್ಳಿಯ ಜ್ಞಾನಕ್ಕೆ ಕಿಟ್ಟವೂ ವಿಷಯವೆಂದಾದೀತು. ಪ್ರತ್ಯಭಿಜ್ಞೆಯೂ ಶಬ್ದವ್ಯವಹಾರವೂ ಜ್ಞಾನ ಫಲವೆಂದಿಟ್ಟುಕೊಂಡರೆ ಅವು ಜ್ಞಾನಫಲವೇ ಆದರೂ ಜ್ಞೇಯವಿಷಯ ನಿಷ್ಠವಲ್ಲ. ಅದರಿಂದ ಜ್ಞಾನಜನ್ಯ ಫಲಾಧಾರತ್ವರೂಪ ವಿಷಯಲಕ್ಷಣವು ವಿಷಯದಲ್ಲಿ ಬಾರದಿರುವುದರಿಂದ ಅಸಂಭವ ದೋಷ. ಅದರಿಂದ ಮೊದಲನೇ ಲಕ್ಷಣ ಅಯುಕ್ತ.

**ನ ದ್ವಿತೀಯಃ। ಹಾನಾದಿಬುದ್ಧೀನಾಂ ತದಜನ್ಯತ್ವಾತ್। ಗೋಚರತಾಯಾಃ ಅದ್ಯಾಪ್ಯನಿರೂಪಣಾತ್।**

ಜ್ಞಾನಜನ್ಯ ಹಾನಾದಿ ಬುದ್ಧಿಗೋಚರತ್ವರೂಪ ದ್ವಿತೀಯ ಲಕ್ಷಣವೂ ಯುಕ್ತವಲ್ಲ. ಹಾನಾದಿ ಬುದ್ಧಿಯು ಜ್ಞಾನಜನ್ಯವಲ್ಲ. ಉದಾ: ಕಂಟಕ ಹಾನ ಬುದ್ಧಿಯು ಇದು ಕಂಟಕ ಎಂಬ

ಕಂಟಕಜ್ಞಾನದಿಂದ ಜನ್ಯವಲ್ಲ. ಈ ಕಂಟಕಜ್ಞಾನ ಬಂದ ಬಳಿಕ ಎಲ್ಲ ಕಂಟಕವೂ ಹೇಯವಾದ್ದರಿಂದ ಕಣ್ಣಿಗೆ ಗೋಚರಿಸಿದ ಈ ಕಂಟಕವೂ ಹೇಯವೆಂದು ಹಾನ ಬುದ್ಧಿ ಬರುತ್ತದೆ ಹೊರತು 'ಇದು ಕಂಟಕ' ಎಂಬ ಜ್ಞಾನದಿಂದಲೆ ಹಾನಬುದ್ಧಿ ಬರುವುದಿಲ್ಲ. ಮತ್ತು ವಿಷಯತಾತಿರಿಕ್ತಗೋಚರತೆಯನ್ನು ಇನ್ನೂ ನಿರೂಪಿಸಿಲ್ಲ. ಅದರಿಂದ ಆತ್ಮಾಶ್ರಯದೋಷ.

**ನ ತೃತೀಯಃ । ಈಶ್ವರಜ್ಞಾನಸ್ಯ ಅತೀತಾದಿಜ್ಞಾನಸ್ಯ ಚ ಕರ್ಮಕಾರಕ-ಅಜನ್ಯತ್ವಾತ್ ।**

'ಜ್ಞಾನಕರ್ಮತ್ವವು ವಿಷಯದ ಲಕ್ಷಣ' ಎಂಬ ಮೂರನೆ ಲಕ್ಷಣವೂ ಯುಕ್ತವಲ್ಲ. ಕರ್ಮತ್ವ ಎಂದರೆ ಕರ್ಮಕಾರಕ. ಈಶ್ವರಜ್ಞಾನವು ನಿತ್ಯವಾದ್ದರಿಂದ ಕಾರಕಜನ್ಯವಲ್ಲವಾದ್ದರಿಂದ ಅದರ ವಿಷಯದಲ್ಲಿ ಜ್ಞಾನಕರ್ಮತ್ವವೆಂಬ ಲಕ್ಷಣಕ್ಕೆ ಅವ್ಯಾಪ್ತಿದೋಷ. ಮತ್ತು ಅತೀತಾದಿ ಜ್ಞಾನಗಳಲ್ಲಿ ಅತೀತಾದಿರೂಪ ವಿಷಯವು ಜ್ಞಾನಕ್ಕೆ ಅವ್ಯವಹಿತ ಪೂರ್ವದಲ್ಲಿಲ್ಲದಿರುವುದರಿಂದ ವಿಷಯರೂಪ ಕರ್ಮಕಾರಕಜನ್ಯತ್ವವು ಜ್ಞಾನದಲ್ಲಿ ಬರುವುದಿಲ್ಲ. ಹೀಗಾಗಿ ಅತೀತಾದಿಗಳಲ್ಲಿಯೂ ಜ್ಞಾನ ಕರ್ಮತ್ವವೆಂಬ ಲಕ್ಷಣಕ್ಕೆ ಅವ್ಯಾಪ್ತಿದೋಷ.

**ನ ಚತುರ್ಥಃ । ಜ್ಞಾನ ತದಾಕಾರಯೋಃ ಅಭೇದೇನ ಸರ್ವೇಷಾಂ ಜ್ಞಾನಹೇತೂನಾಂ ವಿಷಯತ್ವಾಪಾತಾತ್ ।**

'ಜ್ಞಾನಾಕಾರಾರ್ಪಕತ್ವಂ' ಎಂಬ ನಾಲ್ಕನೆ ವಿಷಯಲಕ್ಷಣವೂ ಕೂಡುವುದಿಲ್ಲ. ಜ್ಞಾನದಲ್ಲಿ 'ಅಯಂ ಘಟಃ ಅಯಂ ಪಟಃ' ಎಂದು ಮುಂತಾಗಿ ಘಟಪಟಾದಿ ಆಕಾರ ಉಂಟಾಗುತ್ತದೆ. ಅದಕ್ಕೆ ಕಾರಣ ಘಟ ಪಟಾದಿ ವಿಷಯ. ಹೀಗೆ ಜ್ಞಾನಕ್ಕೆ ಆಕಾರಾರ್ಪಕ ಅಂದರೆ ಆಕಾರ ಜನಕವು ವಿಷಯ ಎಂಬ ನಾಲ್ಕನೆ ಲಕ್ಷಣವೂ ಸರಿಯಲ್ಲ.

ಜ್ಞಾನಕ್ಕೂ ಜ್ಞಾನದ ಆಕಾರಕ್ಕೂ ಭೇದವಿಲ್ಲ. ಹೀಗಾಗಿ ಜ್ಞಾನಾಕಾರ ಜನಕ ಎಂದರೆ ಜ್ಞಾನ ಜನಕವೆ. ಜ್ಞಾನಜನಕವೇ ಜ್ಞಾನಕ್ಕೆ ವಿಷಯ ಎಂದಂತಾಯಿತು. ಆಗ ಜ್ಞಾನಕ್ಕೆ ಜನಕವಾದ ಆತ್ಮ ಇಂದ್ರಿಯ ಮುಂತಾದವುಗಳೆಲ್ಲವೂ ಜ್ಞಾನಕ್ಕೆ ವಿಷಯ ಎಂದಂತಾಗುವುದರಿಂದ ಅತಿವ್ಯಾಪ್ತಿ. ಮತ್ತು ಅತೀತಾದಿಯು ಜ್ಞಾನಜನಕವಾಗದುದರಿಂದ ಅವ್ಯಾಪ್ತಿ.

**ನ ಪಂಚಮಃ । ದೃಶ್ಯಮಾನತಾಯಾ ಏವ ಅದ್ಯಾಪ್ಯನಿರೂಪಣಾತ್ ।**

'ದೃಶ್ಯಮಾನತ್ವೇ ಸತಿ' 'ಜ್ಞಾನಾಕಾರಾರ್ಪಕತ್ವಂ' ಅಂದರೆ ಜ್ಞಾನದಲ್ಲಿ ಗೋಚರವಾಗುತ್ತಿದ್ದು ಜ್ಞಾನದ ಆಕಾರಕ್ಕೆ ಜನಕವಾದುದು, ಯದ್ಯಪಿ ಆತ್ಮ ಇಂದ್ರಿಯಾದಿಗಳಲ್ಲ. ಕಣ್ಣಿಂದ ಬರುವ 'ಅಯಂ ಘಟಃ' ಎಂಬ ಘಟಾಕಾರ ಜ್ಞಾನಕ್ಕೆ, ಹೇತುವಾದ ಕಣ್ಣು ಗೋಚರವಲ್ಲ, ವಿಷಯವಲ್ಲ. ಆದರಿಂದ ಅತಿವ್ಯಾಪ್ತಿ ಬರುವುದಿಲ್ಲ. ಆದರೆ 'ಗೋಚರ' ಎಂದರೆ ವಿಷಯ ಎಂದರ್ಥ. 'ದೃಶ್ಯಮಾನ' ಎಂದರೆ ಜ್ಞಾನದಲ್ಲಿ ಗೋಚರವಾಗಿದ್ದು ಜ್ಞಾನಾಕಾರ ಜನಕವು ವಿಷಯ' ಎಂದು ಐದನೆ ಲಕ್ಷಣದಲ್ಲಿ

ಗೋಚರತ್ವರೂಪವಿಷಯತ್ವವು ಸೇರಿರುವುದರಿಂದ ವಿಷಯತ್ವವನ್ನು ಇನ್ನೂ ನಿರೂಪಣೆ ಮಾಡಿಲ್ಲವಾದ್ದರಿಂದ ಆತ್ಮಾಶ್ರಯದೋಷದಿಂದ ಲಕ್ಷಣವಾಕ್ಯವು ಅಬೋಧಕ.

**ನ ಷಷ್ಠಃ । ಯೋಗ್ಯತಾಯಾಂ ಯೋಗ್ಯತಾಂತರಾಭಾವಾತ್ ।**

'ಜ್ಞಾನಜನ್ಯ ವ್ಯವಹಾರ ಯೋಗ್ಯತ್ವಂ' ಎಂಬ ಆರನೆ ವಿಷಯತ್ವ ಲಕ್ಷಣವೂ ಸರಿಯಲ್ಲ. ಯೋಗ್ಯತಾ ಉಳ್ಳದ್ದು ವಿಷಯ. 'ಇದು ಯೋಗ್ಯತಾ' ಎಂಬ ಜ್ಞಾನದಲ್ಲಿ ವಿಷಯವಾದ ಈ ಯೋಗ್ಯತೆಯಲ್ಲಿ 'ಜ್ಞಾನಜನ್ಯವ್ಯವಹಾರ ಯೋಗ್ಯತ್ವ'ವೆಂಬ ಇನ್ನೊಂದು ಯೋಗ್ಯತೆ ಬಾರದಿರುವುದರಿಂದ ವಿಷಯ ಲಕ್ಷಣಕ್ಕೆ ಅವ್ಯಾಪ್ತಿದೋಷ. ಯೋಗ್ಯತೆಯಲ್ಲಿ ಆ ಯೋಗ್ಯತೆ ಇದೆ ಎಂದರೆ ಆತ್ಮಾಶ್ರಯ, ಯೋಗ್ಯತಾಂತರವೆಂದರೆ ಅನವಸ್ಥಾ. ಹೀಗಾಗಿ ಲಕ್ಷಣಕ್ಕೆ ಅವ್ಯಾಪ್ತಿದೋಷ ಅಪರಿಹಾರ್ಯ.

**ನ ಸಪ್ತಮಃ । ನಿತ್ಯೇಶ್ವರಜ್ಞಾನಸ್ಯ ನಿರ್ವಿಷಯತ್ವಾಪಾತಾತ್ ।**

'ಯತ್‌ಸನ್ನಿಕೃಷ್ಟಕರಣೇನ ಯದ್‌ಜ್ಞಾನಂ ಉತ್ಪದ್ಯತೇ ಸ ತಸ್ಯ ವಿಷಯಃ' ಯಾವುದರ ಸನ್ನಿಕರ್ಷಉಳ್ಳ ಕರಣದಿಂದ ಯಾವ ಜ್ಞಾನ ಉತ್ಪನ್ನವಾಗುವುದೊ ಆ ಜ್ಞಾನಕ್ಕೆ ಅದು ವಿಷಯ ಎಂದು ಏಳನೆ ಲಕ್ಷಣವೂ ಸರಿಯಲ್ಲ. ಅನಿತ್ಯವಾದ ಯಾವ ಜ್ಞಾನವು ಉತ್ಪನ್ನವಾಗುವುದೋ ಅದರ ವಿಷಯದಲ್ಲಿ ಈ ಲಕ್ಷಣ ಬಂದರೂ ಈಶ್ವರಜ್ಞಾನ ನಿತ್ಯವಾದ್ದರಿಂದ ಉತ್ಪನ್ನವಾಗದಿರುವುದರಿಂದ ಅದರ ವಿಷಯವು ವಿಷಯವೇ ಅಲ್ಲ ಎಂದಾಗುವುದು. ಅದು ನಿರ್ವಿಷಯವಾಗುವುದು, ಎಂದು ಅವ್ಯಾಪ್ತಿ ದೋಷ.

**ಅಷ್ಟಮೇಽಪಿ 'ಸಂವಿದಿ' ಇತಿ ನ ತಾವದ್ ಅಧಿಕರಣಸಪ್ತಮೀ । ಜ್ಞಾನಸ್ಯ ಜ್ಞೇಯಂ ಪ್ರತಿ ಅನಧಿಕರಣತ್ವಾತ್ । ನಾಪಿ ವಿಷಯಸಪ್ತಮೀ । ತಸ್ಯೈವ ನಿರುಚ್ಯಮಾನತ್ವಾತ್ । ಸಂವಿದೋ ವಿಷಯತ್ವಂ, ಅರ್ಥಸ್ಯ ವಿಷಯಿತ್ವಂ ಇತಿ ವೈಪರೀತ್ಯಾಪಾತಾಚ್ಚ । ನಾಪಿ ಸತಿ ಸಪ್ತಮೀ । ಭಾಸಮಾನತಾಯಾ ಏವ ಅದ್ಯಾಪ್ಯನಿರೂಪಣಾತ್ ।**

'ಯಸ್ಯಾಂ ಸಂವಿದಿ ಯೋಽರ್ಥಃ ಅವಭಾಸತೇ ಸ ತಸ್ಯಾ ವಿಷಯಃ' ಎಂಬ ಎಂಟನೇ ಲಕ್ಷಣದಲ್ಲಿ 'ಸಂವಿದಿ' ಎಂದು ಸಪ್ತಮೀವಿಭಕ್ತಿಗೆ ಏನರ್ಥ? ಸುಬ್‌ವಿಭಕ್ತಿಗೆ ಪ್ರಕೃತ್ಯರ್ಥಗತ ಸ್ವಾರ್ಥ ಬೋಧಕತ್ವವು ಉತ್ಸರ್ಗನಿಯಮ. ಇದು ಅಧಿಕರಣಾರ್ಥಕ ಸಪ್ತಮಿ ಎಂದಿಟ್ಟುಕೊಳ್ಳಲಾಗದು. ಜ್ಞಾನವು ವಿಷಯಕ್ಕೆ ಸಂಯೋಗಾದಿ ಸಂಬಂಧದಿಂದ ಅಧಿಕರಣವಾಗುವುದಿಲ್ಲ.

ವೈಷಯಿಕ ಸಪ್ತಮೀ ಎಂದಿಟ್ಟುಕೊಂಡರೂ ಜ್ಞಾನದಲ್ಲಿ ಜ್ಞೇಯವು ವಿಷಯತಾಸಂಬಂಧ ದಿಂದ ಇದೆ ಎಂದು ಅರ್ಥಮಾಡಲು ಬರುವುದಿಲ್ಲ. ವಿಷಯತಾ ಎಂದರೆ ಏನೆಂದು ಈಗ ನಿರ್ವಚನ ಮಾಡುತ್ತಿರುವಾಗ ಅದು ಶಕ್ಯವಿಲ್ಲ. ಮತ್ತು ಜ್ಞಾನವು ಜ್ಞೇಯದಲ್ಲಿ ವಿಷಯತಾಸಂಬಂಧದಿಂದ ಇದೆ' ಎಂದು ಬೋಧ ಬಂದೀತು. ವಿಭಕ್ತಿಯು ಪ್ರಕೃತ್ಯರ್ಥಗತ ಸ್ವಾರ್ಥಬೋಧಕವೆಂದಮೇಲೆ

ವಿಷಯತ್ವಾರ್ಥಕ ಸಪ್ತಮಿಯು ಪ್ರಕೃತ್ಯರ್ಥಜ್ಞಾನಗತ ವಿಷಯತ್ವವನ್ನು ಹೇಳಬೇಕಾಗುತ್ತದೆ. ಆಗ ಪರಿಶೇಷದಿಂದ ವಿಷಯಿತ್ವವು ಜ್ಞೇಯದಲ್ಲಿಯೇ ಎಂದಾಗುವುದು. ವಿಷಯಿತ್ವವು ಜ್ಞಾನದ ಧರ್ಮ.

'ಸತಿಸಪ್ತಮಿ' ಅಂದರೆ ಭಾವಾಂತರ ಲಕ್ಷಕಭಾವಾರ್ಥಕ ಸಪ್ತಮಿ ಇಟ್ಟುಕೊಂಡರೆ 'ಯಸ್ಯಾಂ ಸಂವಿದಿ' ಎಂದರೆ 'ಯಸ್ಯಾಂ ಸಂವಿದಿ ಸತ್ಯಾಂ ಯೋಽರ್ಥಃ ಅವಭಾಸತೇ ಸ ತಸ್ಯಾ ವಿಷಯಃ' ಎಂದರ್ಥ. ಇಲ್ಲಿ 'ಅವಭಾಸತೇ' ಎಂದರೆ 'ವಿಷಯವಾಗುತ್ತದೆ' ಎಂದರ್ಥ. ಅವಭಾಸಮಾನತ್ವವನ್ನೇ ಇನ್ನೂ ನಿರೂಪಿಸಿಲ್ಲವಾದ್ದರಿಂದ ಲಕ್ಷಣ ವಾಕ್ಯದಿಂದ ಶಾಬ್ದಬೋಧ ಬರುವುದಿಲ್ಲ.

**ನ ನವಮಃ । 'ಮತ್ಸಮವೇತಂ ರೂಪಜ್ಞಾನಮಿ'ತ್ಯತ್ರ ರೂಪಜ್ಞಾನಾತ್ಮ ಸಮವಾಯಸ್ಯ ಸಂಬಂಧಾಂತರಂ ವಿನೈವ ರೂಪಜ್ಞಾನಾವಚ್ಛೇದಕಸ್ಯ ತದ್‌ವಿಷಯತ್ವಾಪಾತಾತ್ । ತಸ್ಮಾತ್ ಸತ್ಯತ್ವೇ ದೃಶ್ಯತ್ವಾನುಪಪತ್ತೇಃ ದೃಗ್‌ದೃಶ್ಯಯೋಃ ಆಧ್ಯಾಸಿಕ ಏವ ಸಂಬಂಧ ಇತಿ ।**

'ಸಂಬಂಧಾಂತರಮಂತರೇಣ ಯೋ ಯಜ್ಞಾನಾವಚ್ಛೇದಕಃ ಸ ತಸ್ಯ ವಿಷಯಃ' ಎಂದು ಒಂಬತ್ತನೇ ವಿಷಯ ಲಕ್ಷಣವೂ ಸರಿಯಲ್ಲ. 'ದೇವದತ್ತಸ್ಯ ಘಟಜ್ಞಾನಂ' ಎಂಬಲ್ಲಿ ದೇವದತ್ತನು ಘಟಜ್ಞಾನಾವಚ್ಛೇದಕನಾಗಿದ್ದಾನೆ. ಆದರೆ ಘಟಜ್ಞಾನವಿಷಯನಲ್ಲ. ಈ ಅತಿವ್ಯಾಪ್ತಿ ಪರಿಹಾರಕ್ಕಾಗಿ ಸಂಬಂಧಾಂತರಮಂತರೇಣ' ಎಂದು ಸೇರಿಸಲಾಗಿದೆ. ಸ್ವಸ್ವಾಮಿಭಾವ ಸಂಬಂಧರೂಪ ಸಂಬಂಧಾಂತರದಿಂದ ದೇವದತ್ತನು ಅವಚ್ಛೇದಕನಾದ್ದರಿಂದ 'ಸಂಬಂಧಾಂತರಮಂತರೇಣ' ಎಂಬ ಪದದಿಂದ ಅವನ ವ್ಯಾವೃತ್ತಿಯಾಗುವುದು. ಹೀಗೆ ಹೇಳಿದರೂ 'ಮತ್ಸಮವೇತಂ ರೂಪಜ್ಞಾನಂ' ಎಂಬಲ್ಲಿ 'ಮತ್ಸಮವೇತತ್ವ' ಅಂದರೆ ರೂಪಜ್ಞಾನ ಮತ್ತು ಆತ್ಮರ ಸಮವಾಯವು ರೂಪಜ್ಞಾನದಲ್ಲಿ ಸಂಬಂಧಾಂತರವಿಲ್ಲದೆಯೆ ಅವಚ್ಛೇದಕವಾಗಿದೆ ಎಂದು ಅತಿವ್ಯಾಪ್ತಿ ಬರುತ್ತದೆ. ರೂಪಜ್ಞಾನಾತ್ಮ ಸಮವಾಯವು ರೂಪಜ್ಞಾನದಲ್ಲಿ ವಿಷಯವಾದೀತೆಂದು ಅನಿಷ್ಟಾಪತ್ತಿ ಬರುತ್ತದೆ.

ಹೀಗೆ ವಿಷಯತ್ವ ನಿರ್ವಚನ ಅಶಕ್ಯವಾದ್ದರಿಂದ ಅದು ದೃಗ್‌ದೃಶ್ಯಗಳಿಗೆ ಸಂಬಂಧವೆನ್ನ ಲಾಗದು. ಸಂಯೋಗ ಸಮವಾಯಾದಿ ಬೇರೆ ಸಂಬಂಧವಿಲ್ಲ. ಆದರಿಂದ ಸತ್ಯತ್ವಪಕ್ಷದಲ್ಲಿ ಪ್ರಪಂಚಕ್ಕೆ ದೃಶ್ಯತ್ವ ಕೂಡದಿರುವುದರಿಂದ ದೃಗ್‌ದೃಶ್ಯಗಳಿಗೆ ಆಧ್ಯಾಸಿಕ ಸಂಬಂಧವನ್ನೇ ಒಪ್ಪಬೇಕು. ದೃಕ್ಕಿನಲ್ಲಿ ದೃಶ್ಯವು ಅಧ್ಯಸ್ತವಾಗಿದೆ, ಆರೋಪಿತವಾಗಿದೆ ಮಿಥ್ಯಾ ಆಗಿದೆ ಎನ್ನಬೇಕು.



**अत्रोच्यते । सर्वस्यापि दृश्यस्य ब्रह्मात्मैकदृगध्यस्तत्वेऽपि कस्यचित्कदाचित्कंचित्प्रति प्रकाशाय त्वयापि तत्तत्संनिकृष्टेन्द्रिय जन्य तत्तदाकार वृत्ति द्वारक एवानावृतदृक्संबंधः स्वीकृतः। तथाच सत्यत्वेऽपि तद्द्वारक एव संबंधोऽस्तु । किमाध्यासिकसंबंध दुर्व्यसनेन ?**

**नहि त्वन्मते विज्ञानवादिमत इव तत्तदर्थास्तत्तज्ज्ञानेऽध्यस्ताः । सत्यायाः शुद्धदृशः स्वतो भेदाभावात् । उपाधिविशिष्टाया भेदेऽपि घटादिवन्मिथ्यात्वेन तदधिष्ठानत्वायोगात् । उपाध्युपलक्षिताया स्सत्यत्वेऽप्यभेदात्। कथंचिद्भेदेऽपि वृत्तिद्वारक संबंधात् प्रागध्यस्तत्वरूपे संबंधे सत्यपि दृश्याप्रतीतेः ।**

**किंच किं घटाकारवृत्तिप्रतिबिंबितं चैतन्यं घटप्रकाशकं? किंवा तदभिव्यक्तं घटाधिष्ठानचैतन्यम् ? नाद्यः । आध्यासिक संबंधस्यातंत्रत्वापातात् । नांत्यः । आवश्यकेन वृत्तिप्रतिबिंबितेनैव प्रकाशोपपत्तौ तेनाधिष्ठानचिदभिव्यक्त्यादिकल्पनायोगात् ।**

**किंच घटाधिष्ठानस्य सत्यस्य चिन्मात्रस्य चरमसाक्षात्कारात्पूर्वं नाभिव्यक्तिः । अभिव्यक्तस्य तु घटाधिष्ठानचैतन्यस्य न तदधिष्ठानत्वम् । आत्माश्रयात् ।**

**किंच घटप्रकाशिकाया दृशो घटवन्मिथ्यात्वे न तदधिष्ठानत्वम् । सत्यत्वे दोषाजन्यत्वेन प्रमात्वात् सत्यं स्वविषयं प्रति नाधिष्ठानत्वमित्युभयतःपाशा रज्जुः ।**

---

ज्ञातो घट इति विशिष्टबुद्धेः क्वाचित्कत्वकादाचित्कत्वयोर्निर्वाहाय क्लृप्तसम्बन्धभिन्नः कश्चिदागन्तुकः सम्बन्धः उभाभ्यामवश्यं वाच्यः । अधिष्ठानदृशः सदातनत्वात् सार्वत्रिकत्वाच्च । स च नाध्यासिकः । स्वतःसिद्ध प्रमात्वानुपपत्तेः । किंतु सत्य एव । क्लृप्तसम्बन्धवैधर्म्यकल्पनायाः उभयपक्षेऽपि समानत्वादित्यभिप्रेत्य सिद्धान्तयति **सर्वस्यापीति ।** ननु घटाद्यधिष्ठानस्यापि भिन्नभिन्नत्वात् न वृत्तिद्वारकसम्बन्धापेक्षेत्यत आह **सत्याया इति ।** अधिष्ठानभूताया इति शेषः । ननु उपलक्षणस्यापि व्यावर्तकत्वेन भेदकत्वमस्त्येव । विशेषणस्यापि तत्त्वे तदेव मूलमित्यत आह **कथंचिदिति ।**

ननु वृत्तेरावरणभङ्गार्थत्वेन वृत्तेः प्राक् तदभावेन दृश्यध्यस्तत्वेऽपि न सर्वदा दृश्यस्य भानमिति नागन्तुकसम्बन्धापेक्षेत्यरुचेराह **किंचेति।** ननु वृत्तिप्रतिबिम्बितचैतन्यस्य विषयादिना सम्बन्धाभाव एवाधिष्ठानचिदभिव्यक्त्यादि कल्पक इत्यनुशयादाह **किंचेति।** न च चरमसाक्षात्कारात् पूर्वं चिन्मात्रस्य अनभिव्यक्तत्वे जगदान्ध्यं स्यादिति वाच्यम्। प्रमाणाधीनज्ञानेनापि तत्परिहारसम्भवादिति।



**ಅತ್ರೋಚ್ಯತೇ। ಸರ್ವಸ್ಯಾಪಿ ದೃಶ್ಯಸ್ಯ ಬ್ರಹ್ಮಾತ್ಮೈಕದೃಗಧ್ಯಸ್ತತ್ವೇऽಪಿ ಕಸ್ಯಚಿತ್ ಕದಾಚಿತ್ ಕಂಚಿತ್ ಪ್ರತಿ ಪ್ರಕಾಶಾಯ ತ್ವಯಾಪಿ ತತ್ತತ್ ಸನ್ನಿಕೃಷ್ಟ ಇಂದ್ರಿಯಜನ್ಯ ತತ್ತದಾಕಾರವೃತ್ತಿದ್ವಾರಕ ಏವ ಅನಾವೃತ ದೃಕ್‌ಸಂಬಂಧಃ ಸ್ವೀಕೃತಃ। ತಥಾಚ ಸತ್ಯತ್ವೇऽಪಿ ತದ್‌ದ್ವಾರಕ ಏವ ಸಂಬಂಧೋऽಸ್ತು। ಕಿಂ ಆಧ್ಯಾಸಿಕಸಂಬಂಧ ದುರ್ವ್ಯಸನೇನ ?**

'ಘಟವು ನನಗೆ ಗೋಚರವಾಯಿತು' ಎಂಬ ಅನುಭವ ಒಂದು ಬರುವಾಗ ಅದು ಎಲ್ಲರಿಗೂ ಬರುವುದಿಲ್ಲ ಎಲ್ಲ ಕಾಲದಲ್ಲಿಯೂ ಬರುವುದಿಲ್ಲ. ಕೆಲವರಿಗೆ ಕೆಲವೊಮ್ಮೆ ಮಾತ್ರ ಬರುತ್ತದೆ. ಅದಕ್ಕೆ ಕಾರಣ ಒಂದು ಆಗಂತುಕ ಸಂಬಂಧ ದೃಗ್ ದೃಶ್ಯಗಳಿಗೆ ಇದೆ ಎಂದು ದ್ವೈತಿ ಅದ್ವೈತಿಗಳಿಬ್ಬರೂ ಒಪ್ಪಲೇಬೇಕು. ಏಕೆಂದರೆ ಅದ್ವೈತಿಯು ಹೇಳುವ ಆರೋಪಾಧಿಷ್ಠಾನ ಚೈತನ್ಯವು ಸದಾತನ ಸಾರ್ವತ್ರಿಕ. ಹೀಗಾಗಿ ಆಗಂತುಕ ಸಂಬಂಧ ಆಧ್ಯಾಸಿಕವಾಗಿರಲು ಶಕ್ಯವಿಲ್ಲ. ಜ್ಞಾನಗಳಿಗೆ ಸ್ವತಃ ಪ್ರಾಮಾಣ್ಯವೂ ಇಲ್ಲವಾದೀತು. ಅದರಿಂದ ಈ ಸಂಬಂಧ ಸತ್ಯವೇ ಇರಬೇಕು. ಇದು ಸಂಯೋಗಾದಿ ಕೢಪ್ತ ಸಂಬಂಧಗಳಿಗಿಂತ ವಿಲಕ್ಷಣ ಎಂಬುದು ದ್ವೈತಾದ್ವೈತ ಉಭಯ ಪಕ್ಷದವರಿಗೂ ಸಮಾನ. ಈ ಅಭಿಪ್ರಾಯದಿಂದ ದ್ವೈತಸಿದ್ಧಾಂತವನ್ನು ದೃಗ್‌ದೃಶ್ಯಸಂಬಂಧದ ವಿಷಯದಲ್ಲಿ ಪ್ರತಿಪಾದಿಸುತ್ತಾರೆ—'ಅತ್ರೋಚ್ಯತೇ' ಇಲ್ಲಿ ನಾವು ಹೇಳುತ್ತೇವೆ ಎಂದು—

ಎಲ್ಲ ದೃಶ್ಯಪ್ರಪಂಚವೂ ಬ್ರಹ್ಮಚೈತನ್ಯರೂಪ ದೃಕ್ಕಿನಲ್ಲಿ ಆರೋಪಿತವೆಂದು ಅದ್ವೈತಿ ಹೇಳಿದರೂ ಕೆಲವೇ ವಸ್ತುಗಳು ಕೆಲವೊಮ್ಮೆ ಮಾತ್ರ ಕೆಲವರಿಗೇ ಕಾಣುತ್ತವೆ ಹೇಗೆ ಎನ್ನುವುದನ್ನು ಸಮರ್ಥಿಸಲು ಅನಾವೃತ ಅಧಿಷ್ಠಾನಚೈತನ್ಯಸಂಬಂಧವು ಆಯಾ ವಸ್ತುಗಳಿಗೆ ಆಯಾ ವಸ್ತು ಸಂಬಂಧ ಹೊಂದಿದ ಇಂದ್ರಿಯ ಜನ್ಯವಾದ ಆಯಾ ಆಕಾರದ ಅಂತಃಕರಣ ವೃತ್ತಿದ್ವಾರಕವಾಗಿಯೇ ಉಂಟಾಗುವುದೆಂದು ಅದ್ವೈತಿ ಸ್ವೀಕರಿಸಿದ್ದಾನೆ ಎಂದಮೇಲೆ ವಸ್ತು ಸತ್ಯವೆನ್ನುವ ದ್ವೈತಿಗಳ ಪಕ್ಷದಲ್ಲಿ ನಾವೂ ಅಂತಃಕರಣವೃತ್ತಿ ದ್ವಾರಕವಾಗಿಯೇ ವಸ್ತುವಿನ ಸಂಬಂಧವನ್ನು ದೃಕ್ಕಿಗೆ ಒಪ್ಪುತ್ತೇವೆ. ಇದರಲ್ಲಿ ತಪ್ಪೇನಿದೆ? ಆರೋಪಿತತ್ವವೇ ದೃಶ್ಯಕ್ಕೆ ದೃಕ್ಕಿನಲ್ಲಿ ಸಂಬಂಧ ಎಂದು ದುರಾಗ್ರಹವೇಕೆ?

**ನಹಿ ತ್ವನ್ಮತೇ ವಿಜ್ಞಾನವಾದಿ ಮತ ಇವ ತತ್ತದರ್ಥಾಃ ತತ್ತದ್‌ಜ್ಞಾನೇ ಅಧ್ಯಸ್ತಾಃ। ಸತ್ಯಾಯಾಃ ಶುದ್ಧದೃಶಃ ಸ್ವತೋ ಭೇದಾಭಾವಾತ್। ಉಪಾಧಿವಿಶಿಷ್ಟಾಯಾ ಭೇದೇಽಪಿ ಘಟಾದಿವತ್ ಮಿಥ್ಯಾತ್ವೇನ ತದಧಿಷ್ಠಾನತ್ವಾಯೋಗಾತ್।**

ವಿಜ್ಞಾನವಾದಿ ಮತದಲ್ಲಿ ಆಯಾ ವಸ್ತುಗಳು ಆಯಾ ಜ್ಞಾನದಲ್ಲಿ ಅಧ್ಯಸ್ತವಾದ್ದರಿಂದ ಎಲ್ಲ ವಸ್ತು ಏಕಕಾಲದಲ್ಲಿ ಎಲ್ಲರಿಗೂ ತಿಳಿಯದಂತೆ ನಿಯಮ ಮಾಡಲು ವೃತ್ತಿದ್ವಾರಕ ಸಂಬಂಧವನ್ನು ಒಪ್ಪಬೇಕಾಗಿಲ್ಲ. ಆದರೆ ಅದ್ವೈತಮತದಲ್ಲಿ ಸತ್ಯವಾದ ಶುದ್ಧವಾದ ಅಧಿಷ್ಠಾನ ಚೈತನ್ಯದಲ್ಲಿ ಸ್ವತಃ ಭೇದವಿಲ್ಲ. ಉಪಾಧಿವಿಶಿಷ್ಟಚೈತನ್ಯದಲ್ಲಿ ಭೇದವಿದ್ದರೂ ಅದು ಘಟಾದಿಗಳಂತೆ ಮಿಥ್ಯೆಯಾದ್ದರಿಂದ ಆರೋಪಾಧಿಷ್ಠಾನವಾಗುವುದಿಲ್ಲ. ಅಧಿಷ್ಠಾನವು ಸತ್ಯವೇ ಇರಬೇಕೆಂದು ಅವರಲ್ಲಿ ನಿಯಮವಿದೆ.

**ಉಪಾಧ್ಯುಪಲಕ್ಷಿತಾಯಾಃ ಸತ್ಯತ್ವೇಽಪಿ ಅಭೇದಾತ್। ಕಥಂಚಿತ್ ಭೇದೇಽಪಿ ವೃತ್ತಿದ್ವಾರಕ ಸಂಬಂಧಾತ್ ಪ್ರಾಕ್ ಅಧ್ಯಸ್ತತ್ವರೂಪೇ ಸಂಬಂಧೇ ಸತ್ಯಪಿ ದೃಶ್ಯಾಪ್ರತೀತೇಃ।**

ಉಪಾಧಿಯಿಂದ ಉಪಲಕ್ಷಿತವಾದ ಚೈತನ್ಯ ಸತ್ಯವೇ ಆದರೂ ಅದು ಅಭಿನ್ನವಾದ್ದರಿಂದ ವೃತ್ತಿದ್ವಾರಕ ಸಂಬಂಧ ಬೇಕು.

'ಉಪಲಕ್ಷಣವೂ ಕೂಡ ವ್ಯಾವರ್ತಕವೇ ಆದ್ದರಿಂದ ಭೇದವನ್ನು ಉಂಟುಮಾಡಲೇಬೇಕು. ವಿಶೇಷಣವು ಭೇದ ಉಂಟು ಮಾಡುವುದಕ್ಕೂ ಅದು ವ್ಯಾವರ್ತಕವಾಗಿರುವುದೇ ಮೂಲಕಾರಣ. ಆದರಿಂದ ಉಪಲಕ್ಷಿತಕ್ಕೆ ಭೇದವನ್ನೆ ಒಪ್ಪುತ್ತೇನೆ' ಎಂದು ಅದ್ವೈತಿ ಹೇಳಿದರೆ, ಭೇದಪಕ್ಷದಲ್ಲಿಯೂ ಅದ್ವೈತಿಯು ವೃತ್ತಿದ್ವಾರಕ ಸಂಬಂಧವನ್ನು ಒಪ್ಪಿದ್ದಾನೆ. ವೃತ್ತಿ ಉಂಟಾಗುವುದಕ್ಕೆ ಮುನ್ನ ದೃಶ್ಯಕ್ಕೆ ದೃಕ್ಕಿನಲ್ಲಿ ಅಧ್ಯಸ್ತತ್ವರೂಪ ಸಂಬಂಧವೇ ಇದ್ದರೂ ದೃಶ್ಯ ಜ್ಞಾತವಾಗುವುದಿಲ್ಲ ಎಂದೇ ಒಪ್ಪಿದ್ದಾನೆ. ಆದರಿಂದ ಸತ್ಯವಾದ ಆಗಂತುಕ ಸಂಬಂಧವನ್ನು ಅವನು ಸ್ವೀಕರಿಸಲೇಬೇಕು.

**ಕಿಂಚ ಕಿಂ ಘಟಾಕಾರ ವೃತ್ತಿಪ್ರತಿಬಿಂಬಿತಂ ಚೈತನ್ಯಂ ಘಟಪ್ರಕಾಶಕಂ? ಕಿಂವಾ ತದಭಿವ್ಯಕ್ತಂ ಘಟಾಧಿಷ್ಠಾನಚೈತನ್ಯಂ? ನಾದ್ಯಃ। ಆಧ್ಯಾಸಿಕ ಸಂಬಂಧಸ್ಯ ಆತಂತ್ರತ್ವಾಪಾತಾತ್। ನಾಂತ್ಯಃ। ಆವಶ್ಯಕೇನ ವೃತ್ತಿಪ್ರತಿಬಿಂಬಿತೇನೈವ ಪ್ರಕಾಶೋಪಪತ್ತೌ ತೇನ ಅಧಿಷ್ಠಾನಚಿದಭಿವ್ಯಕ್ತ್ಯಾದಿ ಕಲ್ಪನಾಽಯೋಗಾತ್।**

ಘಟಪ್ರಕಾಶಕವು ಯಾವುದು? ಘಟಾಕಾರವೃತ್ತಿಪ್ರತಿಬಿಂಬಿತ ಚೈತನ್ಯವೆ? ಅಥವಾ ಅದರಿಂದ ಅಭಿವ್ಯಕ್ತವಾದ ಘಟಾಧಿಷ್ಠಾನ ಚೈತನ್ಯವೆ? ಪ್ರತಿಬಿಂಬಿತ ಚೈತನ್ಯದಿಂದಲೆ ಘಟಪ್ರಕಾಶ ಎನ್ನುವುದಾದರೆ, ಅಧಿಷ್ಠಾನ ಚೈತನ್ಯದ ಅಭಿವ್ಯಕ್ತಿ ಬೇಡವಾದರೆ ಚೈತನ್ಯವನ್ನು ಅಧಿಷ್ಠಾನವಾಗಿ ಮಾಡಿ ಅದರಲ್ಲಿ ಘಟವನ್ನು ಅಧ್ಯಾಸ ಮಾಡುವುದೇಕೆ? ಆಧ್ಯಾಸಿಕ ಸಂಬಂಧ ದೃಶ್ಯತ್ವಕ್ಕೆ ಪ್ರಯೋಜಕವಲ್ಲ ಎಂದಾಗುತ್ತದೆ. ಯದ್ಯಪಿ ವೃತ್ತಿಪ್ರತಿಬಿಂಬಿತ ಚೈತನ್ಯಕ್ಕೆ ವಿಷಯದಿಂದ ಆಧ್ಯಾಸಿಕ ಸಂಬಂಧವಿಲ್ಲದ್ದರಿಂದ ಅಧಿಷ್ಠಾನಚೈತನ್ಯದ ಆವರಣ ಭಂಗಮಾಡಿ ಅಭಿವ್ಯಕ್ತಿ ಮಾಡುವುದು ಅವಶ್ಯಕ ಎಂದು ಅದ್ವೈತಿ ಹೇಳಬಹುದು. ಆದರೆ ಆಗ ಅಧಿಷ್ಠಾನ ಚೈತನ್ಯವೇ ಘಟಪ್ರಕಾಶಕ ಎಂದೇ ಅವನು

ಒಪ್ಪಿದಂತಾಗುವುದು. ಪ್ರತಿಬಿಂಬಿತ ಚೈತನ್ಯವು ಪ್ರಕಾಶಕವೆಂಬ ಪಕ್ಷವನ್ನು ಬಿಟ್ಟಂತಾಗುವುದು. ಅಧಿಷ್ಠಾನಚೈತನ್ಯವೇ ಘಟಕ್ಕೆ ಪ್ರಕಾಶಕಕ ಎನ್ನುವ ಪಕ್ಷದಲ್ಲಿ ಚೈತನ್ಯದ ಮೇಲಿನ ಅಜ್ಞಾನಾವರಣಭಂಗ ಮಾಡಿ ಚೈತನ್ಯವನ್ನು ಅಭಿವ್ಯಕ್ತಿಗೊಳಿಸಲು ವೃತ್ತಿಪ್ರತಿಬಿಂಬಿತ ಚೈತನ್ಯ ಬೇಕಾಗುತ್ತದೆ. ಅದಿಲ್ಲದಿದ್ದರೆ ದೃಶ್ಯದ ಪ್ರಕಾಶವಾಗುವುದಿಲ್ಲ. ಅದರಿಂದ ದೃಶ್ಯವು ಸರ್ವದಾ ಪ್ರಕಾಶವಾಗುವ ಪ್ರಸಂಗವಿಲ್ಲದ್ದರಿಂದ ಆಗಂತುಕವಾದ ಸಂಬಂಧವನ್ನು ದೃಕ್ ದೃಶ್ಯಗಳಿಗೆ ಹೇಳುವ ಆವಶ್ಯಕತೆ ಬರುವುದಿಲ್ಲ. ನಿಜ, ಆದರೆ ಘಟಾಧಿಷ್ಠಾನ ಚೈತನ್ಯವೇ ಘಟಪ್ರಕಾಶಕ ಎನ್ನುವ ಪಕ್ಷದಲ್ಲಿಯೂ ಘಟಾಕಾರ ವೃತ್ತಿ ಪ್ರತಿಬಿಂಬಿತ ಚೈತನ್ಯದಿಂದಲೇ ಅಧಿಷ್ಠಾನ ಚೈತನ್ಯಾಭಿವ್ಯಕ್ತಿ. ಹೀಗೆ ಆವಶ್ಯಕವಾದ ವೃತಿಪ್ರತಿಬಿಂಬಿತ ಚೈತನ್ಯದಿಂದಲೇ ಸತ್ಯವಾದ ಘಟದ ಪ್ರಕಾಶ ಕೂಡುತ್ತಿರುವಾಗ ಘಟಪ್ರಕಾಶಕ್ಕೆ ಅದರ ಅಧಿಷ್ಠಾನಚೈತನ್ಯಾಭಿವ್ಯಕ್ತ್ಯಾದಿಗಳನ್ನು ಕಲ್ಪಿಸುವುದು ಸರಿಯಲ್ಲ.

**ಕಿಂಚ ಘಟಾಧಿಷ್ಠಾನಸ್ಯ ಸತ್ಯಸ್ಯ ಚಿನ್ಮಾತ್ರಸ್ಯ ಚರಮಸಾಕ್ಷಾತ್ಕಾರಾತ್ಪೂರ್ವಂ ನಾಭಿವ್ಯಕ್ತಿಃ। ಅಭಿವ್ಯಕ್ತಸ್ಯ ತು ಘಟಾಧಿಷ್ಠಾನಚೈತನ್ಯಸ್ಯ ನ ತದಧಿಷ್ಠಾನತ್ವಮ್। ಆತ್ಮಾಶ್ರಯಾತ್।**

'ಸತ್ಯವಾದ ಶುದ್ಧಚಿನ್ಮಾತ್ರವು ಘಟಾಧಿಷ್ಠಾನ, ಅದೇ ಘಟಕ್ಕೆ ಪ್ರಕಾಶಕ' ಎಂಬ ಎರಡನೇ ಪಕ್ಷದಲ್ಲಿ ಇನ್ನೊಂದು ದೋಷ—'ಶುದ್ಧಚಿನ್ಮಾತ್ರವು ಘಟಾಕಾರ ವೃತ್ತಿಯಿಂದ ಅಭಿವ್ಯಕ್ತವಾಗುವುದಿಲ್ಲ. ಆಗುತ್ತದೆ ಎಂದರೆ ಆಗಲೇ ಸಂಸಾರದಿಂದ ಮೋಕ್ಷಬಂದೀತು. ಚರಮಸಾಕ್ಷಾತ್ಕಾರದಿಂದಲೇ ಅದು ವ್ಯಕ್ತವಾಗಬೇಕು. ಮೊದಲು ವ್ಯಕ್ತವಾಗುವುದಿಲ್ಲ. ಘಟಪ್ರಕಾಶವಾಗುವುದಿಲ್ಲ. 'ಘಟಾವಚ್ಛಿನ್ನ ಚೈತನ್ಯವೇ ಅಧಿಷ್ಠಾನ, ಅದು ಅಭಿವ್ಯಕ್ತವಾಗಿ ಘಟಪ್ರಕಾಶ ಮಾಡುವುದೆ'ಂದರೆ, ಘಟಾಧಿಷ್ಠಾನವಾದರೇ ಅದು ಘಟಾರೋಪದಿಂದ ಘಟಾಧಿಷ್ಠಾನವಾಗುವುದರಿಂದ ಆತ್ಮಾಶ್ರಯದೋಷ'.

**ಕಿಂಚ ಘಟಪ್ರಕಾಶಿಕಾಯಾಃ ದೃಶಃ ಘಟವತ್ ಮಿಥ್ಯಾತ್ವೇ ನ ತದಧಿಷ್ಠಾನತ್ವಂ। ಸತ್ಯತ್ವೇ ದೋಷಜನ್ಯತ್ವೇನ ಪ್ರಮಾತ್ವಾತ್ ಸತ್ಯಂ ಸ್ವವಿಷಯಂ ಪ್ರತಿ ನಾಧಿಷ್ಠಾನತ್ವಂ। ಇತಿ। ಉಭಯತಃ ಪಾಶಾ ರಜ್ಜುಃ।**

ಮತ್ತು ನಿನಗೆ ಅಧಿಷ್ಠಾನಚೈತನ್ಯಕಲ್ಪನೆ ಮಾಡುವುದು ಶಕ್ಯವೂ ಅಲ್ಲ. ಏಕೆಂದರೆ ಘಟಪ್ರಕಾಶಕವಾದ ಘಟಾವಚ್ಛಿನ್ನ ಚೈತನ್ಯವು ಘಟದಂತೇ ಮಿಥ್ಯಾ ಎಂದರೆ ಅದು ಘಟಾರೋಪಕ್ಕೆ ಅಧಿಷ್ಠಾನ ವಾಗದು. ಸತ್ಯವೇ ಅಧಿಷ್ಠಾನ ಎಂದು ನಿನ್ನ ಮತ. ಸತ್ಯ ಎಂದರೆ ಅದು ದೋಷ-ಅಜನ್ಯ ರೂಪವಾದ್ದರಿಂದ ಪ್ರಮಾ ಆಯಿತು, ಅದರ ವಿಷಯವಾದ ಘಟವು ಸತ್ಯವಾಯಿತು. ಸತ್ಯವಾದ ಘಟಕ್ಕೆ ಆರೋಪಾಧಿಷ್ಠಾನವೆಂಬುದಿಲ್ಲವಾದ್ದರಿಂದ ಅಧಿಷ್ಠಾನಚೈತನ್ಯ ಆರೋಪಾಧಿಷ್ಠಾನವೆನಿಸಲಾರದು. ಹೀಗೆ ಎರಡು ಕಡೆಯಿಂದ ಬಿಗಿದು ಕಟ್ಟಿ ಸೆಳೆಯುವ ಕೊರಳಿನ ಹಗ್ಗದಂತಾಯಿತು ನಿನಗೆ ಈ ನಿನ್ನ ಅಧಿಷ್ಠಾನ ಚೈತನ್ಯ ಕಲ್ಪನೆ.



यत्तूक्तं ज्ञानज्ञेययोर्न संबंध इति तन्न । गुणगुण्यादेस्संयोगासंभवे समवायवत् ज्ञानज्ञेययोरुभयासंभवेऽन्यस्य संभवात् ।

अभाववद्भूतलं, ज्ञातो घट, इष्टो घटः, घटस्याभाव इत्यादिका परस्परासंयुक्तासमवेत विशेषण विशेष्य विषयक विशिष्टधीः विशेषण विशेष्य तत्संबंध विषयिका, विशिष्टधीत्वात् दंडीति विशिष्टधीवत् । उक्ता जन्यप्रमा विशेषण विशेष्य संबंध निमित्तिका अबाधित विशिष्टजन्यधीत्वात्, संमतवत् । विमता धीः अबाधित विशेषण विशेष्यसंबंध विषयिका, अबाधित विशिष्टधीत्वात्, दंडीति प्रमावदित्यनुमानात्तत्सिद्धेः ।

गोमांश्चैत्र इत्यादिधीरपि पक्ष एव । उक्तं हि "षष्ठी स्थाने योगे"त्यत्र महाभाष्ये "एकशतं षष्ठ्यर्था" इति । "ते च स्वस्वामिभावादयः संबंधाः षष्ठीदंडके पठिता" इत्युक्तं कैयटे । प्रमितवस्त्वनुसारेण हि प्रक्रिया कल्प्या । न तु स्वकल्पित प्रक्रियानुरोधेन प्रमितत्यागः ।

न च संबंधद्वित्वमेव बाधकम् । अन्योन्याश्रयात् । अन्यथा संबंधैक्यं समवायबाधकं स्यात् । नाप्यतीतादौ संबंध्यभावो वा ज्ञानज्ञेययोर्विप्रकर्षो वा बाधकः । अस्य संबंधस्य समवायवत् संबंध्यभाव विप्रकर्षाद्यविरुद्धत्वेनैव धर्मिग्राहकेण सिद्धेः । अन्यथा हि पृथक्सिद्धयोरेव संयोगसंबंधदर्शनात् अपृथक्सिद्धिः समवायसंबंधस्य बाधिका स्यात् ।

ध्वंसादेश्चातीतादिना, मिथ्यात्वलक्षणांतर्गतस्यात्यंताभावस्य च प्रतियोगिना, वेदांतनिष्ठशक्तितात्पर्ययोश्च ब्रह्मणा ज्ञात्रा, जीवाश्रिताज्ञानस्य चाज्ञेयेन ब्रह्मणा, व्यवहारस्य च व्यवहर्तव्येन ब्रह्मणा, मुमुक्षायाश्च मोक्षेण, त्वदुक्तदूषणस्य च दूष्येण, त्वद्वाक्यस्य

**चार्थेन, ज्ञानस्य ज्ञेयेन संबंधो नेति त्वद्वाक्योक्तसंबंधाभावस्य स्वज्ञानेनासंबंधात् स्वन्यायस्वक्रियास्ववचनविरोधाः स्युः । नहि ज्ञेयं ज्ञान इव प्रतियोगि शक्याज्ञेयेष्यमाण व्यवहर्तव्यादयः अभाव शक्त्यज्ञानेच्छा व्यवहारादावध्यस्ताः । एतेन**

**न्यायेऽदृढेऽन्यसाम्यात्किं दृढेऽन्यदपि बाध्यताम् ।**
**न ममत्वं मुमुक्षूणामनिर्वचनवादिनाम् ।।**

**इति निरस्तम् । स्वव्याहतस्य न्यायाभासतया दार्ढ्याभावात् । अन्यथा जातिवाद्यपीत्थं वदेत् ।**

---

**इत्यादिकेति** । अत्र आदिपदेन गोमांश्चैत्र इत्यादिधीपरिग्रहः । अत एव वक्ष्यति गोमांश्चैत्र इत्यादिधीरपि पक्ष एवेति । बाधस्फोरणाय परस्परासंयुक्तेत्यादि विशेषणम् । **विशिष्टधीत्वादिति** । विशेषणविषयकधीत्वादित्यर्थः । ईश्वरप्रमायां च अंशतो भ्रमे बाधवारणाय **जन्यप्रमेति** ।। साक्षात्काररूपेत्यपि विशेषणीयम् । अतो नानुमित्यादावंशतो बाधः । **अवाधितेति** । ईश्वरज्ञाने भ्रमे च व्यभिचारवारणाय **अबाधितविशिष्टजन्येति** । धीपदं च साक्षात्कारपरम् । तेनानुमित्यादौ न व्यभिचारः ।। विशिष्टेति निर्विकल्पके व्यभिचारवारणाय । **द्वित्वमेवेति** ।। उभयजातीयत्वमेवेत्यर्थः । **अन्योन्याश्रयादिति** । एवकारान्तर्भावे न बाधकता । तदर्थश्चाद्यापि न निश्चित इति भावः । **नापीति** । यथा समवायस्य नीलाद्यभावदशायामपि तत्सम्बन्धत्वं नापैति, यथा वा सम्बन्धिविप्रकर्षे तत्सम्बन्धत्वं नापैति, तथा ज्ञानज्ञेययोः सम्बन्धस्यापि सम्बन्ध्यभावेऽपि तत्सम्बन्धत्वं नापैतीत्यर्थः ।



**ಯತ್ತೂಕ್ತಂ ಜ್ಞಾನಜ್ಞೇಯಯೋಃ ನ ಸಂಬಂಧ ಇತಿ, ತನ್ನ । ಗುಣಗುಣ್ಯಾದೇಃ ಸಂಯೋಗಾಸಂಭವೇ ಸಮವಾಯವತ್ ಜ್ಞಾನಜ್ಞೇಯಯೋಃ ಉಭಯಾಸಂಭವೇ ಅನ್ಯಸ್ಯ ಸಂಭವಾತ್ ।**

ಜ್ಞಾನ ಜ್ಞೇಯಗಳಿಗೆ ಸಂಬಂಧವಿಲ್ಲ ಎನ್ನುವುದೇ ಅಯುಕ್ತ. ಗುಣಗುಣಿ, ಜಾತಿವ್ಯಕ್ತಿ ಮುಂತಾದವುಗಳಿಗೆ ಸಂಯೋಗ ಸಂಬಂಧ ಕೂಡುವುದಿಲ್ಲವೆಂಬ ಸಮಸ್ಯೆ ಬಂದಾಗ ಸಮವಾಯ ಸಂಬಂಧ ಕಲ್ಪನೆ ಮಾಡುವಂತೆ ಜ್ಞಾನಜ್ಞೇಯಗಳಿಗೆ ಸಂಯೋಗ ಸಮವಾಯಗಳೆರಡೂ ಕೂಡದಿದ್ದಾಗ ಬೇರೇ ಒಂದು ಸಂಬಂಧವಿದೆ ಎನ್ನಬಹುದು.

**ಅಭಾವವದ್ ಭೂತಲಂ, ಜ್ಞಾತೋ ಘಟಃ, ಇಷ್ಟೋ ಘಟಃ ಘಟಸ್ಯ ಅಭಾವಃ ಇತ್ಯಾದಿಕಾ ಪರಸ್ಪರ ಅಸಂಯುಕ್ತ ಅಸಮವೇತ ವಿಶೇಷಣವಿಶೇಷ್ಯವಿಷಯಕ ವಿಶಿಷ್ಟಧೀಃ ವಿಶೇಷಣ ವಿಶೇಷ್ಯ ತತ್ಸಂಬಂಧ ವಿಷಯಿಕಾ। ವಿಶಿಷ್ಟಧೀತ್ವಾತ್ ದಂಡೀತಿ ವಿಶಿಷ್ಟಧೀವತ್ ।**

'ಅಭಾವ ಸಂಬಂಧಿ ಭೂತಲ, ಜ್ಞಾನಸಂಬಂಧಿ ಘಟ, ಇಚ್ಛಾಸಂಬಂಧಿ ಘಟ, ಘಟ ಸಂಬಂಧಿ ಅಭಾವ ಇತ್ಯಾದಿಯಾಗಿ ಪರಸ್ಪರ ಸಂಯೋಗವಿಲ್ಲದ, ಸಮವಾಯವೂ ಇಲ್ಲದ ವಿಶೇಷಣ ವಿಶೇಷ್ಯವಿಷಯಕವಾದ ವಿಶಿಷ್ಟಜ್ಞಾನವು ವಿಶೇಷಣ ವಿಶೇಷ್ಯ ಮತ್ತು ಅವುಗಳ ಸಂಬಂಧ ವಿಷಯಕವಾಗಿದೆ. ವಿಶಿಷ್ಟಜ್ಞಾನವಾದ್ದರಿಂದ 'ದಂಡಸಂಬಂಧಿ' ಎಂಬ ವಿಶಿಷ್ಟಜ್ಞಾನದಂತೆ ಎಂಬ ಅನುಮಾನದಿಂದ ಜ್ಞಾನ ಜ್ಞೇಯಗಳಿಗೂ ಒಂದು ಸಂಬಂಧ ಸಿದ್ಧವಾಗುತ್ತದೆ.

**ಉಕ್ತಾ ಜನ್ಯಪ್ರಮಾ ವಿಶೇಷಣವಿಶೇಷ್ಯಸಂಬಂಧನಿಮಿತ್ತಿಕಾ। ಅಬಾಧಿತವಿಶಿಷ್ಟ ಜನ್ಯಧೀತ್ವಾತ್ । ಸಮ್ಮತವತ್ । ವಿಮತಾ ಧೀಃ ಅಬಾಧಿತವಿಶೇಷಣ ವಿಶೇಷ್ಯ ಸಂಬಂಧವಿಷಯಿಕಾ, ಅಬಾಧಿತವಿಶಿಷ್ಟಧೀತ್ವಾತ್ । ದಂಡೀತಿ ಪ್ರಮಾವತ್ ಇತ್ಯನುಮಾನಾತ್ ತತ್ಸಿದ್ಧೇಃ ।**

'ಅಭಾವವತ್ ಭೂತಲಂ' ಇತ್ಯಾದಿ ಹಿಂದೆ ಹೇಳಿದ ಜನ್ಯಪ್ರಮೆಯು ವಿಶೇಷಣ ವಿಶೇಷ್ಯಸಂಬಂಧ ನಿಮಿತ್ತಕವಾಗಿದೆ. ಅಬಾಧಿತವಾದ ವಿಶಿಷ್ಟ ವಿಷಯಕ ಜನ್ಯಜ್ಞಾನವಾದ್ದರಿಂದ, ಉಭಯಸಂಮತವಾದ 'ದಂಡೀ' ಎಂಬ ವಿಶಿಷ್ಟಜ್ಞಾನದಂತೆ.

'ವಿವಾದಗೋಚರವಾದ 'ಅಭಾವವದ್ ಭೂತಲಂ' ಇತ್ಯಾದಿ ಜನ್ಯಪ್ರಮಾರೂಪ ವಿಶಿಷ್ಟಜ್ಞಾನವು ಅಬಾಧಿತ ವಿಶೇಷಣ ವಿಶೇಷ್ಯ ಸಂಬಂಧ ವಿಷಯಕವಾಗಿದೆ. ಅಬಾಧಿತವಾದ್ದರಿಂದ, ದಂಡೀ ಎಂಬ ಪ್ರಮಾದಂತೆ' ಎಂಬ ಅನುಮಾನಗಳಿಂದ ಜ್ಞಾನ ಜ್ಞೇಯಗಳಿಗೆ ಸಂಯೋಗ ಸಮವಾಯಾತಿರಿಕ್ತ ದ್ವಿಷ್ಠಸಂಬಂಧ ಸಿದ್ಧಿಸುವುದು.

ಈಶ್ವರಜ್ಞಾನದಲ್ಲಿ ಅದು ಅನಾದಿನಿತ್ಯವಾದ್ದರಿಂದ ಸಂಬಂಧ ನಿಮಿತ್ತಕತ್ವವು ಬಾಧಿತ ವಾಗುವುದರಿಂದ ಜನ್ಯಪ್ರಮೆಯನ್ನು ಪಕ್ಷ ಮಾಡಿದ್ದಾರೆ. ಜನ್ಯಜ್ಞಾನವಾದ್ದರಿಂದ ಎಂದು ಜನ್ಯಪದವಿಲ್ಲದಿದ್ದರೆ ಈಶ್ವರಜ್ಞಾನದಲ್ಲಿ ವ್ಯಭಿಚಾರ ಬಂದೀತು. ಜನ್ಯ ಜ್ಞಾನಕ್ಕೆ ಸಾಕ್ಷಾತ್ಕಾರ ರೂಪವೆಂದು ವಿಶೇಷಣ ಹಾಕಬೇಕು. ಇಲ್ಲದಿದ್ದರೆ ಅನುಮಿತಿ ಶಾಬ್ದಬೋಧಗಳಲ್ಲಿ ವ್ಯಭಿಚಾರ ಬಂದೀತು. ನಿರ್ವಿಕಲ್ಪಕ ಜ್ಞಾನದಲ್ಲಿ ವ್ಯಭಿಚಾರಪರಿಹಾರಕ್ಕಾಗಿ 'ವಿಶಿಷ್ಟಜ್ಞಾನ' ಎಂದು ವಿಶೇಷಣವಿದೆ.

**'ಗೋಮಾಂಶ್ಚೈತ್ರಃ' ಇತ್ಯಾದಿಧೀರಪಿ ಪಕ್ಷ ಏವ। ಉಕ್ತಂ ಹಿ 'ಷಷ್ಠೀ ಸ್ಥಾನೇಯೋಗಾ'ಇತ್ಯತ್ರ ಮಹಾಭಾಷ್ಯೇ 'ಏಕಶತಂ ಷಷ್ಠ್ಯರ್ಥಾಃ' ಇತಿ। ತೇ ಚ ಸ್ವಸ್ವಾಮಿಭಾವಾದಯಃ ಸಂಬಂಧಾಃ ಷಷ್ಠೀದಂಡಕೇ ಪಠಿತಾಃ ಇತ್ಯುಕ್ತಂ ಕೈಯಟೇ।**

'ಗೋಗಳುಳ್ಳವನು ಚೈತ್ರ' ಎಂಬ ವಿಶಿಷ್ಟಜ್ಞಾನವು ಕೂಡ ಪಕ್ಷವೆ. 'ಷಷ್ಠೀ ಸ್ಥಾನೇಯೋಗಾ' ಎಂಬ ಸೂತ್ರದಲ್ಲಿ ಮಹಾಭಾಷ್ಯದಲ್ಲಿ ಒಂದು ನೂರು ಅರ್ಥಗಳು ಷಷ್ಠೀವಿಭಕ್ತಿಗೆ ಇವೆ' ಎಂದಿದ್ದಾರೆ. ಆ ಅರ್ಥಗಳು ಸ್ವಸ್ವಾಮಿಭಾವಾದಿ ಸಂಬಂಧಗಳು, ಷಷ್ಠೀದಂಡಕ ಎಂಬ ಗ್ರಂಥದಲ್ಲಿ ಉಕ್ತವಾಗಿವೆ ಎಂದು ಕೈಯಟನು ಹೇಳಿದ್ದಾನೆ. ಅದರಿಂದ ಸಂಯೋಗ ಸಮವಾಯಗಳೇ ಸಂಬಂಧವಲ್ಲ. ಅವುಗಳಿಗಿಂತ ಅತಿರಿಕ್ತವಾದ ಸ್ವಸ್ವಾಮಿಭಾವರೂಪ ಸಂಬಂಧವು ಅನುಮಾನದಿಂದ ಸಿದ್ಧವಾಗಬಹುದು.

**ಪ್ರಮಿತ ವಸ್ತ್ವನುಸಾರೇಣ ಹಿ ಪ್ರಕ್ರಿಯಾ ಕಲ್ಪ್ಯಾ। ನ ತು ಸ್ವಕಲ್ಪಿತಪ್ರಕ್ರಿಯಾನುರೋಧೇನ ಪ್ರಮಿತತ್ಯಾಗಃ।**

'ಸಂಯೋಗ ಸಮವಾಯಗಳು ಎರಡೇ ಸಂಬಂಧ' ಎಂದು ಪ್ರಕ್ರಿಯೆ ಇಷ್ಟರವರೆಗೆ ಅಂಗೀಕೃತವಾಗಿದೆ. ಈಗ ಹೊಸದಾಗಿ ಮೂರನೇ ಸಂಬಂಧ ಒಂದು ಇದೆ ಎಂದರೆ ಅದು ನಾವು ಅಂಗೀಕರಿಸಿರುವ ಪ್ರಕ್ರಿಯೆಗೆ ವಿರುದ್ಧವಾಗುವುದರಿಂದ ನಾವು ಒಪ್ಪುವುದಿಲ್ಲ' ಎಂದು ಅದ್ವೈತಿ ಹೇಳಬಹುದು. ನಾವು ಹೇಳುತ್ತೇವೆ, ಮೂರನೆಯದಾದ ಸಂಬಂಧ ಒಂದು ಪ್ರಮಿತವಾಗುತ್ತಿರುವಾಗ ಅದಕ್ಕೆ ಅನುಗುಣವಾಗಿ 'ಸಂಬಂಧಗಳು ಮೂರೆಂ'ದು ಪ್ರಕ್ರಿಯೆಯನ್ನು ಕಲ್ಪಿಸುವುದು ನ್ಯಾಯ. ಹೊರತು, ನಾವು ಒಪ್ಪಿರುವ ಪ್ರಕ್ರಿಯೆಗೆ ವಿರುದ್ಧವಾಗುವುದೆಂದು ಆಗ್ರಹದಿಂದ ಪ್ರಮಿತವಾದ ಮೂರನೆ ಸಂಬಂಧವನ್ನು ತ್ಯಾಗ ಮಾಡುವುದು ನ್ಯಾಯವಲ್ಲ. ಹೀಗಾಗಿ ಅಪ್ರಾಮಣಿಕವಾದ ಪ್ರಕ್ರಿಯೆಯ ವಿರೋಧ ಮೂರನೆ ಸಂಬಂಧಸಿದ್ಧಿಗೆ ಬಾಧಕವಲ್ಲ.

**ನ ಚ ಸಂಬಂಧ ದ್ವಿತ್ವಮೇವ ಬಾಧಕಂ। ಅನ್ಯೋನ್ಯಾಶ್ರಯಾತ್।**

ಸಂಬಂಧವು ಸಂಯೋಗ ಮತ್ತು ಸಮವಾಯ ಎಂದು ಎರಡೇ ಬಗೆಯಾಗಿರುವುದೇ ಮೂರನೆ ಸಂಬಂಧಸಿದ್ಧಿಗೆ ಬಾಧಕ ಎಂದರೆ ಅನ್ಯೋನ್ಯಾಶ್ರಯ ಬರುತ್ತದೆ. ಸಂಬಂಧ ಎರಡೇ ಬಗೆ ಎಂದು ಸಿದ್ಧವಾದರೆ ಆ ಬಾಧಕವಶದಿಂದ ಅತಿರಿಕ್ತ ಸಂಬಂಧ ಸಿದ್ಧವಾಗದೆ ಹೋದೀತು. ಅತಿರಿಕ್ತಸಂಬಂಧ ಸಿದ್ಧವಾಗದಿದ್ದರೆ ಸಂಬಂಧ ಎರಡೇ ಬಗೆ ಎನ್ನುವುದು ಸಿದ್ಧವಾದೀತು. ಎಂದು.

**ಅನ್ಯಥಾ ಸಂಬಂಧೈಕ್ಯಂ ಸಮವಾಯಬಾಧಕಂ ಸ್ಯಾತ್।**

ಸಮವಾಯವನ್ನು ಸಾಧನ ಮಾಡುವಾಗ, 'ಸಂಯೋಗಕ್ಕೆ ಅತಿರಿಕ್ತವಾಗಿ ಸಮವಾಯವನ್ನು ಕೂಡ ಒಪ್ಪಿದರೆ, 'ಸಂಬಂಧವೆಂದರೆ ಸಂಯೋಗ ಒಂದೇ' ಎಂಬ ನಿಯಮಕ್ಕೆ ವ್ಯತ್ಯಯ ಬಂದೀತೆಂದು ಸಮವಾಯವನ್ನು ಒಪ್ಪದವರು ಹೇಳಬಹುದು. ಸಮವಾಯ ಸಿದ್ಧವಾಗದೆ ಹೋದೀತು.

**ನಾಪ್ಯತೀತಾದೌ ಸಂಬಂಧ್ಯಭಾವೋ ವಾ ಜ್ಞಾನಜ್ಞೇಯಯೋರ್ವಿಪ್ರಕರ್ಷೋ ವಾ ಬಾಧಕಃ। ಅಸ್ಯ ಸಂಬಂಧಸ್ಯ ಸಮವಾಯವತ್ ಸಂಬಂಧ್ಯಭಾವ ವಿಪ್ರಕರ್ಷಾದ್ಯ ವಿರುದ್ಧತ್ವೇನೈವ ಧರ್ಮಿಗ್ರಾಹಕೇಣ ಸಿದ್ಧೇಃ। ಅನ್ಯಥಾ ಹಿ ಪೃಥಕ್‌ಸಿದ್ಧಯೋರೇವ ಸಂಯೋಗಸಂಬಂಧದರ್ಶನಾತ್ ಅಪೃಥಕ್‌ಸಿದ್ಧಿಃ ಸಮವಾಯಸಂಬಂಧಸ್ಯ ಬಾಧಿಕಾ ಸ್ಯಾತ್।**

ಅತೀತಾದಿ ವಿಷಯಸ್ಥಳದಲ್ಲಿ ಸಂಬಂಧಿಯಾದ ಅತೀತ ಅನಾಗತರೂಪ ವಿಷಯವು ವಿದ್ಯಮಾನವಾಗದಿರುವುದು ಮತ್ತು ಆಂತರಬಾಹ್ಯಪದಾರ್ಥಗಳಾದ ಜ್ಞಾನಜ್ಞೇಯಗಳು ಪರಸ್ಪರ ದೂರಸ್ಥಿತವಾಗಿರುವುದು ಸಂಬಂಧಸಿದ್ಧಿಗೆ ಬಾಧಕವೆಂದರೆ ಅದೂ ಸರಿಯಲ್ಲ. ಸಮವಾಯದಂತೆಯೇ ಈ ಸಂಬಂಧವೂ ಕೂಡ ಸಿದ್ಧವಾಗುವಾಗಲೆ ಸಂಬಂಧಿಯ ಅಭಾವ ಪರಸ್ಪರ ದೂರಸ್ಥತ್ವಗಳಿಗೆ ನಿರ್ವಾಹಕವಾಗಿ, ಅವಿರುದ್ಧವಾಗಿಯೇ, ಧರ್ಮಿಗ್ರಾಹಕಪ್ರಮಾಣದಿಂದ ಸಿದ್ಧವಾಗುವುದು. ಇಲ್ಲದಿದ್ದರೆ ಪೃಥಕ್‌ಸಿದ್ಧವಾದ ಸಂಬಂಧಿಗಳಿಗೇ ಸಂಯೋಗ ಸಂಬಂಧ ದೃಷ್ಟವಾಗಿರುವುದರಿಂದ ಅಪೃಥಕ್ ಸಿದ್ಧಿಯು ಸಮವಾಯ ಸಿದ್ಧಿಗೆ ಬಾಧಕವೆನಿಸೀತು.

**ಧ್ವಂಸಾದೇಶ್ಚ ಅತೀತಾದಿನಾ, ಮಿಥ್ಯಾತ್ವಲಕ್ಷಣಾಂತರ್ಗತಸ್ಯ ಅತ್ಯಂತಾಭಾವಸ್ಯ ಚ ಪ್ರತಿಯೋಗಿನಾ, ವೇದಾಂತನಿಷ್ಠಶಕ್ತಿತಾತ್ಪರ್ಯಯೋಶ್ಚ ಬ್ರಹ್ಮಣಾ ಜ್ಞಾತ್ರಾ, ಜೀವಾಶ್ರಿತಾ-ಜ್ಞಾನಸ್ಯ ಚ ಅಜ್ಞೇಯೇನ ಬ್ರಹ್ಮಣಾ, ವ್ಯವಹಾರಸ್ಯ ಚ ವ್ಯವಹರ್ತವ್ಯೇನ ಬ್ರಹ್ಮಣಾ, ಮುಮುಕ್ಷಾಯಾಶ್ಚ ಮೋಕ್ಷೇಣ, ತ್ವದುಕ್ತದೂಷಣಸ್ಯ ಚ ದೂಷ್ಯೇಣ, ತ್ವದ್‌ವಾಕ್ಯಸ್ಯ ಚ ಅರ್ಥೇನ, ಜ್ಞಾನಸ್ಯ ಜ್ಞೇಯೇನ ಸಂಬಂಧೋ ನೇತಿ ತ್ವದ್‌ವಾಕ್ಯೋಕ್ತ ಸಂಬಂಧಾಭಾವಸ್ಯ ಸ್ವಜ್ಞಾನೇನ ಅಸಂಬಂಧಾತ್ ಸ್ವನ್ಯಾಯ ಸ್ವಕ್ರಿಯಾ ಸ್ವವಚನವಿರೋಧಾಃ ಸ್ಯುಃ।**

ಜ್ಞಾನಕ್ಕೆ ಜ್ಞೇಯದಿಂದ ಸಂಯೋಗಾದಿ ವ್ಯತಿರಿಕ್ತವಾದ ಸಂಬಂಧವನ್ನು ಹೇಳಬಾರದು ಎಂದರೆ ಧ್ವಂಸಪ್ರಾಗಭಾವಗಳಿಗೂ ಪ್ರತಿಯೋಗಿಯಿಂದ ಸಂಬಂಧವನ್ನು ಹೇಳಬಾರದು. ಮಿಥ್ಯಾತ್ವ ಲಕ್ಷಣಾಂತರ್ಗತವಾದ ಅತ್ಯಂತಾಭಾವಕ್ಕೂ ಪ್ರತಿಯೋಗಿಯಿಂದ ಸಂಬಂಧವಿಲ್ಲ. ವೇದಾಂತನಿಷ್ಠ ಶಕ್ತಿತಾತ್ಪರ್ಯಗಳಿಗೂ ಜ್ಞಾತೃಬ್ರಹ್ಮಚೈತನ್ಯಕ್ಕೆ ಸಂಬಂಧವಿಲ್ಲ. ಜೀವಾಶ್ರಿತಾಜ್ಞಾನಕ್ಕೆ ಅಜ್ಞೇಯವಾದ ಬ್ರಹ್ಮನ ಸಂಬಂಧವಿಲ್ಲ. ವ್ಯವಹಾರಕ್ಕೂ ವ್ಯವಹರ್ತವ್ಯ ಬ್ರಹ್ಮನ ಸಂಬಂಧವಿಲ್ಲ. ಮೋಕ್ಷೇಚ್ಛೆಗೆ ಮೋಕ್ಷದ ಸಂಬಂಧವಿಲ್ಲ. ನೀನು ಹೇಳುತ್ತಿರುವ ದೋಷಕ್ಕೂ ದೂಷ್ಯಕ್ಕೂ ಸಂಬಂಧವಿಲ್ಲ. ನಿನ್ನ ಮಾತಿಗೂ ಅದರ ಅರ್ಥಕ್ಕೂ ಸಂಬಂಧವಿಲ್ಲ. 'ಜ್ಞಾನಕ್ಕೂ ಜ್ಞೇಯಕ್ಕೂ ಸಂಬಂಧವಿಲ್ಲ' ಎಂಬ ನಿನ್ನ ವಾಕ್ಯದಿಂದ ಉಕ್ತವಾಗುವ ಸಂಬಂಧಾಭಾವಕ್ಕೂ ನಿನ್ನ ಜ್ಞಾನದಿಂದ ಸಂಬಂಧವಿಲ್ಲ. ಹೀಗಾಗಿ ನಿನಗೆ ಸ್ವನ್ಯಾಯವಿರೋಧ ಸ್ವಕ್ರಿಯಾ ವಿರೋಧ ಸ್ವವಚನ ವಿರೋಧಗಳೆಲ್ಲವೂ ಬರುವುವು.

**ನಹಿ ಜ್ಞೇಯಂ ಜ್ಞಾನೇ ಇವ ಪ್ರತಿಯೋಗಿ–ಶಕ್ಯ–ಅಜ್ಞೇಯ–ಇಷ್ಯಮಾಣ ವ್ಯವಹರ್ತವ್ಯಾದಯಃ ಅಭಾವ–ಶಕ್ತಿ–ಅಜ್ಞಾನ–ಇಚ್ಛಾ–ವ್ಯವಹಾರಾದೌ ಅಧ್ಯಸ್ತಾಃ। ಏತೇನ**

**ನ್ಯಾಯೇಽದೃಢೇಽನ್ಯಸಾಮ್ಯಾತ್ ಕಿಂ, ದೃಢೇಽನ್ಯದಪಿ ಬಾಧ್ಯತಾಂ ।**
**ನ ಮಮತ್ವಂ ಮುಮುಕ್ಷೂಣಾಂ ಅನಿರ್ವಚನವಾದಿನಾಂ ॥**

**ಇತಿ ನಿರಸ್ತಂ । ಸ್ವವ್ಯಾಹತಸ್ಯ ನ್ಯಾಯಾಭಾಸತಯಾ ದಾರ್ಢ್ಯಾಭಾವಾತ್ । ಅನ್ಯಥಾ ಜಾತಿವಾದೀ ಅಪಿ ಇತ್ಥಂ ವದೇತ್ ।**

ಏಕೆಂದರೆ, ಜ್ಞೇಯವು ಜ್ಞಾನದಲ್ಲಿ ಅಧ್ಯಸ್ತವಾಗುವಂತೆ, ಪ್ರತಿಯೋಗಿಯು ಅಭಾವದಲ್ಲಿ, ಶಕ್ಯವು ಶಕ್ತಿಯಲ್ಲಿ, ಅಜ್ಞೇಯವು ಅಜ್ಞಾನದಲ್ಲಿ, ಇಷ್ಯಮಾಣವು ಇಚ್ಛೆಯಲ್ಲಿ, ವ್ಯವಹಾರವು ವ್ಯವಹರ್ತವ್ಯದಲ್ಲಿ–ಹೀಗೆ ಅಧ್ಯಸ್ತವಾಗಿಲ್ಲ. ಅಧ್ಯಸ್ತವಾಗಿದೆ ಎಂದರೆ ಅಭಾವಶಕ್ತ್ಯಾದಿ ಸತ್ಯವೆಂದಾದೀತು.

ಇಲ್ಲಿ ಖಂಡನಗ್ರಂಥ ಶ್ಲೋಕ ಹೀಗಿದೆ—

'ಸ್ವನ್ಯಾಯವಿರೋಧಾದಿ ದೋಷವಿರುವುದರಿಂದ, 'ಜ್ಞಾನಜ್ಞೇಯಗಳಿಗೆ ಬೇರೆ ಸಂಬಂಧವು ಅನುಪಪನ್ನ' ಅವುಗಳಿಗೆ ಆಧ್ಯಾಸಿಕ ಸಂಬಂಧವನ್ನೇ ಒಪ್ಪಬೇಕೆ'ಂಬ ನಮ್ಮ ನ್ಯಾಯವು ಅದೃಢವಾಗಿದೆ ಎನ್ನುವುದಾದರೆ ಪ್ರತಿಯೋಗಿ–ಅಭಾವಾದಿ ಅನ್ಯ ಉದಾಹರಣೆಗಳ ಸಾಮ್ಯವನ್ನು ಹೇಳಿ ಏನು ಪ್ರಯೋಜನ? ಅದು ಮೃತಮಾರಣದಂತೆ ವ್ಯರ್ಥವಾಗುವುದು. ನ್ಯಾಯವು ದೃಢವೇ ಎನ್ನುವುದಾದರೆ ಅನ್ಯ ಉದಾಹರಣೆಗಳೂ ಈ ನ್ಯಾಯದಿಂದಲೇ ಬಾಧಿತವೆಂದಾಗಲಿ, ಅನಿರ್ವಚನೀಯವಾದಿಗಳಾದ ಮುಮುಕ್ಷುಗಳಾದ ನಮಗೆ ಅನ್ಯ ಉದಾಹರಣೆಗಳಲ್ಲಿಯೂ ಮಮತ್ವವಿಲ್ಲ ಪಕ್ಷಪಾತವಿಲ್ಲ. ಅಲ್ಲಿಯೂ ಆಧ್ಯಾಸಿಕ ಸಂಬಂಧವೆ ಎಂದಾಗಲಿ' ಎಂದು.

ಖಂಡನಕಾರನು ಹೇಳುವುದು ಸರಿಯಲ್ಲ. ಸ್ವವ್ಯಾಹತವಾದ ನ್ಯಾಯವು ನ್ಯಾಯಾಭಾಸವಾಗಿರುವುದರಿಂದ ಅದರಲ್ಲಿ ದಾರ್ಢ್ಯವಿಲ್ಲ. ಸ್ವವ್ಯಾಹತಿರೂಪ ಪ್ರತಿಕೂಲತರ್ಕ ಪರಾಹತಿಯೂ ಇದೆ. ಆದರೂ ಈ ನ್ಯಾಯವನ್ನು ಪ್ರಮಾಣವೆಂದು ಅಗ್ರಹಿಸಿದರೆ ಸ್ವವ್ಯಾಹತೋತ್ತರರೂಪ ಜಾತ್ಯುತ್ತರವನ್ನು ಕೊಡುವ ಜಾತಿವಾದಿಯೂ ಹೀಗೇ 'ನನ್ನ ನ್ಯಾಯವು ಅದೃಢವಾದರೆ ಅನ್ಯ ಉದಾಹರಣೆಯಿಂದೇನು?' ಎಂದು ಮುಂತಾಗಿ ಹೇಳಬಹುದು.

ಇಲ್ಲಿ ಖಂಡನ ಶ್ಲೋಕದಲ್ಲಿ 'ಬಾಧೇಽದೃಢೇ' ಎಂದೂ ಪಾಠವಿದೆ. ಅದ್ವೈತಸಿದ್ಧಿಯಲ್ಲಿಯೂ ಕಂಟಕೋದ್ಧಾರದಲ್ಲಿಯೂ ಹಾಗೇ ಪಾಠವನ್ನು ಹಿಡಿದಿದ್ದಾರೆ. 'ಬಾಧ' ಎಂದರೆ ಪ್ರಕೃತದಲ್ಲಿ, 'ಸಂಬಂಧಿಗಳಿಗೆ ಪರಸ್ಪರ ದೇಶಕಾಲವಿಪ್ರಕರ್ಷವು ಸಂಯೋಗ ಸಮವಾಯಗಳಲ್ಲಿ ಎಲ್ಲಿಯೂ ಕಂಡಿಲ್ಲ ಎಂದು.ಅದರಿಂದ ಸಂಯೋಗ ಸಮವಾಯರೂಪ ಅನ್ಯಸಂಬಂಧಕ್ಕೆ ದೇಶಕಾಲವಿಪ್ರಕರ್ಷಾಭಾವವು ವ್ಯಾಪಕ. ಜ್ಞಾನಜ್ಞೇಯಗಳಲ್ಲಿ ವ್ಯಾಪಕವಿಲ್ಲದ್ದರಿಂದ ವ್ಯಾಪ್ಯವಾದ ಅನ್ಯಸಂಬಂಧವಿಲ್ಲ. ಈ ಬಾಧದಿಂದ ಆಧ್ಯಾಸಿಕ ಸಂಬಂಧವನ್ನೇ ಹೇಳಬೇಕು' ಎಂದು ಅದ್ವೈತಿ ಹೇಳುತ್ತಾನೆ. 'ಈ ಬಾಧವು ದೃಢವಾಗಿದೆ, ವ್ಯಾಪಕಾನುಪಲಬ್ಧಿರೂಪ ಅನುಕೂಲತರ್ಕ ಯುಕ್ತವಾಗಿದೆ' ಎಂದು ಅವನು ಹೇಳುತ್ತಾನೆ. ವಸ್ತುತಃ ಬಾಧವು ಅಭಾವಾದಿ ಅನ್ಯ ಉದಾಹರಣೆಗಳಲ್ಲಿ ಕಾಣುವುದಿಲ್ಲ. ಅಲ್ಲಿ

ಸಂಬಂಧಿಗಳಿಗೆ ದೇಶಕಾಲ ವಿಪ್ರಕರ್ಷವೇ ಕಾಣುತ್ತದೆ. ಪ್ರತಿಯೋಗಿ-ಅಭಾವಗಳಿಗೆ, ಇಚ್ಛಾ-ಇಷ್ಯಮಾಣ ಮುಂತಾದವುಗಳಿಗೆ ದೇಶಕಾಲ ವಿಪ್ರಕರ್ಷವಿದೆ. ದೇಶಕಾಲ ವಿಪ್ರಕರ್ಷಾಭಾವವು ವ್ಯಾಪಕವಲ್ಲ. ವ್ಯಾಪಕಾನುಪಲಬ್ಧಿರೂಪ ತರ್ಕವು ದೃಢವಲ್ಲ.



**नचेच्छायास्तज्ज्ञान जन्यत्वादन्यस्तत्संबंधो नेति युक्तम् । ज्ञाने संनिकर्षाधीनस्येव, स्मृतावनुभवाधीनस्येव च इच्छायां ज्ञानाधीनस्य विषयसंबंधस्यानुभवात् । अन्यथा घटपटाविति ज्ञानजन्यायाः पटेच्छाया घटीयत्वापातात् । नित्येश्वरेच्छाया विषयासंबंधापाताच्च । पुत्रादिधीजन्य सुखादेस्तद्विषयत्वापाताच्च । अज्ञानस्य च तज्ज्ञाननिवर्त्यत्वातिरिक्त तद्विषयत्वाभावे तन्निवर्त्यत्वमेव न स्यात्, तस्य समानविषयक ज्ञान निवर्त्यत्वात् । अज्ञानस्यांधकारवत् आश्रयाच्छादकत्वेऽपि सविषयत्वस्य स्वीकृतत्वाच्च।**

**यदि च भावाभावादेः संबंधांतरमंतरेण तद्विशिष्ट व्यवाहार जनन योग्य स्वरूपात्मकः स्वभावसंबंधो वा असंबंधरूपं प्रतियोगित्वादिकं वा नियामकं सत् संबंधकार्यकारि तर्हीहापि विषयत्वं तथैवास्तु ।**

**भावाभावादेरपि संबंधो मिथ्यैवेति चेन्न । प्रपंचमिथ्यात्वसिद्धेः प्राक् तदसिद्ध्याऽन्योन्याश्रयात् । घटस्याभाव इत्यादावभावसम-सत्ताक संबंधवत् घटस्य ज्ञानमित्यत्रापि ज्ञानसम सत्ताक संबंधस्य स्वीकार्यत्वाच्च ।**

---

उक्तेषु क्वचिद्बाधमाशंक्य निराकरोति **नचेति ।। घटीयत्वापातादिति** । ननु तद्विषयकज्ञानजन्यत्वमात्रेण तद्विषयकत्वे तवापि तस्याः घटीयत्त्वापत्तिः, अंशभेदविवक्षायां च नास्मत्पक्षे दोषः । न, घटं जानामीत्यनुभववत्

घटमिच्छामीत्यनुभवेन इच्छायाः घटीयत्वसिद्ध्या उक्तदोषाप्रसरादिति । **नित्येश्वरेच्छाया इति ।।** न च जन्येच्छायामेव सविषयकत्वे ज्ञानजन्यत्वं प्रयोजकमिति वाच्यम् । अननुगमापत्तेः ।। **पुत्रादीति ।।** अत्र प्रथमादिपदात् हितादिपरिग्रहः । द्वितीयादिपदात् जन्यदुःखादिपरिग्रहः । नचारोपे सति निमित्तानुसरणं नतु निमित्तमस्तीत्यारोप इति न्यायेन जनकीभूतज्ञानस्येच्छा संबन्धरूपत्वमस्तु । इष्टो घट इतीच्छाविशिष्टबुद्धिसत्त्वेन संबन्धकल्पनावश्यकत्वात् । नचैवं सुखे । तत्र विशिष्टबुद्ध्यभावेन संबन्धस्य विचारपथानारोहादिति वाच्यं । तर्हि ज्ञानवदेवेच्छायामपि साक्षादेव सविषयत्वमस्तु । न तूक्तं प्रयोजकमतिप्रसक्तत्वादिति भावः । नन्वन्धकारवदाश्रयाच्छादकस्याज्ञानस्य न तद्विषयकत्वमित्याशङ्क्याह **अज्ञानस्येति ।।** तथा च प्रमाणाभावेनांधकारस्य निर्विषयत्वेऽपि शास्त्रार्थं न जानामीत्यनुभवबलेनाज्ञानस्य सविषयत्वं दुर्निवारमिति भावः ।। **नियामकमिति ।।** अस्यैव विवरणं संबन्धकार्यकारीति ।। **अन्योन्याश्रयादिति ।।** प्रपञ्चमिथ्यात्वे सिद्धे तदन्तःपाति भावाभाव संबन्धादि मिथ्यात्वसिद्धिः । तत्सिद्धौ च तद्दृष्टान्तेन दृग्दृश्यसंबन्धमिथ्यात्वसिद्धिरिति ।

ननु तद्दृष्टान्तेन दृग्दृश्यसम्बन्धमिथ्यात्वं न मया साध्यते येनान्योन्याश्रयः स्यात् । किंतु तद्दृष्टान्तेन त्वया दृग्दृश्ययोः सम्बन्धस्य अनध्यस्तत्वं न साधयितुं शक्यत इत्युच्यते इत्यपरितुष्यन्नाह **घटस्याभावइति ।।**

❖❖❖

**ನಚ ಇಚ್ಛಾಯಾಃ ತಜ್ಞಾನಜನ್ಯತ್ವಾದನ್ಯಃ ತತ್ಸಂಬಂಧೋ ನೇತಿ ಯುಕ್ತಂ। ಜ್ಞಾನೇ ಸನ್ನಿಕರ್ಷಾಧೀನಸ್ಯೇವ, ಸ್ಮೃತೌ ಅನುಭವಾಧೀನಸ್ಯೇವ ಚ ಇಚ್ಛಾಯಾಂ ಜ್ಞಾನಾಧೀನಸ್ಯ ವಿಷಯಸಂಬಂಧಸ್ಯಾನುಭವಾತ್ ।**

'ಇಚ್ಛೆಗೆ ಇಷ್ಯಮಾಣದಿಂದ ವಿಷಯತಾ ಸಂಬಂಧವಿದೆ ಎನ್ನುವುದು ಸರಿಯಲ್ಲ. ಘಟೇಚ್ಛೆಯು ಘಟ ಜ್ಞಾನಜನ್ಯವಾದ್ದರಿಂದ ತಜ್ಞಾನ ಜನ್ಯತ್ವವೇ ವಿಷಯ ಸಂಬಂಧ ಹೊರತು ಇದಕ್ಕಿಂತ ವ್ಯತಿರಿಕ್ತವಾಗಿ ವಿಷಯತಾ ಸಂಬಂಧವಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಜ್ಞಾನದಲ್ಲಿ ವಿಷಯಸನ್ನಿಕೃಷ್ಟ ಕರಣಜನ್ಯತ್ವವಿದೆ. ಆದರೂ ಅದನ್ನು ಜ್ಞಾನವಿಷಯಗಳ ಸಂಬಂಧ ಎನ್ನುವುದಿಲ್ಲ. ವಿಷಯಸನ್ನಿಕರ್ಷಾಧೀನವಾದ ವಿಷಯತಾ ಸನ್ನಿಕರ್ಷವನ್ನೇ

ವಿಷಯಸಂಬಂಧ ಎನ್ನುತ್ತಾರೆ. ಸ್ಮೃತಿಯಲ್ಲಿ ವಿಷಯ ಅನುಭವ ಜನಿತ ಸಂಸ್ಕಾರಜನ್ಯತ್ವವಿದೆ. ಆದರೂ ಅದಕ್ಕಿಂತ ವ್ಯತಿರಿಕ್ತವಾಗಿ ವಿಷಯತಾ ಎಂದ ವಿಷಯಸಂಬಂಧವನ್ನೇ ಸ್ಮೃತಿಯಲ್ಲಿ ಒಪ್ಪುತ್ತಾರೆ. ಹಾಗೇ ಇಚ್ಛೆಯಲ್ಲಿಯೂ ಕೂಡ ಜ್ಞಾನಜನ್ಯತ್ವಕ್ಕಿಂತ ಬೇರೆಯಾದ ವಿಷಯತಾ ಎಂಬ ವಿಷಯ ಸಂಬಂಧವನ್ನು ಒಪ್ಪಬೇಕು.

**ಅನ್ಯಥಾ ಘಟಪಟೌ ಇತಿ ಜ್ಞಾನಜನ್ಯಾಯಾಃ ಪಟೇಚ್ಛಾಯಾಃ ಘಟೇಯತ್ವಾಪಾತಾತ್ । ನಿತ್ಯೇಶ್ವರೇಚ್ಛಾಯಾಃ ವಿಷಯಾಸಂಬಂಧಾಪಾತಾಚ್ಚ । ಪುತ್ರಾದಿ ಧೀಜನ್ಯ ಸುಖಾದೇಃ ತದ್ವಿಷಯತ್ವಾಪಾತಾಚ್ಚ ।**

ಹೀಗೆ ಪರಂಪರಾಸಂಬಂಧವನ್ನೇ ಇಟ್ಟುಕೊಳ್ಳುವುದಾದರೆ 'ಘಟಪಟಗಳು' ಎಂಬ ಜ್ಞಾನದಿಂದ ಉಂಟಾಗುವ ಪಟೇಚ್ಛೆಗೆ ಪಟದಂತೆ ಘಟವೂ ವಿಷಯ ಎಂದಾದೀತು. ನಿತ್ಯವಾದ ಈಶ್ವರೇಚ್ಛೆ ವಿಷಯಜ್ಞಾನದಿಂದ ಜನ್ಯವಾಗುವುದಿಲ್ಲವಾದ್ದರಿಂದ ಅದಕ್ಕೆ ವಿಷಯದ ಸಂಬಂಧವೇ ಇಲ್ಲವೆಂದೂ ಆದೀತು. ಪುತ್ರದರ್ಶನ ಜನ್ಯಸುಖಕ್ಕೆ ಪುತ್ರನು ವಿಷಯ ಎಂದೂ ಆಪತ್ತಿ ಇದೆ.

**ಅಜ್ಞಾನಸ್ಯ ಚ ತಜ್ಜ್ಞಾನ ನಿವರ್ತ್ಯತ್ವಾತಿರಿಕ್ತ ತದ್ವಿಷಯತ್ವಾಭಾವೇ ತನ್ನಿವರ್ತ್ಯತ್ವಮೇವ ನ ಸ್ಯಾತ್ । ತಸ್ಯ ಸಮಾನವಿಷಯಕ ಜ್ಞಾನನಿವರ್ತ್ಯತ್ವಾತ್ । ಅಜ್ಞಾನಸ್ಯ ಅಂಧಕಾರವತ್ ಆಶ್ರಯಾಚ್ಛಾದಕತ್ವೇಽಪಿ ಸವಿಷಯತ್ವಸ್ಯ ಸ್ವೀಕೃತತ್ವಾಚ್ಚ ।**

'ಅಜ್ಞಾನವು ಸವಿಷಯಕವಾಗಿದೆ. ವಿಷಯಜ್ಞಾನನಿವರ್ತ್ಯವಾಗಿದೆ. ತದ್ವಿಷಯಕ ಅಜ್ಞಾನವು ತದ್ವಿಷಯಕ ಜ್ಞಾನದಿಂದಲೇ ನಿವರ್ತ್ಯವೆಂದು ನಿಯಮವಿದೆ. ಅದಕ್ಕೆ ವಿಷಯದಿಂದ ತದ್ವಿಷಯಕಜ್ಞಾನ ನಿವರ್ತ್ಯತ್ವವೇ ಸಂಬಂಧ ಹೊರತು ಅದಕ್ಕಿಂತ ಬೇರೆಯಾಗಿ ವಿಷಯತಾ ಎಂಬ ಸಂಬಂಧವೆ ಇಲ್ಲ' ಎಂದರೆ ಅಜ್ಞಾನಕ್ಕೆ ನಿವರ್ತ್ಯತ್ವವೆ ಇಲ್ಲ ಎಂದಾದೀತು. ಏಕೆಂದರೆ ಆಗ ಸಮಾನ ವಿಷಯಕ ಜ್ಞಾನವು ಅಜ್ಞಾನಕ್ಕೆ ನಿವರ್ತಕವೆನ್ನಲು ಬರುವುದಿಲ್ಲ.

ಅಜ್ಞಾನಕ್ಕೆ ಆಶ್ರಯದಿಂದ ತದಾಚ್ಛಾದಕತ್ವ ಸಂಬಂಧವಿದೆ. ಆದರೂ ವಿಷಯತ್ವವೆಂದು ಬೇರೆ ಸಂಬಂಧವನ್ನೂ ಅಂಗೀಕರಿಸುತ್ತಾರೆ. ಇಲ್ಲಿ ಘಟಾದಿ ವಿಷಯದಲ್ಲಿ ಆಚ್ಛಾದಕವಾಗಿ ಅಂಧಕಾರವಿದೆ ಎನ್ನುವಂತೆ ಇವನಲ್ಲಿ, ಇವನ ವಿಷಯದಲ್ಲಿ ಆಚ್ಛಾದಕವಾಗಿ ಅಜ್ಞಾನವಿದೆ ಎನ್ನುತ್ತಾರೆ. ಹೀಗೆ ಅಂಧಕಾರದಂತೆ ಆಚ್ಛಾದಕತ್ವವಿದ್ದರೂ ಅಜ್ಞಾನಕ್ಕೆ ವಿಷಯತಾಸಂಬಂಧವನ್ನು ಬೇರೆ ಅಂಗೀಕರಿಸುವುದರಿಂದ ಅಜ್ಞಾನಕ್ಕೆ ಆಚ್ಛಾದಕತ್ವವೇ ವಿಷಯ ಸಂಬಂಧ ಎನ್ನಲಾಗದು. ಅಂಧಕಾರಕ್ಕೆ ಸವಿಷಯತ್ವವನ್ನು ಒಪ್ಪಲು ಪ್ರಮಾಣವಿಲ್ಲ. ಆದರಿಂದ ವಿಷಯತಾ ಸಂಬಂಧವನ್ನು ಒಪ್ಪಿಲ್ಲ. ಅಜ್ಞಾನಕ್ಕೆ 'ಶಾಸ್ತ್ರಾರ್ಥಂ ನ ಜಾನಾಮಿ' ಶಾಸ್ತ್ರಾರ್ಥ ವಿಷಯದಲ್ಲಿ ನನಗೆ ಅಜ್ಞಾನವಿದೆ ಎಂದು ಅನುಭವವಿರುವುದರಿಂದ ಸವಿಷಯತ್ವವನ್ನು ಒಪ್ಪದಿರಲಾಗುವುದಿಲ್ಲ.

**ಯದಿ ಚ ಭಾವಾಭಾವಾದೇಃ ಸಂಬಂಧಾಂತರಮಂತರೇಣ ತದ್ವಿಶಿಷ್ಟ ವ್ಯವಹಾರ**

**ಜನನಯೋಗ್ಯಸ್ವರೂಪಾತ್ಮಕಃ ಸ್ವಭಾವಸಂಬಂಧೋ ವಾ ಅಸಂಬಂಧರೂಪಂ ಪ್ರತಿಯೋಗಿತ್ವಾದಿಕಂ, ವಾ ನಿಯಾಮಕಂ ಸತ್ ಸಂಬಂಧಕಾರ್ಯಕಾರಿ ತರ್ಹೀಹಾಪಿ ವಿಷಯತ್ವಂ ತಥೈವಾಸ್ತು ।**

'ಪ್ರತಿಯೋಗಿ-ಅಭಾವ ಮುಂತಾದವುಗಳಿಗೆ ಬೇರೆ ಸಂಯೋಗಾದಿ ಸಂಬಂಧವಿಲ್ಲದೆಯೆ 'ಘಟಪ್ರತಿಯೋಗಿಕ ಅಭಾವ' ಎಂದು ಮುಂತಾಗಿ ಘಟ ವಿಶಿಷ್ಟ ವ್ಯವಹಾರ ಜನನಯೋಗ್ಯ ಸ್ವರೂಪವೆಂಬ ಸ್ವಭಾವ ಸಂಬಂಧವಾಗಲಿ ಸಂಬಂಧರೂಪವಲ್ಲದ ಪ್ರತಿಯೋಗಿತ್ವಾದಿಗಳಾಗಲಿ ವಿಶಿಷ್ಟ ವ್ಯವಹಾರಕ್ಕೆ ನಿಯಾಮಕವಾಗುತ್ತದೆ, ಸಂಬಂಧಕಾರ್ಯಕಾರಿಯಾಗುತ್ತದೆ' ಎನ್ನುವುದಾದರೆ ಜ್ಞಾನಜ್ಞೇಯಗಳಿಗೂ ಬೇರೆ ಸಂಬಂಧವಿಲ್ಲದೆ 'ಘಟಜ್ಞಾನ' ಎಂದು ವ್ಯವಹಾರಜನನ ಯೋಗ್ಯವಾದ ಸ್ವರೂಪವೆಂಬ ಸ್ವಭಾವ ಸಂಬಂಧವಾಗಲಿ, ಸಂಬಂಧರೂಪವಲ್ಲದ ವಿಷಯತಾವಾಗಲಿ ವಿಶಿಷ್ಟವ್ಯವಹಾರಕ್ಕೆ ನಿಯಾಮಕವಾಗುತ್ತದೆ ಸಂಬಂಧಕಾರ್ಯಕಾರಿಯಾಗುತ್ತದೆ ಎನ್ನೋಣ.

**ಭಾವಾಭಾವಾದೇರಪಿ ಸಂಬಂಧೋ ಮಿಥ್ಯೈವೇತಿ ಚೇನ್ನ । ಪ್ರಪಂಚಮಿಥ್ಯಾತ್ವಸಿದ್ಧೇಃ ಪ್ರಾಕ್ ತದಸಿದ್ಧ್ಯಾ ಅನ್ಯೋನ್ಯಾಶ್ರಯಾತ್ ।**

'ಪ್ರತಿಯೋಗಿ ಅಭಾವ ಮುಂತಾದವುಗಳಿಗೂ ಸಂಬಂಧವು ಮಿಥ್ಯೆಯೆ ಆಧ್ಯಾಸಿಕ ಸಂಬಂಧವೆ' ಎನ್ನಲಾಗದು. ಪ್ರಪಂಚಮಿಥ್ಯಾತ್ವವು ಸಿದ್ಧವಾಗುವುದಕ್ಕೆ ಮುನ್ನ ಈಗ ಸಂಬಂಧಮಿಥ್ಯಾತ್ವ ಸಿದ್ಧವಾಗದು. ಅದರಿಂದ ಅನ್ಯೋನ್ಯಾಶ್ರಯ. ಸಂಬಂಧವು ಮಿಥ್ಯಾ ಎಂದು ಸಿದ್ಧವಾದರೆ ದೃಶ್ಯತ್ವಾದಿ ಹೇತುಗಳಿಗೆ ಅನುಕೂಲತರ್ಕ ಲಭಿಸುವುದರಿಂದ ಪ್ರಪಂಚ ಮಿಥ್ಯಾತ್ವಸಿದ್ಧಿ, ಅದು ಸಿದ್ಧವಾದರೆ ಪ್ರಪಂಚಾಂತರ್ಗತ ಸಂಬಂಧ ಮಿಥ್ಯಾತ್ವ ಸಿದ್ಧಿ ಎಂದು.

**ಘಟಸ್ಯಾಭಾವ ಇತ್ಯಾದೌ ಅಭಾವ ಸಮಸತ್ತಾಕಸಂಬಂಧವತ್ ಘಟಸ್ಯ ಜ್ಞಾನಂ ಇತ್ಯತ್ರಾಪಿ ಜ್ಞಾನಸಮಸತ್ತಾಕ ಸಂಬಂಧಸ್ಯ ಸ್ವೀಕಾರ್ಯತ್ವಾಚ್ಚ ।**

'ಘಟಸ್ಯ ಅಭಾವಃ' ಎಂದು ಮುಂತಾಗಿ ಅಭಾವಸಮಸತ್ತಾಕವಾದ ಸಂಬಂಧ ಕಾಣುವಂತೆ 'ಘಟಸ್ಯ ಜ್ಞಾನಂ' ಎಂಬಲ್ಲಿಯೂ ಜ್ಞಾನ ಸಮಸತ್ತಾಕವಾದ ಪಾರಮಾರ್ಥಿಕ ಸಂಬಂಧವೇ ಕಾಣುತ್ತದೆ ಎಂದು ಒಪ್ಪಬೇಕು. ಜ್ಞಾನವು ಚೈತನ್ಯವಾದ್ದರಿಂದ ಪಾರಮಾರ್ಥಿಕ. ತತ್‌ಸಮಸತ್ತಾಕವಾದ ವಿಷಯಸಂಬಂಧವು ಪಾರಮಾರ್ಥಿಕ ಎಂದು ಒಪ್ಪಬೇಕು ಮಿಥ್ಯೆ ಎನ್ನಲಾಗದು.



**अस्तु वा संयोगादिवत् विषयत्वमपि मिथ्यैव । न च तावता प्रस्तुत दृश्यमिथ्यात्वसिद्धिः । ज्ञानस्येव ज्ञेयस्य सत्यत्वेऽपि तत्संबंध मिथ्यात्वोपपत्तेः । नच संयोगादिरपि त्वन्मते तात्त्विकः । नच तावता**

**दंडे चैत्रोऽध्यस्तः । नचाध्यासिकसंबंधोऽपि तात्त्विकः येनेच्छादौ क्लृप्तसंबंधत्यागेन ज्ञाने स आश्रीयेत । नचाभावादेः प्रतियोग्यादिना संबंधोऽस्ति, न तु ज्ञानस्य ज्ञेयेनेति युक्तम् । नियामकाभावात् । दृग्दृश्ययोः संबंधो नेत्येतद्वाक्यजज्ञानस्य स्वज्ञेयेन, श्रवणमननादीनां च श्रोतव्यादिरूपेण ब्रह्मणा, चरमसाक्षात्कारस्य च साक्षात्कर्तव्येन ब्रह्मणा असंबंधेन स्वक्रियादिविरोधापाताच्च । नहि दृग्दृश्यसंबंधो नेति वाक्यजज्ञाने दृग्दृश्यसंबंधाभावः चरमसाक्षात्कारादौ च ब्रह्माध्यस्तम् । ब्रह्मणि अध्यस्तस्य तत्साक्षात्कारत्वे घटसाक्षात्कारस्यापि तत्त्वापातात् । धर्मादौ तत्तात्पर्यादिरनध्यासाच्च । इहापि ज्ञेये ज्ञानाध्यासापाताच्च । एवं च,**

**दृग्दृश्ययोर्नसंबंध इति वाक्योत्थसंविदि ।**
**अनध्यासात्तदर्थस्य संबंधोऽन्यस्तयोर्मतः ।।**

---

**अस्तुवेति** । न चाध्यस्तसम्बन्धनिरूपकत्वेन मिथ्यात्वसिद्धिः । दृश्येव व्यभिचारादिति भावः ।

ननु मिथ्याभूतसम्बन्धप्रतियोगिनोर्मध्ये एकमपरस्मिन्नध्यस्तमिति व्याप्तिः । तत्र च ब्रह्मणि व्यभिचारो न दोष इत्यत आह **नचेति** ।। मिथ्याभूतसंयोगप्रतियोगिनोः ब्रह्मण्यध्यस्तत्वेऽपि परस्परमनध्यासादित्यर्थः ।

ननु मिथ्याभूतसम्बन्धप्रतियोगित्वेन नाध्यस्तत्वनियमः, किञ्च आध्यासिकसम्बन्धप्रतियोगित्वेन अन्यतरस्य अध्यस्तत्वनियमः स्यादित्यत आह **नचाध्यासिक इति** ।। तथा च विशेषाभावात् (विशेषणाभावात्) क्लृप्तपरित्यागे गौरवाच्च तस्य अद्यापि असिद्धिरेवेति भावः ।

ननु दृग्दृश्ययोः सम्बन्धान्तरानिरूपणात् आध्यासिकसम्बन्ध एव वाच्य इत्याशङ्क्य निराकरोति **नचाभावादेरिति** ।। सम्बन्ध साधक विशिष्ट

प्रतीतेरुभयत्राविशेषादिति भावः । यद्यपि एतत् प्रागव आशंक्य निराकृतम् । तथापि उदाहरणोत्तरमुखेन तस्यैव दृढीकरणादवैयर्थ्यमिति ध्येयम् । **ब्रह्मणेति** । एवमपि त्वदभिमताध्यासिकसम्बन्धानपाय इति भावः ।

ननु ब्रह्मणि तत्साक्षात्कारोऽध्यस्त इति वदता यो यत्साक्षात्कारः स तत्राध्यस्त इति विवक्षितम् ? उत यद्विषयकम् तत् तत्राध्यस्तमिति विकल्प्य आद्यं निराचष्टे **ब्रह्मण्यध्यस्तस्येति**।। द्वितीयं निराह **धर्मादाविति** ।। **इहापीति** ।। घटादावपीत्यर्थः ।



**ಅಸ್ತು ವಾ ಸಂಯೋಗಾದಿವತ್ ವಿಷಯತ್ವಮಪಿ ಮಿಥ್ಯೈವ । ನ ಚ ತಾವತಾ ಪ್ರಸ್ತುತ ದೃಶ್ಯಮಿಥ್ಯಾತ್ವಸಿದ್ಧಿಃ । ಜ್ಞಾನಸ್ಯೇವ ಜ್ಞೇಯಸ್ಯ ಸತ್ಯತ್ವೇಽಪಿ ತತ್‌ಸಂಬಂಧಸ್ಯ ಮಿಥ್ಯಾತ್ವೋಪಪತ್ತೇಃ । ನಚ ಸಂಯೋಗಾದಿರಪಿ ತ್ವನ್ಮತೇ ತಾತ್ತ್ವಿಕಃ । ನಚ ತಾವತಾ ದಂಡೇ ಚೈತ್ರೋಽಧ್ಯಸ್ತಃ ।**

ಅಥವಾ ಸಂಯೋಗ ಸಮವಾಯಗಳಂತೆ ವಿಷಯತ್ವರೂಪ ಸಂಬಂಧವೂ ಮಿಥ್ಯಾ ಎಂದು ಒಪ್ಪೋಣ. ಅಷ್ಟರಿಂದಲೇ ಪ್ರಸ್ತುತವಾದ ದೃಶ್ಯಪ್ರಪಂಚವು ಮಿಥ್ಯಾ ಎನ್ನಲು ಬರುವುದಿಲ್ಲ. ಏಕೆಂದರೆ ಜ್ಞಾನದಂತೆ ಜ್ಞೇಯವೂ ಸತ್ಯ ಎಂದೊಪ್ಪಿದರೂ ಅವುಗಳ ಸಂಬಂಧವು ಮಿಥ್ಯಾ ಆಗಿರಬಹುದು. ನಿನ್ನ ಮತದಲ್ಲಿ ಸಂಯೋಗ ಸಮವಾಯಗಳೂ ತಾತ್ತ್ವಿಕವಲ್ಲ. ಅಧ್ಯಸ್ತವೇ ಆಗಿದೆ.. ಅಷ್ಟರಿಂದಲೇ ದಂಡದಲ್ಲಿ ಚೈತ್ರನು ಅಧ್ಯಸ್ತನಾಗಿಲ್ಲ ತಾನೆ?

**ನಚ ಆಧ್ಯಾಸಿಕ ಸಂಬಂಧೋಽಪಿ ತಾತ್ತ್ವಿಕಃ । ಯೇನ ಇಚ್ಛಾದೌ ಕ್ಲೃಪ್ತಸಂಬಂಧ ತ್ಯಾಗೇನ ಜ್ಞಾನೇ ಸ ಆಶ್ರೀಯೇತ ।**

ಇಚ್ಛಾ ಇಷ್ಯಪ್ರಮಾಣಗಳ ಸಂಬಂಧವು ಅತಾತ್ತ್ವಿಕವಾಗಿದ್ದು ಆಧ್ಯಾಸಿಕ ಸಂಬಂಧ ತಾತ್ತ್ವಿಕವಾಗಿದ್ದರೆ ಇಚ್ಛಾ ಇಷ್ಯಮಾಣಗಳಲ್ಲಿ ಕ್ಲೃಪ್ತವಾದ ಸಂಬಂಧವನ್ನು ಬಿಟ್ಟು ಜ್ಞಾನಜ್ಞೇಯಗಳಿಗೆ ಆಧ್ಯಾಸಿಕ ಸಂಬಂಧವನ್ನು ಸ್ವೀಕರಿಸಿ, ತಾತ್ತ್ವಿಕ ಸಂಬಂಧಪ್ರತಿಯೋಗಿಯು ಮಿಥ್ಯಾ ಆಗಿರುತ್ತದೆ ಎಂದು ಜ್ಞೇಯಕ್ಕೆ ಮಿಥ್ಯಾತ್ವವನ್ನು ಹೇಳಬಹುದಿತ್ತೇನೋ! ಆದರೆ ಆಧ್ಯಾಸಿಕ ಸಂಬಂಧವು ಕೂಡ ತಾತ್ತ್ವಿಕವಲ್ಲ. ಅದನ್ನು ಜ್ಞಾನ ಜ್ಞೇಯಗಳಲ್ಲಿ ಒಪ್ಪಲು ಏನೂ ಕಾರಣವೆ ಇಲ್ಲ.

**ನಚ ಅಭಾವಾದೇಃ ಪ್ರತಿಯೋಗ್ಯಾದಿನಾ ಸಂಬಂಧೋಽಸ್ತಿ । ನ ತು ಜ್ಞಾನಸ್ಯ ಜ್ಞೇಯೇನ ಇತಿ ಯುಕ್ತಂ । ನಿಯಾಮಕಾಭಾವಾತ್ ।**

'ಪ್ರತಿಯೋಗಿ ಅಭಾವಗಳಿಗೆ ಸಂಬಂಧವಿದೆ, ಜ್ಞಾನಜ್ಞೇಯಗಳಿಗೆ ಸಂಬಂಧವಿಲ್ಲ' ಎಂದು ಹೇಳುವುದು ಯುಕ್ತವಲ್ಲ. ಹಾಗೆ ಹೇಳಲು ನಿಯಾಮಕವಿಲ್ಲ.

**ದೃಗ್‌ದೃಶ್ಯಯೋಃ ಸಂಬಂಧೋ ನೇತ್ಯೇತದ್‌ವಾಕ್ಯಜಜ್ಞಾನಸ್ಯ ಸ್ವಜ್ಞೇಯೇನ, ಶ್ರವಣಮನನಾದೀನಾಂ ಚ ಶ್ರೋತವ್ಯಾದಿರೂಪೇಣ ಬ್ರಹ್ಮಣಾ, ಚರಮಸಾಕ್ಷಾತ್ಕಾರಸ್ಯ ಚ ಸಾಕ್ಷಾತ್ ಕರ್ತವ್ಯೇನ ಬ್ರಹ್ಮಣಾ ಅಸಂಬಂಧೇನ ಸ್ವಕ್ರಿಯಾದಿ ವಿರೋಧಾಪಾತಾಚ್ಚ ।**

'ದೃಕ್‌ದೃಶ್ಯಗಳಿಗೆ ಸಂಬಂಧವಿಲ್ಲ' ಎಂಬ ವಾಕ್ಯದಿಂದ ಬರುವ ಜ್ಞಾನಕ್ಕೆ ತನ್ನ ಜ್ಞೇಯದಲ್ಲಿ ಸಂಬಂಧವಿಲ್ಲ ಎನ್ನುವಿ. ಆದರೂ ನೀನು ವಾಕ್ಯ ಪ್ರಯೋಗ ಮಾಡುವಿ. ಇದು ಸ್ವಕ್ರಿಯಾ ವಿರೋಧ. ಶ್ರವಣ ಮನನಾದಿಗಳಿಗೂ ಶ್ರೋತವ್ಯಮಂತವ್ಯರೂಪಿ ಬ್ರಹ್ಮನಿಗೂ ಸಂಬಂಧ ಇಲ್ಲ ಎನ್ನುವಿ, ಶ್ರವಣಮನನಗಳನ್ನು ಮಾಡುವಿ. ಚರಮಸಾಕ್ಷಾತ್ಕಾರಕ್ಕೂ ಸಾಕ್ಷಾತ್‌ಕರ್ತವ್ಯನಾದ ಬ್ರಹ್ಮನಿಗೂ ಸಂಬಂಧವಿಲ್ಲ ಎನ್ನುವಿ, ಸಾಕ್ಷಾತ್ಕಾರಕ್ಕಾಗಿ ಶ್ರವಣಮನನಗಳನ್ನು ಮಾಡುವಿ, ಇವು ಸ್ವಕ್ರಿಯಾ ವಿರೋಧಗಳು.

**ನಹಿ ದೃಗ್‌ದೃಶ್ಯಸಂಬಂಧೋ ನೇತಿ ವಾಕ್ಯಜನ್ಯಜ್ಞಾನೇ ದೃಗ್‌ದೃಶ್ಯಸಂಬಂಧಾಭಾವಃ, ಚರಮಸಾಕ್ಷಾತ್ಕಾರಾದೌ ಚ ಬ್ರಹ್ಮ ಅಧ್ಯಸ್ತಂ ।**

ಏಕೆಂದರೆ ಜ್ಞಾನಜ್ಞೇಯಗಳಿಗೆ ಸಂಬಂಧವಿಲ್ಲ' ಎಂಬ ವಾಕ್ಯದಿಂದ ಬರುವ ಜ್ಞಾನದಲ್ಲಿ ಜ್ಞಾನಜ್ಞೇಯಗಳ ಸಂಬಂಧಾಭಾವವು ಅಧ್ಯಸ್ತವಾಗಿಲ್ಲ. ಚರಮಸಾಕ್ಷಾತ್ಕಾರಾದಿಗಳಲ್ಲಿ ಬ್ರಹ್ಮ ಅಧ್ಯಸ್ತವಾಗಿಲ್ಲ.

**ಬ್ರಹ್ಮಣಿ ಅಧ್ಯಸ್ತಸ್ಯ ತತ್ ಸಾಕ್ಷಾತ್ಕಾರತ್ವೇ ಘಟಸಾಕ್ಷಾತ್ಕಾರಸ್ಯಾಪಿ ತತ್ತ್ವಾಪಾತಾತ್ ।**

ಬ್ರಹ್ಮನಲ್ಲಿ ಅಧ್ಯಸ್ತವಾದ್ದರಿಂದ ಬ್ರಹ್ಮಸಾಕ್ಷಾತ್ಕಾರಕ್ರಿಯೆಯು ಬ್ರಹ್ಮಸಾಕ್ಷಾತ್ಕಾರವೆನಿಸಿದೆ— ಹೊರತು ಸಾಕ್ಷಾತ್ಕಾರದಲ್ಲಿ ಬ್ರಹ್ಮ ಅಧ್ಯಸ್ತವಾಗಿಲ್ಲ. ಬ್ರಹ್ಮಸಾಕ್ಷಾತ್ಕಾರವು ಬ್ರಹ್ಮಸಾಕ್ಷಾತ್ಕಾರವೆನಿಸಲು ಸಾಕ್ಷಾತ್ಕಾರದಲ್ಲಿ ಬ್ರಹ್ಮ ಅಧ್ಯಸ್ತವಾಗಬೇಕಿಲ್ಲ. ಬ್ರಹ್ಮನಲ್ಲಿ ಸಾಕ್ಷಾತ್ಕಾರ ಅಧ್ಯಸ್ತವಾದರೂ ಸಾಕು ಎನ್ನುವುದಾದರೆ ಘಟಸಾಕ್ಷಾತ್ಕಾರಕ್ರಿಯೆಯು ಕೂಡ ಬ್ರಹ್ಮನಲ್ಲಿ ಅಧ್ಯಸ್ತವಾದ್ದರಿಂದ ಘಟಸಾಕ್ಷಾತ್ಕರವು ಬ್ರಹ್ಮಸಾಕ್ಷಾತ್ಕರವೆನಿಸೀತು.

**ಧರ್ಮಾದೌ ತತ್‌ತಾತ್ಪರ್ಯಾದೇಃ ಅನಧ್ಯಾಸಾಚ್ಚ । ಇಹಾಪಿ ಜ್ಞೇಯೇ ಜ್ಞಾನಾಧ್ಯಾಸಾಪಾತಾಚ್ಚ । ಏವಂ ಚ,**

**ದೃಗ್‌ದೃಶ್ಯಯೋರ್ನ ಸಂಬಂಧ ಇತಿ ವಾಕ್ಯೋತ್ಥ ಸಂವಿದಿ ।**
**ಅನಧ್ಯಾಸಾತ್ ತದರ್ಥಸ್ಯ ಸಂಬಂಧೋಽನ್ಯಸ್ತಯೋರ್ಮತಃ ॥**

ಬ್ರಹ್ಮ ಸಾಕ್ಷಾತ್ಕಾರವು ಬ್ರಹ್ಮನಲ್ಲಿ ಅಧ್ಯಸ್ತವಾಗಿದೆ ಎಂದರೆ ಅದೇರೀತಿ ಧರ್ಮಾದಿಗಳಲ್ಲಿರುವ

ವೇದತಾತ್ಪರ್ಯವು ಧರ್ಮಾದಿಗಳಲ್ಲಿ ಅಧ್ಯಸ್ತವೆಂದಾದೀತು. ಪ್ರಕೃತವಾದ ಪ್ರಪಂಚ ಜ್ಞಾನವು ಜ್ಞೇಯವಾದ ಪ್ರಪಂಚದಲ್ಲಿ ಅಧ್ಯಸ್ತವೆಂದೂ ಹೇಳಬೇಕಾದೀತು. ಜ್ಞಾನದಲ್ಲಿ ಪ್ರಪಂಚ ಅಧ್ಯಸ್ತವಲ್ಲ ಎನ್ನಬೇಕಾದೀತು. ಇದರ ಒಟ್ಟು ಸಾರಾಂಶವಿಷ್ಟು— 'ದೃಗ್‌ದೃಶ್ಯಗಳಿಗೆ ಸಂಬಂಧವಿಲ್ಲ' ಎನ್ನುವ ವಾಕ್ಯದಿಂದ ಬರುವ ಜ್ಞಾನದಲ್ಲಿ ದೃಗ್‌ದೃಶ್ಯಸಂಬಂಧಾಭಾವವು ಅಧ್ಯಸ್ತವಾಗದಿರುವುದರಿಂದ ಆಧ್ಯಾಸಿಕ ಸಂಬಂಧಕ್ಕಿಂತ ವ್ಯತಿರಿಕ್ತವಾದ ವಿಷಯ ವಿಷಯಿಭಾವಸಂಬಂಧವನ್ನೇ ದೃಗ್‌ದೃಶ್ಯಗಳಿಗೆ ಒಪ್ಪಬೇಕು' ಎಂದು.



**यद्यपि ज्ञानं प्रकाशस्तथापीच्छादिवदांतरत्वेन प्रदीपवैलक्षण्यात् परोक्षवृत्तौ दर्शनाच्च विप्रकृष्टेनापि प्रकाश्येन संबंधो युक्तः । अन्यथा दीपवदेवाध्यासिकसंबंधो न स्यात् ।**

**किंच तवापि मते ज्ञेयस्य न स्वज्ञानेऽध्यस्तत्वनियमः । अनध्यस्तस्य तुच्छस्य, अविद्यानिवृत्तिः पंचमप्रकारेति मतेऽविद्यानिवृत्ते र्भावाद्वैतमते अभावस्य चादृग्रूपत्वेऽपि स्वज्ञानेऽनध्यासात् । अपरोक्षानुभवैकरसे ब्रह्मण्यध्यस्तस्य व्यावहारिकस्यातीतादेर्नित्यातींद्रियस्य च परोक्षानुभवरूपे स्वज्ञानेऽनध्यासात् । स्मर्यमाणस्य च स्मृतिरूपे वृत्त्यात्मके स्वज्ञानेऽनध्यासात् । प्रातिभासिकस्य च प्रातिभासिके स्वज्ञाने, व्यावहारिकस्य च वर्तमानघटादेर्व्यावहारिके स्वज्ञानेऽनध्यासात् । त्वन्मतेऽर्थवद् भ्रमरूपज्ञानस्यापि कल्पितत्वात्, अध्यस्ततुल्यत्वेन कल्पितस्य चानधिष्ठानत्वात् प्रातिभासिकात् पूर्वमसत्यास्तत्प्रतीतेरधिष्ठानत्वायोगाच्च । त्वयापि रूप्यादिकमिदमंशावच्छिन्नचैतन्येऽध्यस्तम्, रूप्याकाराविद्यावृत्तिप्रतिबिंबितेन तु चैतन्येन प्रकाशत इत्यंगीकाराच्च । रूप्यादेः स्वज्ञानेऽध्यस्तत्वेऽधिष्ठानज्ञानाज्ञानाभ्याम् अध्यास जन्मनिवृत्त्योर्नियतत्वाद् रूप्यज्ञानस्याज्ञानज्ञानाभ्यां रूप्यभ्रमजन्मनिवृत्त्योः प्रसंगाच्च । ज्ञानं रूप्यमिति धीप्रसंगाच्च ।**

**घटादेः स्वसन्निकृष्टेंद्रियजन्यात् स्वज्ञानात् पूर्वं सत्त्वेन स्वज्ञानेऽध्यासायोगाच्च ।**

**ननु या घटसन्निकर्षजा वृत्तिर्न तया घटः प्रकाश्यः । येन च प्रकाश्यः घटाधिष्ठानचैतन्येन, न तद् घटसन्निकर्षजन्यमिति चेन्न । त्वन्मतेऽपि वृत्तेरेवाज्ञानविरोधित्वात्। अज्ञाननिवर्तकादन्यस्य च ज्ञानस्यानुपलंभात् । त्वयापि,**

**घटोऽयमित्यसावुक्तिराभासस्य प्रसादतः ।**
**विज्ञातो घट इत्युक्तिर्ब्रह्मानुभवतो भवेत् ।।**

**इति वदता वृत्तिप्रतिबिंबितस्य घटानधिष्ठानस्य चैतन्यस्यैव घटानुभवत्वोक्तेश्च ।**

**किंच दृश्यत्वान्यथानुपपत्त्या मिथ्यात्वमित्यर्थापत्तिर्विवक्षिता ? किंवा सत्यत्वे दृश्यत्वं न स्यादित्यनुकूलतर्कमात्रम् ? नाद्यः । तत्सामग्र्यभावात् । आक्षेप्यस्योपपादकत्वं प्रमाणाविरुद्धत्वं चाक्षेपकस्यानुपपद्यमानत्वं प्रमितत्वं चेति ह्यर्थापत्तिसामग्री । नचाक्षेप्यं संबंधिमिथ्यात्वमाक्षेपकस्य संबंधस्योपपादकम् । किंतु प्रतिकूलमेव ।**

---

ननु ज्ञानस्यापि प्रकाशत्वेन दीपादिवत् विप्रकर्षे प्रकाश्येन कथं सम्बन्ध इति शंकते **यद्यपीति ।।** **तथापीति ।।** शब्दानुगमो न त्वर्थानुगम इति भावः ।। **परोक्षवृत्ताविति ।।** यद्यपि परोक्षवृत्तेः तदाकारत्वमात्रं न तद्विषयत्वं वक्तुं शक्यम्, तथापि परोक्षवृत्त्यनन्तरं वह्निमनुमिनोमीत्यनुभवबलेन सविषयत्वमावश्यकमिति भावः । **विप्रकृष्टेनेति ।।** स्वमध्ये मूर्तवतेत्यर्थः । **अन्यथेति** । प्रदीपवैधर्म्यानंगीकार इत्यर्थः । **अज्ञाननिवर्तकादन्यस्येति** । नच तमेव भान्तमिति श्रुत्या उपलभ्यत इति वाच्यम् । तच्छ्रुतेरन्यार्थत्वस्य वक्ष्यमाणत्वादिति भावः । **आभासस्येति ।**

वृत्तिप्रतिबिम्बितचैतन्यस्येत्यर्थः । **किंतु प्रतिकूलमेवेति ।** सम्बन्धस्यापि किंचित् प्रतिसंबन्धित्वेना मिथ्यत्वस्य तद्भावरूपत्वादिति भावः ।।



**ಯದ್ಯಪಿ ಜ್ಞಾನಂ ಪ್ರಕಾಶಃ। ತಥಾಪಿ ಇಚ್ಛಾದಿವತ್ ಆಂತರತ್ವೇನ ಪ್ರದೀಪ ವೈಲಕ್ಷಣ್ಯಾತ್ ಪರೋಕ್ಷವೃತ್ತೌ ದರ್ಶನಾಚ್ಚ ವಿಪ್ರಕೃಷ್ಟೇನಾಪಿ ಪ್ರಕಾಶ್ಯೇನ ಸಂಬಂಧೋ ಯುಕ್ತಃ। ಅನ್ಯಥಾ ದೀಪವದೇವ ಆಧ್ಯಾಸಿಕಸಂಬಂಧೋ ನ ಸ್ಯಾತ್ ।**

ಯದ್ಯಪಿ ಜ್ಞಾನವು ದೀಪದಂತೆ ವಿಷಯವನ್ನು ಪ್ರಕಾಶಗೊಳಿಸುತ್ತದೆ. ಆದರೂ 'ಪ್ರಕಾಶ' ಎಂದು ಶಬ್ದಸಾಮ್ಯವೇ ಹೊರತು ಅರ್ಥ ಸ್ವಾಮ್ಯವಿಲ್ಲ. ಇಚ್ಛಾದಿಗಳಂತೆ ಜ್ಞಾನವೂ ಅಂತರಂಗದಲ್ಲಿರುವುದರಿಂದ ಬಾಹ್ಯ ದೀಪಕ್ಕಿಂತ ವಿಲಕ್ಷಣವಾಗಿದೆ. ಆದರಿಂದ ದೀಪವು ವಸ್ತುವನ್ನು ಪ್ರಕಾಶಗೊಳಿಸಲು ವಸ್ತುಸಂನಿಕೃಷ್ಟವಾಗಬೇಕೆಂದು ನಿಯಮವಿದ್ದರೂ ಜ್ಞಾನವು ವಸ್ತುವನ್ನು ಬೆಳಗಿಸಲು ಸನ್ನಿಕರ್ಷವು ಬೇಕಾಗುವುದಿಲ್ಲ. ಪರೋಕ್ಷಜ್ಞಾನವು ವಿಪ್ರಕೃಷ್ಟವಾದ ಸ್ವರ್ಗನರಕಾದಿ ಜ್ಞೇಯವನ್ನು ಗೋಚರಿಸುವುದೂ ಕಂಡಿದೆ. ಆದರಿಂದ ವಿಪ್ರಕೃಷ್ಟವಾದ ವಿಷಯದಿಂದಲೂ ಜ್ಞಾನಕ್ಕೆ ವಿಷಯವಿಷಯಿಭಾವಸಂಬಂಧವು ಯುಕ್ತ. ಹೀಗೆ ಹೇಳದಿದ್ದರೆ ದೀಪದಂತೆ ಜ್ಞಾನಕ್ಕೂ ವಿಷಯಸನ್ನಿಕರ್ಷ ಬೇಕೆಂದು ಆಗ್ರಹಿಸಿದರೆ ದೀಪದಲ್ಲಿ ವಸ್ತುವಿನ ಅಧ್ಯಾಸವಿಲ್ಲದಿರುವುದರಿಂದ, ಆದರಂತೇ ಜ್ಞಾನಕ್ಕೂ ಅಧ್ಯಾಸ ಸಂಬಂಧವಿಲ್ಲ ಎಂದಾದೀತು.

**ಕಿಂಚ ತವಾಪಿ ಮತೇ ಜ್ಞೇಯಸ್ಯ ನ ಸ್ವಜ್ಞಾನೇ ಅಧ್ಯಸ್ತತ್ವನಿಯಮಃ। ಅನಧ್ಯಸ್ತಸ್ಯ ತುಚ್ಛಸ್ಯ, ಅವಿದ್ಯಾನಿವೃತ್ತಿಃ ಪಂಚಮಪ್ರಕಾರಾ' ಇತಿಮತೇ ಅವಿದ್ಯಾನಿವೃತ್ತೇಃ, ಭಾವಾದ್ವೈತಮತೇ ಅಭಾವಸ್ಯ ಚ ಅದೃಗ್ರೂಪತ್ವೇಽಪಿ ಸ್ವಜ್ಞಾನೇ ಅನಧ್ಯಾಸಾತ್ ।**

ನಿನ್ನ ಮತದಲ್ಲಿಯೂ ಜ್ಞೇಯವು ತನ್ನ ಜ್ಞಾನದಲ್ಲಿ ಅಧ್ಯಸ್ತವಾಗಿರುತ್ತದೆ ಎಂದು ನಿಯಮವಿಲ್ಲ. ಅಧ್ಯಸ್ತವಲ್ಲದ ಜ್ಞಾನರೂಪವಲ್ಲದ ಅತ್ಯಂತಾಸತ್ತಿಗೆ ತನ್ನ ಜ್ಞಾನದಲ್ಲಿ ಅಧ್ಯಾಸವಿಲ್ಲ. ಅವಿದ್ಯಾನಿವೃತ್ತಿಯು ಸದಸದ್ವಿಲಕ್ಷಣರೂಪ ಚತುರ್ಥಪ್ರಕಾರಕ್ಕಿಂತ ಅನ್ಯ, ಪಂಚಮಪ್ರಕಾರ, ಸದಸದದ್ವಿಲಕ್ಷಣವಿಲಕ್ಷಣ ಎನ್ನುವವರ ಮತದಲ್ಲಿ ಮಿಥ್ಯಾ ಅಲ್ಲ. ಅದು ಜ್ಞಾನರೂಪ ವಲ್ಲದಿದ್ದರೂ ಬ್ರಹ್ಮನಲ್ಲಿ ಅಧ್ಯಸ್ತವಲ್ಲ. 'ಭಾವಪದಾರ್ಥವು ಬ್ರಹ್ಮ ಒಂದೇ ಸತ್ಯ. ಅಭಾವಗಳು ಬ್ರಹ್ಮ ಭಿನ್ನವಾದರೂ ಸತ್ಯ, ಅನೇಕ' ಎಂಬ ಭಾವಾದ್ವೈತಮತದಲ್ಲಿ ಅಭಾವವು ಜ್ಞಾನರೂಪವಲ್ಲ. ಅದರ ಜ್ಞಾನದಲ್ಲಿ ಅಧ್ಯಸ್ತವಲ್ಲ.

**ಅಪರೋಕ್ಷಾನುಭವೈಕರಸೇ ಬ್ರಹ್ಮಣಿ ಅಧ್ಯಸ್ತಸ್ಯ ವ್ಯಾವಹಾರಿಕಸ್ಯ ಅತೀತಾದೇಃ ನಿತ್ಯಾತೀಂದ್ರಿಯಸ್ಯ ಚ ಪರೋಕ್ಷಾನುಭವರೂಪೇ ಸ್ವಜ್ಞಾನೇ ಅನಧ್ಯಾಸಾತ್ ।**

ಅಪರೋಕ್ಷಾನುಭವ ಸ್ವರೂಪ ಬ್ರಹ್ಮನಲ್ಲಿ ಅಧ್ಯಸ್ತವಾಗಿದ್ದು ವ್ಯಾವಹಾರಿಕವಾಗಿರುವ ಅತೀತಾದಿಯೂ ನಿತ್ಯಾತೀಂದ್ರಿಯವೂ ಪರೋಕ್ಷಾನುಭವರೂಪವಾದ ತನ್ನ ಜ್ಞಾನದಲ್ಲಿ ಅಧ್ಯಾಸ ಹೊಂದುವುದಿಲ್ಲ.

**ಸ್ಮರ್ಯಮಾಣಸ್ಯ ಚ ಸ್ಮೃತಿರೂಪೇ ವೃತ್ತ್ಯಾತ್ಮಕೇ ಸ್ವಜ್ಞಾನೇ ಅನಧ್ಯಾಸಾತ್। ಪ್ರಾತಿಭಾಸಿಕಸ್ಯ ಚ ಪ್ರಾತಿಭಾಸಿಕೇ ಸ್ವಜ್ಞಾನೇ ವ್ಯಾವಹಾರಿಕಸ್ಯ ಚ ವರ್ತಮಾನಘಟಾದೇಃ ವ್ಯಾವಹಾರಿಕೇ ಸ್ವಜ್ಞಾನೇಽನಧ್ಯಾಸಾತ್ ।**

ಸ್ಮರ್ಯಮಾಣವಾದ ಅತೀತಾದಿಯನ್ನು ವೃತ್ತ್ಯಾತ್ಮಕವಾದ ಸ್ಮೃತಿರೂಪವಾದ ತನ್ನ ಜ್ಞಾನದಲ್ಲಿ ಅಧ್ಯಾಸ ಮಾಡುವುದಿಲ್ಲ. ಆ ಜ್ಞಾನವು ವೃತ್ತ್ಯಾತ್ಮಕವಾದ್ದರಿಂದ ಚೈತನ್ಯರೂಪವಲ್ಲ, ಅದರಿಂದ ಅದು ಆರೋಪಾಧಿಷ್ಠಾನವಾಗದು. ಪ್ರಾತಿಭಾಸಿಕ ರಜತಾದಿಯ ಜ್ಞಾನವೂ ಪ್ರಾತಿಭಾಸಿಕವೆಂದು ಅದ್ವೈತಮತ. ಅದೂ ಅಧಿಷ್ಠಾನವಾಗದು, ಅದರಿಂದ ಪ್ರಾತಿಭಾಸಿಕಕ್ಕೆ ಪ್ರಾತಿಭಾಸಿಕವಾದ ತನ್ನ ಜ್ಞಾನದಲ್ಲಿ ಅಧ್ಯಾಸವಿಲ್ಲ. ವ್ಯಾವಹಾರಿಕವಾದ ವರ್ತಮಾನ ಘಟಾದಿಗೂ ವ್ಯಾವಹಾರಿಕವಾದ ಚೈತನ್ಯಸ್ವರೂಪವಲ್ಲದ ತನ್ನ ಜ್ಞಾನದಲ್ಲಿ ಅಧ್ಯಾಸವಿಲ್ಲ. ಹೀಗೆ ಎಲ್ಲ ಕಡೆ ವ್ಯಭಿಚಾರವಿದೆ.

**ತ್ವನ್ಮತೇ ಅರ್ಥವತ್ ಭ್ರಮರೂಪಜ್ಞಾನಸ್ಯಾಪಿ ಕಲ್ಪಿತತ್ವಾತ್। ಅಧ್ಯಸ್ತ ತುಲ್ಯತ್ವೇನ ಕಲ್ಪಿತಸ್ಯ ಚ ಅನಧಿಷ್ಠಾನತ್ವಾತ್। ಪ್ರಾತಿಭಾಸಿಕಾತ್ ಪೂರ್ವಮಸತ್ಯಾಃ ತತ್ಪ್ರತೀತೇಃ ಅಧಿಷ್ಠಾನತ್ವಾ ಯೋಗಾಚ್ಚ ।**

ಅಧ್ಯಸ್ತಕ್ಕಿಂತ ಅಧಿಷ್ಠಾನ ಅಧಿಕಸತ್ತೆಂದು ನಿಯಮವಿರುವುದರಿಂದ ಪ್ರಾತಿಭಾಸಿಕ ರಜತ ಜ್ಞಾನವು ಸತ್ಯವಾಗಿದ್ದರೆ ಮಾತ್ರ ಅದು ಪ್ರಾತಿಭಾಸಿಕ ರಜತಾರೋಪಕ್ಕೆ ಅಧಿಷ್ಠಾನವಾಗುತ್ತಿತ್ತು. ಆದರೆ ಅದ್ವೈತಮತದಲ್ಲಿ ಪ್ರಾತಿಭಾಸಿಕ ರಜತದಂತೆ ಅದರ ಭ್ರಮರೂಪಜ್ಞಾನವೂ ಕೂಡ ಕಲ್ಪಿತವೇ ಆಗಿರುವುದರಿಂದ ಅಧಿಷ್ಠಾನವಾಗಲಾರದು. ಮತ್ತು ಪ್ರಾತಿಭಾಸಿಕ ಸ್ಥಳದಲ್ಲಿ ರಜತವು ರಜತಪ್ರತಿಭಾಸಾತ್ಮಕವೇ ಆಗಿದೆ. ಅಲ್ಲಿ ಜ್ಞಾನವು ವಿಷಯಕ್ಕಿಂತ ಬೇರೆ ಅಲ್ಲ. ಹೀಗಾಗಿ ಪ್ರಾತಿಭಾಸಿಕ ರಜತಕ್ಕಿಂತ ಪೂರ್ವದಲ್ಲಿ ರಜತಾತ್ಮಕವಾದ ರಜತ ಪ್ರತೀತಿ ಇರುವುದಿಲ್ಲ. ಅದು ರಜತಾಧ್ಯಾಸಕ್ಕೆ ಅಧಿ ಷ್ಠಾನವಾಗುವುದಿಲ್ಲ.

**ತ್ವಯಾಪಿ ರೂಪ್ಯಾದಿಕಂ ಇದಮಂಶಾವಚ್ಛಿನ್ನಚೈತನ್ಯೇ ಅಧ್ಯಸ್ತಂ, ರೂಪ್ಯಾಕಾರಾ-ವಿದ್ಯಾವೃತ್ತಿ ಪ್ರತಿಬಿಂಬಿತೇನ ತು ಚೈತನ್ಯೇನ ಪ್ರಕಾಶತೇ ಇತ್ಯಂಗೀಕಾರಾಚ್ಚ।**

ಅದ್ವೈತಮತದಲ್ಲಿ ರೂಪ್ಯಾದಿಗಳು 'ಇದಂರೂಪ್ಯಂ' ಎಂಬ ಭ್ರಮದಲ್ಲಿ ಇರುವ 'ಇದಂ' ಎಂಬ ಅಂಶದಿಂದ ಶುಕ್ತಿಯಿಂದ ಅವಚ್ಛಿನ್ನವಾದ ಚೈತನ್ಯದಲ್ಲಿಯೇ ರೂಪ್ಯವು ಅಧ್ಯಸ್ತವಾಗಿದೆ. ರೂಪ್ಯಾಕಾರ ಅವಿದ್ಯಾವೃತ್ತಿಯಲ್ಲಿ ಪ್ರತಿಬಿಂಬಿತವಾದ ಚೈತನ್ಯರೂಪ ಸಾಕ್ಷಿಯಿಂದ ಪ್ರಕಾಶಿತವಾಗುತ್ತದೆ ಎಂದು ಅಂಗೀಕರಿಸಿದ್ದಾರೆ. ಅದರಿಂದ 'ಇದಂ ರೂಪ್ಯಂ' ಎಂಬ ಜ್ಞಾನದಲ್ಲಿ

ರೂಪ್ಯವು ಅಧ್ಯಸ್ತವಾಗಿಲ್ಲ ಎಂದು ಅವರೇ ಒಪ್ಪಿದ್ದಾರೆ. ಆಧ್ಯಾಸಿಕ ಸಂಬಂಧನಿಯಮಕ್ಕೆ ವ್ಯಭಿಚಾರವಿದೆ.

**ರೂಪ್ಯಾದೇಃ ಸ್ವಜ್ಞಾನೇ ಅಧ್ಯಸ್ತತ್ವೇ ಅಧಿಷ್ಠಾನ ಜ್ಞಾನ-ಅಜ್ಞಾನಾಭ್ಯಾಂ ಅಧ್ಯಾಸಜನ್ಮ ನಿವೃತ್ತ್ಯೋಃ ನಿಯತತ್ವಾತ್ ರೂಪ್ಯಜ್ಞಾನಸ್ಯ ಅಜ್ಞಾನಜ್ಞಾನಾಭ್ಯಾಂ ರೂಪ್ಯಭ್ರಮಜನ್ಮನಿವೃತ್ತ್ಯೋಃ ಪ್ರಸಂಗಾಚ್ಚ।**

ರೂಪ್ಯಾದಿಗಳು ತಮ್ಮ ಜ್ಞಾನಗಳಲ್ಲಿ ಅಧ್ಯಸ್ತವಾಗುತ್ತವೆ ಎಂದು ಒಪ್ಪಿದರೆ ಅಧಿಷ್ಠಾನದ ಅಜ್ಞಾನದಿಂದ ಅಧ್ಯಾಸ ಜನ್ಮ. ಅಧಿಷ್ಠಾನದ ಜ್ಞಾನದಿಂದ ಅಧ್ಯಾಸ ನಿವೃತ್ತಿ ಎಂದು ನಿಯಮವಿರುವುದರಿಂದ ರೂಪ್ಯಜ್ಞಾನರೂಪ ಅಧಿಷ್ಠಾನದ ಅಜ್ಞಾನದಿಂದ ರೂಪ್ಯಭ್ರಮಜನ್ಮ ಮತ್ತು ರೂಪ್ಯಜ್ಞಾನದ ಜ್ಞಾನದಿಂದ ರೂಪ್ಯಭ್ರಮ ನಿವೃತ್ತಿ ಎಂದಾದೀತು. ಇದನ್ನು ಇಷ್ಟಾಪತ್ತಿ ಎನ್ನಲಾಗದು. ರೂಪ್ಯಜ್ಞಾನವು ಜ್ಞಾತೈಕಸತ್, ಅಜ್ಞಾತವಾಗಿರಲಾರದು. ಹೀಗಾಗಿ ರೂಪ್ಯಜ್ಞಾನ ಅಧಿಷ್ಠಾನ ವಾಗಿರುವುದರಿಂದ ಅದರ ಅಜ್ಞಾನದಿಂದ ರೂಪ್ಯಭ್ರಮ ಉಂಟಾದೀತು. ಅದರ ಜ್ಞಾನದಿಂದ ರೂಪ್ಯಭ್ರಮ ಇಲ್ಲವಾದೀತು.

**ಜ್ಞಾನಂ ರೂಪ್ಯಮಿತಿ ಧೀ ಪ್ರಸಂಗಾಚ್ಚ।**

'ಇದಂ ರಜತಂ' ಎಂದು ಅಧಿಷ್ಠಾನ ಸಾಮಾನಾಧಿಕರಣ್ಯೇನ ಅಧ್ಯಸ್ತದ ಪ್ರತೀತಿ ಕಂಡಿದ್ದರಿಂದ, ರೂಪ್ಯಜ್ಞಾನವು ರೂಪ್ಯಕ್ಕೆ ಅಧಿಷ್ಠಾನವೆಂದು ಒಪ್ಪಿದರೆ ಜ್ಞಾನಂ ರೂಪ್ಯಂ ಎಂದು ಪ್ರತೀತಿ ಬಂದೀತು.

**ಘಟಾದೇಃ ಸ್ವಸನ್ನಿಕೃಷ್ಟ ಇಂದ್ರಿಯಜನ್ಯಾತ್ ಸ್ವಜ್ಞಾನಾತ್ ಪೂರ್ವಂ ಸತ್ವೇನ ಸ್ವಜ್ಞಾನೇ ಅಧ್ಯಾಸಾಯೋಗಾಚ್ಚ।**

ಘಟಜ್ಞಾನವು ಘಟಸನ್ನಿಕೃಷ್ಟ ಚಕ್ಷುರಾದಿಕರಣದಿಂದ ಜನಿಸುತ್ತದೆ. ಅದರಿಂದ ಘಟಜ್ಞಾನವು ಜನಿಸುವುದಕ್ಕೆ ಪೂರ್ವದಲ್ಲಿ ಘಟವಿರಬೇಕಾಗುತ್ತದೆ. ಘಟಜ್ಞಾನಕ್ಕಿಂತ ಪೂರ್ವದಲ್ಲಿ ಇರುವ ಘಟವು ಅನಂತರ ಹುಟ್ಟುವ ಘಟಜ್ಞಾನದಲ್ಲಿ ಅಧ್ಯಸ್ತವಾಗಿರುವುದು ಶಕ್ಯವಿಲ್ಲ. ಘಟದ ಅಧ್ಯಾಸದಿಂದ ಘಟಸ್ವರೂಪ ಸಿದ್ಧವಾದರೆ ಘಟಸನ್ನಿಕರ್ಷಜನ್ಯ ಘಟಜ್ಞಾನರೂಪವಾದ ಅಧಿಷ್ಠಾನಸಿದ್ಧಿ. ಅಧಿಷ್ಠಾನಸಿದ್ಧವಾದಾಗ ಅದರಲ್ಲಿ ಘಟಾಧ್ಯಾಸಸಿದ್ಧಿ. ಎಂದು ಅನ್ಯೋನ್ಯಾಶ್ರಯ.

**ನನು ಯಾ ಘಟಸನ್ನಿಕರ್ಷಜಾ ವೃತ್ತಿಃ, ನ ತಯಾ ಘಟಃ ಪ್ರಕಾಶ್ಯಃ। ಯೇನ ಚ ಪ್ರಕಾಶ್ಯಃ ಘಟಾಧಿಷ್ಠಾನ ಚೈತನ್ಯೇನ, ನ ತತ್ ಘಟಸನ್ನಿಕರ್ಷ ಜನ್ಯಂ ಇತಿ ಚೇನ್ನ। ತ್ವನ್ಮತೇಽಪಿ ವೃತ್ತೇರೇವ ಅಜ್ಞಾನವಿರೋಧಿತ್ವಾತ್ ಅಜ್ಞಾನನಿವರ್ತಕಾದನ್ಯಸ್ಯ ಚ ಜ್ಞಾನಸ್ಯ ಅನುಪಲಂಭಾತ್।**

ಘಟಸನ್ನಿಕೃಷ್ಟಕರಣಜನ್ಯವಾದ ವೃತ್ತಿಯು ಘಟಪ್ರಕಾಶಕವಲ್ಲ. ಕೇವಲ ಘಟಾಧಿಷ್ಠಾನ ಚೈತನ್ಯಾವರಕ ಅಜ್ಞಾನ ನಿವರ್ತಕವಾಗುತ್ತದೆ. ಆದರಿಂದ ಅದು ಘಟಜ್ಞಾನವೆನಿಸುವುದಿಲ್ಲ. ಘಟಜ್ಞಾನವು ಘಟಾಧಿಷ್ಠಾನ ಚೆತನ್ಯವೇ. ವೃತ್ತಿಯಿಂದ ಆವರಕಾಜ್ಞಾನ ನಿವೃತ್ತಿಯಾದಾಗ ಅಧಿಷ್ಠಾನ ಚೈತನ್ಯವು ಘಟವನ್ನು ಪ್ರಕಾಶಗೊಳಿಸುತ್ತದೆ. ಘಟಜ್ಞಾನವೆನಿಸುತ್ತದೆ. ಹೀಗಾಗಿ ಘಟಸನ್ನಿಕರ್ಷಜನ್ಯವಾದ ವೃತ್ತಿ ಘಟಜ್ಞಾನವಲ್ಲ. ಘಟಜ್ಞಾನವಾಗಿರುವ ಅಧಿಷ್ಠಾನಚೈತನ್ಯವು ಘಟಸನ್ನಿಕರ್ಷ ಜನ್ಯವಲ್ಲ. ಅದು ಘಟಕ್ಕಿಂತ ಪೂರ್ವದಲ್ಲಿರುವುದರಿಂದ ಘಟವು ಅಧಿಷ್ಠಾನವಾದ ತನ್ನ ಜ್ಞಾನದಲ್ಲಿ ಅಧ್ಯಸ್ತವೆನ್ನುವುದು ಯುಕ್ತವೆ' ಎಂದು ಅದ್ವೈತಿ ಹೇಳುತ್ತಾನೆ. ನಾವು ಹೇಳುತ್ತೇವೆ—

ನಿನ್ನ ಮತದಲ್ಲಿಯೂ ಅಜ್ಞಾನವಿರೋಧಿಯು ವೃತ್ತಿಯೆ ಎಂದಮೇಲೆ ಅದನ್ನೇ ಪ್ರಕಾಶಕವಾದ ಜ್ಞಾನ ಎನ್ನಬೇಕು. ಅಜ್ಞಾನವಿರೋಧಿಯಾದ ವೃತ್ತಿಗಿಂತ ಬೇರೆ ಜ್ಞಾನವೆಲ್ಲಿಯೂ ಕಂಡಿಲ್ಲ. 'ತಮೇವ ಭಾಂತಂ ಅನುಭಾತಿ ಸರ್ವಂ' ಎಂದು ಶ್ರುತಿಯಲ್ಲಿ ಅದು ಉಕ್ತವಾಗಿದೆ ಎಂದರೆ ಆ ಶ್ರುತಿಯ ಅರ್ಥ ಬೇರೇ ಇದೆ ಎಂದು ಮುಂದೆ ಹೇಳುತ್ತೇವೆ.

**ತ್ವಯಾಪಿ,**

**ಘಟೋಽಯಮಿತ್ಯಸಾವುಕ್ತಿರಾಭಾಸಸ್ಯ ಪ್ರಸಾದತಃ ।**

**ವಿಜ್ಞಾತೋ ಘಟಇತ್ಯುಕ್ತಿ ರ್ಬ್ರಹ್ಮಾನುಭವತೋ ಭವೇತ್ ॥**

**ಇತಿವದತಾ ವೃತ್ತಿಪ್ರತಿಬಿಂಬಿತಸ್ಯ ಘಟಾನಧಿಷ್ಠಾನಸ್ಯ ಚೈತನ್ಯಸ್ಯೈವ ಘಟಾನುಭವತ್ವೋಕ್ತೇಶ್ಚ ।**

'ಇದು ಘಟ' ಎನ್ನುವ ವ್ಯವಹಾರವು ಘಟಾನಧಿಷ್ಠಾನವಾದ ವೃತ್ತಿಪ್ರತಿಬಿಂಬಿತ ಚೈತನ್ಯದಿಂದಾಗುತ್ತದೆ. ಘಟವು ಜ್ಞಾತವಾಯಿತೆನ್ನುವ ವ್ಯವಹಾರವು ಬ್ರಹ್ಮರೂಪ ಅಧಿಷ್ಠಾನ ಚೈತನ್ಯರೂಪ ಅನುಭವದಿಂದಾಗುವುದು' ಎಂದು ನೀನು ಹೇಳಿರುವೆ. ವೃತ್ತಿಪ್ರತಿಬಿಂಬಿತವಾದ ಘಟಾನಧಿಷ್ಠಾನ ಚೈತನ್ಯಕ್ಕೇ ಘಟಾನುಭವತ್ವವನ್ನು ಇಲ್ಲಿ ಹೇಳಿದಂತಾಗಿದೆ.

**ಕಿಂಚ ದೃಶ್ಯತ್ವಾನ್ಯಥಾನುಪಪತ್ಯಾ ಮಿಥ್ಯಾತ್ವಮಿತಿ ಅರ್ಥಾಪತ್ತಿಃ ವಿವಕ್ಷಿತಾ? ಕಿಂವಾ ಸತ್ಯತ್ವೇ ದೃಶ್ಯತ್ವಂ ನ ಸ್ಯಾತ್ ಇತಿ ಅನುಕೂಲತರ್ಕಮಾತ್ರಂ? ನಾದ್ಯಃ । ತತ್ ಸಾಮಗ್ರ್ಯಭಾವಾತ್ । ಆಕ್ಷೇಪ್ಯಸ್ಯ ಉಪಪಾದಕತ್ವಂ, ಪ್ರಮಾಣಾವಿರುದ್ಧತ್ವಂ ಚ। ಆಕ್ಷೇಪಕಸ್ಯ ಅನುಪಪದ್ಯಮಾನತ್ವಂ, ಪ್ರಮಿತತ್ವಂ ಚ । ಇತಿ ಹ್ಯರ್ಥಾಪತ್ತಿ ಸಾಮಗ್ರೀ । ನಚಾಕ್ಷೇಪ್ಯಂ ಸಂಬಂಧಿಮಿಥ್ಯಾತ್ವಂ ಆಕ್ಷೇಪಕಸ್ಯ ಸಂಬಂಧಸ್ಯ ಉಪಪಾದಕಂ । ಕಿಂತು ಪ್ರತಿಕೂಲಮೇವ ।**

ದೃಶ್ಯತ್ವಾನ್ಯಥಾನುಪಪತ್ತಿಯಿಂದ ಮಿಥ್ಯಾತ್ವಸಿದ್ಧಿ ಎಂದು ಅರ್ಥಾಪತ್ತಿಯು ವಿವಕ್ಷಿತವೆ? ಅಥವಾ ಸತ್ಯತ್ವ ಪಕ್ಷದಲ್ಲಿ ದೃಶ್ಯತ್ವ ಕೂಡಲಾರದೆಂದು ಅನುಕೂಲ ತರ್ಕ ಮಾತ್ರವೆ? ಅರ್ಥಾಪತ್ತಿಯು ವಿವಕ್ಷಿತವೆಂದೆನ್ನುವ ಮೊದಲಿನ ಪಕ್ಷ ಸರಿಯಲ್ಲ. ಏಕೆಂದರೆ, ಅರ್ಥಾಪತ್ತಿಗೆ ಬೇಕಾದ ಸಾಮಗ್ರಿ ಇಲ್ಲಿ ಇಲ್ಲ. ಅರ್ಥಾಪತ್ತಿ ಸಾಮಗ್ರಿ ಇಷ್ಟು—ಆಕ್ಷೇಪ್ಯಕ್ಕೆ ಉಪಪಾದಕತ್ವ ಮತ್ತು ಪ್ರಮಾಣಅವಿರುದ್ಧತ್ವಗಳು

ಬೇಕು. ಆಕ್ಷೇಪಕಕ್ಕೆ ಅನುಪಪದ್ಯಮಾನತ್ವ ಮತ್ತು ಪ್ರಮಿತತ್ವ ಬೇಕು. ಪ್ರಕೃತ ಇಲ್ಲಿ ಆಕ್ಷೇಪ್ಯವಾದ ಸಂಬಂಧಿ ಮಿಥ್ಯಾತ್ವವು ಆಕ್ಷೇಪಕವಾದ ಸಂಬಂಧಕ್ಕೆ ಉಪಪಾದಕವಾಗಿಲ್ಲ. ಪ್ರತಿಕೂಲವೇ ಆಗಿದೆ.

ಆಕ್ಷೇಪ್ಯ ಎಂದರೆ, ಪುಷ್ಟನಾದ ದೇವದತ್ತನು ಹಗಲಲ್ಲಿ ಉಣ್ಣುವುದಿಲ್ಲ. ಎಂದರೆ ಅವನು ರಾತ್ರಿಯಲ್ಲಿ ಉಣ್ಣುತ್ತಾನೆ ಎಂದು ಆಕ್ಷೇಪದಿಂದ ಸಿದ್ಧವಾಗುವುದು. ಹೀಗೆ ಆಕ್ಷೇಪದಿಂದ ರಾತ್ರಿ ಭೋಜನ ಸಿದ್ಧವಾಗುವುದು. ಆಕ್ಷೇಪಕವು ಹಗಲಿನಲ್ಲಿ ಉಣದ ದೇವದತ್ತನಲ್ಲಿ ಕಾಣುವ ಶರೀರಪುಷ್ಟಿ. ಆಕ್ಷೇಪ್ಯವಾದ ರಾತ್ರಿಭೋಜನವು ಆಕ್ಷೇಪಕವಾದ ಈ ಶರೀರಪುಷ್ಟಿಗೆ ಉಪಪಾದಕವಾಗಿದೆ. ಆಕ್ಷೇಪ್ಯ ವಾದ ರಾತ್ರಿಭೋಜನವಿಲ್ಲದಿದ್ದರೆ ಆಕ್ಷೇಪಕವಾದ ಈ ಶರೀರಪುಷ್ಟಿಯು ಅನುಪಪದ್ಯಮಾನವಾಗಿದೆ.

ರಾತ್ರಿಭೋಜನ ಆಕ್ಷೇಪ್ಯವಾಗಬೇಕಾದರೆ ದೇವದತ್ತನು ಹಗಲಲ್ಲಿ ಉಣದಿದ್ದರೂ ಪುಷ್ಟನಾಗಿರುವುದಕ್ಕೆ ಅದು ಉಪಪಾದಕವಾಗಿರಬೇಕು. ಮತ್ತು 'ಅವನು ರಾತ್ರಿ ಭೋಜನ ಮಾಡಿಯೇ ಇಲ್ಲ' ಎನ್ನುವ ವಿರುದ್ಧ ಪ್ರಮಾಣವಿರಕೂಡದು. ಆಕ್ಷೇಪಕವಾದ ಶರೀರಪುಷ್ಟಿಯು ಆಕ್ಷೇಪ್ಯವಾದ ರಾತ್ರಿಭೋಜನವಿಲ್ಲದಿದ್ದರೆ ಅನುಪಪದ್ಯಮಾನವಾಗಿರಬೇಕು. ಮತ್ತು ಆ ಶರೀರಪುಷ್ಟಿ ಪ್ರಮಿತವಾಗಿರಬೇಕು.

ಪ್ರಕೃತ ಆಕ್ಷೇಪಕವು ದೃಗ್-ದೃಶ್ಯಗಳಿಗೆ ಇರುವ ಸಂಬಂಧ. ಈ ಸಂಬಂಧವು, ಸಂಬಂಧಿಗಳು ಸತ್ಯವೆಂದು ಅಂಗೀಕರಿಸುವ ಪಕ್ಷದಲ್ಲಿ, ಅನುಪಪಪದ್ಯಮಾನವಾಗಿದೆ. ಏಕೆಂದರೆ ಇದು ಸರ್ವಸಮ್ಮತವಾದ ಸಂಯೋಗ ಸಮವಾಯಗಳಲ್ಲಿ ಸೇರುತ್ತಿಲ್ಲ. ಬೇರೊಂದು ಸಂಬಂಧವಿಲ್ಲ. ಸಂಬಂಧಿಗಳು ಮಿಥ್ಯಾ ಎಂದು ಅಂಗೀಕರಿಸುವ ಪಕ್ಷದಲ್ಲಿ ಸತ್ಯವಾದ ಸಂಯೋಗ ಸಮವಾಯಗಳಿಂದ ಅತಿರಿಕ್ತವಾದ ಅಧ್ಯಸ್ತ-ಅಧಿಷ್ಠಾನಭಾವರೂಪ ಆಧ್ಯಾಸಿಕಸಂಬಂಧವು ಕೂಡುತ್ತದೆ. ಆದರಿಂದ ಸಂಬಂಧಿ ಮಿಥ್ಯಾತ್ವವು ಸಂಬಂಧಕ್ಕೆ ಉಪಪಾದಕವಾಗುವುದರಿಂದ ಆಕ್ಷೇಪದಿಂದ ಸಿದ್ಧವಾಗುತ್ತದೆ ಎಂದು ಅದ್ವೈತಿ ಹೇಳುತ್ತಾನೆ.

ನಾವು ಹೇಳುತ್ತೇವೆ—ಸಂಬಂಧಿ ಮಿಥ್ಯಾತ್ವವು ಸಂಬಂಧಕ್ಕೆ ಉಪಪಾದಕವಲ್ಲ, ಎಂದು. ದೃಕ್ ದೃಶ್ಯಗಳು ಸಂಬಂಧಿಗಳು. ಅವುಗಳಲ್ಲಿ ದೃಕ್ ಮಾತ್ರ ಸತ್ಯ. ದೃಶ್ಯವು ಮಿಥ್ಯಾ. ಅದು ಸತ್ಯವಾದ ದೃಕ್ಕಿನಲ್ಲಿ ಆರೋಪಿತ ಎಂಬುದು ಪ್ರಮಾಣಾಂತರ ವಿರೋಧವಿಲ್ಲದೆ ಆಕ್ಷೇಪದಿಂದ ಸಿದ್ಧವಾದರೆ ಮಾತ್ರ ಅದು ಸಂಬಂಧರೂಪ ಆಕ್ಷೇಪಕಕ್ಕೆ ಉಪಪಾದಕವಾಗುವುದು. ಹಾಗೆ ಸಿದ್ಧವಾಗಿಲ್ಲ. ಸಿದ್ಧವಾಗಿದೆ ಎಂದು ಒಪ್ಪಿದರೂ ಸಂಬಂಧಿಗಳು ಮಿಥ್ಯಾ ಆದರೆ ಸಂಬಂಧ ಸತ್ಯವಾಗಿರುವುದು ಎಲ್ಲಿಯೂ ಕಂಡಿಲ್ಲ. ಆದರಿಂದ ಸಂಬಂಧಕ್ಕೆ ಉಪಪಾದಕವಾಗುವುದಿಲ್ಲ. ಪ್ರತಿಕೂಲವೇ ಆಗುತ್ತದೆ. ಏಕೆಂದರೆ ಸಂಬಂಧಿ ಮಿಥ್ಯಾ ಆದರೆ ಸಂಬಂಧವೂ ಸಂಬಂಧಿಯೇ ಆಗಿರುವುದರಿಂದ ಅದೂ ಮಿಥ್ಯಾ. ಅಂದರೆ ಆ ಸಂಬಂಧವಿಲ್ಲವೆಂದೇ ತಿಳಿದುಬರುತ್ತದೆ. ಸಂಬಂಧಾಭಾವವೇ ಸಿದ್ಧವಾಗುತ್ತದೆ, ಸಂಬಂಧ ಸಿದ್ಧವಾಗುವುದಿಲ್ಲ.



नचाध्यस्तत्वरूपसंबंधस्य न तत्प्रतिकूलम् । तस्याद्याप्यसिद्ध्याऽनाक्षेपकत्वात् । नच मिथ्याभूतसंबंधस्य न तत्प्रतिकूलम् । स्वतःप्रमाणप्रत्यक्षसिद्धसंबंधस्य विनैव बाधकं मिथ्यात्वायोगात् । नच दृश्यमिथ्यात्वमेव बाधकम् । अन्योन्याश्रयात् । प्रत्यक्षादिविरुद्धं चाक्षेप्यमिथ्यात्वम् । नच प्रत्यक्षाद्यविरुद्धसंबंधातर कल्पनेनैव दृश्यत्वोपपत्तौ प्रत्यक्षस्य स्वतःप्राप्ततत्वावेदकत्वत्यागो युक्तः । नाप्येकस्य दृश्यत्वस्योपपत्तये प्रमितानेकवस्तुत्यागो युक्तः ।

आक्षेपकं च न तावद्दृगध्यस्तत्वम् । तस्याक्षेप्याभिन्नत्वेन मां प्रत्यसिद्धेः । नापि दृग्विषयत्वरूपो दृक्संबंधः । तवासिद्धेः । सिद्धौ वा तेनैव संबंधेन प्रकाशोपपत्त्या अध्यस्तत्वं विनाऽनुपपत्त्यभावात् । नापि दृगधीन सिद्धिकत्वं, दृग्विषयत्वातिरिक्त सिद्ध्यसंमतेः । नच दृक्संबंध सामान्यमाक्षेपकम् । तच्च प्रसक्त विशेष प्रतिषेधेऽध्यस्तत्वरूप विशेषे पर्यवस्यतीति युक्तम् । तस्य घटस्य ज्ञानमिति धीसिद्ध संबंधसामान्यं प्रत्यविशेषत्वात् । नहि रूप्यस्य शुक्तिरित्यस्ति ।

नान्त्यः । सत्त्वेऽप्युक्तरीत्या संबंधान्तरेणैव दृश्यत्वोपपत्त्याऽप्रयोजकत्वात् ।

किंच न तावदनिर्वाच्यत्वाभाव आपादकः । तद्वतोऽपि तुच्छस्य परोक्षधीवेद्यत्वेन दृश्यत्वात् । नापि सत्त्वम् । सत्त्वेऽपि ब्रह्मणः स्वव्यवहृत्येव घटस्यापि स्वज्ञानेन संबंधोपपत्तेः ।

किंचाध्यासिकसंबंध इति कोऽर्थः । किं यःकश्चित्संबंध एवाध्यस्त इति, किं वा तदध्यस्तमेव संबंध इति ? आद्ये न दृश्यमिथ्यात्वसिद्धिरित्युक्तम् । नान्त्यः । त्वन्मते ज्ञेयवत्

**तज्ज्ञानस्याप्यध्यस्तत्वेन तत्र तस्यानध्यासादित्युक्तत्वात् । एवंच—**

**शाब्दवृत्तेर्हि विषयो ब्रह्म तत्र न कल्पितम् ।**
**यथा तथा दृग्विषयो दृश्यं न दृशि कल्पितम् ।।**
**अविद्याविषयो ब्रह्म ह्यविद्यायां न कल्पितम् ।**
**यथा तथा दृशा ग्राह्यं न विश्वं दृशि कल्पितम् ।।**

---

**अनाक्षेपकत्वादिति** ।। मिथ्यात्वस्येति शेषः । **मिथ्याभूतसम्बन्धस्येति** । अध्यस्तत्वापेक्षया मिथ्यात्वं भिन्नमिति शंकितुर्हृदयम् । **अन्योन्याश्रयादिति** ।। एतादृशानुकूलतर्कस्य मिथ्यात्वानुमित्यधीनसिद्धिकत्वेन पूर्वमनवतारादित्यर्थः । आक्षेप्यमिथ्यात्वस्य अनुपपादकत्वमुक्त्वा अर्थापत्तिसामग्रीप्रविष्टं प्रमाणविरुद्धत्वं च नेत्याह **प्रत्यक्षादीति** ।। **नाप्येकस्येति** । यद्यपि दृश्यत्वानुपपत्तौ मिथ्यात्वमपि (प्रतीतत्वमपि) अनुपपन्नम्, तथापि सम्बन्धान्तरकल्पने तदुपपन्नमेवेति पूर्वोक्तार्थावष्टम्भेन एतदुक्तमिति । अर्थापत्तिसामग्र्येकदेशमाक्षेपकमपि दूषयति **आक्षेपकं चेति** ।।

ननु दृक्सम्बन्धत्वं क्लृप्तविशेषवृत्तितया स्वात्मानमलभमानं स्वाश्रयस्याध्यस्तत्वमाक्षिपतीत्याशंक्य निराकरोति **नचेति** ।। **तस्येति** । अनध्यस्तत्व रूप सम्बन्ध वृत्तित्वेनापि दृक्सम्बन्धित्वमुपपन्नं नाक्षेपकमिति प्रसक्तेरिति भावः । ननु घटस्य ज्ञानमित्यत्रापि ज्ञानघटयोः आध्यासिक एव सम्बन्धोऽस्तु, इत्यत आह **नहीति** ।। तथाच नैतादृश प्रतीतिराध्यासिक सम्बन्ध विषयिणी भवितुमर्हतीति भावः । अनुकूलतर्कमात्रमिति द्वितीयं निराकरोति **नांत्य इति** । **तदध्यस्तमिति** । तत्र अध्यस्तत्वमित्यर्थः । **उक्तमिति** । अस्तु वेत्यादिनेति शेषः । **तत्रेति** ।। ज्ञान इत्यर्थः । **उक्तत्वादिति** । त्वन्मते अर्थवदित्यादिनेति शेषः । उक्तमर्थं स्मारयन्नुपसंहरति **एवंचेति** ।।

❖❖❖

**ನ ಚ ಅಧ್ಯಸ್ತತ್ವರೂಪಸಂಬಂಧಸ್ಯ ನ ತತ್ ಪ್ರತಿಕೂಲಂ। ತಸ್ಯ ಅದ್ಯಾಪ್ಯಸಿದ್ಧ್ಯಾ ಅನಾಕ್ಷೇಪಕತ್ವಾತ್ ।**

ಅದ್ವೈತಿ ಹೇಳುತ್ತಾನೆ— 'ಸಂಬಂಧಿ ಮಿಥ್ಯಾತ್ವವು ಸಂಯೋಗ ಸಮವಾಯರೂಪ ಸಂಬಂಧಕ್ಕೆ ಪ್ರತಿಕೂಲವಾದರೂ ಅಧ್ಯಸ್ತತ್ವರೂಪ ಸಂಬಂಧಕ್ಕೆ ಪ್ರತಿಕೂಲವಲ್ಲ, ಅನುಕೂಲವೇ ಆಗಿದೆ. ಸಂಬಂಧಿ ಸತ್ಯವಾದರೆ ಅಧ್ಯಸ್ತತ್ವರೂಪ ಸಂಬಂಧವಿಲ್ಲವಾಗುತ್ತದೆ. ಪ್ರಕೃತದಲ್ಲಿ ದೃಗಧ್ಯಸ್ತತ್ವರೂಪ ದೃಶ್ಯತ್ವವನ್ನೆ ಮಿಥ್ಯಾತ್ವಕ್ಕೆ ಹೇತುವೆಂದು ವಿವಕ್ಷೆ ಮಾಡಿದ್ದೇನೆ' ಎಂದು.

ನಾವು ಹೇಳುತ್ತೇವೆ ದೃಗಧ್ಯಸ್ತತ್ವರೂಪ ಸಂಬಂಧವು ಇನ್ನೂ ಸಿದ್ಧವಾಗಿಲ್ಲ. ಅದರಿಂದ ಅದು ನನಗೆ ಅಸಿದ್ಧ, ಆಕ್ಷೇಪಕವಾಗುವುದಿಲ್ಲ. ಸಿದ್ಧವನ್ನೇ ಆಕ್ಷೇಪಕವೆಂದು ತೋರಿಸಬೇಕು ತಾನೆ? ಆಕ್ಷೇಪಕವು ಪ್ರಮಿತವಾಗಿಲ್ಲ.

**ನಚ ಮಿಥ್ಯಾಭೂತಸಂಬಂಧಸ್ಯ ನ ತತ್ ಪ್ರತಿಕೂಲಂ। ಸ್ವತಃಪ್ರಮಾಣಪ್ರತ್ಯಕ್ಷಸಿದ್ಧ ಸಂಬಂಧಸ್ಯ ವಿನೈವ ಬಾಧಕಂ ಮಿಥ್ಯಾತ್ವಾಯೋಗಾತ್। ನಚ ದೃಶ್ಯಮಿಥ್ಯಾತ್ವಮೇವ ಬಾಧಕಂ। ಅನ್ಯೋನ್ಯಾಶ್ರಯಾತ್ ।**

ಅದ್ವೈತಿ ಹೇಳುತ್ತಾನೆ— ದೃಶ್ಯತ್ವವೆಂದರೆ, ಮಿಥ್ಯಾಭೂತವಾದ ದೃಕ್‌ಸಂಬಂಧವೆಂದು ವಿವಕ್ಷೆ ಮಾಡುತ್ತೇನೆ. ಅಧ್ಯಾಸಿಕ ಸಂಬಂಧವೆಂದರೆ ಅಧ್ಯಸ್ತತ್ವರೂಪಸಂಬಂಧ, ಅಧ್ಯಸ್ತವಾದ ಸಂಬಂಧ ಎಂದು ಎರಡೂ ಅರ್ಥ ನನಗೆ ಸಮ್ಮತ ಎಂದು. ಅದರಿಂದ ಸಂಬಂಧಿಯಾದ ಪ್ರಪಂಚದ ಮಿಥ್ಯಾತ್ವವು ಸಂಬಂಧ ಮಿಥ್ಯಾತ್ವಕ್ಕೆ ಉಪಪಾದಕವಾಗುತ್ತದೆ. ಪ್ರಪಂಚ ಮಿಥ್ಯಾತ್ವವಿಲ್ಲದೆ ಸಂಬಂಧಮಿಥ್ಯಾತ್ವವು ಅನುಪಪನ್ನವೆ.

ಇದಕ್ಕೆ ನಾವು ಹೇಳುತ್ತೇವೆ— ಮಿಥ್ಯಾಭೂತ ಸಂಬಂಧವೂ ಅಸಿದ್ಧವೆ, ಪ್ರಪಂಚ ಮಿಥ್ಯಾತ್ವವಿನ್ನೂ ಸಿದ್ಧವಾಗಿಲ್ಲವಾದ್ದರಿಂದ ಸಂಬಂಧವು ಮಿಥ್ಯಾ ಎಂದು ಸಿದ್ಧವಾಗುವುದಿಲ್ಲ. ಸ್ವತಃ ಪ್ರಮಾಣಸಿದ್ಧವಾದ ಸಂಬಂಧವನ್ನು ಬಾಧಕವಿಲ್ಲದಿರುವಾಗ ಮಿಥ್ಯಾ ಎಂದು ಅಂಗೀಕರಿಸ ಲಾಗದು. ಸಂಬಂಧಿಯಾದ ಪ್ರಪಂಚ ಮಿಥ್ಯಾತ್ವವೇ ಸಂಬಂಧ ಸತ್ಯತ್ವಕ್ಕೆ ಬಾಧಕ' ಎಂದರೆ ಪ್ರಪಂಚ ಮಿಥ್ಯಾತ್ವಸಿದ್ಧವಾಗಿದ್ದರೆ ಹಾಗೆ ಹೇಳಬಹುದಿತ್ತು. 'ಸಿದ್ಧವಾಗುತ್ತದೆ, ದೃಶ್ಯತತ್ವ ಹೇತುವೇ ಸಾಧಕವಾಗಿದೆ' ಎಂದರೆ ಅನ್ಯೋನ್ಯಾಶ್ರಯ ಬರುತ್ತದೆ. 'ದೃಶ್ಯವು ಮಿಥ್ಯಾ' ಎಂದು ಸಿದ್ಧವಾದರೆ, ಅದು ಬಾಧಕವಾಗುವುದರಿಂದ, ಪ್ರತ್ಯಕ್ಷದಿಂದ ಸಿದ್ಧವಾಗುವ ಸಂಬಂಧವೂ ಮಿಥ್ಯಾ ಎಂದು ಸಿದ್ಧವಾಗುತ್ತದೆ. ಸಂಬಂಧವು ಮಿಥ್ಯಾ ಎಂದು ಸಿದ್ಧವಾದರೆ ಮಿಥ್ಯಾಭೂತ ಸಂಬಂಧರೂಪ ದೃಶ್ಯತ್ವಹೇತುವು 'ದೃಶ್ಯವು ಮಿಥ್ಯಾ' ಎನ್ನಲು ಸಾಧಕವಾಗುತ್ತದೆ ಎಂದು.

**ಪ್ರತ್ಯಕ್ಷಾದಿ ವಿರುದ್ಧಂ ಚ ಆಕ್ಷೇಪ್ಯಮಿಥ್ಯಾತ್ವಂ। ನಚ ಪ್ರತ್ಯಕ್ಷಾದ್ಯವಿರುದ್ಧ ಸಂಬಂಧಾಂತರ ಕಲ್ಪನೇನೈವ ದೃಶ್ಯತ್ವೋಪಪತ್ತೌ ಪ್ರತ್ಯಕ್ಷಸ್ಯ ಸ್ವತಃಪ್ರಾಪ್ತತಾವೇದಕತ್ವ**

**ತ್ಯಾಗೋ ಯುಕ್ತಃ। ನಾಪ್ಯೇಕಸ್ಯ ದೃಶ್ಯತ್ವಸ್ಯೋಪಪತ್ತಯೇ ಪ್ರಮಿತ ಅನೇಕವಸ್ತು ತ್ಯಾಗೋ ಯುಕ್ತಃ।**

ಆಕ್ಷೇಪ್ಯವು ಪ್ರಮಾಣಾವಿರುದ್ಧವಾಗಿರುವುದೂ ಅರ್ಥಾಪತ್ತಿಗೆ ಅಂಗ. ಅದು ಪ್ರಕೃತದಲ್ಲಿ ಇಲ್ಲ. ಆಕ್ಷೇಪ್ಯವಾಗಿರುವ ಸಂಬಂಧಿಮಿಥ್ಯಾತ್ವವು ಪ್ರತ್ಯಕ್ಷಾದಿಪ್ರಮಾಣ ವಿರುದ್ಧವೇ ಆಗಿದೆ. 'ಪ್ರತ್ಯಕ್ಷವು ತತ್ತ್ವಾವೇದಕವಲ್ಲ. ಅದರ ವಿರೋಧವು ಬಾಧಕವಲ್ಲ ಎನ್ನುತ್ತೇನೆ. ಹೀಗೆ ಹೇಳದಿದ್ದರೆ ಪ್ರಪಂಚಕ್ಕೆ ದೃಶ್ಯತ್ವವು ಕೂಡಲಾರದು ಎಂದು ಅದ್ವೈತಿ ಹೇಳಿದರೆ ಹೀಗೆ ನಾವು ಹೇಳಬೇಕು— ಪ್ರತ್ಯಕ್ಷಾದಿಗಳ ವಿರೋಧ ಬಾರದಂತೆಯೇ ಸಂಯೋಗ ಸಮವಾಯಾತಿರಿಕ್ತ ಸಂಬಂಧಾಂತರವನ್ನು ಕಲ್ಪನೆ ಮಾಡುವುದರಿಂದಲೇ ದೃಶ್ಯತ್ವವನ್ನು ಕೂಡಿಸಲು ಬರುವಾಗ ಪ್ರತ್ಯಕ್ಷಕ್ಕೆ ಸ್ವತಃ ಪ್ರಾಮಾಣ್ಯಪ್ರಯುಕ್ತ ಪ್ರಾಪ್ತವಾಗಿರುವ ತತ್ತ್ವಾವೇದಕತ್ವವನ್ನು ಏಕೆ ತ್ಯಾಗ ಮಾಡಬೇಕು? ಮತ್ತು ಒಂದು ದೃಶ್ಯತ್ವವನ್ನು ಕೂಡಿಸುವುದಕ್ಕಾಗಿ ಪ್ರಮಿತವಾದ ಅನೇಕ ಪ್ರಪಂಚಕ್ಕೇ ಮಿಥ್ಯಾತ್ವವನ್ನು ಹೇಳುವುದೂ ನ್ಯಾಯವಲ್ಲ. ಅನೇಕ ಪ್ರಪಂಚವನ್ನು ಕೂಡಿಸಲು ಒಂದು ದೃಶ್ಯತ್ವ ಹೇತುವನ್ನು ಕೈಬಿಡುವುದು 'ತ್ಯಜೇದೇಕಂ ಕುಲಸ್ಯಾರ್ಥೇ' ಎಂಬ ನ್ಯಾಯಕ್ಕೆ ಸಮ್ಮತವಾಗುವುದು.

**ಆಕ್ಷೇಪಕಂ ಚ ನ ತಾವತ್ ದೃಗಧ್ಯಸ್ತತ್ವಂ। ತಸ್ಯ ಆಕ್ಷೇಪ್ಯಾಭಿನ್ನತ್ವೇನ ಮಾಂ ಪ್ರತಿ ಅಸಿದ್ಧೇಃ। ನಾಪಿ ದೃಗ್‌ವಿಷಯತ್ವರೂಪೋ ದೃಕ್‌ಸಂಬಂಧಃ। ತವಾಸಿದ್ಧೇಃ। ಸಿದ್ಧೌ ವಾ ತೇನೈವ ಸಂಬಂಧೇನ ಪ್ರಕಾಶೋಪಪತ್ತ್ಯಾ ಅಧ್ಯಸ್ತತ್ವಂ ವಿನಾ ಅನುಪಪತ್ತ್ಯಭಾವಾತ್।**

ಜಗನ್ಮಿಥ್ಯಾತ್ವಾಕ್ಷೇಪಕವು ದೃಗಧ್ಯಸ್ತತ್ವರೂಪ ದೃಶ್ಯತ್ವವೆ ಎಂದರೆ, ಅದು ಸರಿಯಲ್ಲ. ಆಕ್ಷೇಪಕವಾದ ದೃಗ್‌ಧ್ಯಸ್ತತ್ವವು ಆಕ್ಷೇಪ್ಯ ಜಗನ್ಮಿಥ್ಯಾತ್ವರೂಪವೇ ಆಗಿದೆ. ಆದರಿಂದ ಆಕ್ಷೇಪಕವು ನನಗೆ ಅಸಿದ್ಧ. ದೃಗ್‌ವಿಷಯತ್ವರೂಪ ದೃಶ್ಯತ್ವವು ಆಕ್ಷೇಪಕವೆಂದರೆ ಅದು ನಿನಗೆ ಅಸಿದ್ಧ. ವಿಷಯತ್ವರೂಪ ಸಂಬಂಧವನ್ನು ನೀನು ಅಂಗೀಕರಿಸಿಲ್ಲ. ಹೀಗಾಗಿ ಆಕ್ಷೇಪಕವು ಪ್ರಮಿತತ್ವರೂಪ ಅಂಗವೈಕಲ್ಯದಿಂದ ದುಷ್ಟವಾಗಿದೆ. ವಿಷಯತ್ವವನ್ನು ಸಿದ್ಧವೆಂದೆನ್ನುವಿಯಾದರೆ ಆ ಸಂಬಂಧ ದಿಂದಲೇ ದೃಕ್‌ನಿಂದ ಪ್ರಪಂಚವು ಪ್ರಕಾಶಿತವಾಗುವುದು ಕೂಡುವಾಗ 'ಅಧ್ಯಾಸವಿಲ್ಲದೆ ಕೂಡುವುದಿಲ್ಲ' ಎನ್ನುವುದು ಕೂಡುವುದಿಲ್ಲ.

**ನಾಪಿ ದೃಗಧೀನಸಿದ್ಧಿಕತ್ವಂ। ದೃಗ್‌ವಿಷಯತ್ವಾತಿರಿಕ್ತಸಿದ್ಧ್ಯಸಂಮತೇಃ।**

ಜಗನ್ಮಿಥ್ಯಾತ್ವಾಕ್ಷೇಪಕವು ದೃಗಧೀನಸಿದ್ಧಿಕತ್ವರೂಪ ದೃಶ್ಯತ್ವವೆನ್ನುವುದೂ ಸರಿಯಲ್ಲ. 'ದೃಗಧೀನ ಸಿದ್ಧಿಕತ್ವ' ಎಂದು ಬಹುವ್ರೀಯಿಂದ ಉಕ್ತವಾಗುವ ಸಿದ್ಧಿವಿಷಯತ್ವವನ್ನು ನೀನು ಒಪ್ಪಿಲ್ಲ. ಅದು ನಿನಗೆ ಅಸಿದ್ಧ. ಆಕ್ಷೇಪ್ಯಕ್ಕೆ ಪ್ರಮಿತತ್ವವಿಲ್ಲ. ಅರ್ಥಾಪತ್ತಿಗೆ ಹೇಳಿದ ಅಂಗವೈಕಲ್ಯದೋಷ ಪರಿಹಾರವಾಗಿಲ್ಲ. 'ದೃಗಧೀನ ಸಿದ್ಧಿಕತ್ವಂ' ಎಂಬ ಬಹುವ್ರೀಹಿಗೆ ದೃಗ್ ವಿಷಯತ್ವಕ್ಕಿಂತ ಅತಿರಿಕ್ತವಾಗಿ

'ದೃಗಧೀನ ಸಿದ್ಧಿಯಲ್ಲಿ ಅಧ್ಯಸ್ತವಾಗುವುದೆ'ಂದು ಬೇರೆ ಅರ್ಥವಿಟ್ಟುಕೊಳ್ಳುವುದಾದರೆ ಇದು ನನಗೆ ಅಸಮ್ಮತ, ಅಸಿದ್ಧ.

**ನಚ ದೃಕ್‌ಸಂಬಂಧ ಸಾಮಾನ್ಯಂ ಆಕ್ಷೇಪಕಂ। ತಚ್ಚ ಪ್ರಸಕ್ತವಿಶೇಷಪ್ರತಿಷೇಧೇ ಅಧ್ಯಸ್ತತ್ವರೂಪವಿಶೇಷೇ ಪರ್ಯವಸ್ಯತೀತಿ ಯುಕ್ತಂ। ತಸ್ಯ 'ಘಟಸ್ಯ ಜ್ಞಾನಂ' ಇತಿ ಧೀಸಿದ್ಧ ಸಂಬಂಧಸಾಮಾನ್ಯಂ ಪ್ರತಿ ಅವಿಶೇಷತ್ವಾತ್। ನಹಿ ರೂಪ್ಯಸ್ಯ ಶುಕ್ತಿರಿತ್ಯಸ್ತಿ।**

'ದೃಗ್ವಿಷಯತ್ವವೆಂದಾಗಲಿ ದೃಗಧ್ಯಸ್ತತ್ವವೆಂದಾಗಲಿ ವಿಶೇಷರೂಪದಿಂದ ದೃಶ್ಯತ್ವವನ್ನು ಹೇತು ಮಾಡುವುದಿಲ್ಲ. 'ದೃಕ್ ಸಂಬಂಧ' ಎಂದು ಸಾಮಾನ್ಯರೂಪದಿಂದ ದೃಶ್ಯತ್ವವನ್ನು ಹೇತು ಮಾಡುತ್ತೇನೆ. ದೃಕ್ ಸಂಬಂಧ ಸಾಮಾನ್ಯವು ನಮ್ಮಿಬ್ಬರಿಗೂ ಸಮ್ಮತ. ಯದ್ಯಪಿ ಸಾಮಾನ್ಯರೂಪ ದಿಂದ ದೃಕ್‌ಸಂಬಂಧವು ಜಗನ್ಮಿಥ್ಯಾತ್ವಾಕ್ಷೇಪಕವಾಗುವುದಿಲ್ಲ. ಜಗನ್ಮಿಥ್ಯಾತ್ವವಿಲ್ಲದೆಯೇ ದೃಕ್‌ದೃಶ್ಯ ಗಳಿಗೆ ಸಂಬಂಧ ಸಾಮಾನ್ಯವು ಕೂಡಬಹುದು. ದಂಡಸಂಬಂಧಸಾಮಾನ್ಯವು ದಂಡಿಮಿಥ್ಯಾತ್ವವಿಲ್ಲದೆ ಕೂಡುವುದಿಲ್ಲವೆಂದಿಲ್ಲ. ಆದರೂ ಸಂಬಂಧ ಸಾಮಾನ್ಯವು ಪ್ರಸಕ್ತವಾದ ಸಂಯೋಗ ಮತ್ತು ಸಮವಾಯರೂಪ ವಿಶೇಷಗಳ ನಿಷೇಧ ಸಹಕಾರದಿಂದ ಅಧ್ಯಸ್ತತ್ವರೂಪ ವಿಶೇಷಸಂಬಂಧದಲ್ಲಿ ಪರ್ಯವಸಿತವಾಗಿ ಸಂಬಂಧಿಯಾದ ದೃಶ್ಯಪ್ರಪಂಚದ ಮಿಥ್ಯಾತ್ವವಿಲ್ಲದೆ ಅನುಪಪದ್ಯಮಾನ ವಾಗುತ್ತದೆ. ದೃಶ್ಯಮಿಥ್ಯಾತ್ವವನ್ನು ಆಕ್ಷೇಪಿಸುತ್ತದೆ. ಆಕ್ಷೇಪಕಕ್ಕೆ ಪ್ರಮಿತತ್ವವೆಂಬ ಅಂಗವಿದೆ'. 'ಸಂಬಂಧಸಾಮಾನ್ಯಕ್ಕೆ ವಿಶೇಷದಲ್ಲಿ ಪರ್ಯವಸಾನ'ವೆಂದರೆ ವಿಶೇಷವೃತ್ತಿಯಾಗಿ ಜ್ಞಾನಗೋಚರ ವಾಗುವುದು. ಕ್ಲೃಪ್ತವಿಶೇಷ ವೃತ್ತಿಯಾಗಿ ಗೋಚರವಾಗಲು ಬಾಧಕವಿದ್ದಾಗ ಆಶ್ರಯವಾಗಿ ಬೇರೇ ವಿಶೇಷವನ್ನು ಆಕ್ಷೇಪಿಸುತ್ತದೆ. ಆಶ್ರಯದಲ್ಲಿ ಸಂಯೋಗತ್ವಾದಿಗಳಿಗೆ ಬಾಧವಿರುವುದರಿಂದ ಅಧ್ಯಸ್ತತ್ವವನ್ನು ಆಕ್ಷೇಪಿಸುತ್ತದೆ ಎಂದು ಅದ್ವೈತಿ ಹೇಳುತ್ತಾನೆ.

ನಾವು ಹೇಳುತ್ತೇವೆ—ಸಂಬಂಧಸಾಮಾನ್ಯಕ್ಕೆ ಅಧ್ಯಸ್ತತ್ವಸಂಬಂಧವು ವಿಶೇಷವಲ್ಲ. ಅಧ್ಯಸ್ತತ್ವವು ಸಂಬಂಧವೇ ಅಲ್ಲ. 'ಘಟದ ಜ್ಞಾನ' ಎಂದು ಜ್ಞಾನಜ್ಞೇಯಗಳಿಗೆ ಸಂಬಂಧ ಸಾಮಾನ್ಯವು ಷಷ್ಠೀವಿಭಕ್ತಿಯಿಂದ ಉಕ್ತವಾಗುತ್ತದೆ. ಈ ಸಾಮಾನ್ಯಕ್ಕೆ ವಿಶೇಷವು ಅಧ್ಯಸ್ತತ್ವಸಂಬಂಧ ಎನ್ನುವುದಾದರೆ ಅಧ್ಯಸ್ತತ್ವವಿರುವ ಶುಕ್ತಿರೂಪ್ಯಸ್ಥಳದಲ್ಲಿ ಅಧ್ಯಸ್ತವನ್ನು ಷಷ್ಠೀವಿಭಕ್ತ್ಯಂತ ಶಬ್ದದಿಂದ 'ರೂಪ್ಯದ ಶುಕ್ತಿ' ಎಂದು ಹೇಳಬೇಕಾದೀತು. ಹಾಗೆ ಹೇಳುವುದಿಲ್ಲ.

ಯದ್ಯಪಿ 'ಚೈತ್ರನ ಮೈತ್ರ' ಎಂದು ವ್ಯವಹಾರವಿಲ್ಲದಿದ್ದರೂ 'ಚೈತ್ರನ ಮಗನು ಮೈತ್ರ' ಎಂದು ವ್ಯವಹಾರವಿರುವಂತೆ 'ರೂಪ್ಯದ ಶುಕ್ತಿ' ಎಂದು ವ್ಯವಹಾರವಿಲ್ಲದಿದ್ದರೂ 'ರೂಪ್ಯದ ಅಧಿ ಷ್ಠಾನವು ಶುಕ್ತಿ' ಎಂದು ವ್ಯವಹಾರವಿರುವುದರಿಂದ ರೂಪ್ಯವು ಅಧ್ಯಸ್ತವೆಂದು ಅಧ್ಯಸ್ಥತ್ವರೂಪ ಸಂಬಂಧವಿಶೇಷ ಸಿದ್ಧವಾಗುತ್ತದೆ' ಎನ್ನುತ್ತಾನೆ ಅದ್ವೈತಿ. ಆದರೆ ಶುಕ್ತಿಯು ರೂಪ್ಯಭ್ರಮಕ್ಕೆ ಅಧಿ ಷ್ಠಾನವಾಗುತ್ತದೆ ಹೊರತು ರೂಪ್ಯಕ್ಕೆ ಅಧಿಷ್ಠಾನವಾಗುವುದಿಲ್ಲ. ಆದರಿಂದ ರೂಪ್ಯದ ಅಧಿಷ್ಠಾನವು ಶುಕ್ತಿ ಎಂದು ವ್ಯವಹಾರವಿಲ್ಲ.

**ನಾಂತ್ಯಃ । ಸತ್ತ್ವೇಪಿ ಉಕ್ತರೀತ್ಯಾ ಸಂಬಂಧಾಂತರೇಣೈವ ದೃಶ್ಯತ್ವೋಪಪತ್ತ್ಯಾ ಅಪ್ರಯೋಜಕತ್ವಾತ್ ।**

'ಸತ್ಯತ್ವೇ ದೃಶ್ಯತ್ವಾನುಪಪತ್ತೇಃ' ಎನ್ನುವುದಕ್ಕೆ ದೃಶ್ಯತ್ವಾನ್ಯಥಾನುಪಪತ್ತಿಯಿಂದ ಮಿಥ್ಯಾತ್ವ ಸಿದ್ಧಿಸುವುದೆಂದು ಅರ್ಥಾಪತ್ತಿಯನ್ನು ಹೇಳುವ ಅಭಿಪ್ರಾಯವೆ? ಅಥವಾ ಸತ್ಯತ್ವಪಕ್ಷದಲ್ಲಿ ದೃಶ್ಯತ್ವ ಹೇತುವು ಕೂಡಲಾರದೆಂದು ಅನುಕೂಲತರ್ಕಮಾತ್ರವನ್ನು ಹೇಳುವ ಅಭಿಪ್ರಾಯವೆ? ಎಂದು ವಿಕಲ್ಪಮಾಡಿ ಅರ್ಥಾಪತ್ತಿಯನ್ನು ಹೇಳುವ ಮೊದಲನೆ ಅಭಿಪ್ರಾಯವನ್ನು ನಿರಾಸಮಾಡಿದ್ದಾಯಿತು. ಇದೀಗ ಅನುಕೂಲ ತರ್ಕಮಾತ್ರವನ್ನು ಹೇಳುವ ಎರಡನೆ ಅಭಿಪ್ರಾಯವನ್ನು ನಿರಾಕರಿಸುತ್ತಾರೆ— ಸತ್ವಪಕ್ಷದಲ್ಲಿಯೂ ಹಿಂದೆ ಹೇಳಿದಂತೆ ದೃಗ್‌ದೃಶ್ಯಗಳಿಗೆ ಅಧ್ಯಾಸವಿಲ್ಲದೇ ಬೇರೆಯೇ ಸಂಬಂಧದಿಂದ ದೃಶ್ಯತ್ವ ಕೂಡುವುದರಿಂದ ಮಿಥ್ಯಾತ್ವಸಾಧನೆಗೆ ದೃಶ್ಯತ್ವಹೇತು ಅಪ್ರಯೋಜಕವಾಗಿದೆ' ಎಂದು.

**ಕಿಂಚ ನ ತಾವತ್ ಅನಿರ್ವಾಚ್ಯತ್ವಾಭಾವಃ ಆಪಾದಕಃ । ತದ್ವತೋಽಪಿ ತುಚ್ಛಸ್ಯ ಪರೋಕ್ಷಧೀವೇದ್ಯತ್ವೇನ ದೃಶ್ಯತ್ವಾತ್ । ನಾಪಿ ಸತ್ತ್ವಂ । ಸತ್ತ್ವೇಽಪಿ ಬ್ರಹ್ಮಣಃ ಸ್ವವ್ಯವಹೃತ್ಯಾ ಇವ, ಘಟಸ್ಯಾಪಿ ಸ್ವಜ್ಞಾನೇನ ಸಂಬಂಧೋಪಪತ್ತೇಃ ।**

'ಸತ್ಯತ್ವೇ ದೃಶ್ಯತ್ವಾನುಪತ್ತೇಃ' ಎಂಬ ತರ್ಕದಲ್ಲಿ ದೃಶ್ಯತ್ವಾನುಪಪತ್ತಿಯ ಆಪಾದನೆಗೆ ಸತ್ಯತ್ವವು ಆಪಾದಕ. ಈ ಸತ್ಯತ್ವವೆಂದರೆ ಅನಿರ್ವಚನೀಯತ್ವಾಭಾವವೆ? ಅಥವಾ ಪಾರಮಾರ್ಥಿಕತ್ವವೆ? ಎಂದು ವಿಕಲ್ಪ. ಅನಿರ್ವಾಚ್ಯತ್ವಾಭಾವವು ಆಪಾದಕ ಎನ್ನುವುದು ಸರಿಯಲ್ಲ. ಅನಿರ್ವಾಚ್ಯತ್ವಾಭಾವವು ತುಚ್ಛದಲ್ಲಿ ಅತ್ಯಂತಾಸತ್ತಿನಲ್ಲಿಯೂ ಇದೆ. ಅಲ್ಲಿ ದೃಶ್ಯತ್ವವಿದೆ. ಏಕೆಂದರೆ ಅದು ಪರೋಕ್ಷಜ್ಞಾನಕ್ಕೆ ವಿಷಯವಾಗಿದೆ. ಪಾರಮಾರ್ಥಿಕತ್ವವೇ ಆಪಾದಕವೆಂದರೆ ಬ್ರಹ್ಮನಲ್ಲಿ ಸ್ವವ್ಯವಹಾರದ ಸಂಬಂಧವಿರುವಂತೆ ಘಟಕ್ಕೂ ಕೂಡ ತನ್ನ ಜ್ಞಾನದ ಸಂಬಂಧವಿರಬಹುದು. ಪಾರಮಾರ್ಥಿಕತ್ವವು ಎರಡೂ ಕಡೆಗಳಲ್ಲಿಯೂ ಬಾಧಕವಾಗುವುದಿಲ್ಲ.

**ಕಿಂಚ ಆಧ್ಯಾಸಿಕ ಸಂಬಂಧ ಇತಿ ಕೋಽರ್ಥಃ? ಕಿಂ ಯಃಕಶ್ಚಿತ್ ಸಂಬಂಧಃ ಏವ ಅಧ್ಯಸ್ತ ಇತಿ? ಕಿಂ ವಾ ತದಧ್ಯಸ್ತಮೇವ ಸಂಬಂಧಃ ಇತಿ? ಆದ್ಯೇ ನ ದೃಶ್ಯಮಿಥ್ಯಾತ್ವಸಿದ್ಧಿರಿತ್ಯುಕ್ತಂ । ನಾಂತ್ಯಃ । ತ್ವನ್ಮತೇ ಜ್ಞೇಯವತ್ ತಜ್ಜ್ಞಾನಸ್ಯಾಪಿ ಅಧ್ಯಸ್ತತ್ವೇನ ತತ್ರ ತಸ್ಯ ಅನಧ್ಯಾಸಾತ್ ಇತ್ಯುಕ್ತತ್ವಾತ್ ।**

ಆಧ್ಯಾಸಿಕ ಸಂಬಂಧ ಅನುಪಪನ್ನವಾದ್ದರಿಂದ ವಿಷಯತ್ವವನ್ನೇ ಸಂಬಂಧ ಎನ್ನಬೇಕಾಗುತ್ತದೆ. ಏಕೆಂದರೆ ಆಧ್ಯಾಸಿಕ ಸಂಬಂಧ ಎಂದರೆ ಏನರ್ಥ? ಯಾವುದೋ ಒಂದು ಸಂಬಂಧವು ಅಧ್ಯಸ್ತವಾಗಿದೆ ಎಂದೆ? ಅಥವಾ 'ಅದರಲ್ಲಿ ಅಧ್ಯಸ್ತವಾಗುವುದೆ' ಅದರಲ್ಲಿ ಸಂಬಂಧ ಎಂದೆ?

ಒಂದು ಸಂಬಂಧವು ಅಧ್ಯಸ್ತವಾದರೆ ಅದು ಆಧ್ಯಾಸಿಕಸಂಬಂಧ ಎನ್ನುವುದಾದರೆ ಸಂಬಂಧವು ಮಿಥ್ಯಾ ಆದರೂ ಸಂಬಂಧಿಯಾದ ಬ್ರಹ್ಮ ಸತ್ಯ ಹೇಗೋ ಹಾಗೇ ಸಂಬಂಧಿಯಾದ

ಘಟವೂ ಸತ್ಯವಾಗಿರಬಹುದು. ಸಂಬಂಧವು ಅಧ್ಯಸ್ತವಾದರೂ ಸಂಬಂಧಿಗಳು ಸತ್ಯವಾಗಿರುವುದುಂಟು. ವಸ್ತುತಃ ಬೇರೆಬೇರೆಯಾಗಿರುವ ಘಟಪಟಗಳಿಗೆ ಆರೋಪಿತವಾದ ಸಂಯೋಗ ಮಿಥ್ಯಾ ಆದರೂ ಸಂಬಂಧಿಗಳಾದ ಘಟಪಟಗಳು ಸತ್ಯವೆ ತಾನೆ? ಎಂದು ಹಿಂದೆ ಹೇಳಿದ್ದೇವೆ.

'ಅದರಲ್ಲಿ ಅಧ್ಯಾಸವಾಗುವುದೇ ಅದರ ಸಂಬಂಧ' ಎನ್ನುವ ಪಕ್ಷದಲ್ಲಿ, ನಿನ್ನ ಮತದಲ್ಲಿ ಜ್ಞೇಯವಾದ ಘಟದಂತೆಯೇ ಘಟಜ್ಞಾನವೂ ವ್ಯಾವಹಾರಿಕವಾದ್ದರಿಂದ ಅಧ್ಯಸ್ತವಾಗಿದೆ ಎಂದಮೇಲೆ ಅಧ್ಯಸ್ತವಾದ ಜ್ಞಾನದಲ್ಲಿ, ಅಧ್ಯಸ್ತವಾದ ಘಟಕ್ಕೆ ಅಧ್ಯಾಸ ಶಕ್ಯವಿಲ್ಲ ಎಂದು ಹಿಂದೆ ಹೇಳಿದ್ದೇವೆ.

**ಏವಂಚ-**

**ಶಾಬ್ದವೃತ್ತೇರ್ಹಿ ವಿಷಯೋ ಬ್ರಹ್ಮ ತತ್ರ ನ ಕಲ್ಪಿತಂ ।**
**ಯಥಾ ತಥಾ ದೃಗ್‌ವಿಷಯೋ ದೃಶ್ಯಂ ನ ದೃಶಿ ಕಲ್ಪಿತಂ ॥**
**ಅವಿದ್ಯಾವಿಷಯೋ ಬ್ರಹ್ಮ ಹ್ಯವಿದ್ಯಾಯಾಂ ನ ಕಲ್ಪಿತಂ ।**
**ಯಥಾ ತಥಾ ದೃಶಾ ಗ್ರಾಹ್ಯಂ ನ ವಿಶ್ವಂ ದೃಶಿ ಕಲ್ಪಿತಂ ॥**

ಶಬ್ದವ್ಯವಹಾರ ವಿಷಯವಾದ ಬ್ರಹ್ಮವು ಆ ವ್ಯವಹಾರದಲ್ಲಿ ಕಲ್ಪಿತವಾಗಿಲ್ಲ. ಹೇಗೋ ಹಾಗೇ ಜ್ಞಾನವಿಷಯವಾಗಿರುವ ದೃಶ್ಯವು ಜ್ಞಾನದಲ್ಲಿ ಕಲ್ಪಿತವಾಗಿಲ್ಲ. ಅವಿದ್ಯಾವಿಷಯವಾದ ಬ್ರಹ್ಮವು ಅವಿದ್ಯೆಯಲ್ಲಿ ಕಲ್ಪಿತವಾಗಿಲ್ಲ. ಹೇಗೋ ಹಾಗೇ ಜ್ಞಾನವಿಷಯವಾದ ವಿಶ್ವವು ಜ್ಞಾನದಲ್ಲಿ ಕಲ್ಪಿತ ವಾಗಿಲ್ಲ.



**तस्माद्दृग्दृश्येच्छेष्यमाणादेर्नाध्यासिकस्संबंधः । किंत्वन्य एव ।**

**कोऽसाविति चेत्, न । संबंधेनैवातिप्रसंगे निरस्ते विशेष जिज्ञासाया विशेषगत विशेष जिज्ञासाया इवानर्थकत्वात् । प्रमाणस्य चोक्तत्वात् । संयोगसमवायांतर्भावे च तल्लक्षणस्यैव, बहिर्भावे तु तदितरत्वे सति संबंधत्वादेर्लक्षणत्वात् । विशेषसंज्ञायाश्च यथारुचि कल्प्यत्वात् ।**

**यत्तु संबंधस्य संबंधिभिन्नत्वेऽनवस्था, नचेत्संबंधासिद्धिरिति संबंध सामान्य खण्डनं, तत् उक्तरीत्या स्वव्याहतम् । युक्तं च दृश्यत्वाद्यंतरहीनस्यापि दृश्यत्वादेरिव संबंधस्यापि क्वचित्स्वनिर्वाह-कत्वम् ।**

यदपि ज्ञानविषयत्वनिरुक्तिखण्डनं, तत् प्रकृतानुपयुक्तम् । अनतिप्रसंगाय हि दृग्दृश्ययोस्सबंधो वाच्यः । न तु ज्ञानविषयत्वं निर्वक्तव्यम् । न च विषयत्वस्यानिरुक्तिमात्रेण विषयस्य मिथ्यात्वम् । विषयित्वस्यानिरुक्तावपि विषयीभूतदृग्वत् सत्त्वोपपत्तेः । स्वव्याहतं च । त्वयैव प्रमाणज्ञानं स्वविषयावरणेत्याद्युक्तेः । दृग्विषयत्वस्य हेतूकृतत्वाच्च ।

नच प्रमाणज्ञाने विषयोऽध्यस्तः । तदज्ञानजन्यं तज्ज्ञाननिवर्त्यं वाऽध्यासं प्रति विषयत्वाद्वा तदनुविद्धतया प्रतीयमानत्वविशेषाद्वाऽन्यस्य तत्राध्यस्तत्वस्याभावाच्च । न ह्यनिर्वाच्यत्वादिरूपं साधारणमध्यस्तत्वं दृग्विशेषप्रकाश्यत्वे तन्त्रम् । किंच—

यादृशं विषयत्वं ते वृत्तिं प्रति चिदात्मनः ।
तादृशं विषयत्वं मे दृश्यस्यापि दृशं प्रति ।।

नन्वनिर्वाच्यमेव विषयत्वं मया व्यवहृतमिति चेन्न । विषयत्वस्यानिर्वाच्यत्वेऽपि तव ब्रह्मवन्ममापि जगतस्सत्त्वोपपत्तेः । त्वयापि व्यावहारिकसत्त्वस्यासंकीर्णव्यवहारस्य च सिद्ध्यर्थं व्यवहाराविसंवादिनो लक्षणस्यापि प्रमाणवदविद्यादाविव वक्तव्यत्वाच्च ।

---

ननु कोऽसाविति किं लक्षणं पृच्छति उत प्रमाणम्, आहोस्विन्नामेति विकल्प्य तत्र नाद्य इत्याह **सम्बन्धेनैवेति । अनर्थकत्वादिति ।** नाति प्रयोजनकत्वादित्यर्थः । द्वितीयं निराह **प्रमाणस्य चेति ।।** विशिष्टबुद्ध्यादिरूपस्येत्यर्थः ।

ननु न विशेषजिज्ञासावैयर्थ्यम् । तस्याः लक्षणजिज्ञासात्वेन लक्षणज्ञानस्य च

व्यावृत्तिव्यवहारप्रयोजनकत्वादित्याशंक्याह **संयोगेति ।** तृतीयं निराह **विशेषसंज्ञायाश्चेति । सम्बन्धासिद्धिरिति ।** सम्बन्धस्य सम्बन्धिभिन्नत्वनियमादिति भावः । **स्वव्याहतमिति ।** अध्यस्तत्वेऽपि एवं खण्डनावतारादिति भावः । ननु न स्वव्याहतम् । आध्यासिकसम्बन्धस्यापि अनिर्वचनीयत्वांगीकारात् इत्यत आह **युक्तं च दृश्यत्वादीति ।** अत्रादिपदात् हेत्वन्तरपरिग्रहः । दृश्यत्वान्तरांगीकारेऽनवस्थापत्तिः, अविशिष्टधीव्यावृत्तविशिष्टधीविषयस्यैव सम्बन्धत्वेन सम्बन्धस्य सम्बन्धिभिन्नत्वनियमोऽसिद्ध एवेति भावः ।

ननु ज्ञानविषययोराध्यासिकसम्बन्धस्यैव मया स्वीकारात् न स्वव्याहतिरित्याशंक्य निराकरोति **न चेति ।।** त्वयाऽनभ्युपगमादिति भावः । **तदज्ञानजन्यमिति ।।** तथाच अध्यस्तत्वं सम्बन्ध इति वदतापि त्वया विषयत्वं स्वीकृतमेवेति भावः । ननु तत्राध्यस्तत्वं तत्प्रकाश्यत्वे न तन्त्रम्, किंतु अध्यस्तत्वसामान्यम्, अतो न स्वव्याहतिरित्याशंक्याह **नहीति ।।** अतिप्रसंगादिति भावः ।



**ತಸ್ಮಾತ್ ದೃಗ್-ದೃಶ್ಯ ಇಚ್ಛಾ-ಇಷ್ಯಮಾಣಾದೇಃ ನಾಧ್ಯಾಸಿಕಃ ಸಂಬಂಧಃ। ಕಿಂತು ಅನ್ಯ ಏವ। ಕೋಽಸೌ ಇತಿ ಚೇನ್ನ। ಸಂಬಂಧೇನೈವ ಅತಿಪ್ರಸಂಗೇ ನಿರಸ್ತೇ ವಿಶೇಷ ಜಿಜ್ಞಾಸಾಯಾ ವಿಶೇಷಗತ ವಿಶೇಷ ಜಿಜ್ಞಾಸಾಯಾ ಇವ ಅನರ್ಥಕತ್ವಾತ್। ಪ್ರಮಾಣಸ್ಯ ಚ ಉಕ್ತತ್ವಾತ್।**

ಆದರಿಂದ ದೃಗ್-ದೃಶ್ಯಗಳಿಗೆ ಇಚ್ಛಾ-ಇಷ್ಯಮಾಣಗಳಿಗೆ ಹೇಗೋ ಹಾಗೇ ಸಂಬಂಧವು ಆಧ್ಯಾಸಿಕವಲ್ಲ. ಬೇರೆಯೇ ಇದೆ. ಅದು ಯಾವುದೆಂದು ಕೇಳಿದರೆ ಅದು ಯುಕ್ತವಲ್ಲ. ಸಂಬಂಧಸಾಮಾನ್ಯದಿಂದಲೇ ಅತಿಪ್ರಸಂಗ ಪರಿಹಾರವಾಗುತ್ತಿರುವಾಗ ವಿಶೇಷದ ಬಗ್ಗೆ ಕೇಳಿದರೆ ಅದು ವಿಶೇಷದಲ್ಲಿಯೂ ವಿಶೇಷದ ಬಗ್ಗೆ ಕೇಳುವಂತೆ, ಅನರ್ಥಕವಾಗುತ್ತದೆ. ಪ್ರಮಾಣವನ್ನು ಕೇಳುವುದಾದರೆ, ಪ್ರಮಾಣವನ್ನು ಹೇಳಿದ್ದೇವೆ.

**ಸಂಯೋಗ ಸಮವಾಯಾಂತರ್ಭಾವೇ ಚ ತಲ್ಲಕ್ಷಣಸ್ಯೈವ, ಬಹಿರ್ಭಾವೇ ತು ತದಿತರತ್ವೇ ಸತಿ ಸಂಬಂಧತ್ವಾದೇರ್ಲಕ್ಷಣತ್ವಾತ್। ವಿಶೇಷಸಂಜ್ಞಾಯಾಶ್ಚ ಯಥಾರುಚಿ ಕಲ್ಪ್ಯತ್ವಾತ್।**

ದೃಗ್‌ದೃಶ್ಯ ಸಂಬಂಧಕ್ಕೆ ಲಕ್ಷಣವೇನು, ಹೆಸರೇನು? ಎಂದು ಕೇಳಿದರೆ, ಹೇಳುತ್ತೇವೆ, ಸಂಯೋಗ ಸಮವಾಯಗಳಲ್ಲಿಯೇ ಈ ಸಂಬಂಧವು ಸೇರುವುದಾದರೆ ಅವುಗಳ ಲಕ್ಷಣವೇ ಇದಕ್ಕೂ ಲಕ್ಷಣ. ಸೇರುವುದಿಲ್ಲವಾದರೆ ತದಿತರತ್ವೇಸತಿ ಸಂಬಧತ್ವವು ಇದಕ್ಕೆ ಲಕ್ಷಣ. ವಿಶೇಷ ನಾಮ ಬೇಕೆಂದರೆ ನೀವೆ ನಿಮಗೆ ಇಷ್ಟಬಂದಂತೆ ನಾಮಕರಣ ಮಾಡಿರಿ.

**ಯತ್ತು ಸಂಬಂಧಸ್ಯ ಸಂಬಂಧಿಭಿನ್ನತ್ವೇ ಅನವಸ್ಥಾ, ನಚೇತ್ ಸಂಬಂಧಾಸಿದ್ಧಿಃ ಇತಿ ಸಂಬಂಧಸಾಮಾನ್ಯಖಂಡನಂ, ತತ್ ಉಕ್ತರೀತ್ಯಾ ಸ್ವವ್ಯಾಹತಂ। ಯುಕ್ತಂ ಚ ದೃಶ್ಯತ್ವಾದ್ಯಂತರಹೀನಸ್ಯಾಪಿ ದೃಶ್ಯತ್ವಾದೇರಿವ ಸಂಬಂಧಸ್ಯಾಪಿ ಕ್ವಚಿತ್ ಸ್ವನಿರ್ವಾಹಕತ್ವಂ।**

ಕಲ್ಪಿಸುವ ಸಂಬಂಧವು ಸಂಬಂಧಿಗಿಂತ ಭಿನ್ನವಾದರೆ ಆ ಸಂಬಂಧವೂ ಕೂಡ ಸಂಬಂಧಿಯಲ್ಲಿ ಸಂಬಂಧಯುಕ್ತವಾದರೇ ಕಾರ್ಯಕಾರಿಯಾಗುವುದರಿಂದ ಅದಕ್ಕೆ ಸಂಬಂಧಿಯಲ್ಲಿ ಇನ್ನೊಂದು ಸಂಬಂಧವನ್ನು ಹೇಳಬೇಕು. ಆ ಇನ್ನೊಂದು ಸಂಬಂಧಕ್ಕೆ ಮತ್ತೊಂದು ಸಂಬಂಧ ಎಂದು ಅನವಸ್ಥೆ ಬರುವುದು. ಸಂಬಂಧವು ಸಂಬಂಧಿಗಿಂತ ಭಿನ್ನವೇ ಎಂಬ ನಿಯಮಾನುಸಾರ ಬೇರೆ ಸಂಬಂಧಬೇಕು. ಅಭಿನ್ನವೆಂದರೆ ಬೇರೆ ಸಂಬಂಧ ಸಿದ್ಧವಾಗಲಾರದು ಎಂದು ಸಂಬಂಧ ಸಾಮಾನ್ಯವನ್ನು ಅದ್ವೈತಿಯು ಖಂಡಿಸುತ್ತಾನೆ. ಅದು ಅಧ್ಯಸ್ತತ್ವ ಸಂಬಂಧವನ್ನೂ ಹೀಗೇ ಖಂಡಿಸಬಹುದು ತಾನೆ? ಮತ್ತು ದೃಶ್ಯತ್ವಾದಿಗಳಲ್ಲಿ ಬೇರೆ ದೃಶ್ಯತ್ವಾದಿಗಳನ್ನು ಹೇಳಿದರೆ ಅನವಸ್ಥಾ, ಹೇಳದಿದ್ದರೆ ದೃಶ್ಯತ್ವಾಸಿದ್ಧಿ ಎಂದು ಅದೇ ದೋಷ ತನಗೆ ಬರುವುದರಿಂದ ಸ್ವವ್ಯಾಹತಿ. ಅನವಸ್ಥಾ ಪರಿಹಾರಕ್ಕೆ ಎಲ್ಲಿಯಾದರೊಂದು ಕಡೆ ದೃಶ್ಯತ್ವದಲ್ಲಿ ಇನ್ನೊಂದು ದೃಶ್ಯತ್ವವಿಲ್ಲದಿದ್ದರೂ ಅದು ಸ್ವನಿರ್ವಾಹಕವಾಗಿ ದೃಶ್ಯತ್ವವೆನಿಸುತ್ತದೆ ಎಂದರೆ ಕ್ವಚಿತ್ ಸಂಬಂಧಕ್ಕೂ ಸಂಬಂಧ ಬೇರೆ ಇಲ್ಲದಿದ್ದರೂ ತಾನೇ ಸ್ವನಿರ್ವಾಹಕವಾಗಿ ಸಂಬಂಧ ಎನಿಸುತ್ತದೆ.

**ಯದಪಿ ಜ್ಞಾನ ವಿಷಯತ್ವ ನಿರುಕ್ತಿಖಂಡನಂ ತತ್ ಪ್ರಕೃತಾನುಪಯುಕ್ತಂ। ಅನತಿಪ್ರಸಂಗಾಯ ಹಿ ದೃಗ್‌ದೃಶ್ಯಯೋಃ ಸಂಬಂಧೋ ವಾಚ್ಯಃ। ನ ತು ಜ್ಞಾನವಿಷಯತ್ವಂ ನಿರ್ವಕ್ತವ್ಯಂ।**

ಜ್ಞಾನವಿಷಯತ್ವ ನಿರ್ವಚನವನ್ನು ಖಂಡಿಸುತ್ತಾನೆ ಅದ್ವೈತಿ. ಅದು ಪ್ರಕೃತ ಅನುಪಯುಕ್ತ. ಘಟಜ್ಞಾನದಲ್ಲಿ ಪಟವು ವಿಷಯವಾದೀತೆಂದು ಅತಿಪ್ರಸಂಗ ಪರಿಹಾರಕ್ಕಾಗಿ ಕರಣ ಸನ್ನಿಕರ್ಷಾದಿ ದ್ವಾರಕವಾದ ದೃಗ್‌ದೃಶ್ಯಗಳ ಸಂಬಂಧವೇನೆಂದು ಹೇಳಬೇಕು ಹೊರತು ಆ ಸಂಬಂಧವನ್ನು ನಿರ್ವಚನ ಮಾಡುವುದು ಬೇಕಿಲ್ಲ.

**ನ ಚ ವಿಷಯತ್ವಸ್ಯ ಅನಿರುಕ್ತಿಮಾತ್ರೇಣ ವಿಷಯಸ್ಯ ಮಿಥ್ಯಾತ್ವಂ। ವಿಷಯಿತ್ವಸ್ಯ ಅನಿರುಕ್ತಾವಪಿ ವಿಷಯೀಭೂತದೃಗ್ವತ್ ಸತ್ವೋಪಪತ್ತೇಃ।**

ವಿಷಯತ್ವ ನಿರ್ವಚನವನ್ನು ಮಾಡಲು ಶಕ್ಯವಾಗುವುದಿಲ್ಲ ಎಂದಮಾತ್ರಕ್ಕೆ ವಿಷಯತ್ವವು

ತಾತ್ವಿಕವಲ್ಲವೆಂದೇನೂ ಸಿದ್ಧವಾಗುವುದಿಲ್ಲ. ಪ್ರಮಾಣಸಿದ್ಧತ್ವದಿಂದಲೆ ತಾತ್ವಿಕತ್ವ ಸಿದ್ಧವಾಗುತ್ತದೆ.. ವಿಷಯಿಯಾದ ದೃಕ್ಕಿನಲ್ಲಿ ವಿಷಯಿತ್ವವನ್ನು ನಿರ್ವಚನ ಮಾಡಲಾಗದಿದ್ದ ಮಾತ್ರಕ್ಕೆ ವಿಷಯಿಯಾದ ದೃಕ್ ಅತಾತ್ವಿಕವೆಂದಾಗುವುದಿಲ್ಲ ಎಂದಮೇಲೆ ವಿಷಯಿ ದೃಕ್ಕಿನಂತೆ ವಿಷಯ ದೃಶ್ಯವೂ ತಾತ್ವಿಕವಾಗಬಹುದು.

**ಸ್ವವ್ಯಾಹತಂ ಚ। ತ್ವಯೈವ ಪ್ರಮಾಣಜ್ಞಾನಂ ಸ್ವವಿಷಯಾವರಣೇತ್ಯಾದ್ಯುಕ್ತೇಃ। ದೃಗ್ವಿಷಯತ್ವಸ್ಯ ಹೇತೂಕೃತತ್ವಾಚ್ಚ।**

ವಿಷಯತ್ವ ನಿರ್ವಚನ ಅಶಕ್ಯವಾದ್ದರಿಂದ ವಿಷಯವು ಮಿಥ್ಯಾ ಎನ್ನುತ್ತಲೇ

'ಪ್ರಮಾಣಜ್ಞಾನಂ ಸ್ವಪ್ರಾಗಭಾವ ವ್ಯತಿರಿಕ್ತ ಸ್ವವಿಷಯಾವರಣ
ಸ್ವನಿವರ್ತ್ಯ ಸ್ವದೇಶಗತ ವಸ್ತ್ವಂತರ ಪೂರ್ವಕಂ'

ಎಂದು ಅವಿದ್ಯಾವಿಷಯದಲ್ಲಿ ಅನುಮಾನಪ್ರಮಾಣವನ್ನು ಹೇಳುವಿ. ಇಲ್ಲಿ ವಿಷಯತ್ವವ್ಯವಹಾರವನ್ನು ನೀನೇ ಮಾಡುವಿ. ನೀನೆ ದೃಶ್ಯತ್ವಾತ್ ಎಂದು ದೃಗ್ವಿಷಯತ್ವವನ್ನು ಮಿಥ್ಯಾತ್ವಸಾಧನೆಗೆ ಹೇತುವಾಗಿ ಮಾಡುವಿ. ಇದೆಲ್ಲ ಸ್ವವ್ಯಾಹತ. ನೀನೆ ನಿರ್ವಚನ ಮಾಡಬೇಕಿದೆ. ನೀನೆ ಖಂಡಿಸುವಿ.

**ನಚ ಪ್ರಮಾಣಜ್ಞಾನೇ ವಿಷಯೋಽಧ್ಯಸ್ತಃ।**

ವಿಷಯತ್ವ ನಿರ್ವಚನ ಖಂಡನದಿಂದ ವಿಷಯತ್ವವನ್ನು ನಾನು ಸರ್ವಥಾ ಖಂಡನೆ ಮಾಡುವುದಿಲ್ಲ. ಅಧ್ಯಸ್ತತ್ವವೆ ವಿಷಯತ್ವ, ತದ್ವ್ಯತಿರಿಕ್ತ ವಿಷಯತ್ವವಿಲ್ಲ ಎನ್ನುತ್ತೇನೆ. 'ಪ್ರಮಾಣಜ್ಞಾನಂ ಸ್ವವಿಷಯಾವರಣ' ಎಂದು ವಿಷಯತ್ವ ವ್ಯವಹಾರವನ್ನು ಮಾಡುವುದು ಅಧ್ಯಸ್ತತ್ವರೂಪವಿಷಯತ್ವ ಅಭಿಪ್ರಾಯದಿಂದ. 'ಸ್ವವಿಷಯ' ಎಂದರೆ ಪ್ರಮಾಣಜ್ಞಾನದಲ್ಲಿ ಅಧ್ಯಸ್ತ ಎಂದೇ ಅರ್ಥ' ಎಂದು ಅದ್ವೈತಿ ಹೇಳಿದರೆ ಹೇಳುತ್ತೇವೆ—ಪ್ರಮಾಣಜ್ಞಾನದಲ್ಲಿ ವಿಷಯ ಅಧ್ಯಸ್ತವೆಂದು ನೀನೇ ಒಪ್ಪಿಲ್ಲ. ಮತ್ತು 'ಪ್ರಮಾಣಜ್ಞಾನ'ವೆಂದರೇ ಅದರ ವಿಷಯ ಅಧ್ಯಸ್ತವಲ್ಲ,, ಸತ್ಯ ಎಂದೆ ಹೇಳಿದಂತಾಗುವುದು. ಸತ್ಯವಾದ ವಿಷಯವನ್ನು ಅಧ್ಯಾಸ ಮಾಡುವುದು, ಅದಕ್ಕೆ ಅಸತ್ಯವಾದ ಪ್ರಮಾಣಜ್ಞಾನವು ಅಧಿಷ್ಠಾನವೆನ್ನುವುದು ಎಲ್ಲವೂ ವ್ಯಾಹತವಾಗುವುದು. ತುಚ್ಛಜ್ಞಾನದಲ್ಲಿ ತುಚ್ಛಾಧ್ಯಾಸವೂ ವ್ಯಾಹತ.

**ತದಜ್ಞಾನಜನ್ಯಂ ತಜ್ಜ್ಞಾನನಿವರ್ತ್ಯಂ ವಾ ಅಧ್ಯಾಸಂ ಪ್ರತಿ ವಿಷಯತ್ವಾದ್ವಾ ತದನುವಿದ್ಧತಯಾ ಪ್ರತೀಯಮಾನತ್ವವಿಶೇಷಾದ್ವಾ ಅನ್ಯಸ್ಯ ತತ್ರಾಧ್ಯಸ್ತತ್ವಸ್ಯಾಭಾವಾಚ್ಚ।**

ದೃಗಧ್ಯಸ್ತತ್ವರೂಪ ದೃಶ್ಯತ್ವವನ್ನು ಹೇಳುವ ನೀನು ಕೂಡ ವಿಷಯತ್ವ ನಿರ್ವಚನ ಮಾಡಲೇಬೇಕು. ಏಕೆಂದರೆ ತತ್ರತದಧ್ಯಸ್ತತ್ವವೆಂದರೆ ತದಜ್ಞಾನ ಜನ್ಯವಾದ ಅಥವಾ ತಜ್ಜ್ಞಾನ

ನಿವರ್ತ್ಯವಾದ ಅಧ್ಯಾಸಕ್ಕೆ ವಿಷಯವಾಗುವುದು, ಅಥವಾ ತದನುವಿದ್ಧವಾಗಿ ಪ್ರತೀಯಮಾನ ವಾಗುವುದು, ಹೊರತು, ಬೇರೆ ಇಲ್ಲ ಎಂದು ನೀನೇ ಒಪ್ಪಿರುವೆ. ಆದರಿಂದ 'ದೃಗ್ ವಿಶೇಷದಲ್ಲಿ ವಿಷಯವಾಗುವುದು' 'ಪ್ರತೀಯಮಾನ ವಾಗುವುದು' ಎಂದರೇನೆಂದು ನೀನು ನಿರ್ವಚನ ಮಾಡಲೇಬೇಕು.

**ನ ಹ್ಯನಿರ್ವಾಚ್ಯತ್ವಾದಿರೂಪಂ ಸಾಧಾರಣಮಧ್ಯಸ್ತತ್ವಂ ದೃಗ್‌ವಿವಿಶೇಷಪ್ರಕಾಶ್ಯತ್ವೇ ತಂತ್ರಂ ।**

ತತ್ರ ಅಧ್ಯಾಸ ವಿಷಯತ್ವ, ತದನುವಿದ್ಧತಯಾ ಪ್ರತೀಯಾಮಾನತ್ವರೂಪ ಅಧ್ಯಸ್ತತ್ವ ವಿಶೇಷವನ್ನು ಪ್ರಕಾಶಪ್ರಯೋಜಕವೆಂದು ನಾನು ಹೇಳುವುದಿಲ್ಲ. ಸಾಮಾನ್ಯ ಅನಿರ್ವಾಚ್ಯಸತ್ವಾದಿಗಳನ್ನೆ ಅಧ್ಯಸ್ತತ್ವವೆಂದು ಹೇಳುತ್ತೇನೆ' ಎಂದರೆ ಸರಿಯಲ್ಲ. ಅನಿರ್ವಾಚ್ಯತ್ವಾದಿಗಳು ಸಾಧಾರಣ, ಸರ್ವವಿಷಯಗಳಲ್ಲಿರುತ್ತವೆ. ಅವು ದೃಕ್‌ವಿಶೇಷಪ್ರಕಾಶ್ಯತ್ವಕ್ಕೆ ಪ್ರಯೋಜಕವೆಂದರೆ ಎಲ್ಲ ವಿಷಯವೂ ಎಲ್ಲರಿಗೂ ಎಲ್ಲ ಕಾಲದಲ್ಲಿ ಪ್ರಕಾಶಿಸಬೇಕಾದೀತು.

**ಕಿಂಚ-**

**ಯಾದೃಶಂ ವಿಷಯತ್ವಂ ತೇ ವೃತ್ತಿಂ ಪ್ರತಿ ಚಿದಾತ್ಮನಃ ।**
**ತಾದೃಶಂ ವಿಷಯತ್ವಂ ಮೇ ದೃಶ್ಯಸ್ಯಾಪಿ ದೃಶಂ ಪ್ರತಿ ॥**

**ನನ್ವನಿರ್ವಾಚ್ಯಮೇವ ವಿಷಯತ್ವಂ ಮಯಾ ವ್ಯವಹೃತಂ ಇತಿ ಚೇನ್ನ । ವಿಷಯತ್ವಸ್ಯ ಅನಿರ್ವಾಚ್ಯತ್ವೇಽಪಿ ತವ ಬ್ರಹ್ಮವತ್ ಮಮಾಪಿ ಜಗತಃ ಸತ್ಯೋಪಪತ್ತೇಃ ।**

ವೃತ್ತಿಯಲ್ಲಿ ಅಧ್ಯಸ್ತವಾಗದೇ ಇರುವ ಬ್ರಹ್ಮಚೈತನ್ಯಕ್ಕೆ ಯಾವರೀತಿಯ ವೃತ್ತಿವಿಷಯತ್ವವನ್ನು ನೀನು ಹೇಳುವಿಯೋ ಅದೇ ರೀತಿಯ ವಿಷಯತ್ವವು ಘಟಾದಿ ದೃಶ್ಯಕ್ಕೆ ಘಟಾದಿ ಜ್ಞಾನರೂಪದೃಕ್ಕಿನ ಸಂಬಂಧ ಎಂದು ನಾವು ಹೇಳುತ್ತೇವೆ. ಆದರಿಂದ ವಿಷಯತ್ವ ನಿರ್ವಚನವನ್ನು 'ನೀವೇ ಮಾಡಿರಿ' ಎನ್ನಬೇಡ. ನೀನೇ ಮಾಡು, 'ನಾನು ಬ್ರಹ್ಮಚೈತನ್ಯಕ್ಕೆ ವೃತ್ತಿಯ ಸಂಬಂಧವು ಅನಿರ್ವಾಚ್ಯವಾದ ವಿಷಯತ್ವ ಎನ್ನುತ್ತೇನೆ' ಎಂದು ನೀನು ಎಂದರೆ ನಾನೂ ಅದನ್ನೇ ಒಪ್ಪುತ್ತೇನೆ. ನನಗೆ ಜಗತ್ತು ಸತ್ಯವೆಂದು ಸಿದ್ಧವಾದರೆ ಸಾಕು. ಬ್ರಹ್ಮಚೈತನ್ಯದಲ್ಲಿ ವಿಷಯತ್ವವು ನಿನಗೆ ಅನಿರ್ವಾಚ್ಯವಾದರೂ ವಿಷಯವಾದ ಬ್ರಹ್ಮಚೈತನ್ಯ ನಿನಗೆ ಸತ್ಯವಾಗುವುದಾದರೆ ನನಗೂ ಜಗತ್ತಿನಲ್ಲಿ ವಿಷಯತ್ವವು ಅನಿರ್ವಚನೀಯವಾದರೂ ವಿಷಯವಾದ ಜಗತ್ತು ಸತ್ಯವಾಗಿರಲೂ ಬಾಧಕವಿಲ್ಲ.

**ತ್ವಯಾಪಿ ವ್ಯಾವಹಾರಿಕಸತ್ವಸ್ಯ ಅಸಂಕೀರ್ಣ ವ್ಯವಹಾರಸ್ಯ ಚ ಸಿದ್ಧ್ಯರ್ಥಂ ವ್ಯವಹಾರಾವಿಸಂವಾದಿನೋ ಲಕ್ಷಣಸ್ಯಾಪಿ ಪ್ರಮಾಣವತ್ ಅವಿದ್ಯಾದಾವಿವ ವಕ್ತವ್ಯತ್ವಾಚ್ಚ ।**

ಜ್ಞಾನವಿಷಯವಾದ ಪ್ರಪಂಚದಲ್ಲಿ ವ್ಯಾವಹಾರಿಕಸತ್ವವೂ, ಪ್ರಾತಿಭಾಸಿಕ ವಿಷಯದಲ್ಲಿ ಅತಿವ್ಯಾಪ್ತವಾಗದ ವ್ಯವಹಾರವೂ ಸಿದ್ಧಿಸಲು, ವ್ಯವಹಾರಅವಿಸಂವಾದಿಯಾದ ಪ್ರಾತಿಭಾಸಿಕದಲ್ಲಿ

ಅತಿ ವ್ಯಾಪ್ತವಾಗದ ವಿಷಯತ್ವ ಲಕ್ಷಣವನ್ನೂ ಹೇಳಬೇಕು. ಪ್ರಮಾಣವನ್ನೂ ಹೇಳಬೇಕು. ಅವಿದ್ಯಾದಿಗಳಲ್ಲಿ ಹೇಗೋ ಹಾಗೆ ಪ್ರಪಂಚದಲ್ಲಿಯೂ ಲಕ್ಷಣ ಪ್ರಮಾಣಗಳೆರಡನ್ನೂ ನೀನು ಹೇಳಬೇಕಾಗಿರುವಾಗ ನೀನೇ ಅವುಗಳನ್ನು ಖಂಡಿಸುವುದು ಸ್ವವ್ಯಾಹತ.



कथं च त्वया साध्यं मिथ्यात्वं निर्ब्रुवता साधनं दृग्विषयत्वं न निर्वक्तव्यम् ।

नच तवापि घटादौ पटाद्यसंकीर्ण व्यावहारिक पृथुबुध्नोदराद्याकाराद्यज्ञाने असंकीर्ण घटादिव्यवहारः ।

नन्वसंकीर्णाकारज्ञानमात्रेण तदुपपत्तौ किं तन्निर्वचनेनेति चेत् समं ममापि । इयांस्तु विशेषः । तव स आकारस्सद्विलक्षणः, मम तु सन्निति । अनिरुच्यमानोऽपि स तव येन मानेनाप्रातिभासिकः, तेनैव मम तात्त्विकोऽस्तु । नच लक्षणोक्त्यनुक्तिभ्यां सदसद्वैलक्षण्य रूपानिर्वचनीयत्व हानिलाभौ । ब्रह्मण्यपि श्रौतस्यापि जगत्कारणत्वादिलक्षणस्य कारणत्वादिखण्डनरीत्या असम्भवात् । त्वयैव

कीदृक्तत्प्रत्यगिति चेत्तादृगीदृगिति द्वयम् ।
यत्र न प्रसरत्येतत्प्रत्यगित्यवधारय ।।

इति ब्रह्मण्यपि दुर्निरूपत्वस्योक्तत्वाच्च । प्रपञ्चादावपि त्वदुक्तानिर्वाच्यत्वादिलक्षणसम्भवाच्च । ''यत्कठिनं सा पृथिवी''त्यादिश्रुत्या पृथिव्यादीनामपि लक्षणोक्तेश्च ।

तस्मात्प्रमितस्येत्थमिति निर्वक्तुमशक्यत्वं प्रतिपुरुषमुखं स्पष्टाबाधितदृष्टिदृष्ट विलक्षण संस्थान विशेषस्येव सत्त्वेऽप्यद्भुतत्वादेव युक्तम् । उक्तं हि ''अद्भुतत्वादनिर्वाच्य''मिति । नहि शुक्तिरूप्यस्येतरभेदकं रूप्यत्वं प्रातीतिक जाति रूपतया सुवचमिति

**तद् व्यावहारिकम् । न वा मुखसंस्थानविशेषो दुर्वच इति स प्रातिभासिकः, न वा ब्रह्मण आनन्दत्व ज्ञानत्व सत्यत्व स्वप्रकाशत्वादिकं खण्डनोक्त रीत्या दुर्वचमिति ब्रह्म तत्त्वतो नानन्दाद्यात्मकम् ।**

---

ननु अनिर्वचनीये विषयत्वे अनिर्वचनीयमेव लक्षणप्रमाणादि वक्तव्यमिति को दोष इत्यत आह **कथञ्चेति** ।। अन्यथा पदार्थाज्ञाने अज्ञानरूपासिद्धिरिति भावः ।। **नचतवापीति** ।। तथाचासंकीर्णव्यवहारसिद्ध्यर्थं त्वयापि लक्षणं निर्वक्तव्यमिति भावः ।

नन्वनिरुच्यमानत्वे तस्य तात्त्विकत्वं न स्यात् इत्याशंक्याह **अनिरुच्यमानोऽपीति** ।। ननु मास्तु प्रातिभासिकवैलक्षण्यं प्रपञ्चे । तथाच लक्षणानिर्वचने तात्त्विकमेव न सिध्येदित्याशंक्य निराकरोति **नच लक्षणोक्तीति** ।। **ब्रह्मण्यपीति** ।। लक्षणानिर्वचनमात्रेणासत्त्वे ब्रह्मणोऽपि सत्त्वं नं सिध्येदिति भावः ।। **त्वयैवेति** ।। तथा च दुर्निरूपत्वमात्रेण सत्त्वासिद्धिर्न वक्तव्या स्ववचनविरोधादिति भावः ।। **प्रपञ्चादाविति** ।। तथाच त्वयैव लक्षणवत्तया निरुक्तत्वेन नासत्त्वमिति भावः ।

ननु यतो वेत्यादिश्रुत्या ब्रह्मणो लक्षणाभिधानात् तस्य अनिर्वचनीयत्वेऽपि न सत्त्वक्षतिः । प्रकृते तु नैवमित्यत आह **यत्कठिनमिति** ।



**ಕಥಂ ಚ ತ್ವಯಾ ಸಾಧ್ಯಂ ಮಿಥ್ಯಾತ್ವಂ ನಿರ್ಬ್ರುವತಾ ಸಾಧನಂ ದೃಗ್ವಿಷಯತ್ವಂ ನ ನಿರ್ವಕ್ತವ್ಯಂ? ನಚ ತವಾಪಿ ಘಟಾದೌ ಪಟಾದ್ಯಸಂಕೀರ್ಣವ್ಯಾವಹಾರಿಕ ಪೃಥುಬುಧ್ನೋದರಾದ್ಯಾಕಾರಾದ್ಯಜ್ಞಾನೇ ಅಸಂಕೀರ್ಣಘಟಾದಿವ್ಯವಹಾರಃ ।**

ಅನಿರ್ವಾಚ್ಯಕ್ಕೆ ಲಕ್ಷಣವಿಲ್ಲ ವಿಷಯತ್ವವು ಅನಿರ್ವಾಚ್ಯ ವಾದ್ದರಿಂದಲೆ ಅದಕ್ಕೆ ಲಕ್ಷಣವನ್ನು ಹೇಳುವುದಿಲ್ಲ ಎನ್ನುವಿಯಾದರೆ ನೀನು ಸಾಧ್ಯವಾದ ಅನಿರ್ವಚನೀಯವಾದ ಮಿಥ್ಯಾತ್ವಕ್ಕೆ ನಿರ್ವಚನ ಮಾಡುವಿ. ಸಾಧನವಾದ ದೃಶ್ಯತ್ವಕ್ಕೆ ನಿರ್ವಚನವನ್ನೇಕೆ ಮಾಡಲಾರೆ? ಮಾಡದಿದ್ದರೆ ಪದಾರ್ಥ

ಅಜ್ಞಾನದಿಂದ ಅಜ್ಞಾನರೂಪ ಅಸಿದ್ಧಿ ಬರುತ್ತದೆ. ಮಿಥ್ಯಾತ್ವವು ಅನಿರ್ವಾಚ್ಯವಲ್ಲ ಎನ್ನಬಾರದು. ಅನಿರ್ವಾಚ್ಯವಲ್ಲವೆಂದರೆ ಅದು ಸತ್ಯವೆ? ಆಗ ಅದ್ವೈತಕ್ಕೆ ಹಾನಿ. ಅಸತ್ತೆ? ನನಗೆ ಇಷ್ಟಾಪತ್ತಿ. ಪರಿಶೇಷದಿಂದ ಅದು ಅನಿರ್ವಾಚ್ಯವೆ ಆಗಬೇಕು. ಅದಕ್ಕೆ ನಿರ್ವಚನ ಮಾಡುತ್ತಿರುವೆ, ನಿನ್ನ ನಿಯಮಕ್ಕೆ ಇಲ್ಲಿ ವ್ಯಭಿಚಾರ. ಆದರಿಂದ ನಿಯಮವಿಲ್ಲ. ಹೀಗಾಗಿ ಮಿಥ್ಯಾತ್ವಸಾಧ್ಯವನ್ನು ನಿರ್ವಚನ ಮಾಡುವ ನೀನು ದೃಗ್‌ವಿಷಯತ್ವ ಹೇತುವನ್ನೇಕೆ ನಿರ್ವಚನ ಮಾಡುತ್ತಿಲ್ಲ?

ತಾತ್ವಿಕಕ್ಕೇ ಲಕ್ಷಣ ನಿರ್ವಚನ ಮಾಡಬೇಕು, ಮಿಥ್ಯಾಭೂತ ವಿಷಯತ್ವಕ್ಕೆ ಬೇಡ ಎಂದರೆ, ನಿನಗೂ ಘಟಾದಿ ವ್ಯಾವಹಾರಿಕ ಪದಾರ್ಥಗಳಲ್ಲಿ ವ್ಯಾವಹಾರಿಕ ಪಟಾದಿಗಳಲ್ಲಿಲ್ಲದ ವ್ಯಾವಹಾರಿಕವಾದ 'ಪೃಥು ಬುಧ್ನ ಉದರಾದಿ' 'ದೊಡ್ಡ ಬುಡಹೊಟ್ಟೆ ಉಳ್ಳ ಪಾತ್ರೆ' ಎಂಬ ಆಕಾರ ಲಕ್ಷಣಗಳಿಲ್ಲದೆ, ಪಟಾದಿಗಳಿಂದ ವ್ಯಾವೃತ್ತವಾದ ಘಟಾದಿ ವ್ಯವಹಾರ ಮಾಡುವುದು ಸಾಧ್ಯವಾಗುವುದಿಲ್ಲ ತಾನೆ?

**ನನು ಅಸಂಕೀರ್ಣ-ಆಕಾರಜ್ಞಾನಮಾತ್ರೇಣ ತದುಪಪತ್ತೌ ಕಿಂ ತನ್ನಿರ್ವಚನೇನ? ಇತಿ ಚೇತ್, ಸಮಂ ಮಮಾಪಿ ।**

ಘಟಪಟಾದಿಗಳ ವಿಲಕ್ಷಣ ಸ್ವರೂಪ ಜ್ಞಾನ ಮಾತ್ರದಿಂದಲೆ ಅವುಗಳ ವಿಲಕ್ಷಣವ್ಯವಹಾರ ಮಾಡಲು ಸಾಧ್ಯವಿರುವಾಗ ಅವುಗಳ ಲಕ್ಷಣ ನಿರ್ವಚನವೇಕೆ ಮಾಡಬೇಕು? ಎಂದರೆ ಘಟಪಟಾದಿ ವಿಷಯಗಳ ವಿಲಕ್ಷಣಸ್ವರೂಪಜ್ಞಾನ ಮಾತ್ರದಿಂದಲೇ ವಿಲಕ್ಷಣ ವಿಷಯತ್ವ ವ್ಯವಹಾರ ಮಾಡಲು ಬರುವಾಗ ವಿಷಯತ್ವ ಲಕ್ಷಣ ನಿರ್ವಚನವೇಕೆ ಮಾಡಬೇಕೆಂದು ನಾನೂ ಕೇಳುತ್ತೇನೆ. ಅದರಿಂದ ಲಕ್ಷಣ ನಿರ್ವಚನ ಇಬ್ಬರಿಗೂ ಆವಶ್ಯಕವೆ.

**ಇಯಾಂಸ್ತು ವಿಶೇಷಃ । ತವ ಸ ಆಕಾರಃ ಸದ್‌ವಿಲಕ್ಷಣಃ ಮಮ ತು ಸನ್ನಿತಿ ।**

ಇಷ್ಟೇ ವ್ಯತ್ಯಾಸ, ನಿನಗೆ ಆ ಆಕಾರ ಲಕ್ಷಣವೆಲ್ಲವೂ ಸದ್‌ವಿಲಕ್ಷಣ, ಮಿಥ್ಯಾ. ನನಗೆ ಅವೆಲ್ಲವೂ ಸತ್, ಸತ್ಯ. ಲಕ್ಷಣ ನಿರ್ವಚನ ಇಬ್ಬರಿಗೂ ಆವಶ್ಯಕವೆ.

**ಅನಿರುಚ್ಯಮಾನೋಽಪಿ ಸ ತವ ಯೇನ ಮಾನೇನ ಅಪ್ರಾತಿಭಾಸಿಕಃ, ತೇನೈವ ಮಮ ತಾತ್ವಿಕೋಽಸ್ತು ।**

ನಿನಗೆ ಆಕಾರ ಲಕ್ಷಣಗಳು ಸತ್ಯವೆಂದು ಹೇಗೆ ಸಿದ್ಧವಾಗುತ್ತದೆ ಎಂದರೆ, ಲಕ್ಷಣ ನಿರ್ವಚನ ಮಾಡದಿದ್ದರೂ ನಿನಗೆ ಪ್ರಮಾಣ ಬಲದಿಂದ ಅವು ಪ್ರಾತಿಭಾಸಿಕ ವಿಲಕ್ಷಣವೆಂದು ಸಿದ್ಧವಾಗುತ್ತಿದೆ ತಾನೆ? ಅದೇ ಪ್ರಮಾಣ ಬಲದಿಂದ ಅದು ಸತ್ಯವೆಂದು ನನಗೆ ಸಿದ್ಧವಾಗುವುದು. ನಿರ್ವಚನ ನಮಗೆ ಇಬ್ಬರಿಗೂ ಬೇಕಾಗಿಲ್ಲ.

**ನಚ ಲಕ್ಷಣೋಕ್ತ್ಯನುಕ್ತಿಭ್ಯಾಂ ಸದಸದ್‌ವೈಲಕ್ಷಣ್ಯರೂಪ-ಅನಿರ್ವಚನೀಯತ್ವ**

**ಹಾನಿಲಾಭೌ। ಬ್ರಹ್ಮಣ್ಯಪಿ ಶ್ರೌತಸ್ಯಾಪಿ ಜಗತ್ಕಾರಣತ್ವಾದಿಲಕ್ಷಣಸ್ಯ ಕಾರಣತ್ವಾದಿ-ಖಂಡನರೀತ್ಯಾ ಅಸಂಭವಾತ್।**

'ವಿಷಯಕ್ಕೆ ಆಕಾರಲಕ್ಷಣಗಳನ್ನು ಹೇಳಿದರೆ ವಿಷಯದ ಅನಿರ್ವಚನೀಯತ್ವಕ್ಕೇ ಹಾನಿಉಂಟಾಗುವುದು ಹೇಳದಿದ್ದರೇ ಲಾಭ' ಎಂದು ಹೇಳಬೇಡ. ಅನಿರ್ವಚನೀಯತ್ವವೆಂದರೆ ನಿರ್ವಚನಾನರ್ಹತ್ವವೆಂದಿಟ್ಟುಕೊಳ್ಳಬಾರದು. ಸದಸದ್‌ವಿಲಕ್ಷಣತ್ವವು ಅನಿರ್ವಚನೀಯತ್ವವೆಂದಿಟ್ಟು ಕೊಳ್ಳಬೇಕು. ಆಗ ಲಕ್ಷಣವನ್ನು ನಿರ್ವಚನ ಮಾಡಿದ ಮಾತ್ರಕ್ಕೆ ಅನಿರ್ವಚನೀಯತ್ವಹಾನಿ, ಮಾಡದಿದ್ದರೆ ಲಾಭ' ಎಂದಾಗುವುದಿಲ್ಲ.

ನಿರ್ವಚನಾನರ್ಹತ್ವವನ್ನೇ ಅನಿರ್ವಚನೀಯತ್ವವೆಂದಿಟ್ಟುಕೊಂಡರೆ ಬ್ರಹ್ಮನಲ್ಲಿ ಅತಿವ್ಯಾಪ್ತಿ. ಬ್ರಹ್ಮನಲ್ಲಿಯೂ ಶ್ರುತ್ಯುಕ್ತವಾದ ಜಗತ್ಕಾರಣತ್ವಾದಿ ಲಕ್ಷಣನಿರ್ವಚನವು ಕಾರಣತ್ವಾದಿ ಖಂಡನ ರೀತಿಯಿಂದ ಅಸಂಭವವಾದೀತು, ಇದನ್ನು ಇಷ್ಟಾಪತ್ತಿ ಎನ್ನುವಂತಿಲ್ಲ. ಲಕ್ಷಣವು ಶ್ರುತ್ಯುಕ್ತವಾಗಿದೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂದು ಶ್ರುತಿಯು ಸ್ಪಷ್ಟವಾಗಿ ಜಗತ್ಕಾರಣತ್ವವನ್ನು ಹೇಳುತ್ತಿರುವಾಗ ಅದನ್ನು ನಿರ್ವಚನಾರ್ಹತ್ವಪ್ರಾಪ್ತಿಯ ಭಯದಿಂದ ಅಲ್ಲಗಳೆದರೆ ಶ್ರುತಿಗೆ ವ್ಯಾವಹಾರಿಕ ಪ್ರಾಮಾಣ್ಯವೂ ಇಲ್ಲವೆಂದಾದೀತು.

**ತ್ವಯೈವ**

**ಕೀದೃಕ್ ತತ್ ಪ್ರತ್ಯಗಿತಿ ಚೇತ್ ತಾದೃಗ್ ಈದೃಗ್ ಇತಿ ದ್ವಯಂ।**
**ಯತ್ರ ನ ಪ್ರಸರತ್ಯೇತತ್ ಪ್ರತ್ಯಗಿತ್ಯವಧಾರಯ ॥**

**ಇತಿ ಬ್ರಹ್ಮಣ್ಯಪಿ ದುರ್ನಿರೂಪತ್ವಸ್ಯ ಉಕ್ತತ್ವಾಚ್ಚ।**

'ಆ ಪ್ರತ್ಯಗಾತ್ಮಸ್ವರೂಪವೆಂಥಾದ್ದು ಎಂದರೆ ಅಂಥಾದ್ದು ಇಂಥಾದ್ದೆಂದು ಎರಡೂ ಯಾವುದರ ವಿಷಯದಲ್ಲಿ ಹೇಳಲಾಗುವುದಿಲ್ಲವೋ ಅದು ಪ್ರತ್ಯಗಾತ್ಮಸ್ವರೂಪವೆಂದು ತಿಳಿ'

ಎಂದು ನೀನೇ ಬ್ರಹ್ಮನಲ್ಲಿ ಲಕ್ಷಣ ನಿರೂಪಣೆ ಶಕ್ಯವಿಲ್ಲ ದುರ್ನಿರೂಪ ಎಂದಿರುವೆ. ಹೀಗಾಗಿ ಬ್ರಹ್ಮನಿಗೆ ಶ್ರುತ್ಯುಕ್ತವಾದ ಲಕ್ಷಣವೂ ಅಸಂಭವವೆನಿಸೀತು. ಆದರಿಂದ ಅನಿರ್ವಾಚತ್ವವೆಂದರೆ ದುರ್ನಿರೂಪತ್ವವಲ್ಲ.

**ಪ್ರಪಂಚಾದಾವಪಿ ತ್ವದುಕ್ತ-ಅನಿರ್ವಾಚ್ಯತ್ವಾದಿ ಲಕ್ಷಣ ಸಂಭವಾಚ್ಚ।**

'ನೀನು ವಿಷಯ ನಿರ್ವಚನವನ್ನು ಆವಶ್ಯಕವೆಂದು ಒಪ್ಪಿದರೆ ಪ್ರಪಂಚದಲ್ಲಿ ನಿರ್ವಚನ ಯೋಗ್ಯತ್ವವಿರುವಾಗ ಅನಿರ್ವಾಚ್ಯತ್ವವನ್ನು ಹೇಗೆ ಹೇಳಲಾದೀತು?' ಪ್ರಪಂಚಾದಿಗಳಲ್ಲಿ, ಪ್ರಾತಿಭಾಸಿಕದಲ್ಲಿಯೂ ಕೂಡ ಸದಸದ್‌ವಿಲಕ್ಷಣತ್ವರೂಪ ಅನಿರ್ವಾಚ್ಯತ್ವವಿದೆ ಎಂದು ನೀನೆ ಲಕ್ಷಣ ಸಂಭವವನ್ನು ಹೇಳುವುದರಿಂದ ಸಮಸ್ಯೆ ದುರ್ನಿರೂಪತ್ವಲಕ್ಷಣಕ್ಕೇ ಅಸಂಭವದೋಷ.

**'ಯತ್ ಕಠಿನಂ ಸಾ ಪೃಥಿವೀ' ಇತ್ಯಾದಿ ಶ್ರುತ್ಯಾ ಪೃಥಿವ್ಯಾದೀನಾಮಪಿ ಲಕ್ಷಣೋಕ್ತೇಶ್ಚ।**

ನಿರ್ವಚನಾಭಾವರೂಪ ಅನಿರ್ವಾಚ್ಯತ್ವವೇ ಮಿಥ್ಯಾತ್ವ ಎಂದರೆ ಅದು ಪ್ರಪಂಚದಲ್ಲಿ ಅಸಂಭವ. ಶ್ರುತಿಯಲ್ಲಿಯೇ ಯಾವುದು ಕಾಠಿನ್ಯ ಉಳ್ಳದೊ ಅದು ಪೃಥಿವಿ ಎಂದು ಪೃಥಿವಿಗೆ ಲಕ್ಷಣ ನಿರ್ವಚನವಿದೆ. ಅದರಿಂದ ಸದಸದ್ವಿಲಕ್ಷಣತ್ವರೂಪ ಅನಿರ್ವಾಚ್ಯತ್ವವನ್ನೇ ಹೇಳಬೇಕು. ನಿರ್ವಚನವಿರಹವನ್ನು ಹೇಳಬಾರದು.

**ತಸ್ಮಾತ್ ಪ್ರಮಿತಸ್ಯ ಇತ್ಥಮಿತಿ ನಿರ್ವಕ್ತುಮಶಕ್ಯತ್ವಂ, ಪ್ರತಿಪುರುಷಮುಖಂ ಸ್ಪಷ್ಟ–ಅಬಾಧಿತ ದೃಷ್ಟಿದೃಷ್ಟ ವಿಲಕ್ಷಣ ಸಂಸ್ಥಾನವಿಶೇಷಸ್ಯೇವ, ಸತ್ವೇಪಿ ಅದ್ಭುತತ್ವಾದೇವ ಯುಕ್ತಂ। ಉಕ್ತಂ ಹಿ 'ಅದ್ಭುತತ್ವಾದನಿರ್ವಾಚ್ಯಂ' ಇತಿ।**

ಸದಸದ್ವಿಲಕ್ಷಣತ್ವಕ್ಕೆ ಪ್ರಯೋಜಕವೆಂಬ ಅಭಿಮಾನದಿಂದ ಅದ್ವೈತಿಯು ದುರ್ನಿರೂಪತ್ವವನ್ನು ಒಪ್ಪಿದ್ದಾನೆ. ವಸ್ತುತಃ ದುರ್ನಿರೂಪತ್ವವು ಸದಸತ್ ವಿಲಕ್ಷಣತ್ವಕ್ಕೆ ಪ್ರಯೋಜಕವಲ್ಲ. ಪ್ರತಿಯೊಬ್ಬ ವ್ಯಕ್ತಿಯ ಮುಖದಲ್ಲಿಯೂ ಸ್ಪಷ್ಟ ಅಬಾಧಿತವಾದ ದೃಷ್ಟಿಗೆ ಗೋಚರವಾಗುವ ವಿಲಕ್ಷಣ ಆಕಾರವಿಶೇಷ ಕಂಡುಬರುತ್ತದೆ. ಅದು ಸತ್ಯವೇ ಆದರೂ 'ಅದ್ಭುತ' ಅಂದರೆ, ಹಿಂದೆ ಎಂದೂ ಎಲ್ಲಿಯೂ ಕಂಡಿರದ ವಿಲಕ್ಷಣವಾದ ಆಕಾರ ಉಳ್ಳದ್ದಾದರೆ ಅದು ಮಾತಿನಿಂದ ಹೇಳಲು ಅಶಕ್ಯ. ಅನಿರ್ವಾಚ್ಯವೆನಿಸುತ್ತದೆ ಎಂದು ತತ್ವೋದ್ಯೋತದಲ್ಲಿ ಹೇಳಿದ್ದಾರೆ. 'ಅದ್ಭುತತ್ವಾ ದನಿರ್ವಾಚ್ಯಂ' ಎಂದು. ಸತ್ತಾಗಿದ್ದರೂ ಅದ್ಭುತವಾದ್ದರಿಂದ ದುರ್ನಿರೂಪವೆನಿಸುವುದರಿಂದ ದುರ್ನಿರೂಪತ್ವವು ಸದ್‌ವಿಲಕ್ಷಣತ್ವರೂಪ ಅನಿರ್ವಚನೀಯತ್ವಕ್ಕೆ ಪ್ರಯೋಜಕವಲ್ಲ. ಹೀಗಾಗಿ ಪ್ರಮಿತವಾದರೂ ಇದು ಇಂಥಾದ್ದೆಂದು ನಿರ್ವಚನ ಮಾಡಲು ಅಶಕ್ಯವೆನಿಸುವುದು ಅದ್ಭುತತ್ವಪ್ರಯುಕ್ತ ಹೊರತು ಮಿಥ್ಯಾತ್ವಪ್ರಯುಕ್ತವಲ್ಲ.

**ನಹಿ ಶುಕ್ತಿರೂಪ್ಯಸ್ಯ ಇತರಭೇದಕಂ ರೂಪ್ಯತ್ವಂ ಪ್ರಾತೀತಿಕಜಾತಿರೂಪತಯಾ ಸುವಚಮಿತಿ ತದ್ ವ್ಯಾವಹಾರಿಕಂ। ನ ವಾ ಮುಖಸಂಸ್ಥಾನವಿಶೇಷೋ ದುರ್ವಚ ಇತಿ ಸ ಪ್ರಾತಿಭಾಸಿಕಃ। ನ ವಾ ಬ್ರಹ್ಮಣಃ ಆನಂದತ್ವ ಜ್ಞಾನತ್ವ ಸತ್ಯತ್ವ ಸ್ವಪ್ರಕಾಶತ್ವಾದಿಕಂ ಖಂಡನೋಕ್ತರೀತ್ಯಾ ದುರ್ವಚಮಿತಿ ಬ್ರಹ್ಮ ತತ್ವತೋ ನಾನಂದಾದ್ಯಾತ್ಮಕಂ।**

ವಸ್ತು ಪ್ರಮಿತವಾದರೆ ಸತ್ಯ, ಅಪ್ರಮಿತವಾದರೆ ಮಿಥ್ಯಾ ಎಂದು ವ್ಯವಸ್ಥೆ ಹೊರತು 'ಸುವಚವಾದರೆ ಸತ್ಯ, ದುರ್ವಚವಾದರೆ ಮಿಥ್ಯಾ' ಎಂದು ವ್ಯವಸ್ಥೆ ಇಟ್ಟುಕೊಂಡರೆ ಬಹಳ ಗೊಂದಲ ಉಂಟಾಗುವುದು. ಉದಾ: ಶುಕ್ತಿರೂಪ್ಯಕ್ಕೆ ಇತರ ಘಟಾದಿ ವ್ಯಾವರ್ತಕವಾದ ರೂಪ್ಯತ್ವವು ಪ್ರಾತೀತಿಕ ಜಾತಿರೂಪವಾದ್ದರಿಂದ ಸುವಚವಾಗಿದೆ ಎಂದು ಅದು ವ್ಯಾವಹಾರಿಕವೆನಿಸುವುದಿಲ್ಲ. ಅಪ್ರಮಿತವಾದ್ದರಿಂದ ಪ್ರಾತಿಭಾಸಿಕವೇ ಆಗಿದೆ. ಮುಖದ ಆಕಾರ ವಿಶೇಷವು ದುರ್ವಚವೆಂದ

ಮಾತ್ರಕ್ಕೆ ಅದು ಪ್ರಾತಿಭಾಸಿಕವಲ್ಲ. ಪ್ರಮಿತವಾದ್ದರಿಂದ ವ್ಯಾವಹಾರಿಕವೆ. ಬ್ರಹ್ಮನ ಆನಂದತ್ವ ಜ್ಞಾನತ್ವ ಸತ್ಯತ್ವ ಸ್ವಪ್ರಕಾಶತ್ವಾದಿಗಳು ಖಂಡನೋಕ್ತ ರೀತಿಯಿಂದ ದುರ್ವಚವೆಂದು ಬ್ರಹ್ಮ ತಾತ್ವಿಕವಾಗಿ ಆನಂದಾದಿರೂಪನಲ್ಲವೆಂದಾಗುವುದಿಲ್ಲ. ಪ್ರಮಿತವಾದ್ದರಿಂದ ಆನಂದಾದಿ ರೂಪನೆಂದೇ ತಿಳಿಯುತ್ತೇವೆ. ತಾನೆ?



**तस्मान्निर्वचनायोग्यस्यापि विश्वस्येक्षुक्षीरादिमाधुर्यवत् ब्रह्मवच्च प्रामाणिकत्वादेव सत्त्वसिद्धेः सदसद्वैलक्षण्य रूपानिर्वाच्यत्वाय निरुक्तिखण्डनं शब्दसाम्याद् भ्रान्तिमूलम् ।**

नच केषाञ्चिन्निर्वचनाशक्तिमात्रेण वस्तूनां तदयोग्यत्वम् । उक्तं हिं बौद्धधिकारे— ''नहि जात्यन्धेन नीलं द्रष्टुं वक्तुं च न शक्यत इति अज्ञेयमनिर्वाच्यमेव तत्, दुरवगाहत्वेनापि तदुपपत्तेः'' इति ।

नच तदनिर्वचनं । यथा मन्त्रस्य ''मन्त्र'' इत्यभियुक्तप्रयोग एव लक्षणं तथा ज्ञानविषयस्यापि ''ज्ञानविषय'' इत्यभियुक्तप्रयोग एव लक्षणम् । नचान्योन्याश्रयः, पूर्वपूर्वप्रयोगस्य ज्ञानेनोत्तरोत्तरप्रयोगोपपत्तेः ।

अथवा यज्ज्ञानं यदभिलपनरूप व्यवहार कारणं स तस्य विषयः । करण पाटवाद्यभावेन व्यवहारानुदयेऽपि सहकारिवैकल्यप्रयुक्त कार्याभाववत्वरूपं कारणत्वमस्त्येव । कदापि व्यवहाराजनकं तु निर्विकल्पकं नोपेयत इति नाव्याप्तिः । नच यत्त्वतत्त्व जात्योरभावेनाननुगमः । कस्य को विषय इत्यननुगतप्रश्ने अस्यायं विषय इत्यननुगतस्यैव वक्तव्यत्वात् । घटज्ञानानन्तरं प्रामादिके पट इति व्यवहारे न घटज्ञानं हेतुरिति नातिव्याप्तिः ।

---

किन्तर्हि सत्त्वप्रयोजकमित्यपेक्षायां तद्वदन्नेव उपसंहरति **तस्मादिति** ।। **प्रामाणिकत्वादेवेति** ।। स्वस्वरूपत्वेनेति शेषः ।

ननु यदि प्रामाणिकत्वादेव सत्त्वसिद्धिः, तर्हि परं प्रमाणमेव न तु लक्षणमिति शिष्यशंकायामाह **सदसदिति । शब्दसाम्यादिति ।** श्रुत्यादिषु जगति प्रयुज्यमानस्य अनिर्वचनीयशब्दस्य अद्भुतत्वादनिर्वाच्यमित्यादिप्रमाणबलात् अद्भुतत्वप्रवृत्ति-निमित्तकस्य अशक्यनिर्वचनत्वार्थकयौगिकानिर्वचनीयशब्देन साम्यादित्यर्थः ।

ननु निर्वचनायोग्यत्वेन शब्दाप्रवृत्तेः कथं स विशेषः परं प्रति बोधनीयः । परार्थानुमानस्यापि शब्दाधीनप्रवृत्तिकत्वात् इत्यत आह **न च केषाञ्चिदिति ।। अन्योन्याश्रय इति ।।** प्रयोगे ज्ञाते प्रयोगघटितलक्षणज्ञानम्, लक्षणे च ज्ञाते प्रवृत्तिनिमित्तज्ञानात् प्रयोगः इत्यन्योन्याश्रय इत्यर्थः ।। **यदभिलपनेति ।।** यद्यपि अभिलापकारणतावच्छेदकं ज्ञाने तद्विषयत्वमेवेत्यात्माश्रयः । कारणत्वाज्ञाने लक्षणा-ज्ञानदोषः । तथाप्यनेकविषयत्वलक्षणस्योक्तत्वादेकस्य लक्षणत्वे लक्षणान्तरस्य कारणतावच्छेदकत्वसम्भवात् नात्माश्रय इति ।। **घटज्ञानानन्तरमिति ।।** घटज्ञानं भिन्नविषयत्वात् तत्र न कारणम् । अभिलापस्तु पदाधीनज्ञानमात्रात् शुकवदिति भावः ।



**ತಸ್ಮಾತ್ ನಿರ್ವಚನಾಯೋಗ್ಯಸ್ಯಾಪಿ ವಿಶ್ವಸ್ಯ ಇಕ್ಷುಕ್ಷೀರಾದಿ ಮಾಧುರ್ಯವತ್ ಬ್ರಹ್ಮವಚ್ಚ ಪ್ರಾಮಾಣಿಕತ್ವಾದೇವ ಸತ್ವಸಿದ್ಧೇಃ ಸದಸದ್ ವೈಲಕ್ಷಣ್ಯರೂಪ-ಅನಿರ್ವಾಚ್ಯತ್ವಾಯ ನಿರುಕ್ತಿಖಂಡನಂ ಶಬ್ದಸಾಮ್ಯಾದ್ ಭ್ರಾಂತಿಮೂಲಂ ।**

ಸತ್ಯತ್ವ ಮಿಥ್ಯಾತ್ವಗಳಿಗೆ ಪ್ರಮಿತತ್ವ ಅಪ್ರಮಿತತ್ವಗಳೇ ಪ್ರಯೋಜಕವಾದ್ದರಿಂದ ನಿರ್ವಚನಾ ಯೋಗ್ಯವಾದರೂ ಕಬ್ಬಿನ ಸಿಹಿ ಹಾಲಿನ ಸಿಹಿಗಳಂತೆ ಮತ್ತು ಬ್ರಹ್ಮದಂತೆ ಪ್ರಮಿತವಾದ್ದರಿಂದಲೇ ವಿಶ್ವವು ಸತ್ಯವೆಂದು ಸಿದ್ಧವಾಗುತ್ತಿದೆ. ಹೀಗಾಗಿ ಸದಸದ್ ವೈಲಕ್ಷಣ್ಯರೂಪ ಮಿಥ್ಯಾತ್ವಸಿದ್ಧಿಗಾಗಿ ವಿಷಯತ್ವನಿರ್ವಚನವನ್ನು ಖಂಡಿಸುವುದು ಕೇವಲ 'ಅನಿರ್ವಚನೀಯ' ಎಂದು ಶಬ್ದಸಾಮ್ಯ ಪ್ರಯುಕ್ತವಾದ ಭ್ರಾಂತಿಯಿಂದ ಎನ್ನಬೇಕು. ಅದ್ಭುತವಾದ್ದರಿಂದ ನಿರ್ವಚನ ಮಾಡಲು ಅಶಕ್ಯವಾದ ಸತ್ಯಪದಾರ್ಥವನ್ನೂ ಅದ್ವೈತಿಗಳು ದುರ್ವಚ ಎನ್ನುತ್ತಾರೆ. ಸರ್ವಥಾ ನಿರ್ವಚನಾನರ್ಹವಾದ ಅಸತ್ತನ್ನೂ ದುರ್ವಚ ಎನ್ನುತ್ತಾರೆ. ಎರಡಕ್ಕೂ 'ದುರ್ವಚ' ಅನಿರ್ವಚನೀಯ ಶಬ್ದವು ಸಮಾನವಾದ್ದರಿಂದ ಎರಡೂ ಒಂದೇ ಎನ್ನುವ ಭ್ರಾಂತಿಯಿಂದಲೆ ಸತ್ಯಪದಾರ್ಥಗಳನ್ನು ದುರ್ವಚ, ಅನಿರ್ವಾಚ್ಯ ಮಿಥ್ಯಾ ಎನ್ನುತ್ತಾರೆ. ದುರ್ವಚತ್ವ ಸಾಧನೆಗಾಗಿ ನಿರ್ವಚನವನ್ನು ಖಂಡಿಸುತ್ತಾರೆ.

**ನಚ ಕೇಷಾಂಚಿತ್ ನಿರ್ವಚನಾಶಕ್ತಿಮಾತ್ರೇಣ ವಸ್ತೂನಾಂ ತದಯೋಗ್ಯತ್ವಂ ।**

**ಉಕ್ತಂ ಹಿ ಬೌದ್ಧಧಿಕ್ಕಾರೇ—**

**ನಹಿ ಜಾತ್ಯಂಧೇನ ನೀಲಂ ದ್ರಷ್ಟುಂ ವಕ್ತುಂ ಚ ನ ಶಕ್ಯತೇ ಇತಿ ಅಜ್ಞೇಯಮನಿರ್ವಾಚ್ಯಮೇವ ತತ್ । ದುರವಗಾಹತ್ವೇನಾಪಿ ತದುಪಪತ್ತೇಃ ॥ ಇತಿ ।**

ಕೆಲವರಿಗೆ ನಿರ್ವಚನ ಮಾಡಲು ಶಕ್ತಿ ಇಲ್ಲದಿದ್ದ ಮಾತ್ರಕ್ಕೇ ವಸ್ತುಗಳಿಗೆ ನಿರ್ವಚನ ಯೋಗ್ಯತ್ವವೇ ಇಲ್ಲವೆನ್ನಲಾಗದು. ಇದನ್ನು ಉದಯನನು 'ಬೌದ್ಧಧಿಕ್ಕಾರ' ಗ್ರಂಥದಲ್ಲಿ ಹೇಳಿದ್ದಾರೆ. ಅವರ ಮಾತಿನ ತಾತ್ಪರ್ಯ ಹೀಗಿದೆ—

'ಹುಟ್ಟು ಕುರುಡನಿಗೆ ನೀಲವಾದ ವಸ್ತುವನ್ನು ನೋಡಲು ಹೇಳಲು ಶಕ್ತಿ ಇಲ್ಲದಿದ್ದ ಮಾತ್ರಕ್ಕೆ ಆ ವಸ್ತು ತಿಳಿಯಲಾಗದುದೇ ಹೇಳಲಾಗದುದೇ ಎನ್ನಲಾಗದು. ತಿಳಿಯುವುದು ಕಷ್ಟವಾದ್ದರಿಂದ ಹೇಳದಿರುವುದು ಕೂಡುತ್ತದೆ' ಎಂದು.

**ನಚ ತದನಿರ್ವಚನಂ । ಯಥಾ ಮಂತ್ರಸ್ಯ ಮಂತ್ರ ಇತ್ಯಭಿಯುಕ್ತಪ್ರಯೋಗ ಏವ ಲಕ್ಷಣಂ, ತಥಾ ಜ್ಞಾನವಿಷಯಸ್ಯಾಪಿ 'ಜ್ಞಾನವಿಷಯ' ಇತಿ ಅಭಿಯುಕ್ತ ಪ್ರಯೋಗ ಏವ ಲಕ್ಷಣಂ । ನಚ ಅನ್ಯೋನ್ಯಾಶ್ರಯಃ । ಪೂರ್ವಪೂರ್ವಪ್ರಯೋಗಸ್ಯ ಜ್ಞಾನೇನ ಉತ್ತರೋತ್ತರ ಪ್ರಯೋಗೋಪಪತ್ತೇಃ ।**

ಜ್ಞಾನವಿಷಯಕ್ಕೆ ಲಕ್ಷಣ ನಿರ್ವಚನವಿಲ್ಲ ಎನ್ನುವುದು ಸರಿಯಲ್ಲ. ಲಕ್ಷಣ ನಿರ್ವಚನವಿದೆ.

ವೇದಮಂತ್ರಕ್ಕೆ ಏನು ಲಕ್ಷಣ ಎಂದರೆ 'ವೇದಮಂತ್ರ' ಎಂದು ವೈದಿಕರು ಪ್ರಯೋಗ ಮಾಡುತ್ತಾರೆ. ಪ್ರಯೋಗವೆ, ಅಂದರೆ ಪ್ರಯೋಗ ವಿಷಯತ್ವವೆ ಲಕ್ಷಣ ಎಂದು ಮೀಮಾಂಸಾದಲ್ಲಿ ನಿರ್ಣಯ ಮಾಡಿದ್ದಾರೆ. ಯದ್ಯಪಿ—ಪ್ರಯೋಗವನ್ನು ತಿಳಿದರೆ ಪ್ರಯೋಗವಿಷಯತ್ವರೂಪಲಕ್ಷಣ ಜ್ಞಾನ. ಲಕ್ಷಣವನ್ನು ತಿಳಿದರೆ ಲಕ್ಷಣರೂಪ ಪ್ರವೃತ್ತಿನಿಮಿತ್ತ ಜ್ಞಾನದಿಂದ ಪ್ರಯೋಗ ಶಕ್ಯವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ. ಆದರೆ ಪ್ರಯೋಗಕ್ಕೆ ಪ್ರಯೋಗವಿಷಯತ್ವರೂಪ ಪ್ರವೃತ್ತಿನಿಮಿತ್ತ ಜ್ಞಾನವೇ ಬೇಕಿಲ್ಲ. ಹಿಂದಿನವರು ಪ್ರಯೋಗ ಮಾಡುವುದನ್ನು ಕಂಡು ಮುಂದಿನವರು ಪ್ರಯೋಗ ಯೋಗ್ಯತ್ವರೂಪ ಪ್ರವೃತ್ತಿನಿಮಿತ್ತವನ್ನು ತಿಳಿದು ಪ್ರಯೋಗ ಮಾಡುತ್ತಾರೆ.

ಇದೇರೀತಿ ಜ್ಞಾನವಿಷಯಕ್ಕೂ 'ಜ್ಞಾನವಿಷಯ' ಎಂದು ಅಭಿಜ್ಞರು ಪ್ರಯೋಗ ಮಾಡುವುದನ್ನು ಕಂಡು ಪ್ರಯೋಗ ಯೋಗ್ಯತ್ವವನ್ನು ತಿಳಿದು ಪ್ರಯೋಗ ಮಾಡುತ್ತಾರೆ. ಪ್ರಯೋಗ ಯೋಗ್ಯತ್ವವೇ ಪ್ರವೃತ್ತಿನಿಮಿತ್ತ.

**ಅಥವಾ ಯದ್ ಜ್ಞಾನಂ ಯದಭಿಲಪನರೂಪವ್ಯವಹಾರ ಕಾರಣಂ ಸ ತಸ್ಯ ವಿಷಯಃ । ಕರಣಪಾಟವಾದ್ಯಭಾವೇನ ವ್ಯವಹಾರಾನುದಯೇಽಪಿ ಸಹಕಾರಿ ವೈಕಲ್ಯ**

**ಪ್ರಯುಕ್ತ ಕಾರ್ಯಾಭಾವವತ್ತ್ವರೂಪಂ ಕಾರಣತ್ವಮಸ್ತ್ಯೇವ। ಕದಾಪಿ ವ್ಯವಹಾರಾಜನಕಂ ತು ನಿರ್ವಿಕಲ್ಪಕಂ ನೋಪೇಯತ ಇತಿ ನಾವ್ಯಾಪ್ತಿಃ।**

ಯಾವ ಜ್ಞಾನವು ಯಾವ ವಸ್ತುವಿನ ಬೋಧಕಶಬ್ದ ಪ್ರಯೋಗರೂಪ ವ್ಯವಹಾರಕ್ಕೆ ಕಾರಣವಾಗುವುದೋ ಆ ವಸ್ತುವು ಆ ಜ್ಞಾನಕ್ಕೆ ವಿಷಯ. ವಾಗಿಂದ್ರಿಯ ಪಾಟವದ ಕೊರತೆಯಿಂದ ಕೆಲವೆಡೆ ವ್ಯವಹಾರ ಉಂಟಾಗದಿದ್ದರೂ 'ಸಹಕಾರಿ ವೈಕಲ್ಯ ಪ್ರಯುಕ್ತವಾದ ಕಾರ್ಯಾಭಾವ'ರೂಪ ಕಾರಣತ್ವವು ಜ್ಞಾನಕ್ಕೆ ಇದ್ದೇ ಇದೆ. ಫಲಜನಕತ್ವಯೋಗ್ಯತ್ವದಂತೆಯೇ ಸಹಕಾರಿಯ ಕೊರತೆಯಿಂದ ಫಲಜನಕವಾಗದಿರುವುದೂ ಕೂಡ ಕಾರಣತ್ವವೆ.

ಎಂದೂ ವ್ಯವಹಾರಜನಕವಾಗದ ಜ್ಞಾನವನ್ನು ನಾವು ಒಪ್ಪಿಲ್ಲ. ಅಂದರೆ, ನಿರ್ವಿಕಲ್ಪಕ ಜ್ಞಾನವು ಎಂದೂ ವ್ಯವಹಾರ ಜನಕವಲ್ಲ ಎಂದು ತಾರ್ಕಿಕರು ಹೇಳುತ್ತಾರೆ. ನಿರ್ವಿಕಲ್ಪಕ ಎಂದರೆ, ಯಾವುದೇ ಎರಡು ವಸ್ತುಗಳಲ್ಲಿ ಧರ್ಮಧರ್ಮಿಭಾವವನ್ನು ಗ್ರಹಿಸದ ಜ್ಞಾನ. ಶಬ್ದ ವ್ಯವಹಾರದಿಂದ ಬರುವ ಜ್ಞಾನವು ಧರ್ಮಧರ್ಮಿಭಾವ ಉಳ್ಳ ವಸ್ತುಗಳನ್ನೇ ಗೋಚರಿಸುತ್ತದೆ. ಆದರಿಂದ ನಿರ್ವಿಕಲ್ಪಕ ಜ್ಞಾನದಲ್ಲಿ ಶಬ್ದವ್ಯವಹಾರ ಜನಕತ್ವವಿಲ್ಲ. ಆದರ ವಿಷಯದಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ ಪ್ರಸಂಗ ಯದ್ಯಪಿ ಇದೆ. ಆದರೆ ನಾವು ನಿರ್ವಿಕಲ್ಪಕ ಜ್ಞಾನವನ್ನೇ ಒಪ್ಪಿಲ್ಲವಾದ್ದರಿಂದ ಅವ್ಯಾಪ್ತಿ ದೋಷವಿಲ್ಲ.

ಯದ್ಯಪಿ ವಸ್ತುವಿಷಯಕ ಜ್ಞಾನವು ವಸ್ತುವ್ಯವಹಾರಕಾರಣವೆಂದರೆ ಕಾರಣತಾವಚ್ಛೇದಕವು ವಸ್ತುವಿಷಯಕತ್ವ. ಆದನ್ನು ತಿಳಿಯದೆ ಕಾರಣತ್ವವನ್ನು ತಿಳಿಯುವಂತಿಲ್ಲ. ವ್ಯವಹಾರಕಾರಣತ್ವವೆಂಬ ವಿಷಯತ್ವ ನಿರ್ವಚನದಲ್ಲಿ ಹೀಗೆ ವಿಷಯತ್ವ ಸೇರಿರುವುದರಿಂದ ಆತ್ಮಾಶ್ರಯ ದೋಷ ಬರುತ್ತದೆ. ಈ ದೋಷದಿಂದ ಕಾರಣತ್ವಜ್ಞಾನ ಬಾರದಿದ್ದರೆ ಲಕ್ಷಣಜ್ಞಾನ ಬರಲಾರದು. ಆದರೂ ನಾವು ಅನೇಕ ವಿಷಯತ್ವಲಕ್ಷಣಗಳನ್ನು ಹೇಳುವುದರಿಂದ ಅವುಗಳಲ್ಲಿ ಒಂದು ಲಕ್ಷಣವಾದರೆ ಇನ್ನೊಂದು ವ್ಯವಹಾರಕಾರಣತಾವಚ್ಛೇದಕ ವಾಗುತ್ತದೆ. ಆದರಿಂದ ಆತ್ಮಾಶ್ರಯ ತಪ್ಪುತ್ತದೆ. ಉದಾ: 'ಜ್ಞಾನ ವಿಷಯ' ಎಂಬ ಪ್ರಯೋಗಯೋಗ್ಯತ್ವರೂಪ ವಿಷಯತ್ವವನ್ನು ತಿಳಿದರೆ ಆದನ್ನು ಉದ್ದೇಶ್ಯತಾವಚ್ಛೇದಕ ಮಾಡಿಕೊಂಡು, ಘಟವ್ಯವಹಾರ ಜನಕತ್ವಯೋಗ್ಯತ್ವರೂಪ ಇನ್ನೊಂದು ಲಕ್ಷಣವನ್ನು ವಿಧಾನ ಮಾಡಬಹುದು.

**ನಚ ಯತ್ತ್ವ ತತ್ತ್ವ ಜಾತ್ಯೋರಭಾವೇನ ಅನನುಗಮಃ। 'ಕಸ್ಯ ಕೋ ವಿಷಯ?' ಇತಿ ಅನನುಗತ ಪ್ರಶ್ನೇ 'ಅಸ್ಯಾಯಂ ವಿಷಯಃ' ಇತಿ ಅನನುಗತಸ್ಯೈವ ವಕ್ತವ್ಯತ್ವಾತ್।**

ಯದ್ಯಪಿ ಯಾವ ಜ್ಞಾನವು ಯಾವುದರ ಬೋಧಕ ಶಬ್ದವ್ಯವಹಾರಕ್ಕೆ ಕಾರಣವೋ ಆ ಜ್ಞಾನಕ್ಕೆ ಅದು ವಿಷಯ' ಎಂಬ ಮಾತಿನಲ್ಲಿ 'ಯಾವುದೋ...ಅದು' 'ಯತ್ ತತ್' ಎಂದು ಯತ್ತ್ವ ತತ್ತ್ವಗಳು ಸೇರಿವೆ. ಆದರಿಂದ ಎಲ್ಲ ವಿಷಯಗಳಲ್ಲಿಯೂ ಬರುವ ಸಾಮಾನ್ಯಲಕ್ಷಣವನ್ನು ಹೇಳಿದಂತಾಗಲಿಲ್ಲ ಎಂಬ ಸಮಸ್ಯೆ ಬರುತ್ತದೆ, ಆದರೆ, ಮೊದಲಿಗೆ ಸಾಮಾನ್ಯಲಕ್ಷಣದಿಂದ

ವಿಷಯತ್ವವನ್ನು ತಿಳಿದವನು 'ಯಾವ ಜ್ಞಾನಕ್ಕೆ ಯಾವುದು ವಿಷಯ?' ಎಂದು ವಿಶೇಷವಾಗಿ ಪ್ರತ್ಯೇಕವಾಗಿಯೇ ಒಂದೊಂದು ವಿಷಯಕ್ಕೇ ಲಕ್ಷಣವನ್ನು ಕೇಳುವುದರಿಂದ ಅವನಿಗೆ ಪುನಃ ಸಾಮಾನ್ಯ ಲಕ್ಷಣವನ್ನೇ ಹೇಳುವುದು ಸರಿಯಲ್ಲ. 'ಯತ್ತ್ವ ತತ್ತ್ವ'ವೆಂದು ಸಾಮಾನ್ಯ ಜಾತಿಗಳಿಲ್ಲದಿರುವುದು ಇಲ್ಲಿ ದೋಷವಾಗುವುದಿಲ್ಲ. ವಿಶೇಷವಾಗಿ ಪ್ರತ್ಯೇಕಪ್ರತ್ಯೇಕವಾಗಿಯೆ ಲಕ್ಷಣಗಳನ್ನು ಹೇಳುವುದೇ ಯುಕ್ತ.

**ಘಟಜ್ಞಾನಾನಂತರಂ ಪ್ರಾಮಾದಿಕೇ ಪಟ ಇತಿ ವ್ಯವಹಾರೇ ನ ಘಟಜ್ಞಾನಂ ಹೇತುಃ ಇತಿ ನಾತಿವ್ಯಾಪ್ತಿಃ ।**

ಯದ್ಯಪಿ ಘಟಜ್ಞಾನಾನಂತರ ಪ್ರಮಾದದಿಂದ ಪಟ ಎಂದು ವ್ಯವಹಾರ ಬಂದರೆ ಘಟಜ್ಞಾನವು ಪಟವ್ಯವಹಾರಕ್ಕೆ ಕಾರಣವಾಗುವುದರಿಂದ ಪಟವೇ ಘಟಜ್ಞಾನಕ್ಕೆ ವಿಷಯ ಎಂದಾದೀತು. ಅದರಿಂದ ಈ ಲಕ್ಷಣವು ಅತಿ ವ್ಯಾಪ್ತವಾಯಿತು ಎಂಬ ಸಮಸ್ಯೆ ಬರಬಹುದು. ಆದರೆ, ಪ್ರಮಾದದಿಂದ ಪಟವ್ಯವಹಾರ ಬಂದಿದ್ದರಿಂದಲೇ ವ್ಯವಹಾರಕ್ಕೆ ಪ್ರಮಾದವು ಹೇತು, ಹೊರತು ಘಟಜ್ಞಾನವಲ್ಲ. ಘಟಜ್ಞಾನ ಜನ್ಯವ್ಯವಹಾರವು ಘಟವಿಷಯಕವೇ. ಅದರಿಂದ ಪಟದಲ್ಲಿ ಅತಿವ್ಯಾಪ್ತಿ ಇಲ್ಲ.



**अत एव च ज्ञानकर्मत्वं विषयत्वमित्यत्रापि न दोषः, ज्ञानकर्मशब्देन ज्ञानाधीन व्यवहार योग्यत्वरूपातिशयवत्त्वस्य विवक्षितत्वात् । नहि क्रियाजनकत्वविशेषः कर्मत्वम् । घटं करोतीत्यादावभावात् । नह्यसिद्धं जनकम्, नापि सिद्धं कृतिकर्म ।**

**अत एव यस्यां संविदीत्यादिलक्षणेऽपि न दोषः । यतस्संविदीति सतिसप्तमी । भासमानत्वं च व्यवहारयोग्यत्वम् । योग्यत्वं च सति कारणान्तरे व्यवहारावश्यंभावः । योग्यत्वे च दृश्यत्वे दृश्यत्ववदाध्यासिक सम्बन्धे आध्यासिकसम्बन्धवच्च तदेव वाऽन्यद्वा योग्यत्वमस्ति । आत्माश्रयादिकं तु तद्धदेवोत्पत्त्याद्यप्रतिबन्धकत्वाददोष इति नाव्याप्तिः ।**

**अन्ये तु यस्सम्बन्धान्तरमनपेक्ष्य यज्ज्ञानावच्छेदको यज्ज्ञानानवच्छिन्नस्वभावश्च स तस्य विषयः ।**

यद्यप्यात्मा स्वविषयकज्ञानेन समवायवान् । तथापि न तस्य तदवच्छेदे तदपेक्षा । स्वज्ञानासमवायिनोऽपि घटादेः स्वज्ञानावच्छेदकत्वदर्शनात् । यथाऽऽत्मनः स्वानुमिति विषयत्वेऽपि न विषयत्वेन तत्र हेतुता, तद्वत् ।

यद्यपि च रूपज्ञानं मत्समवेतम्, रूपज्ञानमिष्टम्, रूपज्ञानं ध्वस्तमित्यादौ रूपज्ञानाविषया अप्यात्मसमवायेच्छाध्वंसादयः सम्बन्धान्तरमनपेक्ष्य रूपज्ञानावच्छेदकाः । तथापि ते समवेतेष्यमाणाद्यात्मकरूपज्ञानावच्छिन्नस्वभावाः । सम्बन्धेच्छादीनां सम्बन्धीष्यमाणाद्यवच्छिन्न स्वभावत्वादिति नातिव्याप्तिः । ज्ञानविषयस्तु न ज्ञानावच्छिन्नस्वभावः । ज्ञानस्य घटावच्छिन्न स्वभावत्ववद् घटादेर्ज्ञानावच्छिन्न स्वभावत्वस्यादर्शनात् ।

यद्यपि स्वग्राहकज्ञानविषयभूतं ज्ञानविषयकानुमित्यनुव्यवसायादिकं ज्ञानावच्छिन्नस्वभावम्, तथापि स्वयं यज्ज्ञानं प्रति विषयः, तदवच्छिन्नस्वभावं नेति नाव्याप्तिः ।

अथवा यज्ज्ञानं यदीयस्वभावं स तस्य विषयः । मत्समवेतं रूपज्ञानमित्यत्र तु समवाय एव रूपज्ञानावच्छिन्नस्वभावः । नतु रूपज्ञानं तदवच्छिन्नस्वभावम् । प्रकृतस्य ज्ञानविषयत्वस्यैवेयं निरुक्तिर्नत्विच्छादिविषयत्वस्यापीति न तत्राव्याप्तिर्दोष इत्याहुः ।

---

ननु कारकविशेषत्वं कर्मत्वं, तत्कथम् अन्यथा वर्ण्यत इत्यत आह **नहीति** ।। **नह्यसिद्धमिति** । सिद्धत्वसाध्यत्वयोः विरोधादिति भावः ।। **नापि सिद्धमिति** ।। यद्यपि सिद्धमेव कपालादि कृतिकर्म, साक्षात्कारवत् कृतेरपि स्वविषयजन्यत्वात्, अत एव घटं करोतीत्यादौ अवयवलक्षणा परैरंगीक्रियते, तथापि उक्तक्रमेणैवोपपत्तौ लक्षणायां मानाभावादिति भावः ।

ननु विषयतातिरिक्तभासमानताया अनिरूपणात् आत्माश्रय इत्यत आह **भासमानत्वं चेति ।।** ननु योग्यत्वमेव बाधितम्, योग्यत्वस्य स्वरूपबुद्धिव्यवहारादिघटितत्वात् इत्यत आह **अन्यद्वेति । आत्माश्रयादिकं त्विति ।** तदेवेत्यत्र आत्माश्रयः अन्यदेवेत्यत्र आदिपदोक्तानवस्था ।। **तद्वदेवेति ।।** दृश्यत्वादाविवेत्यर्थः ।। **सम्बन्धान्तरमिति ।।** स्वभिन्नसम्बन्धान्तरमित्यर्थः । **यद्यपीति ।** तथाच आत्मनि अव्याप्तिरिति भावः । अनपेक्षयेति विशेषणादेव न तत्राव्याप्तिरित्याह **तथापीति ।** उत्तरदलस्य प्रयोजनं वक्तुं तन्निवर्त्याशङ्कां दर्शयति **नातिव्याप्तिरिति ।** तेष्विति शेषः । **अदर्शनादिति ।** अन्यथा घटस्य ज्ञानमित्यादिवत् ज्ञानस्य घट इत्यादिधीप्रसङ्ग इति भावः । नन्वत्रावच्छेदकत्वं अवच्छित्तिप्रत्ययजनकज्ञानविषयत्वम्, तथा च आत्माश्रय इत्यरुचेराह **अथवेति ।।**

ननु लक्षणे ज्ञानपदानन्तर्भावे परकीयस्वभावे ससम्बन्धिकपदार्थ-मात्रेऽतिव्याप्तिः । तदन्तर्भावे तु इच्छाविषयतायामव्याप्तिरित्यत आह **प्रकृतस्येति ।।** अत्र यदीयस्वभावमित्यस्य यदवच्छिन्नस्वभावमित्यर्थकत्वे उक्त एवात्माश्रय इत्यनभिमतिरन्येत्वित्यनेन दर्शितेति द्रष्टव्यम् ।



**ಅತ ಏವಚ ಜ್ಞಾನಕರ್ಮತ್ವಂ ವಿಷಯತ್ವಂ ಇತ್ಯತ್ರಾಪಿ ನ ದೋಷಃ। ಜ್ಞಾನಕರ್ಮಶಬ್ದೇನ ಜ್ಞಾನಾಧೀನ ವ್ಯವಹಾರ ಯೋಗ್ಯತ್ವರೂಪ-ಅತಿಶಯವತ್ತ್ವಸ್ಯ ವಿವಕ್ಷಿತತ್ವಾತ್। ನಹಿ ಕ್ರಿಯಾಜನಕತ್ವವಿಶೇಷಃ ಕರ್ಮತ್ವಂ। 'ಘಟಂ ಕರೋತಿ' ಇತ್ಯಾದಾವಭಾವಾತ್। ನಹಿ ಅಸಿದ್ಧಂ ಜನಕಂ। ನಾಪಿ ಸಿದ್ಧಂ ಕೃತಿಕರ್ಮ।**

'ಅತ ಏವ' ಯೋಗ್ಯತ್ವರೂಪ ಕಾರಣತ್ವವನ್ನು ಒಪ್ಪಿರುವುದರಿಂದಲೇ 'ಜ್ಞಾನಕರ್ಮತ್ವಂ ವಿಷಯತ್ವಂ' ಎಂದು ವಿಷಯತ್ವಲಕ್ಷಣವೂ ದೋಷರಹಿತವಾಗಿದೆ. 'ಜ್ಞಾನಕರ್ಮ' ಶಬ್ದದಿಂದ ಜ್ಞಾನಾಧೀನ ವ್ಯವಹಾರಯೋಗ್ಯತ್ವರೂಪ ಅತಿಶಯ ವತ್ತ್ವವು ವಿವಕ್ಷಿತವಾಗಿದೆ, ಹೊರತು ಕರ್ಮಕಾರಕತ್ವವಲ್ಲ. ಹೀಗಾಗಿ ಅತೀತಾದಿಗಳಲ್ಲಿ ಜ್ಞಾನಕರ್ಮತ್ವಲಕ್ಷಣಕ್ಕೆ ಅವ್ಯಾಪ್ತಿ ಪ್ರಸಂಗವಿಲ್ಲ. ಅಲ್ಲಿಯೂ ಜ್ಞಾನಾಧೀನ ವ್ಯವಹಾರ ಯೋಗ್ಯತ್ವರೂಪ ಅತಿಶಯವಿದೆ.

ಕ್ರಿಯಾಜನಕತ್ವವಿಶೇಷರೂಪ ಕರ್ಮಕಾರಕತ್ವವನ್ನೇ ವಿವಕ್ಷೆ ಮಾಡಿದರೆ 'ಘಟಂ ಕರೋತಿ'

ಎಂಬಲ್ಲಿ ವಿಭಕ್ತ್ಯರ್ಥವಾದ ಕರ್ಮತ್ವಕ್ಕೆ ಅನ್ವಯವಿಲ್ಲದೆ ಹೋದೀತು. ಘಟವಿನ್ನೂ ಸಿದ್ಧವಾಗ ದಿರುವಾಗ ಅದು ಘಟೋತ್ಪಾದನಕ್ರಿಯೆಗೆ ಕಾರಕವಾಗಲಾರದು.

ಘಟವು ಅಸಿದ್ಧವಾದರೂ, ಘಟಾವಯವ ಸಿದ್ಧವೇ ಇರುವುದರಿಂದ ಲಕ್ಷಣಾ ಮಾಡಿ ಘಟಾವಯವದಲ್ಲಿ ಕರ್ಮತ್ವವನ್ನು ಅನ್ವಯಿಸಿದರೂ 'ಕರೋತಿ' ಎಂದು ಹೇಳುವ ಕೃತಿಗೆ ಅನ್ವಯವಿಲ್ಲ. ಸಿದ್ಧವಾದುದು ಕೃತಿಗೆ ಕರ್ಮವಾಗುವುದಿಲ್ಲ ತಾನೆ? ಮತ್ತು 'ಸ್ವರ್ಗಂ ಕುರ್ಯಾತ್' ಎಂಬಲ್ಲಿ ಸ್ವರ್ಗಸಾಧನದಲ್ಲಿ ಲಕ್ಷಣಾ ಮಾಡಿದರೆ ಅದಕ್ಕೆ ಯಾಗಕರಣಕ ಭಾವನಾದಲ್ಲಿ ಅನ್ವಯವಿಲ್ಲವಾಗುವುದು. ಲಕ್ಷಣಾ ವ್ಯರ್ಥವಾಗುವುದು.

**ಅತ ಏವ 'ಯಸ್ಯಾಂ ಸಂವಿದಿ' ಇತ್ಯಾದಿ ಲಕ್ಷಣೇಽಪಿ ನ ದೋಷಃ । ಯತಃ 'ಸಂವಿದಿ' ಇತಿ ಸತಿಸಪ್ತಮೀ । ಭಾಸಮಾನತ್ವಂ ಚ ವ್ಯವಹಾರಯೋಗ್ಯತ್ವಂ । ಯೋಗ್ಯತ್ವಂ ಚ ಸತಿ ಕಾರಣಾಂತರೇ ವ್ಯವಹಾರಾವಶ್ಯಂಭಾವಃ ।**

ಜನಕತ್ವಯೋಗ್ಯತ್ವರೂಪಕಾರಣತ್ವವನ್ನೇ ವಿವಕ್ಷೆ ಮಾಡುವುದರಿಂದ, 'ಯಸ್ಯಾಂ ಸಂವಿದಿ ಯೋಽರ್ಥೋಽವಭಾಸತೇ ಸ ತಸ್ಯಾ ವಿಷಯಃ' ಎಂಬ ಲಕ್ಷಣದಲ್ಲಿಯೂ ದೋಷವಿಲ್ಲ. ಏಕೆಂದರೆ 'ಸಂವಿದಿ' ಎಂದು ಸತಿಸಪ್ತಮೀ. 'ಯಸ್ಯಾಂ ಸಂವಿದಿ' ಎಂದರೆ, 'ಯಾವ ಜ್ಞಾನದಲ್ಲಿ' ಎಂದು ಅಧಿ ಕರಣ ಸಪ್ತಮೀ ಇಟ್ಟುಕೊಂಡರೆ, ಜ್ಞಾನವು ವಿಷಯಕ್ಕೆ ಅಧಿಕರಣವಾಗುವುದಿಲ್ಲ ಎಂದು ಮುಂತಾಗಿ ಹಿಂದೆ ಹೇಳಿದಂತೆ ದೋಷ ಬಂದೀತು. ಈಗ ಸತಿಸಪ್ತಮೀ ಎಂದು ವಿವಕ್ಷೆ. 'ಸಂವಿದಿ ಸತ್ಯಾಂ' 'ಜ್ಞಾನ ಬಂದಾಗ' ಎಂದರ್ಥ. ಜ್ಞಾನಬಂದಾಗ ವಿಷಯವು ಭಾಸಮಾನವಾಗುತ್ತದೆ ಎಂದು ಅನ್ವಯ. ಭಾಸಮಾನವಾಗುವುದೆಂದರೆ 'ವಿಷಯವಾಗಿ ತೋರುವುದು' ಎಂದರ್ಥವಲ್ಲ. ಹಾಗೆ ಅರ್ಥವಿಟ್ಟುಕೊಂಡರೆ ಆತ್ಮಾಶ್ರಯ. ಅದರಿಂದ ವ್ಯವಹಾರ ಯೋಗ್ಯತ್ವವೆ ಇಲ್ಲಿ ಭಾಸಮಾನತ್ವ ಎನ್ನುತ್ತೇವೆ. ಯೋಗ್ಯತ್ವವೆಂದರೆ ಇತರ ಕಾರಣಗಳೂ ಇರುವಾಗ ಜ್ಞಾನದಿಂದ ವ್ಯವಹಾರ ಅವಶ್ಯವಾಗಿ ಆಗಿಯೇ ತೀರುತ್ತದೆ ಎಂದರ್ಥ.

**ಯೋಗ್ಯತ್ವೇ ಚ ದೃಶ್ಯತ್ವೇ ದೃಶ್ಯತ್ವವತ್, ಆಧ್ಯಾಸಿಕಸಂಬಂಧೇ ಆಧ್ಯಾಸಿಕಸಂಬಂಧವಚ್ಚ ತದೇವ ವಾ ಅನ್ಯದ್ವಾ ಯೋಗ್ಯತ್ವಮಸ್ತಿ । ಆತ್ಮಾಶ್ರಯಾದಿಕಂ ತು ತದ್ವದೇವ ಉತ್ಪತ್ತ್ಯಾದ್ಯಪ್ರತಿಬಂಧಕತ್ವಾದ್ ಅದೋಷ ಇತಿ ನಾವ್ಯಾಪ್ತಿಃ ।**

ಯದ್ಯಪಿ 'ವ್ಯವಹಾರ ಯೋಗ್ಯತ್ವ ಉಳ್ಳದ್ದು ವಿಷಯ' ಎಂದು ಲಕ್ಷಣವನ್ನು ಹೇಳಿದರೆ ಹಿಂದೆ ಹೇಳಿದಂತೆ 'ಇದು ಯೋಗ್ಯತೆ' ಎಂಬ ಜ್ಞಾನದಲ್ಲಿ ಯೋಗ್ಯತ್ವವು ವಿಷಯವಾಗಬೇಕಾದರೆ ಯೋಗ್ಯತಾವ್ಯವಹಾರಯೋಗ್ಯತೆಯು ಯೋಗ್ಯತ್ವದಲ್ಲಿ ಬರಬೇಕಾಗುತ್ತದೆ. ಅದು ತನ್ನಲ್ಲಿ ತಾನಿರುವುದಾದರೆ ಆತ್ಮಾಶ್ರಯ, ಇನ್ನೊಂದು ಯೋಗ್ಯತೆ ಇದೆ ಎಂದರೆ ಅನವಸ್ಥಾದೋಷ ಎಂದು ಅದ್ವೈತಿ ಹೇಳುತ್ತಾನೆ.

ಆದರೆ ಇದು ಸ್ವವ್ಯಾಹತ. ಏಕೆಂದರೆ ದೃಶ್ಯತ್ವದಲ್ಲಿ ದೃಶ್ಯತ್ವವಿದೆ, ಆಧ್ಯಾಸಿಕ ಸಂಬಂಧದಲ್ಲಿ ಆಧ್ಯಾಸಿಕ ಸಂಬಂಧವಿದೆ ಎಂದು ಅವನು ಹೇಳುತ್ತಾನೆ. ಆಗ ಉತ್ಪತ್ತಿಗಾಗಲಿ ಜ್ಞಪ್ತಿಗಾಗಲಿ ಈ ಆತ್ಮಾಶ್ರಯಾದಿ ದೋಷಗಳು ಪ್ರತಿಬಂಧಕವಾಗುವುದಿಲ್ಲವಾದ್ದರಿಂದ ದೋಷವಲ್ಲ ಎಂದು ಅವನು ಹೇಳುವುದಾದರೆ ನಾವೂ ಹಾಗೇ ಹೇಳುತ್ತೇವೆ. ಆದರಿಂದ ಯೋಗ್ಯತಾರೂಪವಾದ ಲಕ್ಷಣವು ಯೋಗ್ಯತೆಯಲ್ಲಿ ಅವ್ಯಾಪ್ತವಾಗಿದೆ ಎಂದು ಅವನು ಹೇಳಬಾರದು.

**ಅನ್ಯೇ ತು ಯಃ ಸಂಬಂಧಾಂತರಮನಪೇಕ್ಷ್ಯ ಯಜ್ಞಾನಾವಚ್ಛೇದಕಃ ಯಜ್ಞಾನಾನವಚ್ಛಿನ್ನ ಸ್ವಭಾವಶ್ಚ ಸ ತಸ್ಯ ವಿಷಯಃ।**

ಸಂಯೋಗ ಸಮವಾಯರೂಪವಾದ ಬೇರೆ ಸಂಬಂಧದ ಅಪೇಕ್ಷೆಯಿಲ್ಲದೆ ಯಾವುದು ಜ್ಞಾನದಲ್ಲಿ ಅವಚ್ಛೇದಕ, ವ್ಯಾವರ್ತಕವಾಗಿರುವುದೋ ಮತ್ತು ಯಾವುದು ಜ್ಞಾನದಿಂದಲೇ ಪರಿಚಿತವಾಗದಿರುವ ಸ್ವಭಾವ ಉಳ್ಳುದೋ ಅದು ಆ ಜ್ಞಾನಕ್ಕೆ ವಿಷಯ ಎಂದು ಕೆಲವರು ಲಕ್ಷಣವನ್ನು ಹೇಳುತ್ತಾರೆ, ಅದೂ ಯುಕ್ತವೆ. 'ಘಟಜ್ಞಾನ' ಎಂಬಲ್ಲಿ, ಘಟರೂಪವಿಷಯವು ತನ್ನ ಜ್ಞಾನವನ್ನು ಇತರ ಜ್ಞಾನದಿಂದ ವ್ಯಾವೃತ್ತಿಗೊಳಿಸುತ್ತದೆ. ಅದು ಜ್ಞಾನಕ್ಕೆ ಅವಚ್ಛೇದಕ, ಇತರ ಜ್ಞಾನದಿಂದ ವ್ಯಾವರ್ತಕ. 'ಯಾವ ಜ್ಞಾನ?' ಎಂದು ಜಿಜ್ಞಾಸೆ ಬಂದಾಗ 'ಘಟಜ್ಞಾನ' ಎಂದು ಘಟವು ಘಟಜ್ಞಾನಕ್ಕೆ ಇತರ ಜ್ಞಾನದಿಂದ ವ್ಯಾವರ್ತಕವಾಗುವಂತೆ 'ಯಾವ ಘಟ?' ಎಂದು ಜಿಜ್ಞಾಸೆ ಬಂದಾಗ 'ಜ್ಞಾನಘಟ' ಎನ್ನುವುದಿಲ್ಲ. 'ಜ್ಞಾನಕ್ಕೆ ಸಂಬಂಧಿಸಿದ ಘಟ' ಎಂದು ಜ್ಞಾನವು ಘಟವನ್ನು ಇತರ ಘಟದಿಂದ ವ್ಯಾವೃತ್ತಿಗೊಳಿಸುವುದಿಲ್ಲ. ಜ್ಞಾನವು ಘಟದಿಂದ ಅವಚ್ಛಿನ್ನವಾಗುವಂತೆ ಘಟವು ಜ್ಞಾನದಿಂದ ಅವಚ್ಛಿನ್ನವಾಗುತ್ತದೆ ಎಂದಿಲ್ಲ. ಅದರಿಂದ ವಿಷಯದ ಸ್ವಭಾವವು ಜ್ಞಾನಾನವಚ್ಛಿನ್ನವಾಗಿದೆ.

**ಯದ್ಯಪಿ ಆತ್ಮಾ ಸ್ವವಿಷಯಕಜ್ಞಾನೇನ ಸಮವಾಯವಾನ್। ತಥಾಪಿ ನ ತಸ್ಯ ತದವಚ್ಛೇದೇ ತದಪೇಕ್ಷಾ। ಸ್ವಜ್ಞಾನಾಸಮವಾಯಿನೋಽಪಿ ಘಟಾದೇಃ ಸ್ವಜ್ಞಾನಾವಚ್ಛೇದಕತ್ವ ದರ್ಶನಾತ್। ಯಥಾ ಆತ್ಮನಃ ಸ್ವಾನುಮಿತಿವಿಷಯತ್ವೇಽಪಿ ನ ವಿಷಯತ್ವೇನ ತತ್ರ ಹೇತುತಾ, ತದ್ವತ್।**

ಯದ್ಯಪಿ ಅಹಂ ಎಂದು ಆತ್ಮಜ್ಞಾನದಲ್ಲಿ ಆತ್ಮನು, ಘಟಜ್ಞಾನದಲ್ಲಿ ಘಟದಂತೆ, ಅವಚ್ಛೇದಕನೇ ಆಗಿದ್ದಾನೆ, ಆದರೆ ಘಟದಂತೆ ಸಂಯೋಗ ಅಥವಾ ಸಮವಾಯವಿಲ್ಲದೆ ಕೇವಲ ವಿಷಯತಾಸಂಬಂಧದಿಂದ ಆತ್ಮನು ಜ್ಞಾನಾವಚ್ಛೇದಕನಾಗಿಲ್ಲ. ಜ್ಞಾನವು ಆತ್ಮನಲ್ಲಿ ಸಮವಾಯ ಸಂಬಂಧದಿಂದ ಇರುವುದರಿಂದ ಆತ್ಮನು ಸಮವಾಯ ಸಂಬಂಧದಿಂದಲೂ ಜ್ಞಾನದಲ್ಲಿ ಅವಚ್ಛೇದಕನಾಗಿದ್ದಾನೆ. 'ಸಂಬಂಧಾಂತರ ಮನಪೇಕ್ಷ್ಯ' 'ಸಂಬಂಧಾಂತರವಿರಕೂಡದೆಂ'ದು ಹೇಳಿದ್ದರಿಂದ, ವಿಷಯಲಕ್ಷಣವು ವಿಷಯನಾದ ಆತ್ಮನಲ್ಲಿ ಬಾರದಿರುವುದರಿಂದ ಅವ್ಯಾಪ್ತಿ ಎಂದು ಶಂಕೆಗೆ ಅವಕಾಶವಿದೆ.

ಆದರೆ 'ಸಂಬಂಧಾಂತರಮನಪೇಕ್ಷ್ಯ' ಸಂಬಂಧಾಂತರವಿರುವ ಪ್ರಯುಕ್ತ ಅವಚ್ಛೇದಕ ಎಂದೆನಿಸಬಾರದೆಂದು 'ಅನಪೇಕ್ಷ್ಯ' ಎಂಬ ಶಬ್ದವು ಲಕ್ಷಣದಲ್ಲಿದೆ. ವಿಷಯಕ್ಕೆ ಸಂಬಂಧಾಂತರವೂ ಕೂಡ ವಾಸ್ತವವಾಗಿ ಇದ್ದರೂ ಏನೂ ಬಾಧಕವಿಲ್ಲ. ಸಂಬಂಧಾಂತರ ಪ್ರಯುಕ್ತವಾಗಿ ಅದು ಅವಚ್ಛೇದಕ ವಾಗಬಾರದು. ಘಟಾದಿ ವಿಷಯವು ಸಂಬಂಧಾಂತರ ವ್ಯತಿರಿಕ್ತವಾಗಿರುವ ವಿಷಯತಾ ಸಂಬಂಧ ಪ್ರಯುಕ್ತವಾಗಿಯೇ ಜ್ಞಾನದಲ್ಲಿ ಅವಚ್ಛೇದಕವಾಗಿದೆ. ಅದಕ್ಕೆ ಜ್ಞಾನದಲ್ಲಿ ಸಮವಾಯ ಸಂಬಂಧವಿಲ್ಲ.

'ಅಹಂ' 'ನಾನು' ಪುಣ್ಯಶಾಲಿ ಎಂಬ ಆತ್ಮಜ್ಞಾನದಲ್ಲಿ ವಿಷಯನಾದ ಆತ್ಮನಿಗೆ ಜ್ಞಾನದಿಂದ ಸಮವಾಯ ಮತ್ತು ವಿಷಯತ್ವ ಎಂದು ಎರಡೂ ಸಂಬಂಧಗಳಿದ್ದರೂ ಅವನಲ್ಲಿ ಹುಟ್ಟುವ ಆ ಆತ್ಮವಿಷಯಕವಾದ ಅನುಮಿತಿಗೆ ಅವನು ಸಮವಾಯಿಕಾರಣರೂಪದಿಂದಲೇ ಕಾರಣನಾಗುತ್ತಾನೆ ಹೊರತು ವಿಷಯರೂಪದಿಂದಲ್ಲ. ಪರೋಕ್ಷ ಜ್ಞಾನಕ್ಕೆ ವಿಷಯವು ಕಾರಣವಲ್ಲ. ಪ್ರತ್ಯಕ್ಷಕ್ಕೆ ಮಾತ್ರ ವಿಷಯವು ಕಾರಣ. ಹೀಗಾಗಿ ಅನುಮಿತಿಯಿಂದ ಆತ್ಮನಿಗೆ ವಿಷಯತಾ ಸಂಬಂಧವಿದ್ದರೂ ಅನುಮಿತಿಯ ಉತ್ಪತ್ತಿಗೆ ಅದು ಅನಪೇಕ್ಷಿತ ಹೇಗೋ ಹಾಗೇ 'ಅಹಂ' ಎಂಬ ಆತ್ಮಜ್ಞಾನದಿಂದ ಆತ್ಮನಿಗೆ ಸಮವಾಯ ಸಂಬಂಧವಿದ್ದರೂ ಜ್ಞಾನದಲ್ಲಿ ಆತ್ಮನು ಅವಚ್ಛೇದಕವೆನಿಸಲು ಸಮವಾಯವು ಅನಪೇಕ್ಷಿತ. ಅವರ್ಜನೀಯಸನ್ನಿಧಿಯಾಗಿ ಇರುತ್ತದೆ.

**ಯದ್ಯಪಿ ಚ 'ರೂಪಜ್ಞಾನಂ ಮತ್ಸಮವೇತಂ', 'ರೂಪಜ್ಞಾನಮಿಷ್ಟಂ', 'ರೂಪಜ್ಞಾನಂ ಧ್ವಸ್ತಂ' ಇತ್ಯಾದೌ ರೂಪಜ್ಞಾನಾವಿಷಯಾ ಅಪಿ ಆತ್ಮಸಮವಾಯ ಇಚ್ಛಾ ಧ್ವಂಸಾದಯಃ ಸಂಬಂಧಾಂತರಮನಪೇಕ್ಷ್ಯ ರೂಪಜ್ಞಾನಾವಚ್ಛೇದಕಾಃ। ತಥಾಪಿ ತೇ ಸಮವೇತ ಇಷ್ಯಮಾಣಾದ್ಯಾತ್ಮಕ ರೂಪಜ್ಞಾನಾವಚ್ಛಿನ್ನಸ್ವಭಾವಾಃ। ಸಂಬಂಧೇಚ್ಛಾದೀನಾಂ ಸಂಬಂಧೀಷ್ಯ ಮಾಣಾದ್ಯವಚ್ಛಿನ್ನ ಸ್ವಭಾವತ್ವಾದಿತಿ ನಾತಿವ್ಯಾಪ್ತಿಃ।**

ಯದ್ಯಪಿ 'ರೂಪಜ್ಞಾನವು ನನ್ನಲ್ಲಿ ಸಮವೇತವಾಗಿದೆ' 'ರೂಪಜ್ಞಾನವು ಇಷ್ಟವಾಗಿದೆ' 'ರೂಪಜ್ಞಾನವು ಧ್ವಸ್ತವಾಯಿತು' ಇತ್ಯಾದಿ ಸ್ಥಳಗಳಲ್ಲಿ ರೂಪಜ್ಞಾನಕ್ಕೆ ವಿಷಯವಾಗದಿರುವ ಆತ್ಮಸಮವಾಯ, ಇಚ್ಛೆ, ಧ್ವಂಸಗಳನ್ನು ಕೂಡ ಸಂಬಂಧಾಂತರದ ಅಪೇಕ್ಷೆ ಇಲ್ಲದೆ ರೂಪಜ್ಞಾನಕ್ಕೆ ಅವಚ್ಛೇದಕವಾಗಿವೆ. ಆದರಿಂದ ಅತಿವ್ಯಾಪ್ತಿ.

ಆದರೂ, 'ಯಜ್ಜ್ಞಾನಾನವಚ್ಛಿನ್ನ ಸ್ವಭಾವಶ್ಚ' ಎಂಬ ಅಂಶದಿಂದ ಈ ಅತಿವ್ಯಾಪ್ತಿ ಪರಿಹಾರವಾಗುತ್ತದೆ. ಏಕೆಂದರೆ ಈ ಸಮವಾಯಸಂಬಂಧ, ಇಚ್ಛಾ, ಮತ್ತು ಪ್ರತಿಯೋಗಿಗಳು ಸಸಂಬಂಧಿ ಪದಾರ್ಥಗಳು. 'ಪಿತಾ' 'ಪುತ್ರ' ಮುಂತಾದವುಗಳಂತೆ. ಸಮವಾಯಕ್ಕೆ ಪ್ರತಿಸಂಬಂಧಿಯ ಅಪೇಕ್ಷೆ ಇರುವುದರಿಂದ ಪ್ರತಿಸಂಬಂಧಿಯಾದ ರೂಪಜ್ಞಾನದಿಂದ ಅವಚ್ಛಿನ್ನಸ್ವಭಾವ ಉಳ್ಳದ್ದಾಗಿದೆ. ಇಚ್ಛೆಯು ಯಾವುದರ ಇಚ್ಛೆ ಎಂದು ಇಷ್ಯಮಾಣದ ಅಪೇಕ್ಷೆ ಇರುವುದರಿಂದ ಇಷ್ಯಮಾಣವಾದ ರೂಪಜ್ಞಾನದಿಂದ ಅವಚ್ಛಿನ್ನಸ್ವಭಾವದ್ದಾಗಿದೆ. ಧ್ವಂಸವು ಕೂಡ ಯಾವುದರ ಧ್ವಂಸ

ಎಂದು ಪ್ರತಿಯೋಗಿ ಸಾಪೇಕ್ಷವಾದ್ದರಿಂದ ರೂಪಜ್ಞಾನದ ಧ್ವಂಸವೆಂದು ರೂಪಜ್ಞಾನಾವಚ್ಛಿನ್ನ ಸ್ವಭಾವದ್ದಾಗಿದೆ. ಜ್ಞಾನಾವಚ್ಛಿನ್ನ ಸ್ವಭಾವತ್ವ ಇಂಥ ಸ್ಥಳದಲ್ಲಿ ಇಲ್ಲ. ಆದರಿಂದ ಅತಿವ್ಯಾಪ್ತಿ ಇಲ್ಲ.

**ಜ್ಞಾನವಿಷಯಸ್ತು ನ ಜ್ಞಾನಾವಚ್ಛಿನ್ನಸ್ವಭಾವಃ। ಜ್ಞಾನಸ್ಯ ಘಟಾವಚ್ಛಿನ್ನಸ್ವಭಾವತ್ವವತ್ ಘಟಾದೇಃ ಜ್ಞಾನಾವಚ್ಛಿನ್ನಸ್ವಭಾವತ್ವಾದರ್ಶನಾತ್।**

'ಜ್ಞಾನವಿಷಯವು ಜ್ಞಾನಾನವಚ್ಛಿನ್ನಸ್ವಭಾವ ಉಳ್ಳದ್ದಾಗಿದೆ. ಸಮವಾಯ, ಇಚ್ಛಾ, ಧ್ವಂಸಾದಿಗಳಂತೆ ಪ್ರತಿಸಂಬಂಧಿಯ ಅಪೇಕ್ಷೆ ಇಲ್ಲದಿರುವುದರಿಂದ, ಘಟಜ್ಞಾನದಲ್ಲಿ ವಿಷಯವಾಗಿರುವ ಘಟವು ಸ್ವಭಾವತಃ ಜ್ಞಾನಾವಚ್ಛಿನ್ನವಾಗುವುದಿಲ್ಲ. 'ಜ್ಞಾತೋ ಘಟಃ' ಎಂದು ಘಟವು ಜ್ಞಾತವಾದಾಗ ಮಾತ್ರ ಜ್ಞಾನಾವಚ್ಛಿನ್ನವಾಗಬಹುದು. ಹೊರತು, ಸಸಂಬಂಧಿಪದಾರ್ಥಗಳಾದ ಸಮವಾಯಾದಿಗಳಂತೆ ಸ್ವವಿಷಯಕಜ್ಞಾನವನ್ನು ನಿಯಮೇನ ಸ್ವಭಾವತಃ ಅಪೇಕ್ಷಿಸುವುದಿಲ್ಲ. ಜ್ಞಾನಸ್ಯ ಘಟಃ ಎಂದು ಪ್ರತೀತಿ ಇಲ್ಲ. ಆದರಿಂದ ಜ್ಞಾನಾನವಚ್ಛಿನ್ನ ಸ್ವಭಾವತ್ವವು ವಿಷಯದಲ್ಲಿ ಬರುತ್ತದೆ. ಲಕ್ಷಣ ಸಮನ್ವಯವಾಗುತ್ತದೆ.

**ಯದ್ಯಪಿ ಸ್ವಗ್ರಾಹಕ ಜ್ಞಾನವಿಷಯಭೂತಂ ಜ್ಞಾನವಿಷಯಕ ಅನುಮಿತಿ ಅನುವ್ಯವಸಾಯಾದಿಕಂ ಜ್ಞಾನಾವಚ್ಛಿನ್ನ ಸ್ವಭಾವಂ। ತಥಾಪಿ ಸ್ವಯಂ ಯಜ್ಜ್ಞಾನಂ ಪ್ರತಿ ವಿಷಯಃ ತದವಚ್ಛಿನ್ನ ಸ್ವಭಾವಂ ನೇತಿ ನಾವ್ಯಾಪ್ತಿಃ।**

ಯದ್ಯಪಿ ಜ್ಞಾನವಿಷಯಕ ಅನುವ್ಯವಸಾಯ ಅಥವಾ ಜ್ಞಾತತಾಲಿಂಗಕ ಅನುಮಿತಿಯು ಪುನಃ ಇನ್ನೊಂದು ಜ್ಞಾನಕ್ಕೆ ವಿಷಯವಾದಾಗ ಅದು ಆ ತೃತೀಯ ಜ್ಞಾನಕ್ಕೆ ಸಂಬಂಧಾಂತರವಿಲ್ಲದೆ ಅವಚ್ಛೇದಕವಾಗಿರುತ್ತದೆ.. ಪ್ರಥಮಜ್ಞಾನದಿಂದ ಅವಚ್ಛಿನ್ನಸ್ವಭಾವವೂ ಆಗಿರುತ್ತದೆ. ಅನುಮಿತಿ ಅನುವ್ಯವಸಾಯಗಳು 'ಯಾವುದರ ಅನುಮಿತಿ?' ಯಾವ ಜ್ಞಾನದ ಅನುವ್ಯವಸಾಯ?' ಎಂದು ಪ್ರತಿಸಂಬಂಧಿಯನ್ನು ಅಪೇಕ್ಷಿಸುವ ಸಸಂಬಂಧಿ ಪದಾರ್ಥವಾಗಿರುವುದರಿಂದ ಸ್ವಭಾವತಃ ಅನುಮಿತಿ ಅನುವ್ಯವಸಾಯಗಳು ಸ್ವವಿಷಯವಾದ ಪ್ರಥಮ ಜ್ಞಾನದಿಂದ ಅವಚ್ಛಿನ್ನವೇ ಆಗಿರುತ್ತದೆ. ಹೀಗೆ ಅದು ತೃತೀಯ ಜ್ಞಾನಾವಚ್ಛೇದಕವಾದರೂ ಪ್ರಥಮ ಜ್ಞಾನಾವಚ್ಛಿನ್ನ ಸ್ವಭಾವವೇ ಆಗಿದೆ. ಅನವಚ್ಛಿನ್ನ ಸ್ವಭಾವವಾಗಲಿಲ್ಲ. ಆದರಿಂದ ಅವ್ಯಾಪ್ತಿಶಂಕೆ ಸಹಜ.

ಆದರೂ ಲಕ್ಷಣದಲ್ಲಿ 'ಸ್ವಯಂ ಯಜ್ಜ್ಞಾನಾವಚ್ಛೇದಕವೊ ತಜ್ಞಾನಾನವಚ್ಛಿನ್ನ ಸ್ವಭಾವತ್ವ'ವು ನಿವೇಶಿತವಾಗಿದೆ. ಮಧ್ಯಮ ಜ್ಞಾನವು ತೃತೀಯಜ್ಞಾನಾವಚ್ಛೇದಕವಾಗಿದ್ದು ಪ್ರಥಮಜ್ಞಾನಾವಚ್ಛಿನ್ನ ಸ್ವಭಾವ ಉಳ್ಳದ್ದಾದರೂ ತಾನು ಯಾವ ತೃತೀಯಜ್ಞಾನಕ್ಕೆ ಅವಚ್ಛೇದಕವಾಗಿದೆಯೋ ಆ ತೃತೀಯ ಜ್ಞಾನದಿಂದ ಅವಚ್ಛಿನ್ನಸ್ವಭಾವದ್ದಾಗಿಲ್ಲದಿರುವುದರಿಂದ ಅನವಚ್ಛಿನ್ನಸ್ವಭಾವದ್ದೇ ಆಗಿರುವುದರಿಂದ ಲಕ್ಷಣ ಸಮನ್ವಯವಾಗುವುದು.

**ಅಥವಾ ಯಜ್ಜ್ಞಾನಂ ಯದೀಯಸ್ವಭಾವಂ ಸ ತಸ್ಯ ವಿಷಯಃ। ಮತ್ಸಮವೇತಂ**

**ರೂಪಜ್ಞಾನಂ ಇತ್ಯತ್ರ ತು ಸಮವಾಯ ಏವ ರೂಪಜ್ಞಾನಾವಚ್ಛಿನ್ನಸ್ವಭಾವಃ । ನತು ರೂಪಜ್ಞಾನಂ ತದವಚ್ಛಿನ್ನಸ್ವಭಾವಂ । ಪ್ರಕೃತಸ್ಯ ಜ್ಞಾನವಿಷಯತ್ವಸ್ಯೈವೇಯಂ ನಿರುಕ್ತಿಃ । ನ ತು ಇಚ್ಛಾದಿ ವಿಷಯತ್ವಸ್ಯಾಪೀತಿ ನ ತತ್ರಾವ್ಯಾಪ್ತಿರ್ದೋಷ ಇತ್ಯಾಹುಃ ।**

ಅಥವಾ ಯಾವ ಜ್ಞಾನವು ಸ್ವಭಾವದಿಂದ ಯಾವುದರಿಂದ ಅವಚ್ಛಿನ್ನವಾಗಿರುವುದೋ ಅದು ಆ ಜ್ಞಾನದ ವಿಷಯ ಎಂದು ಲಕ್ಷಣ. ಜ್ಞಾನವು ವಿಷಯಸಾಪೇಕ್ಷವಾದ್ದರಿಂದ ಅದು ಸ್ವಭಾವತಃ ವಿಷಯಾವಚ್ಛಿನ್ನವಾಗುತ್ತದೆ. ನನ್ನಲ್ಲಿ ರೂಪಜ್ಞಾನವು ಸಮವಾಯಸಂಬಂಧದಿಂದ ಇದೆ ಎಂಬಲ್ಲಿ ಸಮವೇತತ್ವವು ಜ್ಞಾನದಲ್ಲಿ ವಿಶೇಷಣವಾಗಿ ಕಂಡರೂ ಜ್ಞಾನವು ವಿಷಯವನ್ನು ಅಪೇಕ್ಷಿಸುವಂತೆ ಸಮವೇತತ್ವಾದಿ ವಿಶೇಷಣಗಳನ್ನು ಅಪೇಕ್ಷಿಸುವುದಿಲ್ಲ. ಸಮವಾಯವೇ ಸಸಂಬಂಧಿ ಶಬ್ದವಾಗಿರುವುದರಿಂದ ಪ್ರತಿಸಂಬಂಧಿಯಾದ ಜ್ಞಾನವನ್ನು ಅಪೇಕ್ಷಿಸಿ ಜ್ಞಾನಾವಚ್ಛಿನ್ನ ಸ್ವಭಾವವಾಗಿರುತ್ತದೆ. ರೂಪಜ್ಞಾನವು ವಿಷಯವಾದ ರೂಪದಿಂದ ಅವಚ್ಛಿನ್ನವೇ ಆಗಿರುವುದರಿಂದಲೂ ಸಮವೇತತ್ವವನ್ನು ಅದು ಅಪೇಕ್ಷಿಸದಿರುವುದರಿಂದ ತದವಚ್ಛಿನ್ನವಾಗುವುದಿಲ್ಲ.

ಯದ್ಯಪಿ ಲಕ್ಷಣದಲ್ಲಿ 'ಯತ್‌ಜ್ಞಾನಂ ಯದೀಯ ಸ್ವಭಾವಂ' ಎಂದು ಜ್ಞಾನಪದವಿರುವುದ ರಿಂದ ಇಚ್ಛಾವಿಷಯದಲ್ಲಿ ಲಕ್ಷಣ ಸಮನ್ವಯವಾಗುವುದಿಲ್ಲ, ಅವ್ಯಾಪ್ತಿ. ಜ್ಞಾನಪದವನ್ನು ಬಿಟ್ಟು 'ಯತ್ ಯದೀಯ ಸ್ವಭಾವಂ ಸ ತಸ್ಯವಿಷಯಃ' ಎಂದು ಸಾಮಾನ್ಯವಾಗಿ ಹೇಳಿದರೆ ಸಸಂಬಂಧಿ ಪದಾರ್ಥವೆಲ್ಲದರಲ್ಲಿ ಲಕ್ಷಣ ಸಮನ್ವಯವಾಗುವುದರಿಂದ ಅತಿವ್ಯಾಪ್ತಿ. ಆದರೂ ಇದು ಪ್ರಕೃತವಾದ ಜ್ಞಾನವಿಷಯಕ್ಕೇ ನಿರ್ವಚನ. ಇಚ್ಛಾವಿಷಯಕ್ಕೂ ನಿರ್ವಚನ ಮಾಡಬೇಕೆಂದರೆ ಆಗ ಜ್ಞಾನಪದ ಸ್ಥಾನದಲ್ಲಿ ಇಚ್ಛಾಪದವನ್ನು ಹಾಕಬಹುದು.

'ಅವಚ್ಛೇದಕ' ಎಂದರೆ 'ವ್ಯಾವರ್ತಕ' 'ವ್ಯಾವೃತ್ತಿ ಬೋಧಜನಕಜ್ಞಾನವಿಷಯ' ಎಂದರ್ಥ ವಾಗುವುದರಿಂದ ವಿಷಯಲಕ್ಷಣದಲ್ಲಿ ವಿಷಯವು ಪ್ರವಿಷ್ಟವಾದ್ದರಿಂದ ಆತ್ಮಾಶ್ರಯ ಎಂದು ಅರುಚಿಯನ್ನು 'ಅನ್ಯೇತು ಆಹುಃ' ಕೆಲವರು ಹೇಳುತ್ತಾರೆ ಎಂಬ ಮಾತಿನಿಂದ ಸೂಚಿಸಿದ್ದಾರೆ. ವಸ್ತುತಃ 'ಯದೀಯ ಸ್ವಭಾವಂ' ಎಂದು ಷಷ್ಠ್ಯರ್ಥ ಸಂಬಂಧ ಸಾಮಾನ್ಯವು ಲಕ್ಷಣದಲ್ಲಿ ಪ್ರವಿಷ್ಟವಾಗಿರುವುದರಿಂದ, ವಿಷಯತ್ವೇನ ಪ್ರವಿಷ್ಟವಾಗದಿರುವುದರಿಂದ ಆತ್ಮಾಶ್ರಯವಿಲ್ಲ ಎಂದು ಹೇಳಲು ಶಕ್ಯವಿದೆ.



**अथवा यत्सन्निकृष्टकरणेन यज्ज्ञानमुत्पद्यते, स तस्य विषयः । नचैवमाकाशसन्निकृष्टेन चक्षुरादिना शब्देन च जन्यं रूपादिज्ञानं प्रति आकाशस्य विषयतापत्तिः, सन्निकर्षस्यापि हेतुत्वेन विवक्षितत्वात् । नच चक्षुरादिनाऽऽकाशस्य सन्निकर्षो रूपादिज्ञानहेतुः ।**

ननु तथापि पक्षसन्निकृष्टलिङ्गजानुमितिं प्रति पक्षः, श्रोत्रसन्निकृष्टवाक्यजशाब्दज्ञानं च प्रति श्रोत्रं विषयः स्यादिति चेन्न । अतीतादिलिङ्गादेर्ज्ञानेनानुमित्यादिदर्शनेन लिङ्गज्ञानवाक्यज्ञानयोरेव करणत्वात् । लिङ्गादिज्ञानस्य चात्मसन्निकर्षो नानुमित्यादिहेतुः । किंत्ववर्जनीयसन्निधिः ।

ननु तथापि रूपादिज्ञानस्यात्मा विषयः स्यात् । तत्र मनसः करणत्वादात्ममनस्सन्निकर्षस्य च रूपादिधी हेतुत्वादिति चेन्न । असाधारणकरणत्वस्य विवक्षितत्वात् । मनसश्च साधारण्यात् । तर्हि मनस्सन्निकृष्टचक्षुर्जन्यं रूपज्ञानं मनोविषयं स्यादिति चेन्न । सन्निकर्षस्याप्यसाधारणहेतुत्वेन विवक्षितत्वात् । चक्षुर्मनस्सन्निकर्षस्य च द्रव्यादिज्ञानसाधारणत्वात् ।

प्रत्यभिज्ञायामिन्द्रियस्य तत्तया संस्कारः, लिङ्गज्ञानस्य च लिङ्गिना तद्व्याप्तलिङ्गसम्बन्धः, वाक्यज्ञानस्य च तत्परवाक्यसन्निकर्षः । एवमन्यत्रापि सन्निकर्ष ऊह्यः ।

नहि संयोगादिरेव सन्निकर्षः । किंतु प्रत्यासत्तिमात्रम् । तच्चानतिप्रसङ्गाय तत्तादिना सह वक्तव्यमिति नाव्याप्तिः ।

यद्यपि लिङ्गज्ञानादेर्लिङ्गादिना विषयित्वमेव सम्बन्धः, तथापि स इदानीमुभयसंमतेन सम्बन्धत्वेनैव ज्ञेयः, नतु विषयित्वेनेति नात्माश्रयः ।

इदं च नियतविषयकजन्यज्ञानविषयलक्षणम् । अथवा यथा पाकजरूपवती पृथवीत्यत्र पाकजरूपसमानाधिकरण द्रव्यत्व साक्षाद्व्याप्य जातिमत्त्वं विवक्षितम्, तथा ज्ञानकरणसन्निकर्ष समानाधिकरणः ज्ञानावच्छेदकत्वसाक्षाद्व्याप्यधर्मो विषयत्वमिति नाव्याप्तिरिति ।।

---

**न च चक्षुरादिना आकाशस्येति ।।** यद्यपि यदा आकाशे उद्भूतरूपाद्यभावः प्रत्यक्षः तदा संयुक्तविशेषणताघटकत्वेन आकाशचक्षुःसन्निकर्षोऽपि प्रविष्ट इति तत्रातिव्याप्तिः, तथापि सन्निकर्षत्वेन हेतुत्वस्य विवक्षितत्वात् नातिव्याप्तिरिति भावः ।। **पक्ष इति ।।** यद्यपि पक्षस्याप्यनुमितिविषयत्वमिति तत्र तदापादानमिष्टमेव, तथापि यद्विषयकज्ञानजनकत्वेन अनुमानस्य सफलत्वं स एवानुमितिविषय इत्यभिप्रेत्य तथोक्तम् । यद्वा एतदस्वरसादेव उदाहरणान्तरमिति ध्येयम् ।

ननु तथापि आत्मसन्निकृष्टलिंगादिज्ञानजन्यानुमित्यादेरात्मा विषयः स्यादित्यत आह **लिंगादिज्ञानस्य चेति ।।** कारणताग्राहकप्रमाणाभावादिति भावः । करणपदं कारणपदपर्यायं मन्वानः शंकते **ननु तथापीति ।। सन्निकर्षस्यापीति ।।** यद्यपि सन्निकर्षस्यासाधारण्यविवक्षायां असाधारणकरणत्वविवक्षा व्यर्था । तथापि अस्यां सत्यन्तं न विवक्षणीयमेवेति भावः । नन्वेतल्लक्षणं योगिप्रत्यक्षविषयादावव्याप्तम् । तत्र एकस्यैव सकलसाधारणस्य योगजधर्मस्य सन्निकर्षत्वेन असाधारण्याभावात् । ईश्वरप्रत्यक्ष विषयाव्याप्तिश्च । तत्प्रत्यक्षस्याजन्यत्वादित्यत आह **इदश्चेति ।। तथा ज्ञानकरणेति ।।** अत्र धर्मो विषयतेत्युक्ते घटज्ञानविषयता द्रव्यत्वं स्यात् । अत उक्तम्— **ज्ञानावच्छेदकत्वव्याप्येति ।।** तावत्युक्ते सामान्यप्रकारक ज्ञान विषयत्वमनुल्लिखितं (चेति) विशेषधर्मः तद्घटितत्वमपि स्यादत आह **साक्षादिति ।।** विशेषधर्मस्तु न तथा, अवच्छेदकत्वव्याप्यघटत्वादिन्यूनवृत्तित्वात्, तद्व्याप्यान्यूनवृत्तित्वस्य साक्षात्पदार्थत्वात् । तावत्युक्ते द्रव्यत्वादावतिव्याप्तिः स्यादत उक्तम् **व्याप्येति ।।** धर्मपदं तु स्वरूपकथनपरम् ।

ननु ज्ञानावच्छेदकत्वमेव ज्ञानविषयत्वमस्तु । एतद्घटत्वादौ ज्ञानावच्छेदकत्व रूपत्वाभावेन तावतैव तत्रातिव्याप्ति परिहारादिति चेत्तथापि ज्ञानावच्छेदकत्वस्य घटज्ञानत्वादावपि सत्त्वेन अतिप्रसक्ततया अविषयतारूपत्वात्, विषयमात्रवृत्ति धर्मविशेषस्यैव विषयतारूपत्वौचित्यात् । तावत्युक्ते घटज्ञानावच्छेदकत्व

साक्षाद्व्याप्ये तद्घटक ज्ञानत्वादावतिव्याप्तिः। घटवद् घटज्ञानत्वस्यापि तज्ज्ञानावच्छेदकत्वादित्यत आह **ज्ञानकारण सन्निकर्ष समानाधिकरणेति ।।** ननु ज्ञानकरणसन्निकर्ष समानाधिकरणं ज्ञानावच्छेदकत्वमेव ज्ञानविषयत्वमस्तु, घटज्ञानत्वोभय साधारणस्य घटज्ञानावच्छेदकत्वस्य एकत्वेन तावन्मात्रस्य अतिप्रसक्तत्वेऽपि नीलत्व समानाधिकरण घटत्वस्येव ज्ञानकरणसन्निकर्ष सामानाधिकरण्य विशेषितस्य घटज्ञानत्वादावभावेन अनतिप्रसंगादिति चेन्न। तस्य लक्षणान्तरत्वेन यथोक्तविशेषणविशेष्यभावे वैयर्थ्यानवकाशात्। न च सर्वस्यैव धर्मस्य क्वचिद्विषयतात्वात् धर्मो विषयता इत्येव सामान्य लक्षणमस्तु इति वाच्यम्। विशेषविषय लक्षण प्रस्तावे सामान्यलक्षणाभिधानस्य अर्थान्तरत्वात्। अत एव सम्बन्धो व्याप्तिरिति व्याप्तिलक्षणं परिहृत्य नियतसामानाधिकरण्यं तल्लक्षणमाचक्षते। तेन घटज्ञानकरण सन्निकर्ष समानाधिकरणो घटज्ञानावच्छेदकत्व साक्षाद् व्याप्य धर्मो घटज्ञानविषयतेति पर्यवस्यति। न च घटज्ञानमित्यत्र षष्ठ्यर्थः सम्बन्धो विषयतेत्यात्माश्रय इति वाच्यम्। सम्बन्धत्वेनैव तस्य तत्र प्रवेशादित्याकर एव स्फुटत्वात्। नन्वेवमपि घटज्ञानविषयता कम्बुग्रीवादिमत्त्वं स्यात्। तस्यापि घटज्ञानकरण सन्निकर्ष समानाधिकरण घटज्ञानावच्छेदकत्व व्याप्य घटत्वान्यूनवृत्ति धर्मत्वादिति चेन्न, इष्टापादनात्। यद्वा साक्षात्पदसमभिव्याहारेण ज्ञानावच्छेदकधर्मो विषयतेत्यत्र तात्पर्यम्, न तत्रातिप्रसङ्ग इति दिक्।



**ಅಥವಾ ಯತ್ಸನ್ನಿಕೃಷ್ಟಕರಣೇನ ಯಜ್ಞಾನಂ ಉತ್ಪದ್ಯತೇ ಸ ತಸ್ಯ ವಿಷಯಃ। ನಚೈವಂ ಆಕಾಶಸನ್ನಿಕೃಷ್ಟೇನ ಚಕ್ಷುರಾದಿನಾ, ಶಬ್ದೇನ ಚ ಜನ್ಯಂ ರೂಪಾದಿಜ್ಞಾನಂ ಪ್ರತಿ ಆಕಾಶಸ್ಯ ವಿಷಯತಾಪತ್ತಿಃ। ಸನ್ನಿಕರ್ಷಸ್ಯಾಪಿ ಹೇತುತ್ವೇನ ವಿವಕ್ಷಿತತ್ವಾತ್। ನಚ ಚಕ್ಷುರಾದಿನಾ ಆಕಾಶಸ್ಯ ಸನ್ನಿಕರ್ಷೋ ರೂಪಾದಿಜ್ಞಾನಹೇತುಃ।**

ಅಥವಾ ಜನ್ಯಜ್ಞಾನವಿಷಯತ್ವವನ್ನು ಹೀಗೆ ಹೇಳಬಹುದು—

'ಯಾವ ವಸ್ತುವಿನ ಸನ್ನಿಕರ್ಷಯುಕ್ತವಾದ ಕರಣದಿಂದ ಯಾವ ಜ್ಞಾನ ಉಂಟಾಗುವುದೋ ಆ ವಸ್ತು ಆ ಜ್ಞಾನಕ್ಕೆ ವಿಷಯ.'

ಯದ್ಯಪಿ ಹೀಗೆ ಲಕ್ಷಣವನ್ನು ಹೇಳಿದರೆ ಆಕಾಶಸನ್ನಿಕರ್ಷಯುಕ್ತವಾದ ಚಕ್ಷುರಿಂದ್ರಿಯದಿಂದ

ರೂಪಜ್ಞಾನ ಬರುವಾಗ ಆ ಜ್ಞಾನದಲ್ಲಿ ಆಕಾಶವೂ ವಿಷಯವಾದೀತೆಂದು ಅನಿಷ್ಟಾಪತ್ತಿ ಇದೆ. ಮತ್ತು ಆಕಾಶಸನ್ನಿಕರ್ಷಯುಕ್ತವಾದ 'ಇದಂ ರೂಪಂ' ಎಂಬ ಶಬ್ದದಿಂದ ಶಾಬ್ದಬೋಧ ಬರುವಾಗ ಅದರಲ್ಲಿಯೂ ಆಕಾಶವು ವಿಷಯವಾದೀತೆಂದು ಆಪತ್ತಿ.

ಆಪತ್ತಿಪರಿಹಾರ ಹೀಗೆ—'ಯತ್‌ಸನ್ನಿಕೃಷ್ಟಕರಣೇನ' ಎಂಬಲ್ಲಿ ಸನ್ನಿಕರ್ಷಯುಕ್ತವಾದ ಕರಣಮಾತ್ರವೆ ವಿವಕ್ಷಿತವಲ್ಲ, ಸನ್ನಿಕರ್ಷವೂ ಕಾರಣತ್ವೇನ ವಿವಕ್ಷಿತವಾಗಿದೆ. ಅಂದರೆ 'ಸನ್ನಿಕೃಷ್ಟ' ಎಂದರೆ ಸನ್ನಿಕರ್ಷವಿಶಿಷ್ಟವು ವಿವಕ್ಷಿತ. ಉಪಲಕ್ಷಿತವಾದ ಕರಣದಿಂದ ಜ್ಞಾನೋತ್ಪತ್ತಿಯನ್ನು ಇಟ್ಟುಕೊಂಡು ಆಪತ್ತಿಮಾಡಬಾರದು. ಪ್ರಕೃತ ರೂಪಜ್ಞಾನಕ್ಕೆ ರೂಪಸನ್ನಿಕರ್ಷಯುಕ್ತವಾದ ಚಕ್ಷುರಿಂದ್ರಿಯ ಮಾತ್ರವೇ ಕಾರಣವಲ್ಲ. ರೂಪಸನ್ನಿಕರ್ಷವೂ ಕಾರಣ. ಚಕ್ಷುರಿಂದ್ರಿಯವು ಆಕಾಶಸನ್ನಿಕರ್ಷಯುಕ್ತವಾಗಿದ್ದರೂ ಆಕಾಶಸನ್ನಿಕರ್ಷವು ರೂಪಜ್ಞಾನಕ್ಕೆ ಕಾರಣವಲ್ಲ. ಆಕಾಶ ಸನ್ನಿಕರ್ಷ ವಿಶಿಷ್ಟವಾದ ಚಕ್ಷುರಿಂದ್ರಿಯದಿಂದ ರೂಪಜ್ಞಾನ ಹುಟ್ಟುವುದಿಲ್ಲ. ಹೀಗಾಗಿ ರೂಪಜ್ಞಾನದಲ್ಲಿ ಆಕಾಶವು ವಿಷಯವಾಗುವುದಿಲ್ಲ. ಮತ್ತು 'ಇದಂ ರೂಪಂ' ಎಂಬ ಶಬ್ದದಿಂದ ಬರುವ ಶಾಬ್ದಬೋಧಕ್ಕೆ ರೂಪಬೋಧಕವಾದ ಶಬ್ದ ಮಾತ್ರವೇ ಅಲ್ಲ. ರೂಪಬೋಧಕತ್ವವೂ ಕಾರಣ. ಆಕಾಶದಿಂದ ಸಮವಾಯಸನ್ನಿಕರ್ಷಉಳ್ಳ ಶಬ್ದವು ಆಕಾಶಸನ್ನಿಕರ್ಷಯುಕ್ತವಾಗಿದ್ದರೂ ಆಕಾಶಸನ್ನಿಕರ್ಷವು ಶಬ್ದದಿಂದ ಶಾಬ್ದಬೋಧ ಬರುವುದಕ್ಕೆ ಕಾರಣವಲ್ಲ. ಆಕಾಶಸಮವೇತತ್ವ ವಿಶಿಷ್ಟವಾಗಿ ಶಬ್ದವು ಶಾಬ್ದಬೋಧಜನಕವಲ್ಲ. ಹೀಗಾಗಿ ರೂಪವಿಷಯಕ ಶಾಬ್ದಬೋಧದಲ್ಲಿ ಆಕಾಶವು ವಿಷಯವಾಗುವುದಿಲ್ಲ.

ಆಕಾಶದಲ್ಲಿ ಉದ್ಭೂತರೂಪವಿಲ್ಲವೆಂದು ಚಾಕ್ಷುಷಪ್ರತ್ಯಕ್ಷ ಹುಟ್ಟುವಾಗ ಉದ್ಭೂತ ರೂಪಾಭಾವದಲ್ಲಿ ಚಕ್ಷುಃಸಂಯುಕ್ತ ಆಕಾಶ ವಿಶೇಷಣತಾ ಸಂಬಂಧವಿದೆ. ಅದು ರೂಪಾಭಾವ ಪ್ರತ್ಯಕ್ಷಕ್ಕೆ ಕಾರಣವಾಗಿದೆ. ಅದರಿಂದ ಸಂಬಂಧ ಘಟಕವಾದ ಚಕ್ಷುರಾಕಾಶಸಂಯೋಗಕ್ಕೂ ರೂಪಾಭಾವ ಪ್ರತ್ಯಕ್ಷಕಾರಣತ್ವವಿದೆ. ಹೀಗೆ ಕಾರಣೀಭೂತ ಆಕಾಶಸಂಯೋಗವಿಶಿಷ್ಟ ಚಕ್ಷುರಿಂದ್ರಿಯ ದಿಂದ ಉಂಟಾಗುವ ರೂಪಾಭಾವ ಪ್ರತ್ಯಕ್ಷದಲ್ಲಿ ಆಕಾಶವೂ ಕಾಣಬೇಕು ಎಂಬ ಆಪತ್ತಿ ಬರುವುದು. ಆದರೆ 'ಸನ್ನಿಕರ್ಷಕ್ಕೂ ಹೇತುತ್ವ ವಿವಕ್ಷೆ ಮಾಡಿದ್ದೇವೆ' ಎಂದರೆ ಸನ್ನಿಕರ್ಷಕ್ಕೆ ಸನ್ನಿಕರ್ಷತ್ವೇನ ಹೇತುತ್ವ ವಿವಕ್ಷೆ ಮಾಡಿದ್ದೇವೆ ಎಂದರ್ಥ. ಪ್ರಕೃತ ಸನ್ನಿಕರ್ಷತ್ವೇನ ಆಕಾಶಸಂಯೋಗಕ್ಕೆ ಹೇತುತ್ವವಿಲ್ಲ, ಸನ್ನಿಕರ್ಷ ಘಟಕತ್ವೇನ ಹೇತುತ್ವವಿದೆ. ಅದು ಅಪ್ರಯೋಜಕ. ಅದರಿಂದ ಆಪತ್ತಿಯಿಲ್ಲ.

**ನನು ತಥಾಪಿ ಪಕ್ಷಸನ್ನಿಕೃಷ್ಟ ಲಿಂಗಜಾನುಮಿತಿಂ ಪ್ರತಿ ಪಕ್ಷಃ, ಶ್ರೋತ್ರಸನ್ನಿಕೃಷ್ಟವಾಕ್ಯಜ ಶಾಬ್ದಜ್ಞಾನಂ ಚ ಪ್ರತಿ ಶ್ರೋತ್ರಂ ವಿಷಯಃ ಸ್ಯಾದಿತಿ ಚೇನ್ನ। ಅತೀತಾದಿಲಿಂಗಾದೇಃ ಜ್ಞಾನೇನ ಅನುಮಿತ್ಯಾದಿ ದರ್ಶನೇನ ಲಿಂಗಜ್ಞಾನ ವಾಕ್ಯಜ್ಞಾನಯೋರೇವ ಕರಣತ್ವಾತ್। ಲಿಂಗಾದಿಜ್ಞಾನಸ್ಯ ಚ ಆತ್ಮಸನ್ನಿಕರ್ಷೋ ನಾನುಮಿತ್ಯಾದಿಹೇತುಃ। ಕಿಂತು ಅವರ್ಜನೀಯಸನ್ನಿಧಿಃ।**

ಕರಣಸನ್ನಿಕರ್ಷಕ್ಕೂ ಕಾರಣತ್ವ ವಿವಕ್ಷೆ ಮಾಡಿದರೂ ಅನಿಷ್ಟಾಪತ್ತಿಯೆ ಇದೆ—

ಪಕ್ಷಸನ್ನಿಕೃಷ್ಟಲಿಂಗದಿಂದ ಅನುಮಿತಿಯಲ್ಲಿ ಪಕ್ಷವು, ಶ್ರೋತ್ರ ಸನ್ನಿಕೃಷ್ಟವಾಕ್ಯದಿಂದ ಶಾಬ್ದಬೋಧದಲ್ಲಿ ಶ್ರೋತ್ರವೂ ವಿಷಯವಾದೀತೆಂದು ಅತಿವ್ಯಾಪ್ತಿ.

ಯದ್ಯಪಿ ಅನುಮಿತಿಯು ಕೇವಲ 'ವಹ್ನಿಮಾನ್' ಎಂದಿರುವುದಿಲ್ಲ. 'ಪರ್ವತೋ ವಹ್ನಿಮಾನ್' ಎಂದು ಪರ್ವತವೂ ವಿಷಯವಾಗಿ ತೋರುತ್ತದೆ. ಅದರಿಂದ ಇಷ್ಟಾಪತ್ತಿ.

ಆದರೂ ವಸ್ತುತಃ ಅನುಮಿತಿಯಲ್ಲಿ ಪರ್ವತ ವಿಷಯವಲ್ಲ. 'ಇದಂ ರಜತಂ' ಎಂಬ ಭ್ರಮದಲ್ಲಿ 'ಇದಂ' ಎಂದು ಶುಕ್ತಿಯೇ ವಿಷಯ ಹೊರತು ರಜತವು ವಿಷಯವಲ್ಲ. ದೋಷವಶಾತ್ ರಜತಭಾನ. ಹಾಗೇ ಅನುಮಿತಿಯಲ್ಲಿ ಪರ್ವತವು ವಿಷಯವಲ್ಲ, ಸಾಧ್ಯಧರ್ಮಿತ್ವವಶಾತ್ ಪರ್ವತಭಾನ ಮಾತ್ರ. ಅದಕ್ಕೆ ವಿಷಯತ್ವಲಕ್ಷಣ ಬಂದರೆ ಅತಿವ್ಯಾಪ್ತಿಯೆ.

ಒಂದುವೇಳೆ ಪಕ್ಷವೂ ಅನುಮಾನ ವಿಷಯವೆಂದೊಪ್ಪಿದರೂ ಅನುಮಿತಿ ಸಾಮಗ್ರಿಗಿಂತ ಪ್ರತ್ಯಕ್ಷ ಸಾಮಗ್ರಿ ಪ್ರಬಲವಾದ್ದರಿಂದ ಧರ್ಮ್ಯಂಶಪಕ್ಷ ವಿಷಯದಲ್ಲಿ ಅನುಮಿತಿಯು ಪ್ರತ್ಯಕ್ಷವೆ. ಆದರಲ್ಲಿ ಪ್ರತ್ಯಕ್ಷತ್ವ ಜಾತಿಯೇ ಇರುತ್ತದೆ. ಹೀಗಾಗಿ ಅನುಮಿತಿತ್ವಜಾತಿಯು ಸನ್ನಿಕರ್ಷವಶದಿಂದ ಬಂದರೆ ಅತಿವ್ಯಾಪ್ತಿಯೆ.

ಪಕ್ಷವಿಷಯಕತ್ವಾಂಶದಲ್ಲಿಯೂ ಅನುಮಿತಿತ್ವಜಾತಿಯನ್ನೊಪ್ಪಿದರೂ ಪಕ್ಷದಲ್ಲಿ ಅನುಮಿತಿಯ ಅಸಾಧಾರಣ ವಿಷಯತ್ವವಿಲ್ಲ. ಅನುಮಾನದ ಫಲವಾದ ಅಜ್ಞಾನ ಸಂಶಯಾದಿ ಪರಿಹಾರರೂಪ ಫಲ ಆದರಿಂದ ಲಭ್ಯವಾಗುವುದಿಲ್ಲ. ಸಾಧ್ಯವು ಕಂಡರೆ ಮಾತ್ರ ಸಾಧ್ಯಸಂಶಯಾದಿ ಪರಿಹಾರ. ವ್ಯಾಪ್ಯವಾದ ಲಿಂಗಕ್ಕೇ ವ್ಯಾಪಕವಾದ ಸಾಧ್ಯದಿಂದ ವ್ಯಾಪ್ಯವ್ಯಾಪಕ ಭಾವರೂಪ ಸಂಬಂಧ ಹೊರತು ಪಕ್ಷಕ್ಕೆ ಅದು ಇರುವುದಿಲ್ಲ. ಸಾಧ್ಯಕ್ಕೇ ಅನುಮಿತಿಯ ಅಸಾಧಾರಣ ವಿಷಯತ್ವವಿರುತ್ತದೆ. ವಹ್ನ್ಯನುಮಿತಿಯನ್ನು ಪರ್ವತಬಿಟ್ಟು ಬೇರೆ ಕಡೆಯೂ ಮಾಡಬಹುದಾದ್ದರಿಂದ ಪರ್ವತವೇ ಪಕ್ಷವಾಗಿ ವಿಷಯವಾಗುವುದು ಆವಶ್ಯಕವೂ ಅಲ್ಲವಾದ್ದದರಿಂದ ಅದಕ್ಕೆ ಅಸಾಧಾರಣ ವಿಷಯತ್ವವಿಲ್ಲ.

ಲಿಂಗ ಸನ್ನಿಕರ್ಷವು ಪಕ್ಷದಲ್ಲಿಯೇ ಇರುತ್ತದೆ, ಸಾಧ್ಯದಲ್ಲಿ ಇಲ್ಲ. ಇದ್ದರೂ ಸಾಮಾನಾಧಿ ಕರಣ್ಯ ರೂಪ ಪರಂಪರಾ ಸಂಬಂಧ. ಹೀಗಾಗಿ ಅನುಮಿತಿಯಲ್ಲಿ ಪಕ್ಷವೇ ಕಾಣಬೇಕು, ಸಾಧ್ಯವಲ್ಲ. ಸಾಧ್ಯವಿಷಯತ್ವಾಂಶದಲ್ಲಿ ಅದರಬದಲು ಪಕ್ಷವಿಷಯತ್ವವೇ ಇರಬೇಕು. ಹೀಗಾಗಿ ಪಕ್ಷದಲ್ಲಿ ಅತಿವ್ಯಾಪ್ತಿ, ಸಾಧ್ಯದಲ್ಲಿ ಅವ್ಯಾಪ್ತಿ. ಈ ಆಪತ್ತಿಗಳಿಗೆ ಪರಿಹಾರ ಹೀಗೆ—

ಅತೀತಾದಿ ಲಿಂಗಗಳಿಂದ ಅನುಮಿತಿ ಶಾಬ್ದಗಳು ಹುಟ್ಟುವುದಿಲ್ಲ. ಕಾರ್ಯದ ಅವ್ಯವಹಿತಪೂರ್ವದಲ್ಲಿ ಕಾರಣವಿಲ್ಲದಿದ್ದರೆ ಅದರಿಂದ ಕಾರ್ಯ ಹುಟ್ಟುವುದಿಲ್ಲ. ಮತ್ತು ಅತೀತಾದಿ ಲಿಂಗಗಳಿಲ್ಲದಿದ್ದರೂ ಅವುಗಳ ಜ್ಞಾನದಿಂದಲೇ ಅನುಮಿತಿಯೂ, ಅತೀತಾದಿ ವಾಕ್ಯವಿಲ್ಲದಿದ್ದರೂ

ಅದರ ಜ್ಞಾನದಿಂದಲೇ ಶಾಬ್ದ ಬೋಧವೂ ಬರುವುದು ಕಂಡಿದೆ. ಅದರಿಂದ ಲಿಂಗಜ್ಞಾನ ವಾಕ್ಯಜ್ಞಾನಗಳೇ ಅನುಮಿತಿ ಶಾಬ್ದಗಳಿಗೆ ಕಾರಣವು.

ಲಿಂಗಜ್ಞಾನಕ್ಕೆ ಪಕ್ಷದಿಂದ ಸನ್ನಿಕರ್ಷವಿಲ್ಲ. ವಾಕ್ಯ ಜ್ಞಾನಕ್ಕೂ ಶೋತ್ರದಿಂದ ಸನ್ನಿಕರ್ಷವಿಲ್ಲ. ಲಿಂಗಜ್ಞಾನಕ್ಕೇ ಸಾಧ್ಯದಿಂದ, ವಾಕ್ಯಜ್ಞಾನಕ್ಕೇ ವಾಕ್ಯಾರ್ಥದಿಂದ ಸನ್ನಿಕರ್ಷವಿರುವುದರಿಂದ, ಅನುಮಿತಿಯಲ್ಲಿ ಪಕ್ಷವಿಷಯಕತ್ವವಿಲ್ಲ. ಸಾಧ್ಯವಿಷಯಕತ್ವವೇ ಇದೆ. ಶಾಬ್ದದಲ್ಲಿಯೂ ವಾಕ್ಯಾರ್ಥ ವಿಷಯಕತ್ವವಿದೆ, ಶ್ರೋತ್ರ ವಿಷಯಕತ್ವವಿಲ್ಲ. ಅತಿವ್ಯಾಪ್ತಿ ಅವ್ಯಾಪ್ತಿಗಳಲ್ಲ.

ಲಿಂಗಜ್ಞಾನ ಶಬ್ದಜ್ಞಾನಗಳಿಗೆ ಯದ್ಯಪಿ ಆತ್ಮಸನ್ನಿಕರ್ಷವಿದೆ. ಆದರೆ ಅದು ಅನುಮಿತಿ ಶಾಬ್ದಗಳಿಗೆ ಹೇತುವಲ್ಲ. ಹೇತುವಾಗಿವೆ ಎನ್ನುವಲ್ಲಿ ಪ್ರಮಾಣವಿಲ್ಲ. ಕೇವಲ ಅವರ್ಜನೀಯ ಸನ್ನಿಧಿಯಾಗಿ ಅನ್ಯಥಾಸಿದ್ಧವಾಗಿ ಇರುತ್ತದೆ, ಇದ್ದೂ ಇಲ್ಲದಂತೆ! ಅದರಿಂದ ಅನುಮಿತಿ ಶಾಬ್ದಗಳಲ್ಲಿ ಎಲ್ಲ ಕಡೆ ಆತ್ಮವೂ ವಿಷಯವಾಗಲಿ ಎಂದು ಆಪತ್ತಿ ಇಲ್ಲ.

**ನನು ತಥಾಪಿ ರೂಪಾದಿ ಜ್ಞಾನಸ್ಯ ಆತ್ಮಾ ವಿಷಯಃ ಸ್ಯಾತ್ । ತತ್ರ ಮನಸಃ ಕರಣತ್ವಾತ್ ಆತ್ಮಮನಃಸನ್ನಿಕರ್ಷಸ್ಯ ಚ ರೂಪಾದಿ ಧೀಹೇತುತ್ವಾದಿತಿ ಚೇನ್ನ । ಅಸಾಧಾರಣ ಕರಣತ್ವಸ್ಯ ವಿವಕ್ಷಿತತ್ವಾತ್ । ಮನಸಶ್ಚ ಸಾಧಾರಣ್ಯಾತ್ ।**

ಹೀಗೆ ಹೇಳಿದರೂ, 'ರೂಪಾದಿ ಜ್ಞಾನಕ್ಕೆ ಆತ್ಮನು ವಿಷಯನಾಗಬೇಕಾದೀತು. ಆ ಜ್ಞಾನಕ್ಕೆ ಮನಸ್ಸು ಕರಣವಾಗಿದೆ. ಆತ್ಮಮನಃ ಸನ್ನಿಕರ್ಷವೂ ರೂಪಾದಿ ಜ್ಞಾನಕ್ಕೆ ಹೇತುವಾಗಿದೆ' ಎಂದು ಆಪತ್ತಿ ಇದೆ. ಆದರೂ ಈ ಆಕ್ಷೇಪ ಪರಿಹಾರಕ್ಕೆ 'ಕರಣವು ಅಸಾಧಾರಣವಾಗಿರಬೇಕು' ಎನ್ನುತ್ತೇವೆ. 'ಯತ್ ಸನ್ನಿಕೃಷ್ಟೇನ ಅಸಾಧಾರಣ ಕರಣೇನ...' ಎಂದು ವಿಷಯತ್ವ ನಿರ್ವಚನ ಮಾಡುತ್ತೇವೆ. ಈಗ ಮನಸ್ಸು ಎಲ್ಲ ಜ್ಞಾನಗಳಿಗೂ ಸಾಧಾರಣ ಕರಣವಾಗಿರುವುದರಿಂದ ಅಸಾಧಾರಣಕರಣವೆಂದು ಮನಸ್ಸನ್ನು ಗ್ರಹಿಸಲಾಗುವುದಿಲ್ಲ. ಆತ್ಮಮನಃ ಸನ್ನಿಕರ್ಷವು ಲಕ್ಷಣ ಘಟಕವಾಗುವುದಿಲ್ಲ. ಅಸಾಧಾರಣಕರಣವು ಚಕ್ಷುಸ್ಸು.

**ತರ್ಹಿ ಮನಃ ಸನ್ನಿಕೃಷ್ಟಚಕ್ಷುರ್ಜನ್ಯಂ ರೂಪಜ್ಞಾನಂ ಮನೋವಿಷಯಂ ಸ್ಯಾತ್ ಇತಿ ಚೇನ್ನ । ಸನ್ನಿಕರ್ಷಸ್ಯಾಪಿ ಅಸಾಧಾರಣಹೇತುತ್ವೇನ ವಿವಕ್ಷಿತತ್ವಾತ್ । ಚಕ್ಷುರ್ಮನಃ ಸನ್ನಿಕರ್ಷಸ್ಯ ಚ ದ್ರವ್ಯಾದಿ ಜ್ಞಾನಸಾಧಾರಣತ್ವಾತ್ ।**

ಹಾಗಾದರೆ ರೂಪಜ್ಞಾನಕ್ಕೆ ರೂಪಸನ್ನಿಕೃಷ್ಟ ಚಕ್ಷುರಿಂದ್ರಿಯವು ಅಸಾಧಾರಣಕಾರಣವಾಗುವುದರಿಂದಲೆ ಮನಶ್ಚಕ್ಷುಃ ಸನ್ನಿಕರ್ಷವು ರೂಪಜ್ಞಾನಕ್ಕೆ ಕಾರಣವಾಗುವುದರಿಂದ ಸನ್ನಿಕೃಷ್ಟ ಅಸಾಧಾರಣ ಕರಣವಾದ ಚಕ್ಷುರಿಂದ್ರಿಯದಿಂದ ರೂಪಜ್ಞಾನ ಹುಟ್ಟುವುದರಿಂದ ರೂಪಜ್ಞಾನದಲ್ಲಿ ಮನಸ್ಸು ವಿಷಯವಾದೀತು ಎಂದು ಆಪತ್ತಿ. ಈ ಆಪತ್ತಿಗೆ ಪರಿಹಾರವಾಗಿ ಸನ್ನಿಕರ್ಷವನ್ನೂ ಅಸಾಧಾರಣ ಹೇತುವಾಗಿರಬೇಕೆಂದು ವಿವಕ್ಷೆ ಮಾಡುತ್ತೇವೆ. ಚಕ್ಷುಸ್ಮನಸ್ಸುಗಳ ಸಂಯೋಗವು

ಎಲ್ಲ ರೂಪಾದಿಪ್ರತ್ಯಕ್ಷ ಘಟಾದಿ ದ್ರವ್ಯಪ್ರತ್ಯಕ್ಷಗಳಿಗೆ ಸಾಧಾರಣ ಕಾರಣವಾದರೂ ರೂಪಪ್ರತ್ಯಕ್ಷಕ್ಕೆ ಅಸಾಧಾರಣಕಾರಣವು ರೂಪಚಕ್ಷುಃ ಸನ್ನಿಕರ್ಷವೆ. ಚಕ್ಷುರ್ಮನಃ ಸಂಯೋಗವು ಅಸಾಧಾರಣ ಕಾರಣವಾಗದಿರುವುದರಿಂದ ಮನಸಿನಲ್ಲಿ ವಿಷಯತ್ವ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ.

ಆದರೆ ಸನ್ನಿಕರ್ಷಕ್ಕೆ ಅಸಾಧಾರಣ್ಯವಿವಕ್ಷೆ ಮಾಡಿದರೂ ಚಕ್ಷುರ್ಮನಃ ಸನ್ನಿಕರ್ಷವೂ ಕೂಡ ಚಕ್ಷುಸ್ಸಿನಂತೆ ಚಾಕ್ಷುಷಜ್ಞಾನಕ್ಕೆ ಅಸಾಧಾರಣ ಕಾರಣವೇ ಆಗುತ್ತದೆ. ಅಸಾಧಾರಣಜ್ಞಾನ ಕಾರಣ ಚಕ್ಷುಃಸನ್ನಿಕರ್ಷಾಶ್ರಯತ್ವವು ಮನಸಿನಲ್ಲಿ ಇರುವುದರಿಂದ ರೂಪಜ್ಞಾನದಲ್ಲಿ ಮನಸ್ಸೂ ವಿಷಯವಾದೀತೆಂಬ ಆಪಾದನೆಯನ್ನು ಮಾಡುವುದು ಶಕ್ಯವಿದೆ.

ಮತ್ತು ಸನ್ನಿಕರ್ಷಕ್ಕೆ ಅಸಾಧಾರಣ್ಯವಿವಕ್ಷೆ ಮಾಡಿದ್ದರಿಂದಲೆ ಆತ್ಮಮನಃಸನ್ನಿಕರ್ಷ ವ್ಯಾವೃತ್ತಿ ಯಾಗುತ್ತದೆ. ಆತ್ಮಮನಃ ಸನ್ನಿಕರ್ಷವು ಸರ್ವಜ್ಞಾನ ಸಾಧಾರಣಕಾರಣವಾದ್ದರಿಂದ ಅಸಾಧಾರಣಕಾರಣ ಸನ್ನಿಕರ್ಷಾಶ್ರಯತ್ವವು ಆತ್ಮನಲ್ಲಿ ಬರುವುದಿಲ್ಲ. ಆದರಿಂದ ಕರಣದಲ್ಲಿ ಅಸಾಧಾರಣ್ಯವನ್ನು ವಿವಕ್ಷೆ ಮಾಡಿದ್ದು ವ್ಯರ್ಥವಾಗುವುದು.

—ಹೀಗೆ ಆಕ್ಷೇಪ ಮಾಡಿಕೊಂಡು 'ಕರಣದಲ್ಲಿ ಅಸಾಧಾರಣ್ಯ ವಿವಕ್ಷೆ ಮಾಡುವುದೇ ಇಲ್ಲ' ಎಂದು ಉತ್ತರಿಸಿದ್ದಾರೆ, ಆಮೋದದಲ್ಲಿ—

'ಯದ್ಯಪಿ ಸನ್ನಿಕರ್ಷಸ್ಯ ಅಸಾಧಾರಣ್ಯ ವಿವಕ್ಷಾಯಾಂ
ಅಸಾಧಾರಣಕಾರಣತ್ವ ವಿವಕ್ಷಾ ವ್ಯರ್ಥಾ । ತಥಾಪಿ
ಅಸ್ಯಾಂ ಸತ್ಯಂತಂ ನ ವಿವಕ್ಷಣೀಯ ಮೇವೇತಿ ಭಾವಃ ।'

ಇಲ್ಲಿ ಪ್ರಾಯಃ ಪಾಠದಲ್ಲಿ ಅಶುದ್ಧಿ ಇದೆ. 'ಸತ್ಯಂತವನ್ನು ವಿವಕ್ಷೆ ಮಾಡುವುದಿಲ್ಲ' ಎನ್ನುವುದು, ಪ್ರಕೃತದಲ್ಲಿ ಸತ್ಯಂತವಿಶೇಷಣವನ್ನು ಲಕ್ಷಣದಲ್ಲಿ ಕೊಟ್ಟಿಲ್ಲವಾದ್ದರಿಂದ, ಅನನ್ವಿತವಾಗಿ ಕಾಣುತ್ತದೆ.

ಪ್ರಾಯಃ 'ಅಸ್ಯಾಂ ಸತ್ಯಾಂ ತನ್ನ ವಿವಕ್ಷಣೀಯಮೇವೇತಿ ಭಾವಃ ।' ಅಂದರೆ,

'ಈ ಸನ್ನಿಕರ್ಷಾಸಾಧಾರಣ್ಯವಿವಕ್ಷೆ ಇರುವಾಗ ಆ ಕರಣಾಸಾಧಾರಣಕಾರಣತ್ವವು ವಿವಕ್ಷಣೀಯವಲ್ಲ' ಎಂದು ಪಾಠ ಶುದ್ಧಿ ಮಾಡಿಕೊಳ್ಳಬೇಕು.

'ಸತ್ಯಾಂ ತನ್ನ' ಎಂಬುದು 'ಸತ್ಯಂತಂ ನ' ಎಂದಾಗಿದೆ ಎಂದುಕೊಳ್ಳಬಹುದು.

ರೂಪಜ್ಞಾನದಲ್ಲಿ ಮನಸ್ಸು ವಿಷಯವಾದೀತೆಂಬ ಆಪಾದನೆಗೆ ಏನು ಉತ್ತರ? ಎಂದರೆ ಕಂಟಕೋದ್ಧಾರದಲ್ಲಿ ಹೇಳಿದ್ದಾರೆ—

'ಚಕ್ಷುರ್ಮನಃ ಸಯೋಗವು ಪ್ರತ್ಯೇಕ ರೂಪಾದಿ ಜ್ಞಾನದಲ್ಲಿ ಅಸಾಧಾರಣ ಕಾರಣವಾಗ ದಿದ್ದರೂ ಚಾಕ್ಷುಷಜ್ಞಾನಸಾಮಾನ್ಯದಲ್ಲಿ ಅಸಾಧಾರಣಕಾರಣವೇ ಆಗಿದೆ. 'ಯತ್ ಸನ್ನಿಕೃಷ್ಟಕರಣೇನ'

ಎಂಬಲ್ಲಿ 'ಯತ್' ಶಬ್ದಕ್ಕೆ ಕರಣಭಿನ್ನತ್ವ ವಿಶೇಷಣ ನೀಡಬೇಕು. ಆಗ ಮನಃಸನ್ನಿಕೃಷ್ಟ ಚಕ್ಷುರೂಪ ಕರಣವನ್ನು ಇಟ್ಟುಕೊಳ್ಳಲು ಬರುವುದಿಲ್ಲ. ಮನಸು ಕರಣವೇ ಆಗಿದೆ. ಕರಣಭಿನ್ನ ರೂಪ ಸನ್ನಿಕೃಷ್ಟಚಕ್ಷು ಕರಣವನ್ನಿಟ್ಟುಕೊಂಡು ರೂಪದಲ್ಲಿ ವಿಷಯತ್ವವನ್ನು ಕೂಡಿಸಲು ಶಕ್ಯವಾಗುವುದು. ಈಗ ಕರಣಭಿನ್ನತ್ವವಿಶೇಷಣ ಕೊಡುವುದರಿಂದಲೇ ಮನಃಸನ್ನಿಕೃಷ್ಟಚಕ್ಷುಸ್ಸನ್ನಿಟ್ಟುಕೊಂಡು ಮನಸಿನಲ್ಲಿ ಮತ್ತು ಚಕ್ಷುಷಸನ್ನಿಕೃಷ್ಟ ಮನಸ್ಸನ್ನಿಟ್ಟುಕೊಂಡು ಚಕ್ಷುಸ್ಸಿನಲ್ಲಿ ಅತಿವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ. ಸನ್ನಿಕರ್ಷಕ್ಕೆ ಅಸಾಧಾರಣ್ಯವಿವಕ್ಷೆ ಮಾಡಿದ್ದರಿಂದ ಆತ್ಮಸನ್ನಿಕೃಷ್ಟ ಮನಸ್ಸನ್ನಿಟ್ಟುಕೊಂಡು ಆತ್ಮನಲ್ಲಿಯೂ ಅತಿವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ. ಹೀಗಾಗಿ ಕರಣದಲ್ಲಿ ಅಸಾಧಾರಣ್ಯ ವಿವಕ್ಷೆ ಮಾಡುವುದು ಬೇಡ ಎಂದಾಗುವುದು.

ಇದನ್ನೇ 'ತನ್ನ ವಿವಕ್ಷಣೀಯಮೇವ' ಎಂದು ಆಮೋದದಲ್ಲಿ ಹೇಳಿದ್ದಾರೆ.

ಕರಣಭಿನ್ನತ್ವ ವಿಶೇಷಣ ನೀಡಿದ್ದರಿಂದಲೇ 'ಚಕ್ಷುರ್ಮನಃ ಸಂಯೋಗಸ್ಯಾಪಿ ಚಾಕ್ಷುಷಜ್ಞಾನಾಸಾಧಾರಣ ಕಾರಣತ್ವೇನ ಮನಸೋಽಪಿ ಚಾಕ್ಷುಷಜ್ಞಾನ ವಿಷಯತ್ವಾಪತ್ತೇಃ' 'ಚಕ್ಷುರ್ಮನಃ ಸಂಯೋಗವೂ ಕೂಡ ಚಾಕ್ಷುಷಜ್ಞಾನಕ್ಕೆ ಅಸಾಧಾರಣ ಕಾರಣವಾದ್ದರಿಂದ ಮನಸೂ ಕೂಡ ಚಾಕ್ಷುಷ ಜ್ಞಾನವಿಷಯವಾದೀತು' ಎಂದು ಸಿದ್ಧಿಕಾರನ ಆಕ್ಷೇಪ ಪರಿಹಾರವಾಯಿತು.

**ಪ್ರತ್ಯಭಿಜ್ಞಾಯಾಂ ಇಂದ್ರಿಯಸ್ಯ ತತ್ತಯಾ ಸಂಸ್ಕಾರಃ, ಲಿಂಗಜ್ಞಾನಸ್ಯ ಚ ಲಿಂಗಿನಾ ತದ್‌ವ್ಯಾಪ್ತಲಿಂಗಸಂಬಂಧಃ, ವಾಕ್ಯಜ್ಞಾನಸ್ಯ ಚ ತತ್‌ಪರ ವಾಕ್ಯಸನ್ನಿಕರ್ಷಃ । ಏವಮನ್ಯತ್ರಾಪಿ ಸನ್ನಿಕರ್ಷಃ ಊಹ್ಯಃ ।**

ಪ್ರತ್ಯಭಿಜ್ಞೆಯಲ್ಲಿ ಇಂದ್ರಿಯಕ್ಕೆ ತತ್ತಾದಿಂದ ಸಂಸ್ಕಾರವು ಸನ್ನಿಕರ್ಷ. 'ಸೋಯಂ ಘಟಃ' ಎಂಬಲ್ಲಿ 'ಸಃ' ತತ್ತಾ ಉಳ್ಳದ್ದು, ಅಂದರೆ ತದ್ದೇಶಕಾಲಯುಕ್ತವಾಗಿದ್ದುದು 'ಅಯಂ ಘಟಃ' ಇದೇ ಘಟ, ಈ ದೇಶಕಾಲಉಳ್ಳ ಘಟ ಎಂದು ಪ್ರತ್ಯಭಿಜ್ಞೆ ಘಟವನ್ನು ಕಣ್ಣಮುಂದೆ ಕಂಡೊಡನೇ ಬರುತ್ತದೆ. ಆದರೆ, ಚಕ್ಷುರಿಂದ್ರಿಯಕ್ಕೂ ತತ್ತಾಕ್ಕೂ, ಅಂದರೆ ಅತೀತ ದೇಶಕಾಲಕ್ಕೂ ಸಂಬಂಧವು ಸಂಯೋಗವಾಗಲಿ ಸಮವಾಯವಾಗಲಿ ಇಲ್ಲ. ತತ್ತಾ ಹಿಂದೆ ಅನುಭೂತವಾಗಿತ್ತು. ಆ ಅನುಭವದಿಂದ ಉಂಟಾದ ಸಂಸ್ಕಾರ ಈಗಲೂ ಇದೆ, ಆ ಸಂಸ್ಕಾರದ ಸಹಾಯವು ಚಕ್ಷುರಿಂದ್ರಿಯಕ್ಕೆ ಇದೆ. ಆದರಿಂದ, ಚಕ್ಷುರಿಂದ್ರಿಯದಿಂದ ಬರುವ ಪ್ರತ್ಯಭಿಜ್ಞೆಯಲ್ಲಿ ತತ್ತಾ ತೋರುತ್ತದೆ. ಹೀಗೆ ತತ್ತಾದಿಂದ ಚಕ್ಷುರಿಂದ್ರಿಯಕ್ಕೆ ತತ್ತಾ ವಿಷಯಕ ಅನುಭವ ಜನಿತ ಸಂಸ್ಕಾರ ಸಹಕೃತತ್ವ ಸಂಬಂಧವಿದೆ.

ಸಾಧ್ಯದಿಂದ ಲಿಂಗಜ್ಞಾನಕ್ಕೆ ಸಾಧ್ಯವ್ಯಾಪ್ಯಲಿಂಗವಿಷಯಕತ್ವವು ಸನ್ನಿಕರ್ಷ. ಸಾಧ್ಯಸನ್ನಿಕೃಷ್ಟ ವಾದ ಲಿಂಗಜ್ಞಾನವೆಂಬ ಕರಣದಿಂದ ಜನಿತವಾದ ಅನುಮಿತಿಯಲ್ಲಿ ಸಾಧ್ಯವು ವಿಷಯವಾಗಿದೆ.

ವಾಕ್ಯಜ್ಞಾನಕ್ಕೆ 'ತತ್ಪರ'ವಾದ, ಅಂದರೆ ವಾಕ್ಯಾರ್ಥತಾತ್ಪರ್ಯಉಳ್ಳ ವಾಕ್ಯದಿಂದ ತದ್‌ವಿಷಯಕತ್ವವು ಸನ್ನಿಕರ್ಷ. ವಾಕ್ಯಾರ್ಥತಾತ್ಪರ್ಯಯುಕ್ತವಾಕ್ಯ ವಿಷಯಕವಾದ ವಾಕ್ಯಜ್ಞಾನದಿಂದ ಜನಿತವಾಗುವ ವಾಕ್ಯಾರ್ಥಜ್ಞಾನದಲ್ಲಿ ವಾಕ್ಯಾರ್ಥವು ವಿಷಯವಾಗಿದೆ.

ಅನುಮಿತಿಯಲ್ಲಿ ಸಾಧ್ಯವು ಕಾಣಲು ಲಿಂಗಜ್ಞಾನರೂಪಕರಣಕ್ಕೆ ಸಾಧ್ಯವ್ಯಾಪ್ಯ ಲಿಂಗ ವಿಷಯಕತ್ವವು ಸನ್ನಿಕರ್ಷವಾಗಿ ನಿಯಾಮಕವಾಯಿತು. ಆದರೆ ಸಾಧ್ಯತಾವಚ್ಛೇದಕ ಕಾಣಲು ಏನು ನಿಯಾಮಕ? ಎಂದರೆ, ಸಾಧ್ಯವು ವ್ಯಾಪಕ, ಲಿಂಗವು ವ್ಯಾಪ್ಯವಾದ್ದರಿಂದ ವ್ಯಾಪಕತಾವಚ್ಛೇದಕ ಸಾಧ್ಯತಾವಚ್ಛೇದಕಾವಚ್ಛಿನ್ನ ಸಾಧ್ಯವ್ಯಾಪ್ಯಲಿಂಗವಿಷಯತ್ವವು ಲಿಂಗಜ್ಞಾನದಲ್ಲಿ ಸಾಧ್ಯತಾವಚ್ಛೇದಕ ದಿಂದ ಸನ್ನಿಕರ್ಷ. ಎಂದು ಮುಂತಾಗಿ, ಪ್ರತ್ಯಕ್ಷದಂತೆಯೆ ಅನುಮಿತಿ ಶಾಬ್ದಬೋಧಗಳಲ್ಲಿಯೂ ವಿಷಯ ಕರಣಗಳಿಗೆ ಸನ್ನಿಕರ್ಷವನ್ನು ಊಹಿಸಿಕೊಳ್ಳಬೇಕು.

**ನಹಿ ಸಂಯೋಗಾದಿರೇವ ಸನ್ನಿಕರ್ಷಃ। ಕಿಂತು ಪ್ರತ್ಯಾಸತ್ತಿಮಾತ್ರಂ। ತಚ್ಚ ಅನತಿಪ್ರಸಂಗಾಯ ತತ್ತಾದಿನಾ ಸಹ ವಕ್ತವ್ಯಮಿತಿ ನಾವ್ಯಾಪ್ತಿಃ।**

'ಸಂಯೋಗ ಸಮವಾಯಗಳೇ ಸನ್ನಿಕರ್ಷಗಳು ಹೊರತು ತದನುಭವಜನಿತ ಸಂಸ್ಕಾರ ಸಹಕೃತತ್ವ ಮುಂತಾದುವು ಸನ್ನಿಕರ್ಷ ಎಂದೆನ್ನಲು ಪ್ರಮಾಣವಿಲ್ಲ ಅಪ್ರಾಮಾಣಿಕ' ಎನ್ನಬಾರದು. 'ಪ್ರತ್ಯಾಸತ್ತಿ' ಅಂದರೆ, ಸಂಬಂಧ ವ್ಯವಹಾರ ಪ್ರಯೋಜಕವು ಏನೇ ಇದ್ದರೂ ಅದು ಸಂಬಂಧವೆ ಸನ್ನಿಕರ್ಷವೆ ಎನಿಸುವುದು. ಸಂಸ್ಕಾರ ಸಹಕೃತತ್ವಾದಿಗಳೂ ಸಂಬಂಧವ್ಯವಹಾರ ಪ್ರಯೋಜಕವೇ ಆದ್ದರಿಂದ ಸನ್ನಿಕರ್ಷವೇ ಆಗಿವೆ.

'ಸೋಽಯಂ ಘಟಃ' ಎಂಬಲ್ಲಿ ಕಣ್ಣಿಗೆ ನೇರವಾಗಿ ಮುಂಭಾಗದಲ್ಲಿರುವ ಘಟದ ಸಂಯೋಗಮಾತ್ರವಿದೆ. 'ಸಃ' ಎಂದು ಕಾಣುವ ತತ್ತಾದ ಸಂಯೋಗವಿಲ್ಲವೆಂದ ಮಾತ್ರಕ್ಕೆ ಅವೆರಡಕ್ಕೆ ಸಂಬಂಧವೆ ಇಲ್ಲೆಂದರೆ ಅತಿಪ್ರಸಂಗವಿದೆ. ಸಂಬಂಧವಿಲ್ಲದ ತತ್ತಾ ತೋರುವುದಾದರೆ ಸಂಬಂಧವಿಲ್ಲದ ಇತರ ವಸ್ತುಗಳೂ ತೋರಬಹುದು. ಏಕೆ ತೋರಬಾರದು? ಎಂದು. ಅತಿಪ್ರಸಂಗ ಪರಿಹಾರಕ್ಕಾಗಿ, ಸಾಕ್ಷಾತ್ ಸಂಬಂಧವಿಲ್ಲದಿದ್ದರೂ ಪರಂಪರಾಸಂಬಂಧವನ್ನು ವಿಷಯತ್ವಕ್ಕೆ ಪ್ರಯೋಜಕವೆಂದು ಒಪ್ಪಬೇಕು. ಆದರಿಂದ ಪ್ರತ್ಯಭಿಜ್ಞಾದಿ ವಿಷಯಗಳಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ ಇಲ್ಲ.

**ಯದ್ಯಪಿ ಲಿಂಗಜ್ಞಾನಾದೇಃ ಲಿಂಗಾದಿನಾ ವಿಷಯಿತ್ವಮೇವ ಸಂಬಂಧಃ। ತಥಾಪಿ ಸ ಇದಾನೀಂ ಉಭಯಸಂಮತೇನ ಸಂಬಂಧತ್ವೇನೈವ ಜ್ಞೇಯಃ। ನತು ವಿಷಯಿತ್ವತ್ವೇನೇತಿ ನಾತ್ಮಾಶ್ರಯಃ।**

ಲಿಂಗಜ್ಞಾನಕ್ಕೆ ಸಾಧ್ಯದಿಂದ ತದ್‌ವ್ಯಾಪ್ತ ಲಿಂಗವಿಷಯಕತ್ವವನ್ನು ಸನ್ನಿಕರ್ಷವೆಂದು ಹೇಳಿ 'ಯತ್‌ಸನ್ನಿಕೃಷ್ಟಕರಣೇನ ಯಜ್ಞಾನಂ ಉತ್ಪದ್ಯತೇ ಸ ತಸ್ಯ ವಿಷಯಃ' ಎಂದು ಲಕ್ಷಣವನ್ನು ಹೇಳಿದರೆ, ಆತ್ಮಾಶ್ರಯ. ವಿಷಯ ಲಕ್ಷಣಾಂತರ್ಗತ ಸನ್ನಿಕರ್ಷವೂ ವಿಷಯಘಟಿತವಾಗಿದೆ. ವಿಷಯಿತ್ವವೆಂದರೆ ವಿಷಯವತ್ವ, ವಿಷಯೀಕಾರಿತ್ವ. ವಿಷಯೀಕಾರಿತ್ವವನ್ನು ತಿಳಿಯದೆ ತದ್‌ಘಟಿತವಾದ ವಿಷಯಲಕ್ಷಣವನ್ನು ತಿಳಿಯಲಾಗದು. ಲಕ್ಷಣವನ್ನು ತಿಳಿಯದೆ ತದ್ ಘಟಕವಾದ ವಿಷಯೀಕಾರಿತ್ವವನ್ನು ತಿಳಿಯಲಾಗದು ಎಂದು. ಈ ಸಮಸ್ಯೆಗೆ ಪರಿಹಾರ ಹೀಗೆ— ವಿಷಯಿತ್ವವನ್ನು

ವಿಷಯಿತ್ವತ್ವೇನ ಲಕ್ಷಣದಲ್ಲಿ ನಾವು ಸೇರಿಸಿಲ್ಲ. ವಾದಿಪ್ರತಿವಾದಿ ಉಭಯ ಸಂಮತವಾದ ಸಂಬಂಧತ್ವೇನ ನಿವೇಶ ಮಾಡಿದ್ದೇವೆ. ಲಕ್ಷಣದಲ್ಲಿ ಸಂಬಂಧತ್ವೇನ ಸನ್ನಿಕರ್ಷವನ್ನು ತಿಳಿದರೆ ಲಕ್ಷಣ ಜ್ಞಾನ ಉಂಟಾಗುವುದು. ಆದರಿಂದ ಅದು ವಿಷಯಿತ್ವತ್ವೇನ ತಿಳಿದು ಬರುವುದು.

**ಇದಂ ಚ ನಿಯತವಿಷಯಕ ಜನ್ಯಜ್ಞಾನ ವಿಷಯಲಕ್ಷಣಂ ।**

ಈ ಲಕ್ಷಣವು ಯೋಗಿ ಪ್ರತ್ಯಕ್ಷ ವಿಷಯಾದಿಗಳಲ್ಲಿ ಅವ್ಯಾಪ್ತವಾಗಿದೆ. ಯೋಗಿಗೆ ಸರ್ವಸಾಧಾರಣವಾದ ಯೋಗಜಧರ್ಮ ಒಂದೇ ಎಲ್ಲವಿಷಯಗಳಲ್ಲಿ ಸಂಬಂಧ. ಅಸಾಧಾರಣ ಸನ್ನಿಕರ್ಷವೆಂಬುದೇ ಇಲ್ಲ. 'ಆದರಿಂದ ಅಸಾಧಾರಣ ಸನ್ನಿಕರ್ಷಘಟಿತ ವಿಷಯಲಕ್ಷಣಕ್ಕೆ ಅವ್ಯಾಪ್ತಿ. ಮತ್ತು ಈಶ್ವರ ಪ್ರತ್ಯಕ್ಷವು ಅನಾದಿಯಾದ್ದರಿಂದ ಸನ್ನಿಕೃಷ್ಟಕರಣದಿಂದ ಜನ್ಯವಾಗುವುದಿಲ್ಲ. ಆದರಿಂದ ಆದರಲ್ಲಿಯೂ ಅವ್ಯಾಪ್ತಿ. ಆದರೆ, ಅನಿಯತ ವಿಷಯಕವಾದ ಯೋಗಿಜ್ಞಾನವನ್ನೂ ಅನಾದಿಯಾದ ಈಶ್ವರಪ್ರತ್ಯಕ್ಷಜ್ಞಾನವನ್ನೂ ಬಿಟ್ಟು ನಿಯತವಿಷಯಕವೂ ಜನ್ಯವೂ ಆಗಿರುವ ಲೌಕಿಕಜ್ಞಾನದ ವಿಷಯವನ್ನು ಮಾತ್ರ ನಿರ್ವಚನ ಮಾಡುತ್ತಿದ್ದೇವೆ. ಯೋಗಿಜ್ಞಾನ ಈಶ್ವರಜ್ಞಾನಗಳು ನಮ್ಮ ಲಕ್ಷಣಕ್ಕೆ ಲಕ್ಷ್ಯವಲ್ಲ. ಆದರಿಂದ ಅವ್ಯಾಪ್ತಿ ದೋಷವಲ್ಲ.

**ಅಥವಾ ಯಥಾ 'ಪಾಕಜರೂಪವತೀ ಪೃಥವೀ' ಇತ್ಯತ್ರ ಪಾಕಜರೂಪಸಮಾನಾಧಿ ಕರಣ ದ್ರವ್ಯತ್ವ ವ್ಯಾಪ್ಯಜಾತಿಮತ್ವಂ ವಿವಕ್ಷಿತಂ, ತಥಾ ಜ್ಞಾನಕರಣಸನ್ನಿಕರ್ಷ ಸಮಾನಾಧಿ ಕರಣೋ ಜ್ಞಾನಾವಚ್ಛೇದಕತ್ವಸಾಕ್ಷಾದ್ ವ್ಯಾಪ್ಯಧರ್ಮೋ ವಿಷಯತ್ವಮಿತಿ ನಾವ್ಯಾಪ್ತಿರಿತಿ ॥**

ಅಥವಾ 'ಪಾಕಜರೂಪಉಳ್ಳದ್ದು ಪೃಥಿವಿ' ಎಂದು ಪೃಥಿವೀಲಕ್ಷಣವನ್ನು ಹೇಳಿದಾಗ ವಜ್ರಾದಿಗಳಲ್ಲಿ ಪಾಕದಿಂದ ರೂಪಪರಾವೃತ್ತಿ ಇಲ್ಲದ್ದರಿಂದ ಪಾಕಜರೂಪವತ್ವವೆಂಬ ಪೃಥಿವೀಲಕ್ಷಣವು ಪೃಥಿವೀದ್ರವ್ಯವೇ ಆಗಿರುವ ವಜ್ರಾದಿಗಳಲ್ಲಿ ಬಾರದಿರುವುದರಿಂದ ಅವ್ಯಾಪ್ತಿ ದೋಷ ಬರುತ್ತದೆ. ಅದಕ್ಕೆ ಪಾಕಜರೂಪ ಸಮಾನಾಧಿಕರಣವಾದ ದ್ರವ್ಯತ್ವಸಾಕ್ಷಾದ್‌ವ್ಯಾಪ್ತವಾದ ಪೃಥಿವೀತ್ವರೂಪ ಜಾತಿ ಉಳ್ಳದ್ದು ಪೃಥಿವೀ ಎಂದು ಜಾತಿಘಟಿತ ಲಕ್ಷಣವನ್ನು ಹೇಳಿ ಅವ್ಯಾಪ್ತಿ ಪರಿಹಾರ ಮಾಡುತ್ತೇವೆ. ಪಾಕಜರೂಪವು ವಜ್ರಾದಿಗಳಲ್ಲಿ ಬಾರದಿದ್ದರೂ ತತ್‌ಸಮಾನಾಧಿಕರಣ ದ್ರವ್ಯತ್ವಸಾಕ್ಷಾದ್ ವ್ಯಾಪ್ಯಪೃಥಿವೀತ್ವಜಾತಿಯು ಬರುತ್ತದೆ. ಅವ್ಯಾಪ್ತಿ ಇಲ್ಲ. ಹಾಗೇ ಪ್ರಕೃತದಲ್ಲಿ ಯೋಗಿಜ್ಞಾನ ಈಶ್ವರ ಪ್ರತ್ಯಕ್ಷ ವಿಷಯಗಳಲ್ಲಿ ಸನ್ನಿಕೃಷ್ಟಕರಣಜನ್ಯಜ್ಞಾನ ವಿಷಯತ್ವರೂಪ ಲಕ್ಷಣ ಬಾರದಿದ್ದರೂ ಜ್ಞಾನಕರಣಸನ್ನಿಕರ್ಷಸಮಾನಾಧಿಕರಣವಾದ ಜ್ಞಾನಾವಚ್ಛೇದಕತ್ವ ಸಾಕ್ಷಾದ್ ವ್ಯಾಪ್ಯವಾದ ಘಟತ್ವಾದಿ ಧರ್ಮವನ್ನೇ ಘಟಾದಿವಿಷಯಕ್ಕೆ ಲಕ್ಷಣ ಎನ್ನುತ್ತೇವೆ. ಘಟಜ್ಞಾನದಲ್ಲಿ ಘಟಕ್ಕೆ ವಿಷಯತ್ವವೆಂದರೆ ಘಟತ್ವರೂಪ ಧರ್ಮವೆ. 'ಘಟದ ಜ್ಞಾನ' ಎಂದೇ ವ್ಯವಹಾರವಿರುವುದರಿಂದ ಘಟವು ವಿಷಯವಾಗಿ ಜ್ಞಾನಕ್ಕೆ ಅವಚ್ಛೇದಕ, ವ್ಯಾವರ್ತಕವೆನಿಸುತ್ತದೆ. ಆದರಿಂದ ಘಟದಲ್ಲಿ ಜ್ಞಾನಾವಚ್ಛೇದಕತ್ವವಿದೆ. ಅದರೊಂದಿಗೆ, ಅದಕ್ಕೆ ಸಾಕ್ಷಾದ್ ವ್ಯಾಪ್ಯವಾಗಿ ಘಟತ್ವವೂ ಇದೆ. ಎಲ್ಲಿ ಘಟತ್ವವಿದೆಯೋ ಅಲ್ಲಿ ಜ್ಞಾನಾವಚ್ಛೇದಕತ್ವವಿದೆ ಎಂದು ವ್ಯಾಪ್ತಿ.

ಜ್ಞಾನಕರಣವಾದ ಸನ್ನಿಕರ್ಷವೂ ಘಟದಲ್ಲಿದೆ. ಇಂದ್ರಿಯಾರ್ಥ ಸನ್ನಿಕರ್ಷವು ಕರಣ. ಅದು ಇಂದ್ರಿಯದಲ್ಲಿಯೂ ಅರ್ಥದಲ್ಲಿಯೂ ದ್ವಿಷ್ಠವಾಗಿರುವುದರಿಂದ ಅರ್ಥವಾಗಿರುವ ಘಟದಲ್ಲಿ ಇದೆ. ಹೀಗಾಗಿ ಜ್ಞಾನಕರಣ ಸನ್ನಿಕರ್ಷ ಸಮಾನಾಧಿಕರಣವಾದ, ಜ್ಞಾನಾವಚ್ಛೇದಕ ಸಾಕ್ಷಾದ್ ವ್ಯಾಪ್ಯವೂ ಆದ ಘಟತ್ವಜಾತಿ ಘಟದಲ್ಲಿ ಬರುವುದರಿಂದ ಘಟವು ಘಟಜ್ಞಾನಕ್ಕೆ ವಿಷಯವೆನಿಸುತ್ತದೆ. ಯೋಗಿಜ್ಞಾನ ಈಶ್ವರಜ್ಞಾನಗಳಲ್ಲಿ ವಿಷಯವಾದ ಘಟದಲ್ಲಿ ಜ್ಞಾನಾವಚ್ಛೇದಕತ್ವ ಸಾಕ್ಷಾದ್ವ್ಯಾಪ್ಯ ವಾಗಿರುವ ಘಟತ್ವವೇ ವಸ್ತುತಃ ನಮ್ಮ ಜ್ಞಾನದಲ್ಲಿಯೂ ಜ್ಞಾನಜನಕಸನ್ನಿಕರ್ಷಸಮಾನಾಧಿ ಕರಣವಾಗಿದೆ.

ಇಲ್ಲಿ ಪದಕೃತ್ಯ ಹೀಗೆ— ಧರ್ಮವು ವಿಷಯತಾ ಎಂದರೆ 'ಅಯಂ ಘಟಃ' ಎಂಬಲ್ಲಿ ದ್ರವ್ಯತ್ವವು ವಿಷಯತಾ ಎಂದಾದೀತು. ಘಟತ್ವವೇ ವಿಷಯತಾ ಆಗಿದೆ. ಆದರೆ ಜ್ಞಾನಾವಚ್ಛೇದಕತ್ವವ್ಯಾಪ್ಯ ಎಂದು ವಿಶೇಷಣ. ಈ ಜ್ಞಾನದಲ್ಲಿ ದ್ರವ್ಯತ್ವವು ಅವಚ್ಛೇದಕವಲ್ಲ. ಜ್ಞಾನಾವಚ್ಛೇದಕತ್ವ ವ್ಯಾಪ್ಯವೆಂದಿಷ್ಟೆ ಹೇಳಿದರೆ ಏತದ್ ಘಟತ್ವವೂ ಜ್ಞಾನಾವಚ್ಛೇದಕತ್ವ ವ್ಯಾಪ್ಯವೆ ಎಂದು ಅತಿವ್ಯಾಪ್ತಿ. ಅದಕ್ಕೆ ಸಾಕ್ಷಾದ್ ವ್ಯಾಪ್ಯ ಎನ್ನಬೇಕು. ವ್ಯಾಪ್ಯವಾಗಿದ್ದು ವ್ಯಾಪ್ಯಕ್ಕೆ ಅವ್ಯಾಪ್ಯವಾಗಿರುವುದೇ ಸಾಕ್ಷಾದ್ ವ್ಯಾಪ್ಯ. ಏತದ್‌ಘಟತ್ವವು ಜ್ಞಾನಾವಚ್ಛೇದಕತ್ವ ವ್ಯಾಪ್ಯವಾದ ಘಟತ್ವಕ್ಕೆ ನ್ಯೂನವೃತ್ತಿಯಾದ್ದರಿಂದ ವ್ಯಾಪ್ಯವ್ಯಾಪ್ಯವಾಗಿದೆ. ಘಟತ್ವವು ಘಟತ್ವಕ್ಕೆ ನ್ಯೂನವೃತ್ತಿಯಲ್ಲ. ಆದರಿಂದ ಸಾಕ್ಷಾದ್ ವ್ಯಾಪ್ಯವಾಗಿದೆ. 'ಧರ್ಮ' ಪದವು ಸ್ವರೂಪಕಥನ.

'ಜ್ಞಾನಾವಚ್ಛೇದಕತ್ವ ಮಾತ್ರವೇ ಸಾಕು. ಏತದ್‌ಘಟತ್ವವು ಜ್ಞಾನಾವಚ್ಛೇದಕತ್ವರೂಪ ಧರ್ಮವಲ್ಲ. ಅದರಿಂದಲೆ ಅದರಲ್ಲಿ ಅತಿವ್ಯಾಪ್ತಿ ಇಲ್ಲ.' ಎಂದರೆ, ಜ್ಞಾನಾವಚ್ಛೇದಕತ್ವವು ಘಟಜ್ಞಾನತ್ವದಲ್ಲಿಯೂ ಇದೆ. ಅದು ವಿಷಯತಾ ಅಲ್ಲ. ಅದರಲ್ಲಿ ಅತಿವ್ಯಾಪ್ತಿ. ವಿಷಯಮಾತ್ರವೃತ್ತಿ ಧರ್ಮವಿಶೇಷವೇ ವಿಷಯತಾರೂಪವೆನ್ನಬೇಕು.

ಜ್ಞಾನಾವಚ್ಛೇದಕತ್ವ ಸಾಕ್ಷಾದ್ ವ್ಯಾಪ್ಯ ಜಾತಿ ಎಂದರೆ ಜ್ಞಾನತ್ವ ಜಾತಿಯಾಗುತ್ತದೆ, ಘಟದಂತೆ ಜ್ಞಾನತ್ವವೂ ಘಟಜ್ಞಾನದಲ್ಲಿ ಅವಚ್ಛೇದಕವಾಗಿದೆ. ಅದಕ್ಕೆ ಜ್ಞಾನಕಾರಣ ಸನ್ನಿಕರ್ಷ ಸಮಾನಾಧಿಕರಣ ಎಂದು ವಿಶೇಷಣ ಬೇಕು. ಜ್ಞಾನಕಾರಣಸನ್ನಿಕರ್ಷ ಸಮಾನಾಧಿಕರಣವಾದ ಜಾತಿಯು ಘಟತ್ವವಾಗುತ್ತದೆ ಹೊರತು ಜ್ಞಾನತ್ವವಾಗುವುದಿಲ್ಲ. ಘಟದಲ್ಲಿ ಸನ್ನಿಕರ್ಷವಿರುತ್ತದೆ. ಘಟಜ್ಞಾನದಲ್ಲಿ ಅಲ್ಲ. ಅದರಿಂದ ಜ್ಞಾನತ್ವದಲ್ಲಿ ಅತಿವ್ಯಾಪ್ತಿ ಇಲ್ಲ.

'ಜ್ಞಾನಕರಣಸನ್ನಿಕರ್ಷ ಸಮಾನಾಧಿಕರಣ ಜ್ಞಾನಾವಚ್ಛೇದಕತ್ವವೇ ಜ್ಞಾನವಿಷಯತ್ವ ಎನ್ನೋಣ. ಕೇವಲ ಜ್ಞಾನಾವಚ್ಛೇದಕತ್ವವನ್ನೇ ಹೇಳಿದರೆ ಅದು, ಘಟದಲ್ಲಿಯೂ ಜ್ಞಾನತ್ವದಲ್ಲಿಯೂ ಉಭಯ ಸಾಧಾರಣವಾದ್ದರಿಂದ ಒಂದೇ ಆದ್ದರಿಂದ ಜ್ಞಾನತ್ವದಲ್ಲಿ ಅತಿಪ್ರಸಕ್ತವಾದರೂ ಜ್ಞಾನಕರಣ ಸನ್ನಿಕರ್ಷ ಸಾಮಾನಾಧಿಕರಣ್ಯ ವಿಶಿಷ್ಟವಾದ ಜ್ಞಾನಾವಚ್ಛೇದಕತ್ವವು ಘಟದಲ್ಲಿ ಮಾತ್ರವಿದೆ.

ಘಟಜ್ಞಾನತ್ವಾದಿಗಳಲ್ಲಿಲ್ಲ. ಅತಿವ್ಯಾಪ್ತಿ ಇಲ್ಲತಾನೆ?' ಎಂದರೆ ಅದು ಸರಿಯೆ. ಅದು ಲಕ್ಷಣಾಂತರವಾಗುತ್ತದೆ. ಪ್ರಕೃತ ಲಕ್ಷಣಕ್ಕೆ ಬಾಧಕವಾಗುವುದಿಲ್ಲ.

'ಎಲ್ಲ ಧರ್ಮವೂ ಕೂಡ ಎಲ್ಲಿಯಾದರೂ ವಿಷಯತಾರೂಪವೇ ಆಗುವುದರಿಂದ 'ಧರ್ಮವು ವಿಷಯತಾ' ಎಂದು ವಿಷಯತಾಸಾಮಾನ್ಯಲಕ್ಷಣವನ್ನು ಏಕೆ ಹೇಳಬಾರದು' ಎಂದರೆ, 'ಕಃ-ಕಸ್ಯವಿಷಯಃ?' ಯಾವುದು ಯಾವುದಕ್ಕೆ ವಿಷಯ ಎಂದು ವಿಶೇಷ ವಿಷಯದ ವಿಷಯದಲ್ಲಿ ಜಿಜ್ಞಾಸೆ ಬಂದಿರುವಾಗ ಸಾಮಾನ್ಯ ಲಕ್ಷಣವನ್ನು ಹೇಳಿದರೆ ಅದು ಅರ್ಥಾಂತರ ಗ್ರಸ್ತವಾಗುವುದು. ಅದರಿಂದಲೇ ವ್ಯಾಪ್ತಿಲಕ್ಷಣವನ್ನು ಕೇಳಿದಾಗ 'ಸಂಬಂಧವು ವ್ಯಾಪ್ತಿ' ಎಂದು ಸಾಮಾನ್ಯ ವ್ಯಾಪ್ತಿ ಲಕ್ಷಣವನ್ನು ಹೇಳುವುದಿಲ್ಲ. 'ನಿಯತಸಾಮಾನಾಧಿಕರಣ್ಯ'ವೆಂದು ವಿಶೇಷ ಲಕ್ಷಣವನ್ನೇ ಹೇಳುತ್ತಾರೆ. ಅದರಿಂದ ಪ್ರಕೃತದಲ್ಲಿ ಘಟಜ್ಞಾನಕರಣ ಸನ್ನಿಕರ್ಷ ಸಮಾನಾಧಿಕರಣವಾದ 'ಘಟಜ್ಞಾನಾವಚ್ಛೇದಕತ್ವ ಸಾಕ್ಷಾದ್‌ವ್ಯಾಪ್ಯವಾದ ಧರ್ಮವು ಘಟಜ್ಞಾನ ವಿಷಯತಾ' ಎಂದು ಲಕ್ಷಣವನ್ನು ಹೇಳಬೇಕು.

''ಘಟಜ್ಞಾನ' ಎಂಬಲ್ಲಿ ಲುಪ್ತವಾದ ಷಷ್ಠೀ ವಿಭಕ್ತ್ಯರ್ಥವು ವಿಷಯತ್ವವೇ ಆಗಿರುವುದರಿಂದ ವಿಷಯತ್ವ ಲಕ್ಷಣದಲ್ಲಿ ವಿಷಯತ್ವವು ಘಟಕವಾಗುವುದರಿಂದ ಆತ್ಮಾಶ್ರಯ' ಎನ್ನಬಾರದು, ವಿಷಯತ್ವವನ್ನು ಸಂಬಂಧತ್ವೇನ ನಿವೇಶ ಮಾಡಿದ್ದರಿಂದ ಆತ್ಮಾಶ್ರಯವಿಲ್ಲ. ಆದರೂ 'ಘಟಜ್ಞಾನ' ವಿಷಯತ್ವವು ಘಟತ್ವವೇ ಏಕೆ? ಕಂಬುಗ್ರೀವಾದಿಮತ್ವವೇಕಾಗಬಾರದು? ಅದೂ ಕೂಡ ಘಟತ್ವದಂತೇ ಘಟಜ್ಞಾನಕರಣಸನ್ನಿಕರ್ಷ ಸಮಾನಾಧಿಕರಣ ಘಟಜ್ಞಾನಾವಚ್ಛೇದಕತ್ವವ್ಯಾಪ್ಯ ಘಟತ್ವಾನ್ಯೂನವೃತ್ತಿ ಧರ್ಮವೇ ಆಗಿದೆ ತಾನೆ? ಎಂದರೆ ಇಷ್ಟಾಪತ್ತಿ ಅಥವಾ ಸಾಕ್ಷಾತ್‌ಪದವಿರುವುದರಿಂದ ಜ್ಞಾನಾವಚ್ಛೇದಕ ಧರ್ಮವೇ ವಿಷಯತಾ. ಕಂಬುಗ್ರೀವಾದಿಗಳು ಜ್ಞಾನಾವಚ್ಛೇದಕವಾಗಿಲ್ಲ ಅತಿವ್ಯಾಪ್ತಿ ಇಲ್ಲ.



# ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರದಿಂದ ಇತ್ತೀಚಿನ ಪ್ರಕಟನೆಗಳು.

## ಸಂಸ್ಕೃತ ಗ್ರಂಥಗಳು

1. ರಾಘವೇಂದ್ರ ವಿಜಯ – ಮೂರು ವ್ಯಾಖ್ಯಾನಗಳ ಸಹಿತ
2. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳೀ – ಸಮಗ್ರ ಸಂಪುಟ
3. ವಿಷ್ಣುತತ್ವ ನಿರ್ಣಯ ಟೀಕಾ (ಶ್ರೀವಿಜಯೀಂದ್ರತೀರ್ಥ ವಿರಚಿತ)
4. ಶೃತ್ಯರ್ಥಸಾರ (ಶ್ರೀವಿಜಯೀಂದ್ರತೀರ್ಥ ವಿರಚಿತ)
5. ಶ್ರೀವೇಂಕಟೇಶ ಮಹಾತ್ಮೆ–ಎರಡು ವ್ಯಾಖ್ಯಾನಸಹಿತ (ಭವಿಷ್ಯೋತ್ತರ ಪುರಾಣಾಂತರ್ಗತ
6. ತರ್ಕಸಂಗ್ರಹ ಶಾಬ್ದಬೋಧ–ವಿದ್ವಾನ್ ರಾಜಾ ಎಸ್. ಗಿರಿ ಆಚಾರ್ಯರು
7. ನವಕೋಟವಿಭೋದಿನಿ – ಪುಣ್ಯ–ತತ್ವ–ವಿಭೂಷಣಮ್
8. ಸ್ವರ್ಣನಿಕಷಃ

## ಕನ್ನಡ ಗ್ರಂಥಗಳು

1. ತತ್ತ್ವಪ್ರಕಾಶಿಕಾ ಭಾವದೀಪ – ಕನ್ನಡ ಅನುವಾದ ಸಹಿತ 10 ಸಂಪುಟಗಳ
2. ತರ್ಕತಾಂಡವ ವಿಶ್ವರೂಪ – 8, 9 ಸಂಪುಟಗಳು
3. ಸ್ಮೃತಿಮುಕ್ತಾವಳಿ–
   ಕಾಲನಿರ್ಣಯಪ್ರಕರಣ, ಷೋಡಶಪ್ರಕರಣ, ಶ್ರಾದ್ಧಪ್ರಕರಣ.
4. ಭೇದೋಜ್ಜೀವನ (ಮೂಲ ಹಾಗೂ ಕಾಶಿಕಾಟಿಪ್ಪಣಿ ಅನುವಾದಸಹಿತ.)
5. ತರ್ಕತಾಂಡವ ಹಾಗು ನ್ಯಾಯದೀಪ
6. ನ್ಯಾಯಾಮೃತಾಮೋದ (ವಿಪ್ರತಿಪತ್ತಿ ವಿಚಾರ)
7. ನ್ಯಾಯಾಮೃತಾಮೋದ (ಪಂಚಭೇದ ವಿಚಾರ)
8. ಕಾಠಕೋಪನಿಷತ್ ಖಂಡಾರ್ಥ
9. ಪಾಪಕ್ಕೊಂದು ಚಿಕಿತ್ಸೆ

## ತೆಲುಗು ಗ್ರಂಥಗಳು

1. ರಾಘವೇಂದ್ರವಿಜಯ – ತೆಲುಗು ಅನುವಾದ ಸಹಿತ
2. ರಾಮಚಾರಿತ್ರ್ಯಮಂಜರೀ – ತೆಲುಗು ಅನುವಾದ ಸಹಿತ
3. ರಾಘವೇಂದ್ರವಿಜಯ – ಹಿಂದೀ ಅನುವಾದ ಸಹಿತ
4. ಶ್ರೀಕೃಷ್ಣಚಾರಿತ್ರ್ಯಮಂಜರೀ – ತೆಲುಗು ಅನುವಾದ ಸಹಿತ